ಶ್ರೀ ಜಯಚಾಮರಾಜೇಂದ್ರ ಗ್ರಂಥ ರತ್ನಮಾಲಾ

ಸಂಖ್ಯಾ—೨೯

# ಶ್ರೀ ಹಾಲಾಸ್ಯ ಮಾಹಾತ್ಮ್ಯಂ

(ಸಂಸ್ಕೃತ ಮೂಲ, ಕನ್ನಡ ಅರ್ಥಾನುವಾದ ಸಹಿತ)

**ಸಂಪುಟ ೨**

**ಅಧ್ಯಾಯಗಳು ೨೩—೫೪**

ಅನುವಾದಕ

**ಎಸ್. ಸೀತಾರಾಮಶಾಸ್ತ್ರೀ**

ಸಾಹಿತ್ಯವಿದ್ವಾನ್ ಮತ್ತು ಪ್ರಾಕ್ತನ ಪುಸ್ತಕಶಾಲಾ ಪಂಡಿತ, ಮೈಸೂರು.

ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್,

ಮೈಸೂರು.

೧೯೫೬

# ಮುನ್ನುಡಿ.

ಈ ಪ್ರಪಂಚದಲ್ಲಿ ಪ್ರಾಣಿಯಾದವನು ಇಹಪರಗಳಲ್ಲಿ ಶ್ರೇಯಸ್ಸನ್ನು ಹೊಂದಬೇಕೆಂಬ ಆಸೆಯಿಂದಲಾಗಲಿ ಅಥವಾ, ಕರ್ತವ್ಯನಿಷ್ಠೆಯಿಂದಲಾಗಲಿ ಸನ್ಮಾರ್ಗವನ್ನು ಅವಲಂಬಿಸಿ ಸದ್ಧರ್ಮಾಚರಣೆಯಿಂದ ಜೀವನಮಾಡುವುದು ಉತ್ತಮವಾದ ರೀತಿಯಾಗಿರುವುದು. ಈ ಪ್ರಕಾರವಾದ ಧರ್ಮಾಚರಣೆಯಿಂದ ವರ್ತಿಸುವಂತೆ ಆ ಪ್ರಾಣಿಯ ಮನಸ್ಸಿನಲ್ಲಿ ಪ್ರೇರಣೆಯು ಉಂಟಾಗಲು ಆಯಾಯ ಪ್ರಾಣಿಗಳ ಕಾಲ ಕರ್ಮಗಳ ಸಂಯೋಗದಿಂದ ಉಂಟಾಗುವ ಶುಭಕರ್ಮಗಳ ಫಲ ಪರಿಪಾಕವು ಪುಣ್ಯವೆಂಬುದಾಗಿ ( ಅಥವಾ ಅದೃಷ್ಟ ) ಹೆಸರನ್ನು ಹೊಂದಿ ಕಾರಣವಾಗಿರುವುದು. ಇದು ಪ್ರಬಲವಾಗಿರುವಾಗ ಭೋಗವನ್ನು ಕೊಡುವುದರಲ್ಲಿ ಮಾತ್ರ ವಿಶ್ರಾಂತಿಯನ್ನು ಹೊಂದದೆ, ಮುಕ್ತಿಯನ್ನು ಉಂಟುಮಾಡುವಷ್ಟು ಶಕ್ತಿಯುಳ್ಳದ್ದಾಗಿರುವುದು.

ಆದ್ದರಿಂದ ಈ ರೀತಿಯಾದ ಕರ್ಮಪರಿಪಾಕವೇ ಮುಂದಕ್ಕೆ ಉಂಟಾಗುವ ಶ್ರೇಯಸ್ಸಿಗೆ ಸಹಕಾರಿಯಾಗಿ ಚಿತ್ತಶುದ್ಧಿಯನ್ನು ಉಂಟುಮಾಡುವ ಆಂತರವಾದ ( ಜ್ಯೋತಿ ) ತೇಜಸ್ಸನ್ನು ಸಾಕ್ಷಾತ್ಕರಿಸಲು ಅನುಕೂಲವಾಗುವ ಯೋಗಾಭ್ಯಾಸಕ್ಕೂ ಅವಕಾಶವನ್ನುಂಟುಮಾಡುವುದು. ಈ ಪ್ರಕಾರವಾದ ಕಾರಣಗಳಲ್ಲಿ ಮಾತ್ರ ಯೋಗವೆಂಬುವುದು ಒಂದು ಮಾರ್ಗವಾಗಿ ಮುಕ್ತಿಯನ್ನು ಉಂಟುಮಾಡಿಕೊಡುವುದರಲ್ಲಿ ಮುಖ್ಯವಾಗಿ ಇರುವುದು

ಈ ವಿಧವಾದ ಮಂತ್ರಯೋಗಗಳಲ್ಲಿ ಶಿವಪಂಚಾಕ್ಷರ ಮಂತ್ರವನ್ನು ಉಪದೇಶ ಹೊಂದಿ ಶಿವಧರ್ಮಗಳನ್ನು ನಿರತಿಶಯವಾದ ಭಕ್ತಿಯಿಂದ ಆಚರಿಸುವವರಿಗೆ ಸರಿಯಾದ ಧರ್ಮಗಳನ್ನು ಉಪದೇಶಮಾಡುವ ಈ ಹಾಲಾಸ್ಯಮಾಹಾತ್ಮ್ಯೆಯು ಕೇವಲ ತತ್ತ್ವಮಾರ್ಗವನ್ನು ಮಾತ್ರವೇ ಉಪದೇಶಮಾಡದೆ ಆಯಾಯ ಧರ್ಮಗಳನ್ನು ಆಚರಿಸಿದವರಿಗೆ ಉಂಟಾಗಿರುವ ಶ್ರೇಯಸ್ಸೆಲ್ಲವನ್ನೂ ಕ್ರಮವಾಗಿ ಉದಾಹರಣರೂಪದಿಂದ ಬೋಧಿಸುತ್ತಿರುವುದು.

ಗುರು, ಮಂತ್ರ, ದೇವತಾ, ದ್ವಿಜ, ಇವರುಗಳಲ್ಲಿ ಉಂಟಾಗುವ ಸರಿಯಾದ ನಂಬಿಕೆಯು ಸತ್ತಾಮಾತ್ರವಾಗಿ ಮನಸ್ಸಿನಲ್ಲಿ ಧೃಢವಾಗಿ ನೆಲಸಿ ನಂಬಿಕೆಯುಳ್ಳವರಿಗೆ ಅವರವರ ಆಸಕ್ತ್ಯನುಗುಣವಾಗಿ ಶ್ರೇಯಸ್ಸನ್ನು ಉಂಟುಮಾಡಲು ಕಾರಣವಾಗಿರುವುದು. ಇದನ್ನು ಅವಲಂಬಿಸಿಯೇ " ಪ್ರಮಾಣೇ ಪೂರ್ಣಕಾಮಸ್ಸ್ಯಾದಪ್ರಮಾಣೇ ವೃಥಾಜನಃ " ಎಂಬ ವಚನವು ಸಾರ್ಥಕವಾಗಿರುವುದು.

ಈ ಹಾಲಾಸ್ಯಮಾಹಾತ್ಮ್ಯೆಯು ಎರಡನೆಯು ಸಂಪುಟವಾದ ಈ ಗ್ರಂಥದಲ್ಲಿ ೨೩ ರಿಂದ ೫೪ ಅಧ್ಯಾಯಗಳೂ ಅವುಗಳಲ್ಲಿ ೧೭ ರಿಂದ ೪೮ ಶಿವಲೀಲೆಗಳೂ ಅಡಕವಾಗಿರುವವು. ಇವುಗಳಲ್ಲಿ ಶಿವಧರ್ಮಾಚರಣೆ, ಶಿವಭಕ್ತರ ಮಹಿಮೆ, ಶಿವನು ತನ್ನ ಭಕ್ತರನ್ನು ವಿಪತ್ತಿನಿಂದ ರಕ್ಷಿಸಿರುವ ಉಪಾಯಗಳು, ಇವೆಲ್ಲವೂ ಬಹಳ ಚೆನ್ನಾಗಿ ಹೇಳಿರುವುವು

ಬಹಳ ಗಹನವಾದ ಧರ್ಮಸೂಕ್ಷ್ಮದ ಮಾರ್ಗವನ್ನು ಪಾಮರರಾದವರೂ ತಿಳಿದು ಶ್ರೇಯೋವಂತರಾಗಲೆಂದು ಈ ಪುರಾಣ ಗ್ರಂಥಗಳನ್ನು ಕನ್ನಡಭಾಷೆಗೆ ಅನುವಾದಮಾಡಲು ಅವಕಾಶವನ್ನು ಕಲ್ಪಿಸಿಕೊಟ್ಟು, ನಮ್ಮನ್ನೂ, ಕರ್ಣಾಟಕ ರಾಜ್ಯವನ್ನೂ ಲೀಲೆಯಿಂದ ಪರಿಪಾಲಿಸುತ್ತಿರುವ, ಮಹಿಸೂರು ಪುರವರಾಧೀಶ್ವರರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಬಿ, ಜಿ. ಸಿ. ಎಸ್. ಐ.** ಯವರಿಗೆ ಪಾರ್ವತೀಸಹಿತನಾದ ಪರಮೇಶ್ವರನು ಎಲ್ಲಾ ವಿಧವಾದ ಶ್ರೇಯಸ್ಸನ್ನೂ ಆಯುರಾರೋಗ್ಯೈಶ್ವರ್ಯಾಭಿವೃದ್ಧಿಯನ್ನೂ ಪ್ರತಿದಿನವೂ ನಿರತಿಶಯವಾಗಿ ಉಂಟುಮಾಡುತ್ತಿರಬೇಕೆಂದು ಕೋರುತ್ತೇನೆ.

೨೬-೪-೪೬
ಮೈಸೂರು.

**ಎಸ್. ಸೀತಾರಾಮಶಾಸ್ತ್ರೀ.**
ಅನುವಾದಕ.



# ವಿಷಯಾನುಕ್ರಮಣಿಕೆ



ಅಧ್ಯಾಯ ಪುಟಗಳು

ಅಧ್ಯಾಯ ಪುಟಗಳು

|| ಶ್ರೀಃ ||
|| ಶ್ರೀ ಶಿವಾಯ ನಮಃ ||

# ಹಾಲಾಸ್ಯಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ತ್ರಯಾವಿಂಶೋऽಧ್ಯಾಯಃ



|| ಅಗಸ್ತ್ಯ ಉವಾಚ ||

**ಅಥ ಹಾಲಾಸ್ಯನಾಥಸ್ಯ ಲೀಲಾ ಮನ್ಯಾಂ ಕೃಪಾನಿಧೇಃ**
**ವಕ್ಷ್ಯಾಮಿ ಸಂಗ್ರಹೇಣಾಹಂ ನವರತ್ನಕ್ರಯಾತ್ಮಿಕಾಂ || ೧ ||**

**ವೀರಪಾಂಡ್ಯೋ ಮಹಾನ್ರಾಜಾ ಶಶಾಸ ಮಹತೀಂ ಮಹೀಂ ।**
**ಬಹ್ವ್ಯಸ್ಸಂತಿ ಮಹಿಷ್ಯೋऽಸ್ಯ ಕುಲೀನಾಃ ಕುಲಭೂಷಣಾಃ || ೨ ||**

**ಪುತ್ರಂ ನ ಲೇಭೇ ಸರ್ವಾಸು ತಾಸು ರಾಜಾ ವಿಧೇರ್ವಶಾತ್ ।**
**ಅವರುದ್ಧಾಸು ನಾರೀಷು ಲೇಭೇ ಪುತ್ರಾನಸದ್ಗುಣಾನ್ || ೩ ||**

---

### ಇಪ್ಪತ್ತಮೂರನೆಯ ಅಧ್ಯಾಯವು.

೧–೩. ಅಗಸ್ತ್ಯಋಷಿಯು ಹೇಳಿದನು :—ದಯಾನಿಧಿಯಾದ ಹಾಲಾಸ್ಯೇಶ್ವರನು ನವರತ್ನಗಳನ್ನು ಕ್ರಯಮಾಡಿರುವ ಲೀಲೆಯನ್ನು ಸಂಕ್ಷೇಪವಾಗಿ ಹೇಳುವೆನು. ವೀರಪಾಂಡ್ಯರಾಜನು ಮಹಾರಾಜನಾಗಿ ಭೂಮಿಯೆಲ್ಲವನ್ನೂ ಕಾಪಾಡುತ್ತಿದ್ದನು. ಅವನಿಗೆ ಸತ್ಕುಲಪ್ರಸೂತರಾದ, ಸಚ್ಚರಿತ್ರೆಯುಳ್ಳ ಬಹಳ ಜನ ಪಟ್ಟದ ಸ್ತ್ರೀಯರು ಇದ್ದರು. ದೈವಗತಿಯಿಂದ ಈ ರಾಜನಿಗೆ ಅವರು ಯಾರಲ್ಲಿಯೂ ಮಕ್ಕಳಾಗಲಿಲ್ಲ. ಭೋಗಿನಿಯರಾದ ಬೇರೆ ಸ್ತ್ರೀಯರಲ್ಲಿ ಕೆಟ್ಟ ನಡತೆಯುಳ್ಳ ಮಕ್ಕಳುಗಳು ಹುಟ್ಟಿದರು.

ಅಷ್ಟಮ್ಯಾಂ ಚ ಚತುರ್ದಶ್ಯಾಂ ಸೋಮವಾರೇ ವಿಶೇಷತಃ
ಉಪಾಸ್ಯಾಥ ಸುಮೀನಾಕ್ಷೀಂ ಹಾಲಾಸ್ಯೇಶಂ ಚ ಭಕ್ತಿತಃ ॥ ೪ ॥

ತನಯಂ ಲಕ್ಷಣೈರ್ಯುಕ್ತಂ ಸರ್ವ ಸದ್ಗುಣ ಸಂಯುತಂ ।
ಮಹಿಷ್ಯಾಂ ಲಬ್ಧವಾನ್ರಾಜಾ ಪ್ರಸಾದಾದಂಬಿಕಾಪತೇಃ ॥ ೫ ॥

ಲಾಲ್ಯಮಾನೇ ಸುತೇ ಸರ್ವೈಃ ಪಂಚಮಂ ವರ್ಷಮೇಯುಷಿ ।
ಮೃಗಯಾಯಾಂ ಪುಂಡರೀಕೈರ್ನಿಹತಸ್ತ್ರಿದಿವಂ ಯಯೌ ॥ ೬ ॥

ಭೋಗಿನೀಯೋಷಿತಾಂ ಪುತ್ರೈರ್ಬಹುಭಿರ್ನಿದಯಾಶಯೈಃ ।
ಅನಾಯಕತ್ವಾತ್ಸರ್ವಸ್ವಮಾತ್ತಂ ಕೋಶಗೃಹಾಂತತಃ ॥ ೭ ॥

ಸ್ವಾಪರಾಧಂ ವಿದಿತ್ವಾ ತೇ ಪಲಾಯಂತೇ ಕ್ವಚಿತ್ಕ್ವಚಿತ್ ।
ಮಂತ್ರಿಣಃ ಕೇಚಿದಾದಾಯ ರಹಶ್ಶಿಶುಮುಪಾಲಯನ್ ॥ ೮ ॥

---

೪–೬. ವೀರಪಾಂಡ್ಯರಾಜನು ಅಷ್ಟಮಿ, ಚತುರ್ದಶಿ, ಸೋಮವಾರ ಈ ದಿವಸಗಳಲ್ಲಿ ಮೀನಾಕ್ಷೀ ಸಹಿತನಾಗಿರುವ ಸುಂದರೇಶ್ವರನನ್ನು ಭಕ್ತಿಯಿಂದ ಪೂಜಿಸಿ, ಸದ್ಗುಣಗಳಿಂದ ಕೂಡಿದ ರಾಜಲಕ್ಷಣಯುಕ್ತನಾದ ಒಬ್ಬ ಪುತ್ರನನ್ನು ತನ್ನ ಪಟ್ಟದ ಸ್ತ್ರೀಯಲ್ಲಿ ಹಾಲಾಸ್ಯೇಶ್ವರನ ಅನುಗ್ರಹದಿಂದ ಪಡೆದನು. ಆ ಬಾಲಕನನ್ನು ಮುದ್ದಿನಿಂದ ಸಾಕುತ್ತಿದ್ದರು. ಅವನಿಗೆ ಐದನೆಯ ವರ್ಷವು ತುಂಬುವುದರಲ್ಲಿ ವೀರಪಾಂಡ್ಯರಾಜನು ಬೇಟೆಯಾಡಲು ಕಾಡಿಗೆ ಹೋಗಿ ಹುಲಿಗಳ ಬಾಧೆಗೆ ಸಿಕ್ಕಿ ಸ್ವರ್ಗವನ್ನು ಹೊಂದಿದನು.

೭–೮. ಭೋಗಿನಿಯರಾದ ಸ್ತ್ರೀಯರ ಮಕ್ಕಳು ಕೊಂಚವೂ ದಯೆಯಿಲ್ಲದವರಾದ ಕಾರಣ, ರಾಜ್ಯಕ್ಕೆ ಅಧಿಪತಿಯು ಇಲ್ಲದಿರುವುದರಿಂದ ಭಂಡಾರದಲ್ಲಿರುವ ದ್ರವ್ಯವೆಲ್ಲವನ್ನೂ ದೋಚಿಕೊಂಡು ತಮ್ಮ ದುರ್ನಡತೆಯು ಹೊರಬೀಳಬಾರದೆಂದು ಅಲ್ಲಲ್ಲಿಯೇ ಓಡಿಹೋದರು. ಕೆಲವು ಮಂತ್ರಿಗಳು ಐದುವರ್ಷ ವಯಸ್ಸಿನ ವೀರ ಪಾಂಡ್ಯಕುಮಾರನನ್ನು ರಹಸ್ಯವಾಗಿ ಕರೆದುಕೊಂಡು ಬಂದು ಪೋಷಿಸುತಿದ್ದರು.

**ಪ್ರಶಾಂತೇ ತುಮುಲೇ ಪಶ್ಚಾದಾಯಾತಾ ಮೂಲಸೈನಿಕಾಃ ।**
**ಕೇಚಿದ್ಗಜಾಃ ಕೇಚಿದಶ್ವಾಃ ಕೇಚಿದ್ಯೋಧಾಶ್ಚ ಸಂಗತಾಃ ॥ ೯ ॥**

**ರಾಜಪುತ್ರಾಭಿಷೇಕಾರ್ಥಂ ಮೌಳಿಂ ನಿರ್ಮಾತುಮುದ್ಯತಾಃ ।**
**ಮಂತ್ರಿಣಃ ಕೋಶಸದ್ಮೇತ್ಯ ನ ಕಿಂಚಿಲ್ಲೇಭಿರೇ ಧನಂ ॥ ೧೦ ॥**

**ಕಿಂ ಕುರ್ಮಸ್ತು ವಯಂ ಸರ್ವೇ ಧನಂ ಸಂಪದ್ಯತೇ ಕ್ಷಣಾತ್ ।**
**ಯತಃ ಕುತಶ್ಚಿದ್ರತ್ನಂ ತು ಕುತ್ರ ಲಭ್ಯಂ ನ ವಿದ್ಮಹೇ ॥ ೧೧ ॥**

**ಅಸ್ಮಿನ್ನನಭಿಷಿಕ್ತೇ ತು ರಾಜ್ಯಧ್ವಂಸೋ ಭವಿಷ್ಯತಿ ।**
**ಹಾಲಾಸ್ಯೇಶಾನುಗ್ರಹೇಣ ಜಾತೋಽಯಂ ತು ನೃಪಾತ್ಮಜಃ ॥ ೧೨ ॥**

**ದೇವದೇವಃ ಕಿಂ ವಿದಧ್ಯಾದಿತಿ ಕಿಂಚಿನ್ನ ವಿದ್ಮಹೇ ।**
**ಏವಂ ಚಿಂತಾನ್ವಿತಾಸ್ಸರ್ವೇ ಕುಮಾರಂ ಚ ಪ್ರಗೃಹ್ಯ ಚ ॥ ೧೩ ॥**

೯–೧೦. (ಈ ಗದ್ದಲ) ಈ ಗಲಭೆಯು ಕಳೆದನಂತರ ವಂಶಪರಂಪರೆಯಿಂದಲೂ ಒಗ್ಗಿ ಬಂದಿರುವ ಸೇನೆಯವರು ಕೆಲವರು ಬಂದು ಸೇರಿದರು. ಅವರಲ್ಲಿ ಕೆಲವರು ಆನೆಗಳನ್ನೂ ಕುದುರೆಗಳನ್ನೂ, ಕೆಲವರು ಸೇನಾಜನರನ್ನೂ ಸೇರಿಸಿಕೊಂಡು, ಬಂದು ಸೇರಿದರು. ಆಗ ಮಂತ್ರಿಗಳು ಗೂಢವಾಗಿ ಪೋಷಿಸುತ್ತಿದ್ದ ಬಾಲಕನಿಗೆ ಪಟ್ಟಾಭಿಷೇಕವನ್ನು ಮಾಡುವುದಕ್ಕಾಗಿ ಕಿರೀಟವನ್ನು ಮಾಡಿಸಲು ರತ್ನಗಳು ಬೇಕಾಗಿರುವ ಕಾರಣ, ಭಂಡಾರವೆಲ್ಲವನ್ನೂ ಶೋಧನೆಮಾಡಿದರು. ಭಂಡಾರದಲ್ಲಿ ಏನೂ ಸಿಕ್ಕದಿರಲು ಅವರು ಯೋಚನೆಗೆ ಒಳಗಾದರು.

೧೧–೧೪. "ನಮಗೆ ಈಗ ದ್ರವ್ಯವು ಬೇಕಾಗಿರುವುದು. ಇದಕ್ಕಾಗಿ ನಾವು ಯಾವ ಕೆಲಸವನ್ನು ಮಾಡಬೇಕು. ಎಲ್ಲಿಯಾದರೂ ಹೋಗಿ ರತ್ನಗಳನ್ನು ತರಬೇಕು. ರತ್ನಗಳು ಎಲ್ಲಿ ಸಿಕ್ಕುವವೋ ಗೊತ್ತಿಲ್ಲ. ಈ ಬಾಲಕನಿಗೆ ಈಗ ಪಟ್ಟಾಭಿಷೇಕವನ್ನು ಮಾಡದಿದ್ದರೆ, ರಾಜ್ಯವು ಹಾಳಾಗುವುದು. ಈ ಬಾಲಕನು ಹಾಲಾಸ್ಯೇಶ್ವರನ ಅನುಗ್ರಹದಿಂದ ಹುಟ್ಟಿರುವನು. ದೇವದೇವನಾದ ಸುಂದರೇಶ್ವರನು ಏನು

ಸನ್ನಿಧಿಂ ಪ್ರಾಪ್ಯ ದೇವಸ್ಯ ಸಾಷ್ಟಾಂಗಂ ಪಣಿಪತ್ಯ ಚ ।
ಕುಮಾರೇಣ ನಮಸ್ಕಾರಂ ಕಾರಯಿತ್ವಾ ಚ ಮಂತ್ರಿಣಃ ॥ ೧೪ ॥

ಗೋಪುರದ್ವಾರದೇಶೇ ತು ತಿಷ್ಠಂತಿ ಶಿವಸನ್ನಿಧೌ ।
ತೇಷ್ವೇವಂ ಚಿಂತಯಾರ್ತೇಷು ಸತ್ವರಂ ಸುಂದರೇಶ್ವರಃ ॥ ೧೫ ॥

ಕೃಪಯಾ ಪರಯಾ ಪೂರ್ಣೋ ಭಗವಾನ್ ಭಕ್ತವತ್ಸಲಃ ।
ವೈಶ್ಯವರ್ಯವಪುರ್ಧೃತ್ವಾ ಸಾಲಂಕಾರಂ ಮನೋಹರಂ ॥ ೧೬ ॥

ಧೃತ್ವಾತಿಚಿತ್ರಮಂಸೇನ ರತ್ನಪೂರ್ಣಾಂ ಚ ಭಸ್ತ್ರಿಕಾಂ ।
ಮಂತ್ರಿಣಾಂ ಚ ಪುರೋಭಾಗೇ ತ್ವಾವಿರಾಸೀತ್ ಸ ಶಂಕರಃ । ॥ ೧೭ ॥

ದೃಷ್ಟ್ವಾ ತಾನ್ ಸಚಿವಾನ್ ಪ್ರಾಹ ಕಿಂ ಯೂಯಂ ಶೋಕಸಂಯುತಾಃ ।
ಇತ್ಯಪೃಚ್ಛತ್ ಸ ತೇ ಪ್ರಾಹುಃ ಸ್ವೇಷ್ಟಂ ಸ ಪುನರಬ್ರವೀತ್ ॥ ೧೮ ॥

---

ಮಾಡುವನೋ ಗೊತ್ತಿಲ್ಲ.'' ಎಂದು ಆ ಮಂತ್ರಿಗಳು ಯೋಚಿಸುತ್ತಾ,ಆ ಬಾಲಕನನ್ನು ಕರೆದುಕೊಂಡು ಹಾಲಾಸ್ಯೇಶ್ವರನ ಸಮೀಪಕ್ಕೆ ಬಂದು ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಆ ಹುಡುಗನಿಂದಲೂ ಮಾಡಿಸಿ, ಹೆಬ್ಬಾಗಲಿನ ಸಮೀಪದಲ್ಲಿ ದೇವನ ಹತ್ತಿರ ದಲ್ಲಿಯೇ ಇದ್ದರು.

೧೫--೧೯. ಆ ಮಂತ್ರಿಗಳು ಹೀಗೆ ಯೋಚನೆಯಿಂದ ವ್ಯಸನಪಡುತ್ತಿರುವ ಕಾಲಕ್ಕೆ ಸರಿಯಾಗಿ ಭಕ್ತರಲ್ಲಿ ಪ್ರೀತಿಯುಳ್ಳ ಸುಂದರೇಶ್ವರನು ಬಹಳ ದಯೆಯುಳ್ಳ ವನಾಗಿ ಬಹಳ ಮನೋಹರನಾದ ವೈಶ್ಯನ ವೇಷವನ್ನು ಧರಿಸಿ ಅತ್ಯಂತ ಆಶ್ಚರ್ಯ ಕರವಾದ ರತ್ನಗಳ ಚೀಲವನ್ನು ಹೆಗಲಿನಮೇಲೆ ಇರಿಸಿಕೊಂಡು ಮಂತ್ರಿಗಳ ಎದುರಿಗೆ ಬಂದನು. ಅವನು ಮಂತ್ರಿಗಳು ಯೋಚನೆಯಿಂದ ಇರುವುದನ್ನು ನೋಡಿ, “ ನೀವು ಯಾತಕ್ಕಾಗಿ ವ್ಯಸನಪಡುತ್ತಿದ್ದೀರಿ ? ” ಎಂದು ಅವರನ್ನು ಕೇಳಿದನು. ಅವರು ತಮ್ಮ

ಅಪೇಕ್ಷಿತಾನಿ ರತ್ನಾನಿ ಯುಷ್ಮಾಭಿಃ ಕೀದೃಶಾನಿ ಚ ।
ತಾನಿ ಸರ್ವಾಣಿ ರತ್ನಾನಿ ದಾಸ್ಯಾಮಿ ಸುಮಹಾಂತಿ ಚ ॥ ೧೯ ॥

ತಚ್ಛ್ರುತ್ವಾ ಪ್ರೀತಹೃದಯಾಃ ಪ್ರೋಚುರ್ವೈಶ್ಯವರ ಪ್ರಭುಂ ।
ಮೌಳೇರರ್ಹಾಣಿ ರತ್ನಾನಿ ದೀಯತಾಂ ಭವತಾ ಕ್ಷಣಾತ್ ॥ ೨೦ ॥

ಇತ್ಯುಕ್ತೇ ತೈಃ ಸ್ವರತ್ನಾನಿ ಹ್ಯನರ್ಘ್ಯಾಣಿ ಮಹಾಂತಿ ಚ ।
ದರ್ಶಯಿತ್ವಾ ಲಕ್ಷಣಾನಿ ತೇಷಾಂ ವಕ್ತುಂ ಪ್ರಚಕ್ರಮೇ ॥ ೨೧ ॥

॥ ವೈಶ್ಯವರ್ಯ ಉವಾಚ ॥

ವಲೋ ನಾಮಾಭವಚ್ಛ್ರೀಮಾನ್ ದಾನವೇಂದ್ರೋ ಮಹಾಬಲಃ ।
ಲೋಕತ್ರಯಾಧಿಪತ್ಯಂ ಚ ಸಂಪ್ರಾಪ್ಯ ಸ ಮಹಾನಭೂತ್ ॥ ೨೨ ॥

ತಸ್ಯಾಸ್ಥಿ ವಜ್ರಂ ದಶನಾಶ್ಚ ಮುಕ್ತಾ
ತಥಾ ಚ ರಕ್ತಂ ಖಲು ಪದ್ಮರಾಗಃ
ರೋಮಾಣಿ ವೈಡೂರ್ಯಮತಿಪ್ರಸಿದ್ಧಂ
ಪ್ರವಾಳಮಾಸೀತ್ ಪಿಶಿತಂ ಮಹಾರ್ಘಂ ॥ ೨೩ ॥

---

ಅಭಿಪ್ರಾಯವನ್ನು ಅವನಿಗೆ ತಿಳಿಸಿದರು. ಆಗ ವೈಶ್ಯನು " ನಿಮಗೆ ಬೇಕಾಗಿರುವ ರತ್ನಗಳು ಯಾವುವು. ದೊಡ್ಡದಾದ ರತ್ನವಾದರೂ ಅವುಗಳನ್ನು ನಾನು ಕೊಡುವೆನು " ಎಂದು ಹೇಳಿದನು."

೨೦–೨೧. ಆ ಮಾತನ್ನು ಮಂತ್ರಿಗಳು ಕೇಳಿ ಸಂತೋಷಪಟ್ಟವರಾಗಿ " ಈಗ ಕಿರೀಟವನ್ನು ಮಾಡಿಸಲು ತಕ್ಕ ರತ್ನಗಳನ್ನು ನಮಗೆ ಕೊಡು." ಎಂದು ಕೇಳಿದರು. ವೈಶ್ಯನು ಅವರ ಮಾತನ್ನು ಕೇಳಿ ಬಹಳ ಬೆಲೆಬಾಳುವ ದೊಡ್ಡ ದೊಡ್ಡ ರತ್ನಗಳನ್ನು ಅವರಿಗೆ ತೋರಿಸಿ ಅವುಗಳ ಲಕ್ಷಣಗಳನ್ನು ಹೇಳಲು ಉಪಕ್ರಮಿಸಿದನು.

೨೨–೨೪. ವೈಶ್ಯನು ಹೇಳಿದನು:—" ಬಲಾಸುರನೆಂಬ ದಾನವನು ಬಹಳ ಬಲವುಳ್ಳವನಾಗಿ, ಐಶ್ವರ್ಯವಂತನಾಗಿ ಮೂರುಲೋಕಗಳ ಆಧಿಪತ್ಯವನ್ನೂ ಮಾಡುತ್ತಿದ್ದನು. ಅವನ ಶರೀರದ ಮೂಳೆಗಳು ವಜ್ರ, ರತ್ನಗಳಾದವು. ಹಲ್ಲುಗಳೆಲ್ಲವೂ

ನೇತ್ರೇ ಮಹಾನೀಲಮಭೂತ್ ಪ್ರಶಸ್ತಂ
ಪಿತ್ತಂ ಚ ಗಾರುತ್ಮತರತ್ನ ಮಾಸೀತ್
ಆಸೀತ್ಕಫ ಸ್ತಸ್ಯ ತು ಪುಷ್ಯರಾಗೋ
ಮೇದಶ್ಚ ಗೋಮೇದಕತಾ ಮವಾಪ ॥ ೨೪ ॥

ವಜ್ರಮುಕ್ತಾಫಲೇ ವಿಪ್ರೌ ನೃಪೌ ಮಾಣಿಕ್ಯವಿದ್ರುಮೌ ।
ಸಪುಷ್ಯರಾಗೌ ವೈಶ್ಯೌ ತು ಗೋಮೇದಕವಿದೂರಜೌ ॥ ೨೫ ॥

ಇಂದ್ರನೀಲಂ ಮರಕತಂ ಶೂದ್ರಂ ರತ್ನವಿದೋ ವಿದುಃ ।
ಮುಕ್ತಾಃ ಸ್ಫಟಿಕಜಾತೀಯಾ ಸ್ತೇತು ಸತ್ವಗುಣೋದ್ಭವಾಃ ॥ ೨೬ ॥

ಜಾತಾಃ ಗೋಮೇದಮಾಣಿಕ್ಯ ವಿದ್ರುಮಾಃ ರಾಜಸಾದ್ಗುಣಾತ್ ।
ಅಂಜನೋಪಲನೀಲಾದ್ಯಾಃ ಜಾತಾ ಸ್ತೇ ತಾಮಸಾದ್ಗುಣಾತ್ ॥ ೨೭ ॥

---

ಮುತ್ತುಗಳಾದವು. ರಕ್ತವು ಪದ್ಮರಾಗವೆಂಬ ರತ್ನವಾಯಿತು. ರೋಮಗಳು ವೈಡೂರ್ಯರತ್ನಗಳಾದವು. ಮಾಂಸವು ಹವಳವಾಯಿತು. ಎರಡು ಕಣ್ಣುಗಳೂ ಇಂದ್ರನೀಲರತ್ನಗಳಾದವು. ಪಿತ್ತವು ಗಾರುತ್ಮತವೆಂಬ ರತ್ನವಾಯಿತು. ಕಫವು ಪುಷ್ಯರಾಗವೆಂಬ ಹೆಸರಿನ ರತ್ನವಾಯಿತು. ಮೇದಸ್ಸು ಗೋಮೇಧಿಕವೆಂಬ ರತ್ನವಾಯಿತು.

೨೫–೨೭. ಈ ನವರತ್ನಗಳಲ್ಲಿ ವಜ್ರ, ಮುಕ್ತಾಫಲವೆಂಬ ಎರಡೂ ಬ್ರಾಹ್ಮಣ ಜಾತಿಗೆ ಸೇರಿದವು. ಮಾಣಿಕ್ಯ, ವಿದ್ರುಮ ಇವೆರಡೂ ಕ್ಷತ್ರಿಯಜಾತಿಗೆ ಸೇರಿರುವುವು. ಗೋಮೇಧಿಕ, ವೈಡೂರ್ಯ ರತ್ನ, ಪುಷ್ಯರಾಗ ಇವುಗಳು ವೈಶ್ಯಜಾತಿಗೆ ಸೇರಿದವುಗಳು. ಇಂದ್ರನೀಲ, ಮರಕತ ಇವೆರಡೂ ಶೂದ್ರಜಾತಿಗೆ ಸೇರಿದ ರತ್ನಗಳಾಗಿರುವವು. ಸ್ಫಟಿಕದ (ಜಾತಿಯ) ಹಾಗೆ ಕಾಂತಿಯನ್ನು ಕೊಡುವ ಮುತ್ತುಗಳು ಸತ್ವಗುಣದಿಂದ ಹುಟ್ಟಿರುವವು. ಗೋಮೇಧಿಕ, ಮಾಣಿಕ್ಯ, ವಿದ್ರುಮ ಇವುಗಳು ರಜೋಗುಣದಿಂದ ಹುಟ್ಟಿರುತ್ತವೆ. ಕಾಡಿಗೆ, ಮತ್ತು ಕಪ್ಪುಕಲ್ಲು ಇವುಗಳಂತೆ ಇರುವ ಕಾಂತಿಯನ್ನು ಬೀರುವ ನೀಲರತ್ನಗಳು ತಮೋಗುಣದಿಂದ ಉತ್ಪನ್ನಗಳಾಗಿ ಇರುವವು. ಇವು ರತ್ನಗಳ ಸ್ವಭಾವ ಗುಣವು.

**ಕುಲಿಶಂ ಪುಷ್ಯರಾಗಂ ಚ ವೈಡೂರ್ಯಂ ತದ್ರಜೋಗುಣಾತ್ ।**
**ಸತ್ವಯುಕ್ತಂ ಮರಕತಂ ರಜಸಸ್ತಮಸೋತ್ತರಾತ್ ॥ ೨೮ ॥**

**ಏವಂ ಭೇದೈಶ್ಚ ರತ್ನಾನಿ ಸಂಭವಂತಿ ಮಹಾತ್ಮನಃ ।**
**ಇತಿ ಶ್ರುತ್ವಾ ಮಂತ್ರಿಣಸ್ತೇ ಪ್ರತ್ಯೂಚು ರ್ವಿಸ್ಮಯಾನ್ವಿತಾಃ ॥ ೨೯ ॥**

**॥ ಮಂತ್ರಿಣ ಊಚುಃ ॥**

**ಹತಃ ಕೇನ ಪ್ರಕಾರೇಣ ವಲೋ ನಾಮ ಮಹಾಸುರಃ ।**
**ತದಂಗೇಭ್ಯಃ ಕಥಂ ಜಾತಂ ರತ್ನಾನಾಂ ಬೃಂದ ಮುತ್ತಮಂ ॥ ೩೦ ॥**

**ವದೇದಾನೀಂ ವೈಶ್ಯವರ ಶ್ರೋತು ಮಿಚ್ಛಾವತಾಂ ಹಿ ನಃ ।**

**॥ ವೈಶ್ಯವರ್ಯ ಉವಾಚ ॥**

**ವಲೋ ನಾಮ ಮಹಾನಾ ಸೀದ್ದಾನವೇಂದ್ರೋ೭ತಿವಿಕ್ರಮಃ ॥ ೩೧ ॥**

---

೨೮. ಬಲಾಸುರನ ಶರೀರದ ರಜೋಗುಣದಿಂದ ವಜ್ರ, ಪುಷ್ಯರಾಗ, ವೈಡೂರ್ಯ ಇವುಗಳು ಆದವು. ಮರಕತ ರತ್ನವು ಸತ್ವಗುಣದಿಂದ ಕೂಡಿದ ರಜೋಗುಣದಿಂದ ಉಂಟಾಯಿತು. ಉಳಿದವು ತಮೋಗುಣವು-ಅಧಿಕವಾದ ರಜೋಗುಣದಿಂದ ಹುಟ್ಟಿರುವವು.

೨೯–೩೦. ರತ್ನಗಳು ಈ ಪ್ರಕಾರದ ಭೇದಗಳಿಂದ ಬಲಾಸುರನ ಶರೀರದಿಂದ ಉಂಟಾದವು. " ಮಂತ್ರಿಗಳು ಈ ಮಾತನ್ನು ಕೇಳಿ, ಆಶ್ಚರ್ಯದಿಂದ ಪ್ರತ್ಯುತ್ತರವನ್ನು ಕೊಟ್ಟರು. ಮಂತ್ರಿಗಳು ಹೇಳಿದರು :— " ಬಲಾಸುರನು ಯಾವರೀತಿಯಿಂದ ನಾಶವನ್ನು ಹೊಂದಿದನು. ಉತ್ತಮವಾದ ಈ ರತ್ನಗಳ ಸಮೂಹವು ಅವನ ಶರೀರದಿಂದ ಹೇಗೆ ಹುಟ್ಟಿತು. ಇದೆಲ್ಲವನ್ನೂ ನಮಗೆ ವಿಸ್ತಾರವಾಗಿ ಹೇಳು. ನಾವೆಲ್ಲರೂ ಅದನ್ನು ಕೇಳಲು ಇಚ್ಛೆಯನ್ನು ಹೊಂದಿರುವೆವು."

೩೧–೩೪. ವೈಶ್ಯನು ಹೇಳಿದನು :—" ಬಹಳ ಪರಾಕ್ರಮಶಾಲಿಯಾದ ಬಲಾಸುರನೆಂಬ ದಾನವನು ಬಾಲ್ಯದಲ್ಲಿಯೇ ಶುಕ್ರಾಚಾರ್ಯನ ಉಪದೇಶವನ್ನು ಹೊಂದಿ ಉತ್ತಮವಾದ ಶಿವಭಕ್ತಿಯಿಂದ ಶಿವನನ್ನು ಕುರಿತು ತಪಸ್ಸನ್ನು ಮಾಡಲು, ಕೈಲಾಸಪರ್ವತಕ್ಕೆ ಹೋಗಿ, ಅಲ್ಲಿ ಋಷಿಗಳೂ ಮಾಡಲಸಾಧ್ಯವಾದ ತಪಸ್ಸನ್ನು

ಬಾಲ್ಯೇ ವಯಸಿ ಸಂಪ್ರಾಪ್ಯ ಶಂಭುಭಕ್ತಿಂ ಸಮುನ್ನತಾಂ ।
ತಪಸ್ತೃಪ್ತಿಂ ಸಮುದ್ಯುಕ್ತೋ ಭಾರ್ಗವಸ್ಯೋಪದೇಶತಃ ॥ ೩೨ ॥

ಶ್ರೀಮತ್ಕೈಲಾಸಮಾಸಾದ್ಯ ಸಂತೋಷಯಿತು ಮೀಶ್ವರಂ ।
ದುಷ್ಕರಂ ಕಾಷ್ಠಮುನಿಭಿರಪಿ ತೇಪೇ ತಪಃ ಪರಂ ॥ ೩೩ ॥

ಗಂಧಪುಷ್ಪಾದಿಭಿ ರ್ದೇವಮುಪಹಾರೈ ರಪೂಜಯತ್ ।
ತದಾ ತುಷ್ಟೋ ಮಹಾದೇವಃ ಪ್ರಾದುರಾಸೀ ತ್ತದಗ್ರತಃ ॥ ೩೪ ॥

ತವ ದೈತ್ಯೇಂದ್ರ ತಪಸಾ ಪೂಜಯಾ ಚ ಸುಭಕ್ತಿತಃ ।
ಪ್ರಸನ್ನೋಽಹಂ ವೃಣೀಷ್ವ ತ್ವಂ ವರಂ ಯನ್ಮನಸಿ ಸ್ಥಿತಂ ॥ ೩೫ ॥

ಇತ್ಯುಕ್ತೇ ದೇವದೇವೇಶೇ ವರದ್ವಯ ಮಯಾಚತ ।
ಆಯೋಧನೇ ತ್ವವಧ್ಯೋಽಹಂ ಭವೇಯಂ ಪರಿಪಂಥಿಭಿಃ ॥ ೩೬ ॥

ಮದ್ಗಾತ್ರಜಾ ಧಾತವಶ್ಚ ರತ್ನಾನಿ ಸ್ಯುರ್ಮಹಾಂತಿ ಚ ।
ತಥಾಸ್ತ್ವಿತಿ ವರಂ ದತ್ವಾ ಜಗದೀಶಸ್ತಿರೋದಧೇ ॥ ೩೭ ॥

---

ಮಾಡಿದನು. ಶಿವನನ್ನು ಗಂಧ, ಹೂವು ಮೊದಲಾದವುಗಳಿಂದ ಬಲಾಸುರನು ಪೂಜಿಸುತ್ತಾ ತಪಸ್ಸನ್ನು ಮಾಡುತ್ತಿದ್ದನು. ಆಗ ಮಹಾದೇವನು ಇವನ ಭಕ್ತಿಗೆ ಮೆಚ್ಚಿ ಇವನಿಗೆ ವರವನ್ನು ಕೊಡಲು ಪ್ರತ್ಯಕ್ಷನಾಗಿ ಎದುರಿಗೆ ಬಂದು ನಿಂತನು.

೩೫–೩೭. "ಎಲೈ ದೈತ್ಯರಾಜನೆ, ನೀನು ಮಾಡುವ ಪೂಜೆ, ನಿನ್ನ ಭಕ್ತಿ ನಿನ್ನ ತಪಸ್ಸು, ಇವುಗಳಿಂದ ನನಗೆ ನಿನ್ನಲ್ಲಿ ಸಂತೋಷವು ಉಂಟಾಗಿ ಇರುವುದು. ನಿನಗೆ ಪ್ರಸನ್ನನಾಗಿ ಇರುವೆನು. ಬೇಕಾದ ವರವನ್ನು ಕೇಳು. ಅದನ್ನು ಕೊಡುವೆನು" ಎಂದು ದೇವದೇವನಾದ ಶಿವನು ಹೇಳಿದ್ದನ್ನು ಕೇಳಿ ಬಲಾಸುರನು "ಯುದ್ಧದಲ್ಲಿ ನಾನು ಯಾವಾಗಲೂ ಶತ್ರುಗಳಿಗೆ ಅವಧ್ಯನಾಗಿರಬೇಕು. ನನ್ನ ಶರೀರದಲ್ಲಿರುವ ಧಾತುಗಳೆಲ್ಲವೂ ಬೆಲೆಬಾಳುವ ದೊಡ್ಡ ದೊಡ್ಡ ರತ್ನಗಳಾಗಬೇಕು." ಎಂದು ಎರಡು ವರಗಳನ್ನು ಕೇಳಿದನು. ಈಶ್ವರನು ಹಾಗೇ ಆಗಲಿ ಎಂದು ಅವನಿಗೆ ವರವನ್ನು ಕೊಟ್ಟು ಅದೃಶ್ಯನಾದನು.

ಅವಧ್ಯಸ್ಸ ಪರ್ರೈ ರಾಸೀತ್ ದೇವದೇವಪ್ರಸಾದತಃ ।
ತದ್ದೇಹಸಂಭವಾ ಶ್ಚಾಸರ್ಣ ಧಾತವೋ ರತ್ನಹೇತವಃ ॥ ೩೮ ॥

ಏವಂ ಲಬ್ಧವರೋ ದೈತ್ಯ ಸ್ತ್ರೈಲೋಕ್ಯಾಧಿಪತಿ ರ್ಬಭೌ ।
ಅಸಕೃ ತ್ಸಮರೇ ತೇನ ದೇವರಾಜೇ ಪರಾಜಿತೇ ॥ ೩೯ ॥

ಶಚೀ ಚ ವೀರಪತ್ನೀ ತು ಗರ್ವಂ ತ್ಯಕ್ತ್ವಾ ಚಿರಂ ಸ್ಥಿತಾ ।
ವಲಂ ಯುದ್ಧೇಷ್ವಜಯ್ಯಂತ ಮವಧ್ಯಂ ಸರ್ವದೇವತೈಃ ॥ ೪೦ ॥

ವಿಷಾಣಭೇದಿನಂ ದಿವ್ಯಂ ಮಹೇಭಸ್ಯ ಮಹಾಬಲಾತ್ ।
ಹಂತುಮೀಯು ರುಪಾಯೇನ ದೇವಾ ಸ್ಸರ್ವೇ ಸವಾಸವಾಃ ॥ ೪೧ ॥

ಸೋಢುಂ ಪರಾಕ್ರಮಂ ತಸ್ಯ ನ ಶಕ್ತಾ ಸ್ತತ್ಸಮೀಪಗಾಃ ।
ತ್ಯಕ್ತ್ವಾಯುಧಾಶ್ಚ ಜಗದು ಸ್ತ್ರಿದಶಾ ದಾನವೇಶ್ವರಂ ॥ ೪೨ ॥

---

೩೮-೪೧. ಬಲಾಸುರನು ದೇವದೇವನಾದ ಪರಮೇಶ್ವರನ ಅನುಗ್ರಹದಿಂದ ಯುದ್ಧದಲ್ಲಿ ಶತ್ರುಗಳಿಗೆ ಅವಧ್ಯನಾದನು. ಮತ್ತು ಅವನ ಶರೀರದಿಂದ ರತ್ನಗಳು ಉತ್ಪತ್ತಿಯಾಗಲು ಅನುಕೂಲವಾದ ಧಾತುಗಳು ಹುಟ್ಟಿದವು. ಹೀಗೆ ವರವನ್ನು ಹೊಂದಿದ ಆ ದೈತ್ಯನು ಮೂರು ಲೋಕಕ್ಕೂ ಅಧಿಪತಿಯಾದನು. ಇಂದ್ರನನ್ನು ಅವನು ಯುದ್ಧದಲ್ಲಿ ಅನೇಕಸಾರಿ ಸೋಲಿಸಿದನು. ಆಗ ಇಂದ್ರನ ಪತ್ನಿಯಾದ ಶಚೀದೇವಿಯು ತನ್ನ ಗರ್ವವೆಲ್ಲವನ್ನೂ ಬಿಟ್ಟು ಇದ್ದಳು. ಇಂದ್ರನೇ ಮೊದಲಾದ ದೇವತೆಗಳು ಎಲ್ಲರೂ ಸೇರಿ, "ಬಲಾಸುರನು ಯುದ್ಧದಲ್ಲಿ ನಮಗೆ ಎಲ್ಲರಿಗೂ ಅವಧ್ಯನಾಗಿರುವನು. ಐರಾವತದ ದಂತವನ್ನು ತನ್ನ ದೇಹಸಾಮರ್ಥ್ಯದಿಂದ ಕಿತ್ತುಹಾಕಿರುವನು. ಆದ್ದರಿಂದ ಇವನನ್ನು ಯುದ್ಧಮಾಡಿ ಕೊಲ್ಲುವುದಕ್ಕಾಗುವುದಿಲ್ಲವಾದುದರಿಂದ ಉಪಾಯವಾಗಿ ಇವನನ್ನು ನಾಶಪಡಿಸಬೇಕು."ಎಂದು ಯೋಚಿಸಿದರು.

೪೨-೪೪. ಆಗ ಅವರೆಲ್ಲರೂ ಅವನ ಪರಾಕ್ರಮವನ್ನು ಸಹಿಸಲಾರದೆ, ತಮ್ಮ ತಮ್ಮ ಆಯುಧಗಳನ್ನು ದೂರದಲ್ಲಿ ಇರಿಸಿ, ಅವನ ಹತ್ತಿರಕ್ಕೆ ಹೋಗಿ "ಎಲೈ ವೀರನಾದ ಬಲಾಸುರನೇ, ನೀನು ಮೂರು ಲೋಕಗಳಲ್ಲಿಯೂ ಬಹಳ ದೊಡ್ಡವನಾಗಿ

ವಲ ವೀರ ಮಹಾಬಾಹೋ ತ್ರೈಲೋಕ್ಯೇ ತ್ವಂ ಮಹಾನಸಿ ।
ಪರಾಕ್ರಮೇಣ ಮಹತಾ ಬಲೇನ ಭುಜಯೋರಪಿ ॥ ೩೪ ॥

ವಯಂ ಸಂತುಷ್ಟಮನಸೋ ಭವಾಮ ಸ್ತವ ವೀರ್ಯತಃ ।
ವರಂ ವೃಣೀಷ್ವ ಸಹಸಾ ದಾಸ್ಯಾಮ ಇತಿ ತೇಽಬ್ರುವನ್ ॥ ೪೪ ॥

ಸುರೈ ರಿತ್ಯುಕ್ತ ಮಾಕರ್ಣ್ಯ ಪ್ರಹಸನ್ ಪ್ರಾಹ ದಾನವಃ ।
ರಣಾಗ್ರೇ ವೋ ಯಥಾಶಕ್ತಿ ರ್ವರದಾನೇ ತಥೈವ ಚ ॥ ೪೫ ॥

ಮತ್ತೋ ವೃಣೀಧ್ವಂ ಯೂಯಂ ತು ವರಂ ಸತ್ಯಂ ವದಾಮ್ಯಹಂ ।
ಇತ್ಯುಕ್ತೇ ಚ ವಲೇ ತಸ್ಮಿನ್ ತ್ರಿದಶಾ ಸ್ಸಪುರಂದರಾಃ ॥ ೪೬ ॥

ಪ್ರಾಹು ರಸ್ಮತ್ಕ್ರತುಶ್ರೇಷ್ಠೇ ಭವಾನಸ್ತು ಪಶುರ್ಧ್ರುವಂ ।
ವರಂ ನಿಶಮ್ಯ ದೇವಾನಾಂ ವೃತ ಶ್ಶಕ್ಯೋಽಸ್ಮ್ಯಹಂ ಸುರೈಃ ॥ ೪೭ ॥

---

ಇರುತ್ತೀಯೆ. ನಿನ್ನ ಪರಾಕ್ರಮವೂ, ಬಾಹುಗಳ ಶಕ್ತಿಯೂ ಬಹಳವಾಗಿರುವುದು. ನಿನ್ನ ಸಾಮರ್ಥ್ಯವನ್ನು ನಾವೆಲ್ಲರೂ ನೋಡಿ, ಅದರಿಂದ ಬಹಳ ಸಂತೋಷವುಳ್ಳವರಾಗಿ ಇರುತ್ತೇವೆ. ನಾವೆಲ್ಲರೂ ನಿನಗೆ ಬೇಕಾದ ವರಗಳನ್ನು ಕೊಡಲು ಬಂದಿರುವೆವು. ನೀನು ಅದನ್ನು ಕೇಳು." ಎಂದು ಹೇಳಿದರು.

೪೫-೪೬. ಆಗ ದಾನವೇಶ್ವರನಾದ ಬಲಾಸುರನಿಗೆ ಇವರ ಮಾತನ್ನು ಕೇಳಿ, ಬಹಳ ನಗುವು ಬಂದಿತು. ಅದರಿಂದ ಅವನು ನಗುತ್ತಾ "ನಿಮ್ಮ ಶಕ್ತಿಯು ಯುದ್ಧದಲ್ಲಿ ನನ್ನ ಮುಂದೆ ಹೇಗೆ ಇರುವುದೋ, ಹಾಗೆಯೇ ನನಗೆ ವರವನ್ನು ಕೊಡುವ ವಿಷಯದಲ್ಲಿಯೂ ಇರುವುದು. ನೀವುಗಳು ನನ್ನನ್ನು ಬೇಡಿಕೊಳ್ಳಿರಿ. ನಿಮ್ಮ ಇಷ್ಟವನ್ನು ನೆರವೇರಿಸಿಕೊಡುವೆನು. ಇದು ಸತ್ಯವಾದದ್ದು" ಎಂದು ಬಲಾಸುರನು ದೇವತೆಗಳಿಗೆ ಹೇಳಿದನು. ಆಗ ಇಂದ್ರನೇ ಮೊದಲಾದ ದೇವತೆಗಳು ಅವನ ಮಾತನ್ನು ಕೇಳಿ, "ನಾವು ಈಗ ಮಾಡಬೇಕಾಗಿರುವ ಯಜ್ಞಕ್ಕೆ ನೀನು ಪಶುವಾಗಬೇಕು" ಎಂದು ಬಲಾಸುರನಿಗೆ ಹೇಳಿದರು.

೪೭-೫೦. ಬಲಾಸುರನು ದೇವತೆಗಳು ಹೇಳಿದ ವರವನ್ನು ಕೇಳಿ, "ನನ್ನನ್ನು ದೇವತೆಗಳು ವರವನ್ನು ಕೊಡಲು ಯಾಚನೆಮಾಡಿದರು. ಶರೀರವು ಯಾವಾಗಲಾದರೂ ನಾಶವಾಗತಕ್ಕದ್ದು. ಕೀರ್ತಿಯು ಶಾಶ್ವತವಾಗಿರುವುದು. ಶರೀರದ

ಅಸ್ಥಾಯಿನಾ ಶರೀರೇಣ ಲಭ್ಯತೇ ಕೀರ್ತಿರುತ್ತಮಾ ।
ಇತಿ ಸಂಚಿಂತ್ಯ ಮನಸಾ ನನಂದ ಚ ಪುನಃಪುನಃ ॥ ೪೮ ॥

ಅಥೋವಾಚ ವಲೋ ದೈತ್ಯ ಸ್ಸರ್ವಾ ನಮರಪುಂಗವಾ ।
ಯುಷ್ಮಾಭಿಃ ಪ್ರಾರ್ಥಿತ ಸ್ಸರ್ವೈ ರ್ವರಂ ದತ್ತಂ ಮಯಾ ಧ್ರುವಂ ॥ ೪೯ ॥

ಕ್ರತೋರುಪಕ್ರಮಂ ಯೂಯಂ ಸದ್ಯಃ ಕುರ್ವಂತು ಹೇ ಸುರಾಃ।
ಅಹಮಪ್ಯಾಗಮಿಷ್ಯಾಮಿ ಯುಷ್ಮದಧ್ವರಸಿದ್ಧಯೇ ॥ ೫೦ ॥

ಇತ್ಯುಕ್ತ್ವಾ ಸಹಸಾ ಪುತ್ರೇ ಸ್ವಸಾಮ್ರಾಜ್ಯಶ್ರಿಯಂ ಪರಾಂ ।
ಸಂಯೋಜ್ಯ ಸ್ವಪುರಾತ್ಸದ್ಯೋ ನಿರ್ಗತೋ ದೈತ್ಯಪುಂಗವಃ ॥ ೫೧ ॥

ಯತ್ರ ದೇವಗಣಾ ಸ್ಸರ್ವೇ ಕ್ರತು ಮಾರೇಭಿರೇ ವರಂ ।
ತತ್ರ ಕೈಲಾಸಶಿಖರೇ ಸಂತುಷ್ಟೋ ದಾನವೋ ಯಯೌ ॥ ೫೨ ॥

ವಿಲೋಕ್ಯ ದೇವಾನಸುರಃ ಪ್ರೋವಾಚೇದ ಮುದಾರಧೀಃ ।
ಅಹಂ ಪಶು ರ್ಭವಿಷ್ಯಾಮಿ ವಿಶಿಷ್ಟೇಧ್ವರಕರ್ಮಣಿ ॥ ೫೩ ॥

ಆಸೆಯನ್ನು ಬಿಟ್ಟಲ್ಲಿ ಈ ನಶ್ವರ ಶರೀರದಿಂದ ನಿತ್ಯವಾದ ಕೀರ್ತಿಯನ್ನು ನಾನು ಹೊಂದಬಹುದು" ಎಂದು ಮನಸ್ಸಿನಲ್ಲಿ ಅನೇಕವೇಳೆ ಯೋಚಿಸಿ, ಸಂತೋಷಪಟ್ಟನು. ಅನಂತರದಲ್ಲಿ ಆ ಬಲಾಸುರನು ದೇವತೆಗಳ ಸಂಗಡ," ನೀವು ಕೇಳಿದಂತೆಯೇ ನಾನು ವರವನ್ನು ನಿಮಗೆ ಕೊಟ್ಟಿರುತ್ತೇನೆ. ಇದು ಸತ್ಯವಾದದ್ದು. ನೀವು ಯಜ್ಞವನ್ನು ಮಾಡಲು ಉಪಕ್ರಮಮಾಡಿರಿ. ನಾನೂ ಬೇಗನೆ ನಿಮ್ಮ ಯಜ್ಞವನ್ನು ಪೂರ್ತಿಗೊಳಿಸುವುದಕ್ಕಾಗಿ ಬರುತ್ತೇನೆ" ಎಂದು ಹೇಳಿದನು.

೫೧–೫೩. ಬಲಾಸುರನು ದೇವತೆಗಳ ಸಂಗಡ ಹೀಗೆ ಹೇಳಿ, ಕೂಡಲೆ ಅವನು ಅಲ್ಲಿಂದ ಹೊರಟು ಬಂದು ತನ್ನ ಮಗನಿಗೆ ಪಟ್ಟವನ್ನು ಕಟ್ಟಿದನು. ಅನಂತರದಲ್ಲಿ ಅವನು ಸಂತೋಷದಿಂದ ದೇವತೆಗಳು ಯಜ್ಞಮಾಡುತ್ತಿರುವ ಕೈಲಾಸಪರ್ವತದ ಶಿಖರಕ್ಕೆ ಬಂದು ಸೇರಿದನು. ಆಗ ಅವನು ಉದಾರವಾದ ಬುದ್ಧಿಯುಳ್ಳವನಾಗಿ

ಭವದ್ಭಿಃ ಕ್ರಿಯತಾಂ ಯೂಪಂ ಬಂಧನಾರ್ಥಂ ಪಶೋರ್ಮಮ ।
ಇತೀರಿತಾಂ ಗಿರಂ ಶ್ರುತ್ವಾ ಸಧ್ಯೈರ್ಯಾಂ ಸರ್ವದೇವತಾಃ ॥ ೫೪ ॥

ವಲ ಸತ್ಯವ್ರತೋಽಸಿ ತ್ವಂ ತ್ವತ್ಸಮೋ ಭುವನತ್ರಯೇ ।
ನಾಸ್ತೀತಿ ಬಹುಶಃ ಪ್ರೋಚ್ಯ ಚಾಪ್ಯ ನಂದರ್ವಲಾಸುರಂ ॥ ೫೫ ॥

ತಸ್ಮಿನ್ ಪುರುಷಮೇಧಾಖ್ಯೇ ಯಜ್ಞೇ ಯಷ್ಟಾ ದಿವಸ್ಪತಿಃ ।
ಋತ್ವಿಜಶ್ಚಾಭವನ್ ಸಪ್ತಋಷಯೋಽನ್ಯೇ ಮುನೀಶ್ವರಾಃ ॥ ೫೬ ॥

ಕರ್ಮಾಣ್ಯಾರೇಭಿರೇ ಕರ್ತುಂ ಶ್ರುತಿಭಿಶ್ಚೋದಿತಾನಿ ತು ।
ಅಥ ಯೂಪಂ ನೀಯಮಾನೋ ಬಂಧನಾಯಾ ಸುರೇಶ್ವರಃ ॥ ೫೭ ॥

ಸಸ್ಮಾರಾಧ್ವರರಾಜಾನಂ ತ್ರಯೀಮೂರ್ತಿಂ ತ್ರಿಯಂಬಕಂ ।
ರುದ್ರಂ ವಿಷ್ಣುವಿರಿಂಚ್ಯಾದಿವಿಬುಧಾರಾಧಿತಂ ಪರಂ ॥ ೫೮ ॥

---

ದೇವತೆಗಳನ್ನು ನೋಡಿ, "ಉತ್ತಮವಾದ ಈ ಯಜ್ಞದಲ್ಲಿ ನಾನು ಪಶುವಾಗಿ ಇರುವೆನು. ಪಶುವಾಗಿರುವ ನನ್ನನ್ನು ಕಟ್ಟುವುದಕ್ಕಾಗಿ ಯೂಪಸ್ತಂಭವನ್ನು ಮಾಡಿರಿ." ಎಂದು ಹೇಳಿದನು. ಅವನು ಹೇಳಿದ ಮಾತನ್ನು ಕೇಳಿ, ದೇವತೆಗಳು ಎಲ್ಲರೂ "ಎಲೈ ಬಲಾಸುರನೆ, ನೀನು ಸತ್ಯವಂತನಾಗಿ ಇರುತ್ತೀಯೆ. ಮೂರು ಲೋಕಗಳಲ್ಲಿಯೂ ನಿನಗೆ ಸಮನಾದವರು ಇಲ್ಲ" ಎಂದು ಅನೇಕ ಸಾರಿ ಅವನಿಗೆ ಹೇಳುತ್ತಾ ಅವನನ್ನು ಬಹಳವಾಗಿ ಹೊಗಳಿದರು.

೫೬–೫೮. ಪುರುಷಮೇಧವೆಂಬ ಆ ಯಜ್ಞದಲ್ಲಿ ಇಂದ್ರನೇ ಯಜ್ಞಮಾಡತಕ್ಕ ದೀಕ್ಷಿತನಾದನು. ಸಪ್ತಋಷಿಗಳೂ ಮತ್ತು ಇತರ ಋಷಿಗಳೂ ಋತ್ವಿಕ್ಕುಗಳಾದರು. ಇವರೆಲ್ಲರೂ ಸೇರಿ ವೇದದಲ್ಲಿ ಹೇಳಿದ ಕ್ರಮದಿಂದ ಯಜ್ಞದ ಕೆಲಸಗಳನ್ನು ಆಚರಿಸಲು ಉಪಕ್ರಮ ಮಾಡಿದರು. ಹೀಗೆ ಯಜ್ಞ ಕರ್ಮವು ನಡೆಯುತ್ತಿರುವಾಗ ದೇವತೆಗಳು ಪಶುವಾದ ಬಲಾಸುರನನ್ನು ಯೂಪಸ್ತಂಭದಲ್ಲಿ ಕಟ್ಟುವುದಕ್ಕಾಗಿ ಕರೆದುಕೊಂಡು ಹೋಗುತ್ತಿದ್ದರು. ಆಗ ಅವನು ಯಜ್ಞಕ್ಕೆ ಅಧಿಪತಿಯಾದ ವೇದಗಳ ಆಕಾರವಿಂದ ಇರುವ, ವಿಷ್ಣು, ಬ್ರಹ್ಮಾದಿ ದೇವತೆಗಳಿಂದ ಪೂಜೆಯನ್ನು ಹೊಂದುತ್ತಿರುವ, ರುದ್ರ ರೂಪನಾದ ಪರಮೇಶ್ವರನನ್ನು ಧ್ಯಾನಮಾಡಿದನು.

ಪ್ರತ್ಯಕ್ಷೀಕೃತ್ಯ ಭಗವಾನ್ ಪಶೂನಾಂ ಪತಿ ರೀಶ್ವರಃ ।
ಯೂಪೇ ತು ಬಂಧಾನುಮತಿಂ ತಸ್ಯ ತೇನೇ ಸ್ವಯಂ ಹರಃ ॥ ೫೯ ॥

ದೃಢಂ ನಿಬದ್ಧೋ ಯೂಪೇ ತು ದಾಮ್ನಾ ದರ್ಭಮಯೇನ ಚ ।
ಊರ್ಣಸೂತ್ರೇಣ ಸಂಬದ್ಧೋ ಮೃಗೇಂದ್ರ ಇವ ರಾಜತೇ ॥ ೬೦ ॥

ಪಶೋ ಸ್ಸಂಜ್ಞಪನಾಯಾಥ ನಿಯುಕ್ತೈಃ ಪುರುಷೈ ರ್ದೃಢೈಃ ।
ಪ್ರಕಾಮಂ ಪೀಡ್ಯಮಾನೋಽಪಿ ಬಭೂವ ಪ್ರೀತಿಮಾನ್ ವಲಃ ॥ ೬೧ ॥

ಕೃತೇ ಸಂಜ್ಞಪನೇಽನೇಕೈಃ ಕರಣೈ ರ್ಜನಿತೋ ಸ್ವಯಂ ।
ಪ್ರಸನ್ನವದನೋ ಭೂತ್ವಾ ಸರ್ವಾಭರಣಭೂಷಿತಃ ॥ ೬೨ ॥

ಪಪಾತ ಕಲ್ಪದ್ರುಮವತ್ ಪುಷ್ಪವೃಷ್ಟಿಃ ಪಪಾತ ಚ ।
ಕುಲಿಶೇನ ವಿಭಿನ್ನಾಚ್ಚ ಶರೀರಾದ್ದಾನವಸ್ಯ ಚ ॥ ೬೩ ॥

---

೫೯–೬೨. ಆಗ ಪರಮೇಶ್ವರನು ಪ್ರತ್ಯಕ್ಷವಾಗಿ ಅವನನ್ನು ಯೂಪಸ್ತಂಬದಲ್ಲಿ ಕಟ್ಟುವುದಕ್ಕೆ ಸಮ್ಮತಿಸಿದನು. ಬಲಾಸುರನನ್ನು ಯೂಪಸ್ತಂಬದಲ್ಲಿ ಬಲವಾಗಿ ಕಟ್ಟಿದರು. ದರ್ಭೆಯ ಹಗ್ಗದಿಂದ ಕಟ್ಟಿರುವ ಬಲಾಸುರನು ಕಂಬಳಿಯ ದಾರದಿಂದ ಕಟ್ಟಿ ಹಾಕಿರುವ ಸಿಂಹದಂತೆ ಪ್ರಕಾಶಿಸುತ್ತಿದ್ದನು. ಪಶುವನ್ನು ವಿಶಸನ (ಕೊಲ್ಲುವ) ಮಾಡುವ ಕಾಲವು ಬಂದಿತು. ಅದಕ್ಕಾಗಿ ಸಿದ್ಧರಾದ ಋತ್ವಿಜರು ಬಲಾಸುರನನ್ನು ಬಲವಾಗಿ ಪೀಡಿಸಿ ಹಿಂಸೆಮಾಡಿದರು. ಬಲಾಸುರನು ತನಗೆ ಹಿಂಸೆಯಾಗುತ್ತಿದ್ದರೂ ಸಂತೋಷದಿಂದ ಇದ್ದನು. ಬಲಾಸುರನ ಶರೀರವನ್ನು ತಕ್ಕ ಸಾಧನ ಸಾಮಗ್ರಿಗಳಿಂದ ಕತ್ತರಿಸಿದರು. ಆಗ ಎಲ್ಲಾ ವಿಧವಾದ ಆಭರಣಗಳಿಂದ ಅಲಂಕೃತನಾದ ಬಲಾಸುರನು ಸಂತೋಷದಿಂದ ಭೂಮಿಯಲ್ಲಿ ಬಿದ್ದನು. ಅಂತರಿಕ್ಷದಿಂದ ಹೂವಿನ ಮಳೆಯು ಅವನ ಶರೀರದ ಮೇಲೆ ಸುರಿಯಿತು.

೬೩–೬೬. ವಜ್ರಾಯುಧದಿಂದ ಕತ್ತರಿಸಿದ ಅವನ ಶರೀರದಿಂದ ವಪೆಯನ್ನು ಬಹಳ ಪ್ರಯಾಸದಿಂದ ತೆಗೆದು ಋತ್ವಿಜರು ಅಗ್ನಿಯಲ್ಲಿ ಹೋಮವನ್ನು ಮಾಡಿದರು. ಬಲಾಸುರನು ತೇಜೋರೂಪದಿಂದ ಪ್ರಕಾಶಿಸುತ್ತಾ ಶ್ರೇಷ್ಠರಾದ ಸ್ತ್ರೀಯರಿಂದ ಕೂಡಿ

ವಪಾಂ ಕಥಂಚಿ ದುಧ್ಧೃತ್ಯ ವಹ್ನೌ ಜುಹ್ವತಿ ಋತ್ವಿಜಃ ।
ದೈತ್ಯ ಸ್ತೇಜೋಮಯೋ ಭೂತ್ವಾ ದಿವ್ಯಸ್ತ್ರೀಪರಿವಾರಿತಃ ॥ ೬೪ ॥

ಯಯೌ ರತ್ನವಿಮಾನೇನ ಬ್ರಹ್ಮಣೋ ಲೋಕಮುದ್ಧೃತಂ ।
ತಸ್ಯ ಸತ್ವವಿಶುದ್ಧಸ್ಯ ಪರಿಶುದ್ಧೇನ ಕರ್ಮಣಾ ॥ ೬೫ ॥

ಕಾಯಸ್ಯಾವಯವಾಸ್ಸರ್ವೇ ರತ್ನಬೀಜತ್ವ ಮಾಯಯುಃ ।
ಏವಂ ತದ್ದೇಹಜಾತಾನಿ ಪಾವನಾನಿ ಜಗತ್ತ್ರಯೇ ॥ ೬೬ ॥

ಇಮಾನಿ ನವರತ್ನಾನಿ ಧಾರ್ಯಾಣ್ಯಾ ಸನ್ಮಹೀಭುಜಾಂ ।
ನತ್ವ ಸ್ಥಾಣ್ವಾದೀ ನ್ಯಶುದ್ಧಾನಿ ನ ಸ್ಪೃಶ್ಯಾನಿ ಭವಂತಿ ಹಿ ॥ ೬೭ ॥

ಪಾವನಾನಿ ಚ ಕಥ್ಯಂತ ಇತಿ ಚೇಚ್ಛ್ರೂಯತಾ ಮಿದಂ ।
ಸ ದೈತ್ಯ ಇವ ಧರ್ಮಾರ್ಥೇ ಜೀವಿತಂ ಕ ಸ್ತ್ಯಜೇತ್ಪುಮಾನ್ ॥ ೬೮ ॥

ದನನಾಗಿ ರತ್ನಖಚಿತವಾದ ವಿಮಾನದಿಂದ ಬ್ರಹ್ಮಲೋಕವನ್ನು ಹೊಂದಿದನು. ಸತ್ವಗುಣದಿಂದ ಕೂಡಿದ ಅವನ ಶರೀರವೆಲ್ಲವೂ ಪರಿಶುದ್ಧವಾದ ಯಜ್ಞಕ್ಕೆ ಉಪಯೋಗವನ್ನು ಹೊಂದಿದರೂ, ಅವಯವಗಳು ನವರತ್ನಗಳಿಗೆ ಬೀಜಗಳಾದವು. ಅವನ ದೇಹದಿಂದ ಉಂಟಾದ ರತ್ನಗಳು ಹೀಗೆ ಮೂರು ಲೋಕಗಳಲ್ಲಿಯೂ ಪವಿತ್ರಗಳಾಗಿರುವವು.

೬೭-೬೮. ಈ ನವರತ್ನಗಳು ರಾಜರಿಗೆ ಧರಿಸಲು ಯೋಗ್ಯಗಳಾಗಿ ಇರುವವು. ಮೂಳೆಯೇ ಮೊದಲಾದವುಗಳು ಅಶುದ್ಧಗಳು ಮತ್ತು ಸ್ಪರ್ಶಕ್ಕೂ ಯೋಗ್ಯವಾದುವುಗಳಲ್ಲವು. ಆದ್ದರಿಂದ ಬಲಾಸುರನ ಶರೀರದ ಸಪ್ತ ಧಾತುಗಳಿಗೆ ಪರಿಶುದ್ಧತೆಯು ಹೇಗೆ ಉಂಟಾಯಿತು? " ಎಂದು ಕೇಳಬಹುದು. ಇವನಂತೆ ಧರ್ಮಕ್ಕಾಗಿ ಯಾವನಾದರೂ ಶರೀರವನ್ನು ಬಿಡುವವನು ಇರುವನಾದರೆ ಪುಣ್ಯವಂತನಾದ ಇವನ ಶರೀರವಂತೆ ಅವನ ಅಂಗಗಳೂ ಪವಿತ್ರಗಳಾಗುವುದರಲ್ಲಿ ಸಂಶಯವಿಲ್ಲವು.

**ಅತಃ ಪುಣ್ಯವತೋಽಂಗಾನಿ ಪಾವನಾನಿ ನ ಸಂಶಯಃ ।**
**ವಾರಕ್ರಮೇಣ ವಕ್ಷ್ಯೇಽಥ ಮಾಣಿಕ್ಯಾದೀನ್ಮಣೀನಥ ॥ ೧೯ ॥**

**ಆದಿತ್ಯವಾರೇ ಮಾಣಿಕ್ಯಂ ಸೋಮವಾರೇ ತು ಮೌಕ್ತಿಕಂ ।**
**ವಿದ್ರುಮಂ ಭೌಮವಾರೇ ತು ಸೌಮ್ಯೇ ಮರಕತಂ ತಥಾ ॥ ೨೦ ॥**

**ಪುಷ್ಯರಾಗಂ ಗುರೋರ್ವಾರೇ ವಜ್ರಂ ವಾರೇ ಭೃಗೋರಪಿ ।**
**ನೀಲಂ ವಾರೇ ರವೇಸ್ಸೂನೋ ಗೋಮೇದಂ ರವಿವಾರಕೇ ॥ ೨೧ ॥**

**ವೈಡೂರ್ಯಂ ಶಶಿನೋ ವಾರೇ ಇತಿ ವೀಕ್ಷಾವಿನಿರ್ಣಯಃ ।**
**ಪದ್ಮಂ ಜಾತಿಪ್ರಸೂನಂ ಚ ರಕ್ತೈಕೈರವಮೇವ ಚ ॥ ೨೨ ॥**

**ಸಿಲೀಂಧ್ರಂ ಮಾಲತೀಪುಷ್ಪಂ ಶತಪತ್ರಪ್ರಸೂನಕಂ ।**
**ಶಾಲೀಯಂ ಚೈವ ಕಲ್ಹಾರಂ ಶ್ವೇತಮಂದಾರಮೇವ ಚ ॥ ೨೩ ॥**

**ವೀಕ್ಷಕೋ ಧಾರಯೇನ್ಮೂರ್ಧ್ನಿ ಶುಚಿರ್ಧರ್ಮಪರಾಯಣಃ ।**
**ಶುದ್ಧವಸ್ತ್ರಾಸ್ತೃತಂ ಪೀಠಂ ಶುದ್ಧದೇಶೇ ನಿಧಾಯ ಚ ॥ ೨೪ ॥**

೧೯–೨೧. ನಾನು ವಾರಗಳ ಕ್ರಮದಿಂದ ರತ್ನಗಳನ್ನು ಪರೀಕ್ಷೆ ಮಾಡುವುದನ್ನು ಹೇಳುವೆನು. ಆದಿತ್ಯವಾರದಲ್ಲಿ ಮಾಣಿಕ್ಯ ರತ್ನವನ್ನೂ, ಸೋಮವಾರದಲ್ಲಿ ಮುತ್ತುಗಳನ್ನೂ, ಮಂಗಳವಾರದಲ್ಲಿ ಹವಳವನ್ನೂ, ಬುಧವಾರದ ದಿನ ಮರಕತ ರತ್ನವನ್ನೂ, ಗುರುವಾರದ ದಿನ ಪುಷ್ಯರಾಗ ರತ್ನವನ್ನೂ, ಶುಕ್ರವಾರದಲ್ಲಿ ವಜ್ರವನ್ನೂ, ಶನಿವಾರದಲ್ಲಿ ಇಂದ್ರನೀಲ ರತ್ನವನ್ನೂ, ಭಾನುವಾರ ಗೋಮೇಧ ರತ್ನವನ್ನೂ, ವೈಡೂರ್ಯ ರತ್ನವನ್ನು ಸೋಮವಾರದಲ್ಲಿಯೂ ನೋಡಬೇಕು. ನವರತ್ನಗಳನ್ನು ನೋಡುವ ಕ್ರಮವು ಈ ಪ್ರಕಾರದಿಂದ ನಿರ್ಣಯವಾಗಿರುವುದು.

೨೨–೨೩. ರತ್ನವನ್ನು ನೋಡುವವನು ಪರಿಶುದ್ಧನಾಗಿ, ಧರ್ಮಿಷ್ಠನಾಗಿ, ಪದ್ಮ (ಕಮಲದ ಹೂವು) ಜಾಜಿಯ ಹೂವು, ಶಾಲಿಯ ಪುಷ್ಪ, ಕಲ್ಹಾರ ಪುಷ್ಪ, ಬಿಳಿಯದಾದ ಮಂದಾರ ಪುಷ್ಪ, ಇವುಗಳನ್ನು ಕ್ರಮವಾಗಿ ಶಿರಸ್ಸಿನಲ್ಲಿ ಧರಿಸಿ ಆಯಾಯ ರತ್ನಗಳನ್ನು ನೋಡಬೇಕು.

೨೪–೨೬. ಪವಿತ್ರವಾದ ಪ್ರದೇಶದಲ್ಲಿ ಶುಭ್ರವಾದ ವಸ್ತ್ರವನ್ನು ಹಾಸಿರುವ ಪೀಠದಮೇಲೆ ಮಾಣಿಕ್ಯವೇ ಮೊದಲಾದ ಈ ರತ್ನಗಳನ್ನು ಮಂಡಲಾಕಾರವಾಗಿ

ಮಾಣಿಕ್ಯಾದೀನಿ ರತ್ನಾನಿ ಮಂಡಲಾಕೃತಿ ವಿನ್ಯಸೇತ್ ।
ಮಧ್ಯೇ ತು ಪದ್ಮರಾಗಂ ಚ ಮುಕ್ತಾದೀನಿ ಯಥಾಕ್ರಮಂ ॥ ೭೫ ॥

ಪೂರ್ವಾದಿದಿಕ್ಷು ವಿನ್ಯಸ್ಯ ತತ್ರ ತತ್ರ ಸಮರ್ಚಯೇತ್ ।
ಆದಿತ್ಯಾದಿಗ್ರಹಾನ್ನಿತ್ಯಂ ತತ್ತತ್ಪುಷ್ಪೈಸ್ಸಮರ್ಚಯೇತ್ ॥ ೭೬ ॥

ಆದಿತ್ಯಸ್ಯ ತು ಪದ್ಮರಾಗಮಮಲಂ ಮುಕ್ತಾಫಲಂ ಶೀತಗೋಃ ।
ಮಾಹೇಯಸ್ಯ ಚ ವಿದ್ರುಮಂ ಮರಕತಂ ಸೌಮ್ಯಸ್ಯ ಗಾರುತ್ಮತಂ ।
ದೇವೇಡ್ಯಸ್ಯ ಚ ಪುಷ್ಯರಾಗ ಮಸುರಾಚಾರ್ಯಸ್ಯ ವಜ್ರಂ ಶನೇ ।
ರ್ನೀಲಂ ನಿರ್ಮಲಮನ್ಯಯೋಸ್ತುಗದಿತೇಗೋಮೇದವೈಡೂರ್ಯಕೇ॥೭೭॥

ಪೂರ್ವೋಕ್ತೇನ ಕ್ರಮೇಣಾಥ ವಜ್ರಾದೀನಾಂ ತು ಲಕ್ಷಣಂ ।
ವಕ್ಷ್ಯೇ ತಜ್ಞಾನಲಾಭಾಯ ಯೂಯಂ ಶೃಣ್ವಂತು ಮಂತ್ರಿಣಃ ॥ ೭೮ ॥

ಪೃಥಿವ್ಯಾಂ ಯಾನಿ ರತ್ನಾನಿ ಯೇ ಚಾನ್ಯೇ ಲೋಹಧಾತವಃ ।
ಸರ್ವಂ ತದ್ವಿಲಿಖೇದ್ವಜ್ರಂ ವಜ್ರಂ ತೈರ್ನ ವಿಲಿಖ್ಯತೇ ॥ ೭೯ ॥

ಮಧ್ಯದಲ್ಲಿ ಪದ್ಮರಾಗ ರತ್ನವನ್ನೂ ಅನಂತರ ಮುತ್ತುಗಳು ಇವೇ ಮೊದಲಾದವುಗಳನ್ನು, ಪೂರ್ವಾದಿ ದಿಕ್ಕುಗಳನ್ನು ಅನುಸರಿಸಿ ಇಡಬೇಕು. ಆದಿತ್ಯನೇ ಮೊದಲಾದ ಗ್ರಹಗಳಿಗೆ ಹೇಳಿರುವ ಪುಷ್ಪಗಳಿಂದ ಈ ರತ್ನಗಳನ್ನು ಕ್ರಮವಾಗಿ ಪೂಜಿಸಬೇಕು.

೭೭-೭೮. ನಿರ್ಮಲವಾದ ಪದ್ಮರಾಗ ರತ್ನವು ಸೂರ್ಯನಿಗೆ ಸಂಬಂಧಪಟ್ಟಿರುವುದು. ಮುತ್ತುಗಳು ಚಂದ್ರನಿಗೆ ಸಂಬಂಧಪಟ್ಟವುಗಳು. ಭೂಪುತ್ರನಾದ ಮಂಗಳನಿಗೆ ಹವಳವೂ, ಬುಧನಿಗೆ ಮರಕತ ರತ್ನವೂ, ಗುರುವಿಗೆ ಪುಷ್ಯರಾಗವೂ, ಶುಕ್ರಾಚಾರ್ಯನಿಗೆ ವಜ್ರವೂ, ಶನಿಗೆ ನಿರ್ಮಲವಾದ ನೀಲ ರತ್ನವೂ, ರಾಹುವಿಗೆ ಗೋಮೇಧ ರತ್ನವೂ, ಕೇತುವಿಗೆ ವೈಡೂರ್ಯ ರತ್ನವೂ, ಸಂಬಂಧಪಟ್ಟಿರುವುದು. ನಾನು ಮೊದಲು ಹೇಳಿದ ಕ್ರಮದಿಂದ ರತ್ನಗಳ ಲಕ್ಷಣಗಳನ್ನು ವಿವರವಾಗಿ ತಿಳಿಸುವೆನು. ಇದರಿಂದ ಆಯಾಯ ರತ್ನಗಳ ಪರಿಚಯವು ಆಗುವುದು.

೭೯-೮೨. ಭೂಮಿಯಲ್ಲಿ ಇರುವ ರತ್ನಗಳನ್ನೂ, ಲೋಹಗಳನ್ನೂ ವಜ್ರವು ಕೊರೆಯಬಲ್ಲದು. ಅಥವಾ ಸೀಳಬಲ್ಲದು. ವಜ್ರವನ್ನು ಇತರ ರತ್ನಗಳಾಗಲಿ, ಲೋಹಗಳಾಗಲಿ ಸೀಳಲಾರವು. ಇದರಿಂದಲೇ ಬುದ್ಧಿವಂತರು ವಜ್ರವು ಎಲ್ಲಕ್ಕಿಂತಲೂ

**ತಸ್ಮಾದ್ವಜ್ರಂ ತು ರತ್ನಾನಾಂ ಶ್ರೇಷ್ಠಮಾಹುರ್ಮನೀಷಿಣಃ ।**
**ದಧೀಚೇಶ್ಚ ವಲಸ್ಯಾಪಿ ಯತ್ರಯತ್ರ ಪತಂತಿ ಹಿ　　　　॥ ೮೦ ॥**

**ಅಸ್ಥೀನಿ ತತ್ರ ತತ್ರಾಸನ್ನಾಕರಾ ವಜ್ರಸಿದ್ಧಯೇ ।**
**ಕೋಸಲಾದಿಪ್ರಭೇದೇನ ದೇಶಾಶ್ಚ ಬಹವೋಭವನ್　　　　॥ ೮೧ ॥**

**ಕೋಸಲಂ ಚ ಶಿರೀಷಾಭಂ ಕಾಲಿಂಗಂ ಪೀತವರ್ಣಕಂ ।**
**ಮಾತಂಗಂ ಮಲ್ಲಿಪುಷ್ಪಾಭಂ ಶುಭ್ರಂ ಹಿಮವದುದ್ಭವಂ　　　　॥ ೮೨ ॥**

**ಮಹಾರಾಷ್ಟ್ರೋದ್ಭವಂ ರಕ್ತಂ ಸೌವೀರಂ ಕೃಷ್ಣಮೇವ ಚ ।**
**ಪೌಂಡ್ರಮುತ್ಪಲವರ್ಣಾಭಂ ಪಿಂಗಲಂ ಮಾಗಧಂ ತಥಾ　　　　॥ ೮೩ ॥**

**ದೇವತಾಭೇದತೋ ವಜ್ರಂ ಬಹುಧಾ ಸಂಪ್ರಕೀರ್ತಿತಂ ।**
**ಶಿರೀಷಪುಷ್ಪಕದಲೀವಂಶಾಭಂ ವೈಷ್ಣವಂ ಮತಂ　　　　॥ ೮೪ ॥**

---

ಶ್ರೇಷ್ಠವೆಂದು ಹೇಳುವರು. ದಧೀಚಿಋಷಿ ಮತ್ತು ಬಲಾಸುರ ಇವರ ಶರೀರದ ಮೂಳೆಗಳು ಬಿದ್ದ ಕಡೆಯಲ್ಲಿ ವಜ್ರದ (ಖನಿ) ಗಣಿಗಳಾದವು. ಅವು ಬಿದ್ದ ಪ್ರದೇಶಕ್ಕೆ ಅನುಸಾರವಾಗಿ ವಜ್ರಗಳ ಕಾಂತಿಯೂ, ಬಣ್ಣವೂ ಬೇರೆ ಬೇರೆಯಾಗಿ ವಜ್ರಗಳಲ್ಲಿ ಭೇದಗಳುಂಟಾದವು. ಕೋಸಲದೇಶದ ವಜ್ರವು ಶಿರೀಷ (ಬಾಗೆ) ಹೂವಿನ ಕಾಂತಿಯನ್ನು ಹೊಂದಿರುವುದು. ಕಳಿಂಗದೇಶದ ವಜ್ರವು ಹಳದಿಯ ಬಣ್ಣವಾಗಿರುವದು. ಮತಂಗದೇಶದ ವಜ್ರವು ಮಲ್ಲಿಗೆ ಹೂವಿನ ಕಾಂತಿಯುಳ್ಳದ್ದಾಗಿರುವುದು. ಹಿಮವತ್ ಪರ್ವತ ಪ್ರದೇಶದ ವಜ್ರವು ಶುಭ್ರವಾದ (ಬಿಳಿಯದಾದ) ಕಾಂತಿಯನ್ನು ಹೊಂದಿರುವುದು.

೮೩-೮೪. ಮಹಾರಾಷ್ಟ್ರದೇಶದ ವಜ್ರವು ಕೆಂಪಾದ ಕಾಂತಿಯನ್ನು ಹೊಂದಿರುವುದು. ಸೌವೀರದೇಶದ ವಜ್ರವು ಕಪ್ಪು ಛಾಯೆಯನ್ನು ಹೊಂದಿರುವುದು ಪಾಂಡ್ಯದೇಶದ ವಜ್ರವು ಪಿಂಗಳ ವರ್ಣವುಳ್ಳದ್ದಾಗಿರುವುದು. ಮಗಧದೇಶದ ವಜ್ರವು ನೈದಿಲೆಯ ಹೂವಿನ ವರ್ಣವುಳ್ಳದ್ದಾಗಿರುವುದು. ಭೂಗುಣದಿಂದಲೂ, ಆಯಾಯ ದೇಶಭೇದದಿಂದಲೂ ವಜ್ರಗಳ ಭೇದಗಳನ್ನು ಹೇಳಿರುವೆನು. ದೇವತೆಗಳ ಭೇದದಿಂದಲೂ ವಜ್ರವು ಅನೇಕ ವಿಧವಾಗಿ ಇರುವುದು. (ಬಾಗೆಯ) ಶಿರೀಷ ಪುಷ್ಪ, ಬಾಳೆಯಹೂವು, ಬಿದಿರು ಕಳಲೆ ಇವುಗಳ ಕಾಂತಿಯನ್ನು ಹೊಂದಿರುವ ವಜ್ರವು ವೈಷ್ಣವವೆಂದು ಪ್ರಸಿದ್ಧವಾಗಿ ಇರುವುದು.

ಶುಕ್ಲಂ ಷಡಸ್ರಂ ಮಾಹೇಂದ್ರಂ ಯಾಮ್ಯಂ ಭೃಂಗೋತ್ಪಲ ಪ್ರಭಂ ।
ಶಾಲ್ಮಲೀಕಿಂಶುಕಾಭಂ ಚ ವಜ್ರಂ ವಾಯುವ್ಯಮೀರಿತಂ ॥ ೮೫ ॥

ಕರ್ಣಿಕಾರಪ್ರಸೂನಾಭಂ ವಾರುಣಂ ಸೌಮ್ಯಮಂಬು ಭಂ ।
ಇಂದ್ರಗೋಪನಿಭಂ ಸೌರ ಮಾಗ್ನೇಯಮನಲಪ್ರಭಂ ॥ ೮೬ ॥

ವಿಪ್ರಃ ಸ್ಫಟಿಕಸಂಕಾ ಶಃಶಶಲೋ ಚ ನವತ್ನೃಪಃ ।
ಕದಳೀದಳವ ದ್ವೈಶ್ಯಶ್ಶೂದ್ರಸ್ತು ಕರವಾಲವತ್ ॥ ೮೭ ॥

ವಿಪ್ರಕ್ಷತ್ರಿಯವಿಟ್ಶೂದ್ರಾ ಧಾರಯೇಯುರ್ಯಥಾಕ್ರಮಂ ।
ಸ್ವಸ್ವಜಾತಿಯುತಂ ವಜ್ರಮಗ್ರಜ ಸ್ಸರ್ವಮರ್ಹತಿ ॥ ೮೮ ॥

---

೮೫–೮೭. ಬಿಳಿಯ ಕಾಂತಿಯುಳ್ಳದ್ದಾಗಿ ಆರು ಮೂಲೆಯಾಗಿ ಇರುವ ವಜ್ರವು ಮಹೇಂದ್ರ (ಮಹೇಂದ್ರನಿಗೆ ಸಂಬಂಧಿಸಿರುವುದು.) ಎನಿಸಿರುವುದು. ದುಂಬಿಯಂತೆಯೂ, ನೈದಿಲೆ ಹೂವಿನಂತೆಯೂ, ಕಾಂತಿಯುಳ್ಳ ವಜ್ರವು ಯಮದೇವತೆಗೆ ಸಂಬಂಧಿಸಿದುದು. ಬೂರುಗದ ಹೂವು, ಮುತ್ತುಗದ ಹೂವು ಇವುಗಳ ಕಾಂತಿಯನ್ನು ಹೊಂದಿರುವ ವಜ್ರಗಳು ವಾಯುದೇವನಿಗೆ ಸಂಬಂಧಪಟ್ಟವು. ಕರ್ಣಿಕಾರ ಹೂವಿನಂತೆ ಕಾಂತಿಯುಳ್ಳದ್ದಾಗಿ ನೀರಿನಲ್ಲಿ ಉತ್ಪನ್ನವಾಗಿರುವ ವಜ್ರವು ವರುಣದೇವತಾಕವಾಗಿರುವುದು. ಇಂದ್ರನೀಲರತ್ನದಂತೆ ಕಾಂತಿಯನ್ನು ಕೊಡುವ ವಜ್ರವು ಸೂರ್ಯದೇವತಾಕವಾದದ್ದು. ಕೆಂಡದಂತೆ ಇರುವ ಕಾಂತಿಯುಳ್ಳ ವಜ್ರವು ಅಗ್ನಿದೇವನಿಗೆ ಸಂಬಂಧಪಟ್ಟದ್ದಾಗಿರುವುದು. ಸ್ಫಟಿಕದ ಕಾಂತಿಯಂತಿರುವ ಕಾಂತಿಯುಳ್ಳ ವಜ್ರವು ಬ್ರಾಹ್ಮಣಜಾತಿಗೆ ಸೇರಿರುವುದು. ಮೊಲದ ಕಣ್ಣಿನ ಹಾಗೆ ಇರುವ ಕಾಂತಿಯುಳ್ಳ ವಜ್ರವು ಕ್ಷತ್ರಿಯ ಜಾತಿಗೆ ಸೇರಿರುವುದು. ಬಾಳೆಯ ಹೂವಿನ ಕಾಂತಿಯುಳ್ಳ ವಜ್ರವು ವೈಶ್ಯಜಾತಿಗೆ ಸೇರಿರುವುದು. ಕತ್ತಿಯ ಹಾಗೆ ಕಾಂತಿಯುಳ್ಳ ವಜ್ರವು ಶೂದ್ರಜಾತಿಯದು.

೮೮–೮೯. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ಜಾತಿಯವರೂ ಆಯಾಯ ಜಾತಿಯ ವಜ್ರಗಳನ್ನು ಧರಿಸಬಹುದು. ಆದರೆ ಬ್ರಾಹ್ಮಣನು ನಾಲ್ಕು ಜಾತಿಯ ವಜ್ರವನ್ನೂ ಧರಿಸಬಹುದು. ಇಂದ್ರನೀಲರತ್ನದಂತೆ ಹೊಳೆಯುವ ವಜ್ರವು

ಇಂದ್ರಗೋಪನಿಭಂ ವಜ್ರಂ ವರಘುರ್ಕೋರ್ಸ್ಯಸ್ಯ ದೈವತಂ ।
ಅನರ್ಘ್ಯಂ ಶ್ರೀಕರಂ ರಾಜ್ಞಾಮಾರೋಗ್ಯವಿಜಯಾವಹಂ ॥ ೮೯ ॥

ಆರಾಧಿತೋ ನರೇಂದ್ರಾಣಾಂ ಕಿರೀಟೇ ಸುಮಣಿರ್ನೃಪಃ ।
ಮಂಗಳಾಭರಣೇ ವಜ್ರಂ ಕುಲಸ್ತ್ರೀಣಾಂ ನ ಯೋಜಯೇತ್ ॥ ೯೦ ॥

ವರ್ಣಾಲ್ಪತಾ ತಥಾ ರೇಖಾ ತ್ರಾಸಃ ಕಾಕಪದಂ ಚ ಯತ್ ।
ಬಿಂದುಶ್ಚೈವೇತಿ ಪಂಚೈತೇ ಮಹಾದೋಷಾ ಉದಾಹೃತಾಃ ॥ ೯೧ ॥

ವಜ್ರೈರಾಭರಣೈರ್ಯುಕ್ತಂ ಬಿಭ್ರಾಣೋ ರಣಮೂರ್ಧನಿ ।
ಅಕ್ಷತಃ ಪರಶಸ್ತ್ರೇಣ ನೃಪತಿರ್ವಿಜಯೀ ಭವೇತ್ ॥ ೯೨ ॥

---

ಸೂರ್ಯದೇವತಾಕವಾಗಿರುವುದು. ಇದು ಉತ್ತಮವಾದದ್ದು. ಬಹಳ ಬೆಲೆ ಬಾಳತಕ್ಕದ್ದು. ಐಶ್ವರ್ಯವನ್ನು ಹೆಚ್ಚುಮಾಡತಕ್ಕದ್ದು. ರಾಜರಿಗೆ ಆರೋಗ್ಯವನ್ನು ಉಂಟುಮಾಡತಕ್ಕದ್ದು. ಮತ್ತು ಈ ವಜ್ರವು ರಾಜರಿಗೆ ಜಯವನ್ನು ಉಂಟುಮಾಡುವುದು.

೯೦-೯೨, ರಾಜನು ಕ್ಷತ್ರಿಯ ಜಾತಿಯ ರತ್ನವನ್ನು ಪೂಜಿಸಿ ಕಿರೀಟವನ್ನು ಮಾಡಿಸಬಹುದು. ಕುಲಸ್ತ್ರೀಯರಿಗೆ ಮಂಗಳಕರವಾದ ಒಡವೆಗಳಲ್ಲಿ ವಜ್ರವನ್ನು ಸೇರಿಸಬಾರದು. ವಜ್ರದ ಕಾಂತಿಯು ಕಡಿಮೆಯಾಗಿರುವಿಕೆ, ಮಧ್ಯದಲ್ಲಿ ಗೆರೆ ಇರುವಿಕೆ, ಕಾಂತಿಯಲ್ಲಿ ಚಂಚಲವಾಗಿರುವಿಕೆಯು, ಕಾಕಪದವೆಂಬ ಚಿಹ್ನೆಯಿರುವಿಕೆ, ಮಧ್ಯದಲ್ಲಿ ಬಿಂದುವಿರುವಿಕೆ, ಎಂಬ ಈ ಐದು ದೋಷಗಳು ವಜ್ರಗಳಲ್ಲಿ ಕಂಡು ಬರುವವು. ಇವುಗಳನ್ನು ಚೆನ್ನಾಗಿ ಪರೀಕ್ಷೆಮಾಡಿ, ಸ್ವೀಕರಿಸಬೇಕು. ವಜ್ರಗಳಿಂದ ಮಾಡಿದ ಆಭರಣವನ್ನು ರಾಜನು ಯುದ್ಧಕಾಲದಲ್ಲಿ ಧರಿಸುವುದರಿಂದ ಯುದ್ಧ ರಂಗದಲ್ಲಿ ಅವನಿಗೆ ಶತ್ರುಗಳಿಂದ ಆಯುಧಗಳ ಏಟು ಬೀಳದೆ ಅವನು ಜಯಶಾಲಿಯಾಗುವನು.

ಅಲ್ಪದೇಶಾಧಿಪಃ ಪೃಥ್ವೀಂ ಲಭತೇ ಸಾಗರಾಂಬರಾಂ ।
ದಾರಿದ್ರ್ಯ ಮುರಗೋ ವಹ್ನಿಃ ಪಿಶಾಚಾ ಭೂತಯೋನಯಃ ॥ ೯೩ ॥

ಅಪಮೃತ್ಯುರಪಿ ಪ್ರೇಕ್ಷ್ಯ ದೂರೇ ಪರಿಹರಂತಿ ತಂ ॥ ೯೪ ॥

ಅಥ ವಕ್ಷ್ಯಾಮಿ ಮುಕ್ತಾನಾಂ ಲಕ್ಷಣಂ ಶ್ರೋತುಮರ್ಹಥ ।
ಜಲಜಾ ಸ್ಥಲಜಾ ಚೇತಿ ಮುಕ್ತಾಜಾತಿ ರ್ದ್ವಿಧಾ ಮತಾ ॥ ೯೫ ॥

ವಜ್ರಘಾತಪ್ರಕೀರ್ಣಾ ಯಾ ದಂತಪಂಕ್ತಿ ರ್ವಲಸ್ಯ ತು ।
ಸಾ ತು ತ್ರಯೋದಶಸ್ಥಾನೇ ವಿಪ್ರಕೀರ್ಣಾ ಭವತ್ತದಾ ॥ ೯೬ ॥

ಶಂಖೇ ಮತ್ಸ್ಯಶಿರೋದೇಶೇ ಮೇಘೇ ಕಂಠೇ ನತಭ್ರುವಾಂ ।
ವಂಶೇ ವರಾಹದಂಷ್ಟ್ರಾಯಾಂ ಫಣೇಷು ಪವನಾಶಿನಾಂ ॥ ೯೭ ॥

ಕರಿದಂತೇ ಬಲಾಕಾನಾಂ ಕಂಠೇ ಪುಂಡ್ರೇಕ್ಷು ಪರ್ವಸು ।
ಶಾಲಿಸ್ತಂಬೇ ಚ ಶುಕ್ತೌ ಚ ಭುಜೇ ಕರಟವಾಜಿನಃ ॥ ೯೮ ॥

---

೯೩-೯೬. ಸಣ್ಣರಾಜ್ಯಕ್ಕೆ ಅಧಿಪತಿಯಾದ ರಾಜನು ಉತ್ತಮವಾದ ರತ್ನಗಳನ್ನು ಧರಿಸಿರುವುದರಿಂದ ಇತರ ರಾಜ್ಯಗಳನ್ನು ಗೆದ್ದು, ದೊಡ್ಡ ರಾಜನಾಗುವನು. ಉತ್ತಮವಾದ ರತ್ನಗಳನ್ನು ಧರಿಸಿದವನಿಗೆ ಬಡತನ, ಹಾವು, ಬೆಂಕಿ, ಪಿಶಾಚಗಳು. ಭೂತಗಳು, ಮತ್ತು ಅಪಮೃತ್ಯುವೂ ಇವುಗಳ ಭಯವು ಇರುವುದಿಲ್ಲ. ಇನ್ನು ಮುಂದೆ ಮುತ್ತುಗಳ ಲಕ್ಷಣವನ್ನು ಹೇಳುವೆನು. ಸ್ಥಲಜ ಮುತ್ತು ಜಲಜ ಎಂದು ಮುತ್ತುಗಳು ಎರಡು ವಿಧವಾಗಿ ಇರುವವು. ವಜ್ರಾಯುಧದ ಏಟಿನಿಂದ ಬೇರೆ ಬೇರೆಯ ಕಡೆಗೆ ಹಾರಿಹೋದ ಬಲಾಸುರನ ಹಲ್ಲುಗಳು ಹದಿಮೂರು ವಿಧವಾದ ಪ್ರದೇಶದಲ್ಲಿ ಬಿದ್ದವು.

೯೭-೯೮ ಶಂಖ, ಮೀನಿನತಲೆ, ಮೇಘ, ಸ್ತ್ರೀಯರ ಕುತ್ತಿಗೆ, ಬಿದಿರು, ಹಂದಿಯ ಕೋರೆಯ ಹಲ್ಲು, ಹಾವಿನ ಹೆಡೆ, ಆನೆಯ ದಂತಪ್ರದೇಶ, ಬಲಾಕಾ ಎಂಬ ಪಕ್ಷಿಯ ಕುತ್ತಿಗೆ, ನಾಮವಿರುವ ಕಬ್ಬಿನ ಗಿಣ್ಣು, ಬತ್ತದ ಬುಡ, ಮುತ್ತಿನ ಚಿಪ್ಪು, ಕುದುರೆಯ ಹೆಗಲು, ಈ ಹದಿಮೂರು ಪ್ರದೇಶಗಳಲ್ಲಿ ಮುತ್ತುಗಳು ಹುಟ್ಟುವವು.

ಶಂಖಜಂ ಮೌಕ್ತಿಕಂ ಶ್ವೇತಂ ಕಪೋತಾಂಡನಿಭಂ ವರಂ ।
ತತ್ತು ಮತ್ಸ್ಯಶಿರೋಜಾತಂ ಪಾಟಲೀಪುಷ್ಪಸನ್ನಿಭಂ ॥ ೯೯ ॥

ಮೌಕ್ತಿಕಂ ಘನಸಂಭೂತ ಮಥ ಸೂರ್ಯಪ್ರಭೋದಯಂ ।
ನಾರೀಬಲಾಕಕಂಠಾಭ್ಯಾಂ ಭುಜಾ ತ್ಕರಟಿವಾಜಿನಃ ॥ ೧೦೦ ॥

ತ್ರಿಭ್ಯೋ ಜಾತಾಶ್ಚ ಮುಕ್ತಾ ಸ್ತು ನ ಸಂತ್ಯೇವಾತಿದುರ್ಲಭಾಃ ।
ವಂಶಜಂ ಮೌಕ್ತಿಕಂ ಶ್ರೇಷ್ಠಂ ವರ್ಷೋಪಲಸಮಪ್ರಭಂ ॥ ೧೦೧ ॥

ಪೋತ್ರಿದಂಷ್ಟ್ರೋದ್ಭವಂ ರಕ್ತಂ ಸಾರ್ಪಂ ನೀಲಪ್ರಭಾಯುತಂ ।
ಕರಿದಂತೋದ್ಭವಂ ಪೀತಂ ತಥಾ ಪುಂಡ್ರೇಕ್ಷುಸಂಭವಂ ॥ ೧೦೨ ॥

ತಥಾ ಚ ಶಾಲಿಸ್ತಂಭೋತ್ಥಂ ಶುಕ್ತಿಜಂ ಸೋಮಸನ್ನಿಭಂ ।
ಏವಂ ತ್ರಯೋದಶ ಸ್ಥಾನಾನ್ಮುಕ್ತಾಜಾತಿಸ್ತು ಜಾಯತೇ ॥ ೧೦೩ ॥

---

೯೯-೧೦೧. ಶಂಖದಲ್ಲಿ ಹುಟ್ಟಿದ ಮುತ್ತುಗಳು ಬಿಳಿಗಿರುವವು. ಅವು ಪಾರಿವಾಳದ ಹಕ್ಕಿಯ ಮೊಟ್ಟೆಯಷ್ಟು ಗಾತ್ರವಿರುವವು, ಉತ್ತಮವು. ಮೀನುಗಳ ತಲೆಯಲ್ಲಿರುವ ಮುತ್ತುಗಳು ಪಾದರೀಹೂವಿನ ಕಾಂತಿಯುಳ್ಳವುಗಳಾಗಿ ಇರುವವು. ಮೋಡದಿಂದ ಹುಟ್ಟಿದ ಮುತ್ತುಗಳು ಉದಯಿಸುತ್ತಿರುವ ಸೂರ್ಯನಂತೆ ಇರುವವು. ಸ್ತ್ರೀಯರ ಕುತ್ತಿಗೆ, ಬಲಾಕಾಪಕ್ಷಿಯ ಕುತ್ತಿಗೆ, ಕರಟವಾಜಿಯ (ಅಶ್ವವಿಶೇಷ) ಭುಜ ಇವುಗಳಲ್ಲಿ ಮುತ್ತುಗಳು ಇರುವುದಿಲ್ಲ. ಸಿಕ್ಕುವುದು ಬಹಳ ಕಷ್ಟವು. ಬಿದಿರಿನಲ್ಲಿ ಹುಟ್ಟುವ ಮುತ್ತುಗಳು ಉತ್ತಮವಾದವು. ಅವುಗಳು ಆನೆಕಲ್ಲುಗಳಂತೆ ಇರುವವು.

೧೦೨-೧೦೪. ಹಂದಿಯು ಕೋರೆಯುಹಲ್ಲಿನಿಂದ ಹುಟ್ಟುವ ಮುತ್ತುಗಳು ಕೆಂಪಗೆ ಇರುವವು. ಹಾವಿನ ಹೆಡೆಯ ಮುತ್ತುಗಳು ನೀಲವರ್ಣದಕಾಂತಿಯುಳ್ಳವುಗಳು. ಆನೆಯ ದಂತದಿಂದ ಹುಟ್ಟಿದ ಮುತ್ತುಗಳು ಹಳದಿ ಬಣ್ಣವಾಗಿರುವವು. ನಾಮವಿರುವ ಕಬ್ಬಿನಗಿಣ್ಣಿನಿಂದ ಹುಟ್ಟಿದ ಮುತ್ತುಗಳು ಹೀಗೆಯೇ ಹಳದಿ ಬಣ್ಣವಾಗಿರುವವು. ಬತ್ತದ ಗಿಡದಿಂದ ಹುಟ್ಟಿದ ಮುತ್ತುಗಳು ಚಂದ್ರನಂತೆ ಬೆಳ್ಳಗಿರುವವು. ಮುತ್ತುಗಳು

ಶುಕ್ತೀಶ್ಚ ಶಂಖಾ ಜ್ಜಾಯಂತೇ ಮೌಕ್ತಿಕಾನಿ ಬಹೂನಿ ಚ ।
ಬಾಹುಳ್ಯಾದ್ಗುಣಬಾಹುಳ್ಯಂ ಶ್ಲಾಘ್ಯಂ ಶುಕ್ತಿಸಮುದ್ಭವಂ ॥ ೧೦೪ ॥

ವೈಷ್ಣವಂ ನೀಲಮಿತ್ಯಾಹುಃ ಪೀತಂ ಮಾಹೇಂದ್ರ ಮುಚ್ಯತೇ ।
ಯಾಮ್ಯ ಮಂಬುದಸಂಕಾಶಂ ವಾಯವ್ಯಂ ಲೋಹಿತಂ ಸದಾ ॥ ೧೦೫ ॥

ವಾರುಣಂ ಶುಭ್ರಮಿತ್ಯುಕ್ತಂ ಚಾಗ್ನೇಯ ಮರುಣಪ್ರಭಂ ।
ಇತಿ ವರ್ಣಾ ಸ್ಸಮಾಖ್ಯಾತಾ ದೇವತಾಭೇದತಃ ಕ್ರಮಾತ್ ॥ ೧೦೬ ॥

ಸುತಾರತ್ವಂ ಸುವೃತ್ತತ್ವಂ ನೈರ್ಮಲ್ಯಂ ಘನತಾ ತಥಾ ।
ಸ್ನಿಗ್ಧತಾ ಸ್ಫಟಿಕತ್ವಂ ಚ ಷಡ್ಗುಣಾಃ ಪರಿಕೀರ್ತಿತಾಃ ॥ ೧೦೭ ॥

---

ಹೀಗೆ ಹದಿಮೂರುಸ್ಥಾನಗಳಿಂದ ಹುಟ್ಟುವವು. ಶಂಖ ಮುತ್ತು ಮುತ್ತಿನಚಿಪ್ಪುಗಳಿಂದ ಹುಟ್ಟುವ ಮುತ್ತುಗಳು ಅಸಂಖ್ಯವಾಗಿರುವವು. ಗುಣವೂ ಉತ್ತಮವಾಗಿರುವುದು. ಆದರೆ ಮುತ್ತಿನ ಚಿಪ್ಪಿನಿಂದ ಹುಟ್ಟುವ ಮುತ್ತುಗಳಿಗೆ ಹೆಚ್ಚು ಪ್ರಾಶಸ್ತ್ಯವು.

೧೦೫-೧೦೬. ನೀಲವರ್ಣವಾಗಿರುವ ಮುತ್ತು ವೈಷ್ಣವವೆನಿಸಿಕೊಳ್ಳುವುದು. ಹಳದಿಯ ಬಣ್ಣದ ಮುತ್ತು ಮಹೇಂದ್ರನೆನಿಸಿಕೊಳ್ಳುವುದು. ಮೋಡದಕಾಂತಿಯುಳ್ಳ ಮುತ್ತು ಯಾಮ್ಯವೆನಿಸಿಕೊಳ್ಳುವುದು. ಕೆಂಪಗಿರುವ (ಲೋಹಿತ) ಮುತ್ತು ವಾಯು ದೇವತೆಯುಳ್ಳದ್ದಾಗಿರತಕ್ಕದ್ದು. ಶುಭ್ರವಾದ ಮುತ್ತು (ವರುಣ ದೇವನಿಗೆ ಸಂಬಂಧ ಪಟ್ಟದ್ದು) ವಾರುಣವೆನಿಸುವುದು. ಕೆಂಪಗಿರುವ ಕಾಂತಿಯುಳ್ಳ ಮುತ್ತು ಆಗ್ನೇಯ ವೆನಿಸುವುದು. ಆಯಾಯ ದೇವತೆಗಳ ಭೇದದಿಂದ ಮುತ್ತುಗಳ ವರ್ಣವನ್ನು ಹೀಗೆಯೇ ಹೇಳಿರುವೆನು.

೧೦೭-೧೦೮. ಸ್ಥೂಲವಾಗಿರುವುದು, ದುಂಡಾಗಿರುವುದು, ನಿರ್ಮಲ ವಾಗಿರುವುದು, ಘಟ್ಟಿಯಾಗಿರುವುದು, ನುಣುಪಾಗಿ ಕಾಂತಿಯುಳ್ಳದ್ದಾಗಿರು ವುದು, ಸ್ಫಟಿಕದ ಹಾಗೆ ಕಾಂತಿಯು ಉಂಟಾಗಿರುವುದು, ಇವು ಆರು ಗುಣಗಳೂ

ಈದೃಕ್ಸರ್ವಗುಣೋಪೇತಂ ಮೌಕ್ತಿಕಂ ಯೇನ ಧಾರ್ಯತೇ ।
ತಸ್ಯಾ ಯುರ್ವರ್ಧತೇ ಲಕ್ಷ್ಮೀ ರಲಕ್ಷ್ಮೀಶ್ಚ ವಿನಶ್ಯತಿ　　　　॥ ೧೦೮ ॥

ಅಥ ವಕ್ಷ್ಯೇ ಪದ್ಮರಾಗಲಕ್ಷಣಂ ಸಚಿವೋತ್ತಮಾಃ ।
ಶೃಣುಧ್ವಂ ಶ್ರದ್ಧಯಾ ಯೂಯಂ ತದ್ಗುಣಜ್ಞಾನಸಿದ್ಧಯೇ　　　　॥ ೧೦೯ ॥

ಮುರ್ಕಂ ಕಾಳಪುರಂ ಚೈವ ತುಂಬುರುಸ್ಸಿಂಹಳಂ ತಥಾ ।
ಕೃತಾ ವಿಕ್ರಮತಸ್ತಸ್ಯ ಚಾಕರಾಃ ಪರಿಕೀರ್ತಿತಾಃ　　　　॥ ೧೧೦ ॥

ಪದ್ಮಕಲ್ಹಾರಖದ್ಯೋತತಾರಕಾದಹನದ್ಯುತಿಃ ।
ದೀಪದಾಡಿಮಬೀಜಾರ್ಕದಾಡಿಮೀಕುಸುಮಾಕೃತಿಃ　　　　॥ ೧೧೧ ॥

ಇಂದ್ರಗೋಪೈಶ್ಚ ಸದೃಶಃ ಪದ್ಮರಾಗಃ ಪ್ರಶಸ್ಯತೇ ।
ಬ್ರಾಹ್ಮಣಃ ಪದ್ಮರಾಗಶ್ಚ ಜಾತರಂಗ ಇತೀರಿತಃ　　　　॥ ೧೧೨ ॥

---

ಮುತ್ತುಗಳಲ್ಲಿ ಇರುವವು. ಈ ಗುಣಗಳಿಂದ ಕೂಡಿದ ಮುತ್ತುಗಳನ್ನು ಧರಿಸುವವನಿಗೆ ಆಯುಸ್ಸು ಹೆಚ್ಚುವುದು. ಐಶ್ವರ್ಯವು ವೃದ್ಧಿಯಾಗುವುದು. ಬಡತನವು ನಾಶವಾಗುವುದು.

೧೦೯-೧೧೩. ಪದ್ಮರಾಗರತ್ನದ ಲಕ್ಷಣವನ್ನು ಇನ್ನು ಮುಂದೆ ಹೇಳುವೆನು. ಅದರ ಗುಣ, ಆಕಾರ, ಇವುಗಳ ತಿಳುವಳಿಕೆಗಾಗಿ ನೀವು ಆದರದಿಂದ ಕೇಳಿರಿ. ಮುಕ್ಕ, ಕಾಳಪುರ, ತುಂಬುರುನಗರ, ಸಿಂಹಳದೇಶ, ಇವುಗಳಲ್ಲಿ ಪದ್ಮರಾಗರತ್ನದ ಗಣಿಗಳು ಇರುವವು. ಅವುಗಳನ್ನು ಸಾಹಸದಿಂದ ಕಂಡುಹಿಡಿದಿರುವರು. ತಾವರೆಯ ಹೂವು, ಕಲ್ಹಾರಪುಷ್ಪ, ಕೆಂಡದಂತಿರುವ ಸಣ್ಣ ನಕ್ಷತ್ರ, ಬೆಂಕಿಯ ಉರಿ, ದೀಪ, ದಾಳಿಂಬ ಹಣ್ಣಿನ ಬೀಜ, ಸೂರ್ಯ, ದಾಳಿಂಬಿ ಹೂವಿನ ಕುಸುಮ, ಕಾಮನಬಿಲ್ಲು, ಇವುಗಳ ಕಾಂತಿಯನ್ನು ಹೊಂದಿರುವ ಪದ್ಮರಾಗರತ್ನವು ಪ್ರಶಸ್ತವಾದದ್ದು.

**ಕ್ಷತ್ರಿಯಃ ಕುರುವಿಂದಾಭೋ ವೈಶ್ಯ ಸೌಗಂಧಿಕಃ ಸ್ಮೃತಃ ।**
**ಗವಾಂ ಗೋನೀಲಗಂಧೀ ಚ ಶೂದ್ರಸ್ತ್ವೊಭಯನಾಮವಾನ್ ॥ ೧೧೩ ॥**

**ಛಾಯಾ ದಶವಿಧಾ ಆದ್ಯಶ್ಯ ದ್ವಿತೀಯಸ್ಯಾಷ್ಟಧಾ ಸ್ಮೃತಾ ।**
**ತೃತೀಯಸ್ಯ ಚ ಷಟ್ಪ್ರೋಕ್ತಾ ತುರೀಯಸ್ಯ ಚತುರ್ವಿಧಾ ॥ ೧೧೪ ॥**

**ಪದ್ಮಕಲ್ಹಾರಖದ್ಯೋತದಹನಾನ್ಯಭೃತಾಕ್ಷಿಭಿಃ ।**
**ದೀಪದಾಡಿಮಬೀಜಾರ್ಕದಾಡಿಮೀಪ್ರಸವೈರಪಿ ॥ ೧೧೫ ॥**

**ಇಂದ್ರಗೋಪೈಶ್ಚ ಸದೃಶಾ ಶ್ಛಾಯಾಃ ಪ್ರಥಮವರ್ಣಜಾಃ ।**
**ಲೋಧ್ರಕಿಂಶುಕಬಂಧೂಕಜಪಾಕುಸುಮಸನ್ನಿಭಂ ॥ ೧೧೬ ॥**

---

ಪದ್ಮರಾಗರತ್ನವು ಬ್ರಾಹ್ಮಣಜಾತಿಯಾಗಿದ್ದಲ್ಲಿ ಅದಕ್ಕೆ ಜಾತರಂಗವೆಂದು ಹೆಸರು. ಕ್ಷತ್ರಿಯ ಜಾತಿಯ ಪದ್ಮರಾಗವು ಕುರುವಿಂದವೆನಿಸಿಕೊಳ್ಳುವುದು. ವೈಶ್ಯಜಾತಿಯ ಪದ್ಮರಾಗವು ಸೌಗಂಧಿಕವೆನಿಸುವುದು. ಶೂದ್ರಜಾತಿಯ ಪದ್ಮರಾಗವು ಗವಾಂಗ, ನೀಲಗಂಧೀ ಎಂದು ಎರಡು ವಿಧವಾದ ಹೆಸರನ್ನು ಹೊಂದಿ ಇರುವುದು.

೧೧೪-೧೧೬. ಬ್ರಾಹ್ಮಣಜಾತಿಯ ಪದ್ಮರಾಗ ರತ್ನದಕಾಂತಿಯು ಹತ್ತು ವಿಧವಾಗಿ ಇರುವುದು. ಕ್ಷತ್ರಿಯ ಜಾತಿಯ ಪದ್ಮರಾಗದ ಕಾಂತಿಯು ಎಂಟು ವಿಧವಾಗಿ ಇರುವುದು. ವೈಶ್ಯಜಾತಿಯ ಪದ್ಮರಾಗ ರತ್ನದ ಕಾಂತಿಯು ಆರು ವಿಧವಾಗಿ ಇರುವುದು. ಶೂದ್ರಜಾತಿಯ ಪದ್ಮರಾಗ ರತ್ನದ ಕಾಂತಿಯು ನಾಲ್ಕು ವಿಧವಾಗಿ ಇರುವುದು. ಪದ್ಮ, ಕಲ್ಹಾರಪುಷ್ಪ, ನಕ್ಷತ್ರದಹಾಗೆ ಇರುವ ಸಣ್ಣ ಚುಕ್ಕಿ, ಬೆಂಕಿಯ ಜ್ವಾಲೆ, ಕೋಗಿಲೆಯ ಕಣ್ಣು, ದೀಪ, ದಾಳಿಂಬೀಹಣ್ಣಿನ ಬೀಜ, ಸೂರ್ಯ, ದಾಳಿಂಬಿ ಹೂವಿನ ಕುಸುಮ, ಇವುಗಳು ಮತ್ತು ಕಾಮನಬಿಲ್ಲು, ಇದರ ಕಾಂತಿಯಂತೆ ಇರುವ ಕಾಂತಿಯನ್ನು ಮೊದಲನೆಯ ವರ್ಣದ (ಬ್ರಾಹ್ಮಣ ಜಾತಿಯ) ಪದ್ಮರಾಗವು ಹೊಂದಿರುವುದು. ಜಾಲಿಯ ಹೂವು, ಮುತ್ತುಗದ ಹೂವು, ಬಿಂದಿಗೆ ಹೂವು, ದಾಸವಾಳದಹೂವು, ಗುಲಗಂಜಿ, ಮೊಲದ ರಕ್ತ, ಸಿಂದೂರ, (ಚಂದ್ರ) ಕಾದಿರುವ ಲೋಹ, ಈ ಎಂಟು ಛಾಯೆಯನ್ನು ಹೊಂದಿರುವುದು ಕ್ಷತ್ರಿಯ ಜಾತಿಯ ಪದ್ಮರಾಗ ರತ್ನವಾಗಿರುವುದು.

ಗುಂಜಾಶಶಾಸೃಕ್ಸಿಂಧೂರ ತಪ್ತಲೋಹಾಭಮುಷ್ಟಮಂ ।
ಲಾಕ್ಷಾರಸಃ ಕೋಕಿಲದೃಕ್ ಶಾಲ್ಮಲೀಪಂಚವರ್ಣಯೋಃ ॥ ೧೧೭ ॥

ಪ್ರಸೂನಂ ತಪ್ತಲೋಹಂ ಚ ಷಟ್ಕಂ ಚಾಶೋಕಪಲ್ಲವಂ ।
ಛಾಯಾ ಜಾತೇ ಸ್ತೃತೀಯಸ್ಯ ಚತುರ್ಥಸ್ಯಾ ಥ ಕಥ್ಯತೆ ॥ ೧೧೮ ॥

ಕುಸುಂಭಕುಸುಮೇನಾಪಿ ಪಕ್ವಬಿಂಬಫಲೇನ ಚ ।
ತಥಾ ಕುರವಪುಷ್ಪೇಣ ಧಾತುನಾ ಚ ಸಮಾ ಸ್ಮೃತಾ ॥ ೧೧೯ ॥

ಲಘು ವಜ್ರಂ ಪ್ರಶಂಸಂತಿ ಗುರುತ್ವಂ ಪದ್ಮರಾಗಕೇ ।
ಊರ್ಧ್ವರಶ್ಮಿ ರಧೋರಶ್ಮಿಃ ಪಾರ್ಶ್ವರಶ್ಮಿಶ್ಚ ಯಃ ಕ್ರಮಾತ್ ॥ ೧೨೦ ॥

---

೧೧೭-೧೧೯. ಅರಗಿನ ರಸ, ಕೋಗಿಲೆಯ ಕಣ್ಣು, ಐದು ಬಣ್ಣದ ಬೂರುಗದ ಹೂವು, ಕಾದಿರುವ ಲೋಹ, ಅಶೋಕಮರದ ಚಿಗುರು, ಬೂರಗದ ಚಿಗುರು, (ಐದು ವರ್ಣದ) ಈ ಆರು ವಿಧವಾದ ಛಾಯೆಯುಳ್ಳ ಪದ್ಮರಾಗ ರತ್ನವು ವೈಶ್ಯಜಾತಿಗೆ ಸೇರಿರುವುದು. ಕುಸುಂಭದ ಹೂವು, ತೊಂಡೆಯಹಣ್ಣು, ಕುರುವಕ, (ಗೋರಂಟಿ ಹೂವು) ಮಣ್ಣುಶಿಲೆ (ಧಾತು) ಈ ನಾಲ್ಕು ವಿಧವಾದ ಛಾಯೆಯನ್ನು ಹೊಂದಿರುವ ಪದ್ಮರಾಗ ರತ್ನವು ಶೂದ್ರಜಾತಿಗೆ ಸೇರಿರುವುದು.

೧೨೦. ವಜ್ರವು ತೂಕದಲ್ಲಿ ಹಗುರವಾಗಿರಬೇಕು. ಪದ್ಮರಾಗವು ಭಾರವಾಗಿರಬೇಕು. ಪದ್ಮರಾಗ ರತ್ನದ ರಶ್ಮಿಯು, ಮೇಲು ಮುಖವಾಗಿಯಾಗಲಿ, ಕೆಳಮುಖವಾಗಿಯಾಗಲಿ, ಪಕ್ಕದಲ್ಲಿ ಹೊರಡತಕ್ಕದ್ದಾಗಿಯಾಗಲಿ, ಇರಬೇಕು. ಇವುಗಳು ಕ್ರಮವಾಗಿ ಉತ್ತಮ, ಅಧಮ, ಮಧ್ಯಮ, ಎಂದು ಹೆಸರನ್ನು ಹೊಂದಿರುವವು.

ಪದ್ಮರಾಗಸ್ಸ ವಿಜ್ಞೇಯ ಉತ್ತಮಾಧಮಮಧ್ಯಮಾಃ ।
ಗೋಭೂಮಿವಿದ್ಯಾಕನ್ಯಾನಾಂ ದಾತುರ್ವಾಜಿಮುಖಸ್ಯ ಚ ॥ ೧೨೧ ॥

ಕರ್ತುಶ್ಚ ಪುಣ್ಯಮಾಪ್ನೋತಿ ಜಾತರಂಗಸ್ಯ ಧಾರಣಾತ್ ।
ಧಾರಯೇತ್ಕುರುವಿಂದಂ ಯಃ ಸ ಸಮ್ರಾಡ್ಭವತಿ ಧ್ರುವಂ ॥ ೧೨೨ ॥

ಯಸ್ತು ಸೌಗಂಧಿಕಂ ಧತ್ತೇ ಸಂಪದಾ ಯಶಸಾ ತುಲಃ ।
ಗವಾಂಗಂ ಧಾರಯೇದ್ಯಸ್ತು ಕ್ಷೀರಸಸ್ಯಸಮೃದ್ಧಿಮಾನ್ ॥ ೧೨೩ ॥
ಧಾರಣಾನ್ನೀಲಗಂಧೇಶ್ಚ ನೀರೋಗೀ ಮನುಜೋ ಭವೇತ್ ।

ದೋಷಹೀನ ಮಥಲಕ್ಷಣೈರ್ಯುತಂ
ಪದ್ಮರಾಗಮಣಿ ಮುದ್ವಹಂತಿ ಯೇ ।
ತತ್ರ ರತ್ನಮಧಿಕಂ ಪ್ರಯಾಂತಿ ಚ
ಸ್ಥೇಯಸೀಂಚ ಕಮಲಾಂ ಸರಸ್ವತೀಂ ॥ ೧೨೪ ॥

---

೧೨೧-೧೨೩. ಜಾತರಂಗವೆಂಬ ಜಾತಿಯ ರತ್ನವನ್ನು ಧರಿಸಿದವನು ಗೋವು, ಭೂಮಿ, ವಿದ್ಯಾ, ಕನ್ಯಾ, ಇವುಗಳನ್ನು ದಾನಮಾಡಿದ ಫಲವನ್ನೂ, ಅಶ್ವಮೇಧ ಯಜ್ಞವನ್ನು ಮಾಡಿದ ಪುಣ್ಯವನ್ನೂ ಹೊಂದುವನು. ಕುರುವಿಂದವೆಂಬ ಹೆಸರಿನ ಪದ್ಮರಾಗ ರತ್ನವನ್ನು ಧರಿಸಿದವನು ಚಕ್ರವರ್ತಿಯಾಗುವನು. ಸೌಗಂಧಿಕ ರತ್ನವನ್ನು ಧರಿಸಿದವನು ಕೀರ್ತಿ ಮತ್ತು ಐಶ್ವರ್ಯಗಳಿಂದ ಹೋಲಿಕೆಯಿಲ್ಲದವನಾಗಿ ಇರುವನು. ಗವಾಂಗವೆಂಬ ಪದ್ಮರಾಗರತ್ನವನ್ನು ಧರಿಸಿದವನು ಹಾಲು ಮತ್ತು ಸಸ್ಯಗಳ ಸಮೃದ್ಧಿಯುಳ್ಳವನಾಗಿರುವನು.

೧೨೪-೧೨೭. ನೀಲಗಂಧಿ ಎಂಬ ಹೆಸರಿನ ಪದ್ಮರಾಗವನ್ನು ಧರಿಸುವವನು ಯಾವಾಗಲೂ ಆರೋಗ್ಯವಾಗಿ ಇರುವನು. ದೋಷಗಳು ಇಲ್ಲದೆ ಇರುವ ಹೆಚ್ಚು ಗುಣಗಳಿಂದ ಕೂಡಿದ ಪದ್ಮರಾಗ ರತ್ನವನ್ನು ಧರಿಸುವವರು ಹೆಚ್ಚಾಗಿರುವ ಐಶ್ವರ್ಯವನ್ನೂ ಇನ್ನೂ ಅನೇಕ ವಿಧವಾದ ರತ್ನಗಳನ್ನೂ ವಿದ್ಯೆಯನ್ನೂ ಹೊಂದುವರು. ಇನ್ನು ಮುಂದೆ ಮರಕತ ರತ್ನದ ಲಕ್ಷಣವನ್ನು ಹೇಳುವೆನು. ವಲಾಸುರನ ಶರೀರದ

ತತೋ ಮರಕತಾನಾಂ ಚ ಲಕ್ಷಣಂ ವಕ್ಷ್ಯತೇ ಮಯಾ ।
ವಲಸ್ಯ ಪಿತ್ತಂ ವಿಹಗೈರ್ಗೃಹೀತಂ ಡಿಲ್ಲಿದೇಶಕೇ　　॥ ೧೨೫ ॥

ಪತಿತಂ ಪರಿತ ಸ್ತತ್ರ ಖನಯಸ್ಸಂಭವಂತಿ ಚ ।
ವಿಭಿನ್ನಮರುಣಸ್ಯಾಂಡಂ ಕಟಿಸೂತ್ರೇ ಗರುತ್ಮತಃ　　॥ ೧೨೬ ॥

ವಿನತಾ ಯೋಜಯಾಮಾಸ ಪ್ರಣಯಾ ನ್ನೀಚಕ ಪ್ರಭಂ ।
ಪತಿತಂ ತದ್ಯತ್ರಯತ್ರ ತತ್ರ ತತ್ರಾ ಕರಂ ಸ್ಮೃತಂ　　॥ ೧೨೭ ॥

ಯೋಷಿದ್ರೂಪಂ ಮಹಾವಿಷ್ಣುಂ ದೃಷ್ಟ್ವಾ ಸಮ್ಮೋಹಿತಸ್ಯ ಚ ।
ಯತ್ರ ಯತ್ರಾ ಪತದ್ರೇತೋ ಗಚ್ಛತ ಸ್ತಸ್ಯ ಶೂಲಿನಃ　　॥ ೧೨೮ ॥

ತತ್ರ ತತ್ರಾ ಕರಾ ಆಸನ್ಮಂದರಾದ್ರಿತಟೇ ಶುಭೇ ।
ತದ್ವೀರ್ಯಾದಾಶು ಸಂಜಾತಾ ಶ್ಯಸ್ತಾಶ್ಚ ವನದೇವತಾಃ　　॥ ೧೨೯ ॥

---

ಪಿತ್ತವನ್ನು ಹಕ್ಕಿಗಳು ತೆಗೆದುಕೊಂಡು ಹೋಗುವಾಗ ಡಿಲ್ಲಿ ದೇಶದ ಹತ್ತಿರದಲ್ಲಿ ಬಿದ್ದ ಕಾರಣ ಗಣಿಗಳಾದವು. ವಿನತಾದೇವಿಯು ಅರುಣನ ಒಡೆದಿರುವ ಮೊಟ್ಟೆಯನ್ನು ಗರುಡನ ಕಟಿಸೂತ್ರದಲ್ಲಿ ಕಟ್ಟಿಕೊಂಡು ಹೋಗುವಂತೆ ಪ್ರೇರಿಸಿದಳು. ಅದು ಬಿದ್ದ ಪ್ರದೇಶಗಳಲ್ಲಿ ಮರಕತ ರತ್ನಗಳ ಖನಿಗಳಾದವು.

೧೨೮-೧೩೦. ಹೆಂಗಸಿನ ಆಕಾರ (ಮೋಹಿನೀ ರೂಪ) ವನ್ನು ಧರಿಸಿದ ವಿಷ್ಣುವನ್ನು ನೋಡಿದಾಗ ಅವನನ್ನು ಹಿಂಬಾಲಿಸಿ ಹೋಗುತ್ತಿರುವ ಮಹಾದೇವನ ವೀರ್ಯವು ಬಿದ್ದ ಪ್ರದೇಶಗಳಲ್ಲಿ ಮರಕತ ರತ್ನದ ಗಣಿಗಳಾದವು. ಆ ಗಣಿಗಳು ಮಂದರಪರ್ವತದ ತಪ್ಪಲಿನ ಪ್ರದೇಶಗಳಲ್ಲಿರುವವು. ವನದೇವತೆಗಳು ಅದನ್ನು ರಕ್ಷಿಸುತ್ತಿರುವರು. ಗರುಡನೂ ವಲಾಸುರನ ಪಿತ್ತವನ್ನು ನುಂಗಿ ತುರುಷ್ಕ ದೇಶದಲ್ಲಿ

ಖಗೇಶ್ವರೋಽಪಿ ತತ್ಪಿತ್ತಂ ಜಗ್ಧ್ವಾ ದೇಶೇ ತುರುಷ್ಕಕೇ ।
ಉಜ್ಜಗಾರ ಚ ತತ್ರಾಸೀ ತ್ತನಿಃ ಪಾರೇ ಮಹಾರ್ಣವಂ ॥ ೧೩೦ ॥

ತತ್ಕಾರಣಾನ್ಮರಕತಂ ಗಾರುತ್ಮತ ಮಿತೀರಿತಂ ।
ಗಾಢಂ ದೂರ್ವಾದಳಶ್ಯಾಮಂ ತುಲಸೀದಳ ಸಪ್ರಭಂ ॥ ೧೩೧ ॥

ಕಲಮಾಗ್ರದಳಪ್ರಖ್ಯಂ ಪ್ರೋಕ್ತಂ ಮರಕತಂ ತ್ವಿತಿ ।
ಸಗುಣಾಚ ಸದೋಷಾ ಚ ಜಾತಿರಸ್ಯ ದ್ವಿಧಾ ಮತಾ ॥ ೧೩೨ ॥

ಸಗುಣಾಯಾಶ್ಚ ಜಾತೇಸ್ತು ಪ್ರಭೇದಃ ಪರಿಕೀರ್ತ್ಯತೇ ।
ಗಾಢ ಮುಲ್ಲಸಿತಂ ಚೈವ ಪೇಶಲಂ ಪಿತ್ತಲಂ ತಥಾ ॥ ೧೩೩ ॥

---

ಉಗುಳಿದನು. ಅದು ಅಲ್ಲಿ ಮರಕತ ರತ್ನದ ಗಣಿಯಾಯಿತು. ಅದು ಸಮುದ್ರದ ಆಚೆ ದಡದಲ್ಲಿ ಇರುವುದು. ಈ ಕಾರಣದಿಂದ ಮರಕತ ರತ್ನಕ್ಕೆ ಗಾರುತ್ಮತ ರತ್ನ ವೆಂದು ಹೆಸರು ಬಂದಿರುವುದು.

೧೩೧–೧೩೩. ಬಲಿತಿರುವ ಗರಿಕೆಯ ಕಾಂತಿಯನ್ನು ಆಗಲಿ, ತುಳಸೀದಳದ ಕಾಂತಿಯನ್ನಾಗಲಿ, ಧರಿಸಿರುವ, ಅಥವಾ ಬತ್ತದ ತುದಿಯ ಕಾಂತಿಯನ್ನು ಧರಿಸಿರುವ ರತ್ನವು ಮರಕತವೆನಿಸುವುದು. ಗುಣದಿಂದ ಕೂಡಿರುವುದು, ದೋಷದಿಂದ ಕೂಡಿ ರುವುದು, ಎಂದು ಇದು ಎರಡು ವಿಧವಾಗಿ ಇರುವುದು. ಗುಣದಿಂದ ಕೂಡಿರುವ ಗಾರುತ್ಮತ ರತ್ನದ ಭೇದವನ್ನು ಹೇಳುವೆನು. ಹೆಚ್ಚಾದ ಕಾಂತಿಯುಳ್ಳದ್ದು, ವಿಕೀರ್ಣವಾದ ಕಾಂತಿಯುಳ್ಳದ್ದು, ಹಳದಿಯ ಕಾಂತಿಯುಳ್ಳದ್ದು, ಕಾಂತಿಯು ಕೊಂಚವಾಗಿರುವುದು, ಎಳೆಯದಾದ ಕಾಂತಿಯುಳ್ಳದ್ದು, ಎಂದು ಭೇದಗಳಿರು ವವು. ಇವುಗಳೆಲ್ಲಕ್ಕೂ ಬೇರೆಬೇರೆಯಾಗಿ ಲಕ್ಷಣಗಳನ್ನು ಹೇಳುವೆನು.

ಮುಗ್ಧಂ ಚ ಪೃಥುಕಂ ಚೇತಿ ಲಕ್ಷಣಂ ಪೃಥಗುಚ್ಯತೇ ।
ಗಾಢಂ ದೂರ್ವಾದಳನಿಭಂ ಶ್ಲಕ್ಷ್ಣಮುಲ್ಲಸಿತಂ ಸ್ಮೃತಂ ॥ ೧೩೪ ॥

ಪೇಶಲಂ ಕಲಮಾಗ್ರಾಭಂ ಪಿತ್ತಂ ಶುಕಗರುತ್ಪ್ರಭಂ ।
ಮುಕ್ತಂ ತು ತುಲಸೀಶ್ಯಾಮಂ ಪೃಥುಕಂ ಪದ್ಮಪತ್ರವತ್ ॥ ೧೩೫ ॥

ಸಗುಣಾ ಷಡ್ವಿಧಾ ಪ್ರೋಕ್ತಾ ಸದೋಷಾ ಜಾತಿರುಚ್ಯತೇ ।
ದೋಷಲೇಶಾನ್ವಿತಂ ದುಷ್ಟಂ ತಥಾ ವೈ ದೋಷಮೂರ್ಛಿತಂ ॥ ೧೩೬ ॥

ದೋಷಲೇಶಂ ಮಂದದೋಷ ಮಿತಿ ಪಂಚವಿಧಾಃ ಸ್ಮೃತಾಃ ।
ಪೂರ್ವಂ ಲಿಕುಚಪತ್ರಾಭಂ ದುಷ್ಟಂತು ಕರವೀರರುಕ್ ॥ ೧೩೭ ॥

---

೧೩೪-೧೩೫. ಗರಿಕೆಯ ಚಿಗುರಿನ ಕಾಂತಿಯನ್ನು ಹೆಚ್ಚಾಗಿ ಹೊಂದಿರುವ ಗಾರುತ್ಮತ ಮಣಿಯು, ಉಲ್ಲಸಿತವೆನಿಸುವುದು. ಬತ್ತದ ತುದಿಯ ಕಾಂತಿಯುಳ್ಳದ್ದು ಪೇಶಲಗಾರುತ್ಮತವೆನಿಸಿರುವುದು. ಗಿಣಿಯ ರೆಕ್ಕೆಯ ಬಣ್ಣವುಳ್ಳದ್ದು ಪಿತ್ತಗಾರುತ್ಮತ ವೆನಿಸುವುದು. ತುಳಸೀದಳದಂತೆ ಇರುವ ಕಾಂತಿಯುಳ್ಳದ್ದು ಮುಗ್ಧಮರಕತ ವೆಂದು ಹೆಸರನ್ನು ಹೊಂದಿರುವುದು. ತಾವರೆಯ ಎಲೆಯ ಕಾಂತಿಯುಳ್ಳದ್ದು ಪೃಥುಕಗಾರುತ್ಮತವೆನಿಸುವುದು.

೧೩೬-೧೩೭. ಗುಣದಿಂದ ಕೂಡಿರುವ ಗಾರುತ್ಮತ ರತ್ನಗಳಲ್ಲಿ ಆರು ವಿಧ ಗಳನ್ನು ಹೇಳಿರುವೆನು. ದೋಷದಿಂದ ಕೂಡಿರುವ ಗಾರುತ್ಮದ ರತ್ನದ ಭೇದಗಳನ್ನು ಹೇಳುವೆನು. ದೋಷ ಲೇಶಾನ್ವಿತ, (ಕೊಂಚ ದೋಷದಿಂದ ಕೂಡಿರುವುದು) ದುಷ್ಟ ವಾದದ್ದು, ದೋಷ ಮೂರ್ಛಿತಂ, ದೋಷಲೇಶ, ಮಂದದೋಷ, ಎಂದು ಐದು ವಿಧವಾಗಿರುವುದು. ಮೊದಲನೆಯದು ಕಿತ್ತಲೆ ಎಲೆಯ ಕಾಂತಿಯನ್ನು ಹೊಂದಿರು ವುದು. ಕಣಿಗಲೆ ಎಲೆಯ ಕಾಂತಿಯನ್ನು ಹೊಂದಿರುವುದು, ದುಷ್ಟ ಎಂಬ ಎರಡನೆಯ ಭೇದಕ್ಕೆ ಸೇರಿದ್ದಾಗಿ ಇರುವುದು.

ತೃತೀಯಂ ಹಲ್ಲಕಬಕಪತ್ರೇಣ ಸದೃಶಚ್ಛವಿಃ ।
ಹಿಮಸಿಕ್ತಾಬ್ಜಿನೀಪತ್ರಸ್ವಚ್ಛಛಾಯಂ ಚತುರ್ಥಕಂ ॥ ೧೩೮ ॥
ಮಯೂರಪತ್ರಪ್ರತಿಮ ಮಿತಿ ಪಂಚವಿಧಂ ಸ್ಮೃತಂ ।

ಇತಿ ಗುಣಗಣಯುಕ್ತಂ ದೋಷಸಂಘೈರ್ವಿಹೀನಂ
ಮರಕತ ಮವನೀಂದ್ರೋ ಧಾರಯೇತ್ ರತ್ನವರ್ಯಂ ।
ಜಯತಿ ರಿಪುಮಹೀಪಾನಾಹವೇ ವಾರಣೇಂದ್ರೈಃ
ಬಹುಭಿರಪಿ ಹಯೌಘೈಃ ಪತ್ತಿಸಂಘೈಶ್ಚ ಯುಕ್ತೈಃ ॥ ೧೩೯ ॥

ಲಕ್ಷಣಂ ನೀಲರತ್ನಸ್ಯ ಶೃಣ್ವಂತು ಸಚಿವೋತ್ತಮಾಃ ।
ವಲಲೋಚನಸಂಭೂತಂ ಹರಕಂಠವಿಷೋದ್ಭವಂ ॥ ೧೪೦ ॥

ದ್ವಿವಿಧಂ ತು ಮಹಾನೀಲಂ ಪ್ರೋಕ್ತಂ ತಚ್ಛಾಸ್ತ್ರವಿತ್ತಮೈಃ ।
ವಿಶ್ವರೂಪವಧಪ್ರಾಪ್ತದೋಷಶಾಂತ್ಯೈ ಪುರಂದರಃ ॥ ೧೪೧ ॥

---

೧೩೮–೧೩೯. ಮೂರನೆಯ ಭೇದಕ್ಕೆ ಸೇರಿರುವ ಗಾರುತ್ಮತ ರತ್ನವು ಹಲ್ಲಕ ಬಕವೆಂಬ ಗಿಡದ ಎಲೆಗೆ ಸಮನಾದ ಕಾಂತಿಯುಳ್ಳದ್ದಾಗಿ ಇರುವುದು. ಹಿಮದಿಂದ ನೆನೆದಿರುವ ತಾವರೆ ಎಲೆಗೆ ಸಮನಾದ ಕಾಂತಿಯುಳ್ಳ ಗಾರುತ್ಮತ ರತ್ನವು ನಾಲ್ಕನೆಯ ಭೇದಕ್ಕೆ ಒಳಪಟ್ಟಿರುವುದು, ಮಯೂರ ಶಿಖಿ, ಎಂಬ ಮೂಲಿಕೆಯ ಎಲೆಗೆ ಸಮನಾದ ಕಾಂತಿಯುಳ್ಳ ಗಾರುತ್ಮತ ರತ್ನವು ಐದನೆಯ ಭೇದಕ್ಕೆ ವಳಪಟ್ಟಿರುವದು. ಈಗ ನಾನು ಹೇಳಿರುವ ಪ್ರಕಾರದಿಂದ ಗುಣಗಳು ಹೆಚ್ಚಾಗಿ ದೋಷಗಳು ಇಲ್ಲದಿರುವ ಉತ್ತಮವಾದ ಮರಕತರತ್ನವನ್ನು ಧರಿಸಿರುವ ರಾಜನು ಯುದ್ಧದಲ್ಲಿ ಶತ್ರುರಾಜರನ್ನು ಗೆದ್ದು ಬಹಳ ಆನೆಗಳೇ ಮೊದಲಾದ ಸೇನೆಯಿಂದ ಕೂಡಿ ಪ್ರಕಾಶಿಸುವನು.

೧೪೦–೧೪೨. ಎಲೈ ಸಚಿವ ಶ್ರೇಷ್ಠರೇ, ಕೇಳಿರಿ, ಇಂದ್ರ ನೀಲರತ್ನದ ಲಕ್ಷಣಗಳನ್ನು ಹೇಳುವೆನು. ವಲಾಸುರನ ಕಣ್ಣುಗಳು ಈಶ್ವರನ ಕುತ್ತಿಗೆಯಲ್ಲಿರುವ ವಿಷದ ಕಾಂತಿಯನ್ನು ಕೊಡುತ್ತಿದ್ದವು. ವಲಾಸುರನ ಕಣ್ಣಿನಿಂದಲೂ ಈಶ್ವರನ ಕುತ್ತಿಗೆಯ ವಿಷದಿಂದಲೂ ಈ ರತ್ನಗಳು ಹುಟ್ಟಿರುವವು. ಈ ರತ್ನಗಳು ಎರಡು ವಿಧವಾಗಿ

ಅಶ್ವಮೇಧಂ ಚಕಾರಾಥ ತತ್ಸಮಾಪ್ತೌ ತದಂಗಕಂ ।
ಚಾಕ್ಷುಷಂ ಚ ಮಲಂ ಯತ್ರ ವಿಮುಕ್ತಂ ತತ್ರ ದೇಶಕೇ ॥ ೧೪೨ ॥

ಇಂದ್ರನೀಲಾ ಇತಿ ಖ್ಯಾತಾ ಮಣಯಸ್ಸಂಭವಂತಿ ಚ ।
ಸಂಜ್ಞಾ ತ್ವಾಷ್ಟ್ರೀ ರವೇರ್ಭಾರ್ಯಾ ತತ್ತೇಜಸ್ತೋಘಮಕ್ಷಮಾ ॥೧೪೩॥

ಆತ್ಮಚ್ಛಾಯಾಂ ನಿಯೋಜ್ಯಾಂಗಾ ತ್ತಪಸೇ ಕಾನನಂ ಘನಂ ।
ರವಿಶ್ಚ ತತ್ರ ಗತ್ವಾ ತಾಂ ದೃಷ್ಟ್ವಾತೀವ ಸ ಮೋಹಿತಃ ॥ ೧೪೪ ॥

ಅಶ್ವಾಕಾರಾಂ ಚ ಧಾವಂತೀ ಮಶ್ವರೂಪಸ್ಯ ಧಾವತಃ ।
ಯತ್ರ ಯತ್ರಾ ಪತದ್ರೇತ ಸ್ತತ್ರ ತತ್ರ ವಿವಸ್ವತಃ ॥ ೧೪೫ ॥

ಮಹಾನೀಲಾ ಬಭೂವುಶ್ಚ ಸಂಧಾರ್ಯಾ ದೇವಮಾನುಷೈಃ ।
ಚತಸ್ರೋ ಜಾತಯ ಸ್ತಸ್ಯ ಚಾತುರ್ವರ್ಣ್ಯಪ್ರಭೇದತಃ ॥೧೪೬ ॥

---

ಇರುವುವೆಂದು ರತ್ನಶಾಸ್ತ್ರವನ್ನು ಬಲ್ಲವರು ಹೇಳುವರು. ವಿಶ್ವರೂಪನನ್ನು ಕೊಂದಾಗ ಇಂದ್ರನು ಆ ದೋಷವನ್ನು ನಾಶಪಡಿಸಿಕೊಳ್ಳುವುದಕ್ಕಾಗಿ ಅಶ್ವಮೇಧ ಯಾಗವನ್ನು ಮಾಡಿದನು. ಆಗ ಅವನ ಅಂಗದಿಂದ ಆ ಪಾತಕವು ಬಿದ್ದ ಪ್ರದೇಶ ದಲ್ಲಿ ಇಂದ್ರನೀಲರತ್ನಗಳು ಹುಟ್ಟಿದವು.

೧೪೩–೧೪೬. ತ್ವಷ್ಟ್ರುಬ್ರಹ್ಮನ ಮಗಳಾದ ಸಂಜ್ಞಾದೇವಿಯು ಪತಿಯಾದ ಸೂರ್ಯನ ತೇಜಸ್ಸನ್ನು ಸಹಿಸಲಾರದೆ ತನ್ನ ನೆರಳನ್ನು ಛಾಯಾ ಎಂಬ ಹೆಸರಿನಿಂದ ತನ್ನ ಪತಿಯ ಹತ್ತಿರದಲ್ಲಿ ಇರಿಸಿ, ಕಾಡಿಗೆ ಹೋಗಿ ಇದ್ದಳು. ಸೂರ್ಯನು ಅಲ್ಲಿಗೆ ಹೋದನು. ಅವಳನ್ನು ಗುರ್ತು ಹಿಡಿದನು. ಅವಳು ಕುದುರೆಯ ಆಕಾರದಿಂದ ಇದ್ದ ಪ್ರಯುಕ್ತ ಸೂರ್ಯನೂ ಕುದುರೆಯ ಆಕಾರವನ್ನು ಹೊಂದಿ ಅವಳಲ್ಲಿ ಮೋಹ ದಿಂದ ಹಿಂಬಾಲಿಸುತ್ತಿದ್ದನು. ಕುದುರೆಯ ಆಕಾರದಿಂದ ಇದ್ದ ಸೂರ್ಯನ ವೀರ್ಯವು ಬಿದ್ದ ಪ್ರದೇಶದಲ್ಲಿ ದೇವತೆಗಳೂ ಮನುಷ್ಯರೂ ಧರಿಸಲು ಯೋಗ್ಯವಾದ ನೀಲರತ್ನ

ಈಷಚ್ಛ್ವೇತಸ್ತು ವಿಪ್ರಸ್ಸ್ಯಾ ತ್ಕಿಂಚಿದ್ರಕ್ತ ಸ್ತು ಬಾಹುಜಃ ।
ಶ್ವೇತ ಶ್ಯಾಮಯುತೋ ವೈಶ್ಯಶ್ಶೂದ್ರ ಶ್ಶಾತ್ಯಂತಕೃಷ್ಣರುಕ್ ॥ ೧೪೭ ॥

ಉಕ್ತಲಕ್ಷಣಸಂಪನ್ನವರ್ಣಶೋಭಾಸಮನ್ವಿತಾಃ ।
ಧೃತಾಸ್ತು ನೀಲಮಣಯ ಸ್ಸರ್ವಮಂಗಳದಾಯಿನಃ ॥ ೧೪೮

ಯಸ್ಯ ಮಧ್ಯಗತಾ ಭಾತಿ ನೀಲಸ್ಯೇಂದ್ರಾಯುಧಪ್ರಭಾ ।
ತದಿಂದ್ರನೀಲಮಿತ್ಯಾಹು ರ್ಮಹಾರ್ಘಂ ಭುವಿ ದುರ್ಲಭಂ ॥ ೧೪೯ ॥

ಯಸ್ಯ ವರ್ಣಸ್ತು ಭೂರಿತ್ವಾತ್ ಕ್ಷೀರೇ ಶತಗುಣಾಧಿಕಾಂ ।
ನೀಲತಾಂ ಜನಯೇತ್ಸ ದ್ಯಸ್ಸ ಮಹಾನೀಲ ಉಚ್ಯತೇ ॥ ೧೫೦ ॥

ಕ್ಲಪ್ತಾನಿ ವಜ್ರವರಮೌಕ್ತಿಕಪದ್ಮರಾಗ
ಗಾರುತ್ಮತೋಪಲಸುರೇಶ್ವರರತ್ನವರ್ಯೈಃ ।
ಧಾರ್ಯಾಣಿ ಭೂಪತಿಭಿ ರಾಭರಣಾನಿ ಲಕ್ಷ್ಮೀ
ಸೌಭಾಗ್ಯ ದಾನಿವರರತ್ನಕೃತಾನಿ ಚೈವಂ ॥ ೧೫೧ ॥

---

ಗಳಾದವು. ಇವುಗಳಲ್ಲಿಯೂ ನಾಲ್ಕು ವರ್ಣದ ಪ್ರಕಾರದಿಂದ ನಾಲ್ಕು ಭೇದಗಳಿರುವವು. ಕೊಂಚ ಬೆಳ್ಳಗಿರುವುದು, ಬ್ರಾಹ್ಮಣ ಜಾತಿಯ ನೀಲರತ್ನವು, ಕ್ಷತ್ರಿಯ ಜಾತಿಯ ರತ್ನವು ಕೊಂಚ ಕೆಂಪಗಿರುವುದು. ಬಿಳಿಯ ಮತ್ತು ಕಪ್ಪು ಕಾಂತಿಯುಳ್ಳದ್ದು ವೈಶ್ಯಜಾತಿಗೆ ಸೇರಿರುವುದು. ಬಹಳ ಕಪ್ಪಾಗಿ ಇರುವುದು ಶೂದ್ರಜಾತಿಗೆ ಸೇರಿರುವುದು.

೧೪೮–೧೫೦. ನಾನು ಹೇಳಿದ ಲಕ್ಷಣಗಳಿಂದ ಕೂಡಿದ ಕಾಂತಿಯುಳ್ಳ ನೀಲ ಮಣಿಗಳನ್ನು ಧರಿಸಿದವರಿಗೆ ಶ್ರೇಯಸ್ಸು ಉಂಟಾಗುವುದು. ಇಂದ್ರನೀಲ ರತ್ನದ ಮಧ್ಯದಲ್ಲಿ ಕಾಮನಬಿಲ್ಲಿನ ಕಾಂತಿಯು ಪ್ರಕಾಶಿಸುತ್ತಿದ್ದರೆ ಅದು ಬಹಳ ಬೆಲೆಯುಳ್ಳದ್ದಾಗಿ ಇರುವುದು. ಮತ್ತು ಅದು ಭೂಮಿಯಲ್ಲಿ ಸಿಕ್ಕುವುದು ಕಷ್ಟವು. ಇಂದ್ರನೀಲ ರತ್ನವನ್ನು ಹಾಲಿನ ಮಧ್ಯದಲ್ಲಿ ಹಾಕಿದಾಗ ಅದರ ಕಾಂತಿಯು ಇನ್ನೂ ಹೆಚ್ಚುವುದಾದರೆ ಅದನ್ನು ಮಹಾ ನೀಲವೆಂದು ಹೇಳುವರು.

೧೫೧–೧೫೨. ನಾನು ಹೇಳಿರುವಂತೆ ಇರುವ ವಜ್ರ, ಉತ್ತಮವಾದ ಮುತ್ತುಗಳು, ಪದ್ಮರಾಗ, ಗಾರುತ್ಮತ ರತ್ನ, ಇಂದ್ರನೀಲಮಣಿ ಇವುಗಳಿಂದ ಮಾಡಿರುವ

ವೈಡೂರ್ಯಗೋಮೇಧಿಕಪುಷ್ಯರಾಗ
ಪ್ರವಾಳರತ್ನಾನಿ ತಥಾ ನೃಪಾಣಾಂ ।
ಶೋಭಾವಹಾ ನ್ಯಲ್ಪರುಚೀನಿ ಸಾರ್ಧಂ
ತೈರ್ಧಾರಿತಾನಿ ಶ್ರಿಯ ಮಾವಹಂತಿ　　॥ ೧೫೨ ॥

ಗೋಮೇಧಿಕಾಖ್ಯರತ್ನಸ್ಯ ಲಕ್ಷಣಂ ವರ್ಣಯಾಮ್ಯಹಂ ।
ವಲಾಸುರಸ್ಯ ಯನ್ಮೇದೋ ಯತ್ರ ಯತ್ರಾಪತದ್ಭುವಿ　　॥ ೧೫೩ ॥

ಗೋಮೇಧಿಕಸ್ಯ ರತ್ನಸ್ಯ ತತ್ರ ತತ್ರಾ ಭವತ್ಖನಿಃ ।
ಮಧುಬಿಂದುಸಮಚ್ಛಾಯಂ ಗೋಮೂತ್ರಾಜ್ಯಸಮಪ್ರಭಂ　　॥ ೧೫೪ ॥

ಹೇಮರತ್ನಂ ಗುರು ಸ್ವಚ್ಛಂ ಸ್ನಿಗ್ಧಂ ಗೋಮೇಧಿಕಂ ಸ್ಮೃತಂ ।
ತದ್ರತ್ನಧಾರಣಂ ಪುಂಸಾಂ ಪವಿತ್ರಂ ಪಾಪನಾಶನಂ　　॥ ೧೫೫ ॥

ಪುಷ್ಯರಾಗಸ್ಯ ರತ್ನಸ್ಯ ಲಕ್ಷಣಂ ಶೃಣುತಾದರಾತ್ ।
ಯುಧ್ಯಂತ ಮಸುರಾರಾತಿಂ ಹಿರಣ್ಯಾಕ್ಷಂ ಮದೋತ್ಕಟಂ　　॥ ೧೫೬ ॥

---

ಆಭರಣಗಳನ್ನು ಧರಿಸಿದ್ದಾದರೆ, ಅವುಗಳಿಂದ ಶ್ರೇಯಸ್ಸು, ಧಾನ್ಯ ಐಶ್ವರ್ಯಗಳು, ಉತ್ತಮವಾದ ರತ್ನಗಳು ಇವೆಲ್ಲವೂ ವೃದ್ಧಿಯಾಗುವವು. ವೈಡೂರ್ಯ, ಗೋಮೇಧಿಕ, ಪುಷ್ಯರಾಗ, ಹವಳ ಇವುಗಳು ಕಾಂತಿಯಲ್ಲಿ ಕಡಿಮೆಯಾಗಿರುವವು. ಇವುಗಳನ್ನು ಬೇರೆ ರತ್ನಗಳ ಸಂಗಡ ಧರಿಸಿದ್ದರಿಂದ ಕಾಂತಿಯು ಹೆಚ್ಚುವುದು.

೧೫೩–೧೫೫. ಗೋಮೇಧಿಕ ರತ್ನದ ಲಕ್ಷಣವನ್ನು ಹೇಳುವೆನು. ವಲಾಸುರನ ಮೇದಸ್ಸು ಭೂಮಿಯಲ್ಲಿ ಬಿದ್ದ ಕಡೆಯಲ್ಲಿ ಆ ರತ್ನದ ಗಣಿಗಳು ಉಂಟಾಗಿರುವವು. ಜೇನುತುಪ್ಪದ ಬಿಂದುವಿನ ಕಾಂತಿಯೂ, ಗೋವಿನ ಮೂತ್ರಕ್ಕೆ ಸಮನಾದ ಕಾಂತಿಯೂ ಇರುವ, ಚಿನ್ನದಂತಿರುವ, ಭಾರವಾಗಿ, ನಿರ್ಮಲವಾಗಿ, ನುಣುಪಾಗಿರುವ ರತ್ನವು ಗೋಮೇಧಿಕವೆನಿಸುವುದು. ಈ ರತ್ನವನ್ನು ಧರಿಸುವ ಪುರುಷರು ಪವಿತ್ರರೂ ಪುಣ್ಯವಂತರೂ ಆಗುವರು.

೧೫೬–೧೫೮. ಪುಷ್ಯರಾಗ ರತ್ನದ ಲಕ್ಷಣವನ್ನು ಹೇಳುವೆನು. ಆದರದಿಂದ ಕೇಳಿರಿ. ಯುದ್ಧವನ್ನು ಮಾಡುತ್ತಿರುವ ಹಿರಣ್ಯಾಕ್ಷನನ್ನು ನೋಡಿ ವರಾಹರೂಪದಿಂದ ಇರುವ ವಿಷ್ಣುವು ಕೋಪದಿಂದ ಹುಂಕಾರವನ್ನು ಮಾಡಿದನು. ಅವನು

**ಜಿಘಾಂಸುಃ ಸ್ತಬ್ಧರೋಮಾಥ ಹುಂಕಾರಂ ಕೃತವಾನ್ರುಷಾ ।**
**ತಸ್ಮಿಂಸ್ತನ್ವತಿ ಹುಂಕಾರಂ ಮಾಯಾಪೋತ್ರಿಣಿ ಮಾಧವೇ ॥ ೧೫೭ ॥**

**ಉತ್ಪೇತುಃ ಶ್ಲೇಷ್ಮಕಣಿಕಾಃ ಘೋಣಾಗ್ರಸುಷಿರಾತ್ಕಿಲ ।**
**ಯತ್ರ ಯತ್ರ ನಿಪೇತುಸ್ತಾಃ ಶ್ಲೇಷ್ಮಣಃ ಕಣಿಕಾಃ ಸ್ಥಲೇ ॥ ೧೫೮ ॥**

**ತತ್ರ ತತ್ರಾಭವನ್ ಶುದ್ಧಾಃ ಪುಷ್ಯರಾಗೋಪಲಾಃ ಪುರಾ ।**
**ವಲಾಸುರಾಂಗಸಂಭೂತಾ ಅಭವನ್ ವಿವಿಧಾಕರಾಃ ॥ ೧೫೯ ॥**

**ಹೇಮಚ್ಛಾಯಂ ಶಿರೋವೃತ್ತಂ ಜ್ಯೋತಿರಂಗಾರನಿರ್ಮಲಂ ।**
**ಕಾಂತ್ಯಾ ಮನೋಹರಂ ಸ್ನಿಗ್ಧಂ ಪುಷ್ಯರಾಗಂ ಪ್ರಶಸ್ಯತೇ ॥ ೧೬೦ ॥**

**ಪಾರಿಯಾತ್ರಸ್ಯ ಶೃಂಗಾಣಿ ಮಂದರಸ್ಯ ಚ ಸಾನವಃ ।**
**ಪುರೀ ಪುರಂದರಸ್ಯಾಪಿ ತದೀಯಾ ಚ ಸಭಾ ಪುನಃ ॥ ೧೬೧ ॥**

**ತತ್ಪುಷ್ಯರಾಗವಿಹಿತಾ ವಿಧಿನಾ ವಿಶ್ವಯೋನಿನಾ ।**
**ತತ್ಪುಷ್ಯರಾಗಂ ಯೋ ಧತ್ತೇ ಯುದ್ಧೇ ಚ ವಿಜಯೀ ನೃಪಃ ॥ ೧೬೨ ॥**

---

ಹುಂಕಾರವನ್ನು ಮಾಡುವಾಗ ಆ ವರಾಹಮೂರ್ತಿಯ (ನಾಸಿಕಾಗ್ರದಿಂದ) ವದನದಿಂದ ಶ್ಲೇಷ್ಮದ ಕಣಗಳು ಹಾರಿಬಿದ್ದವು. ಅವುಗಳು ಬಿದ್ದ ಕಡೆಗಳಲ್ಲಿ ಪುಷ್ಯರಾಗ ರತ್ನದ ಗಣಿಗಳಾದವು. ಬಲಾಸುರನ ಅಂಗದಿಂದ ಹುಟ್ಟಿದವುಗಳೆಲ್ಲವೂ ಅನೇಕ ವಿಧವಾದ ಗಣಿಗಳಾದವು.

೧೬೦–೧೬೨ ಪುಷ್ಯರಾಗ ರತ್ನವು ಚಿನ್ನದ ಕಾಂತಿಯುಳ್ಳದ್ದು. ಮೇಲುಭಾಗದಲ್ಲಿ ದುಂಡಾಗಿರುವ ಕಾಂತಿಯನ್ನು ಕೊಡುವುದು. ಕೆಂಡದ ಹಾಗೆ ಇರುವ ನಿರ್ಮಲವಾದ ಕಾಂತಿಯುಳ್ಳದ್ದು. ಮನೋಹರವಾದ, ನುಣುಪಾದ ಪುಷ್ಯರಾಗ ರತ್ನವು ಪ್ರಶಸ್ತವಾಗಿರುವುದು. ಪಾರಿಯಾತ್ರಪರ್ವತದ ಶಿಖರಗಳು, ಮಂದರ ಪರ್ವತದ ತಪ್ಪಲಿನ ಪ್ರದೇಶಗಳು, ಇಂದ್ರನ ನಗರವಾದ ಅಮರಾವತೀ ಪಟ್ಟಣ, ಇಂದ್ರನ ಸಭೆ, ಇವೆಲ್ಲವೂ ಪುಷ್ಯರಾಗ ರತ್ನ ಖಚಿತವಾದವುಗಳು. ಇದನ್ನು ಬ್ರಹ್ಮನು ಹೀಗೆ ನಿರ್ಮಿಸಿರುವನು. ಪುಷ್ಯರಾಗ ರತ್ನವನ್ನು ಧರಿಸುವ ರಾಜನು ಯುದ್ಧದಲ್ಲಿ ಜಯಶಾಲಿಯಾಗುವನು.

ಅಥ ವೈಡೂರ್ಯರತ್ನಸ್ಯ ಯುಹ್ಯಯುಂ ಶೃಣ್ವಂತು ಲಕ್ಷಣಂ ।
ವಲಸ್ಯ ತಸ್ಯ ರೋಮಾಣಿ ಯಾಂತಿ ವೈಡೂರ್ಯತಾಂ ಪುರಾ ॥ ೧೬೩ ॥

ಇಳಾವೃತೇ ಮಹಾಮೇರೋಃ ಪಶ್ಚಿಮೇಷು ಸ್ಥಲೇಷು ಚ ।
ವಿವಿಧಾ ಆಕಾರಾ ಅಸಂಖ್ಯಾನ್ಯೇ ಸಂತ್ಯಪಿ ಭೂತಲೇ ॥ ೧೬೪ ॥

ಗೋರಕ್ಷೇ ಮಾಗಧೇ ದೇಶೇ ಪಾರಸೀಕೇ ಚ ಸಿಂಹಳೇ ।
ಮಲಯೇ ಚ ತ್ರಿಕೂಟೇ ಚ ದ್ವೀಪಾಂತರಮಹೀಷು ಚ ॥ ೧೬೫ ॥

ಆಕರಾಸ್ಸಂತಿ ವಿವಿಧಾ ವೈಡೂರ್ಯಪ್ರಭವಾಃ ಸ್ಥಲೇ ।
ಕಲ್ಪಾಂತ ಕ್ಷುಭಿತಃಂಬೋಧಿಗಂಭೀರಾ ನ್ಮೇಘಗರ್ಜಿತಾತ್ ॥ ೧೬೬ ॥

ಅಪಿ ವೈಡೂರ್ಯ ಮುತ್ಪನ್ನಂ ಭುವೋ ಭಾಗೇಷು ಕೇಷುಚಿತ್ ।
ವೇಣುಪತ್ರಬಿಡಾಲಾಕ್ಷಿ ಶಿಖಿಕಂಠಸಮದ್ಯುತಿಃ ॥ ೧೬೭ ॥

---

೧೬೩-೧೬೪. ಇನ್ನು ಮುಂದೆ ವೈಡೂರ್ಯರತ್ನದ ಲಕ್ಷಣವನ್ನು ಹೇಳುವೆನು. ಬಲಾಸುರನ ರೋಮಗಳು ವೈಡೂರ್ಯರತ್ನದ ರೀತಿಯನ್ನು ಹೊಂದಿದ್ದವು. ಇಳಾವೃತಖಂಡ, ಮಹಾಮೇರು ಪರ್ವತದ ಪಶ್ಚಿಮ ಪ್ರದೇಶ, ಇವುಗಳಲ್ಲಿ ವೈಡೂರ್ಯರತ್ನದ ಗಣಿಗಳಾಗಿ ಇರುವವು. ಇವಲ್ಲದೆ ಬೇರೆ ಬೇರೆಯಾದ ಇತರ ಕಡೆಗಳಲ್ಲಿಯೂ ಅನೇಕ ವಿಧ ರತ್ನಗಳ ಗಣಿಗಳಿರುವವು.

೧೬೫-೧೬೭. ಗೋರಕ್ಷದೇಶ, ಮಗಧದೇಶ, ಪಾರಶೀಕದೇಶ, ಸಿಂಹಳ ದ್ವೀಪ, ಮಲಯ ಪರ್ವತ, ತ್ರಿಕೂಟಪರ್ವತ, ಇತರ ದ್ವೀಪಗಳು, ಇವುಗಳಲ್ಲಿ ವೈಡೂರ್ಯ ರತ್ನಗಳು ಹುಟ್ಟುವ ಅನೇಕ ವಿಧವಾದ ಗಣಿಗಳಿರುವವು. ಪ್ರಳಯ ಕಾಲದಲ್ಲಿ ಸಮುದ್ರವು ಚಂಚಲವಾಗಿ ಇದ್ದದ್ದರಿಂದಲೂ, ಮೇಘದ ಗಂಭೀರವಾದ ಗುಡುಗಿನ ಧ್ವನಿಯಿಂದಲೂ, ವೈಡೂರ್ಯ ರತ್ನವು ಭೂಮಿಯ ಕೆಲವು ಕಡೆಯಲ್ಲಿ ಉತ್ಪನ್ನವಾಗಿರುವುದು. ಬಿದಿರಿನ ಎಲೆ, ಬೆಕ್ಕಿನ ಕಣ್ಣು, ನವಿಲಿನ ಕುತ್ತಿಗೆ ಇವು

ಸ್ನಿಗ್ಧಗಾತ್ರಂ ಗುರು ಸ್ವಚ್ಛಂ ವೈಡೂರ್ಯಂ ಗುಣವನ್ಮತಂ ।
ದಕ್ಷಿಣಪ್ರಸೃತಚ್ಛಾಯಂ ಬ್ರಾಹ್ಮಣಂ ಕಥಯಂತಿ ಹಿ ॥ ೧೬೮ ॥

ಸವ್ಯಪ್ರಸೃತಜೀವಂತು ವೈಡೂರ್ಯಂ ಕ್ಷತ್ರಮುಚ್ಯತೇ ।
ಪಶ್ಚಾದ್ವಿಸರ್ಪಿಜೀವಂತು ವೈಶ್ಯಂ ತದ್ವೇದಿನಾಂ ಮತಂ ॥ ೧೭೦ ॥

ಪ್ರಾಚೀವಿಸರ್ಪಿಜೀವಂ ತು ವೈಡೂರ್ಯಂ ಶೂದ್ರಮುಚ್ಯತೇ ।
ನಿತ್ಯಮೇತಾನಿ ಪೂಜ್ಯಾನಿ ಮತಿಮಾನ್ ಧಾರಯೇನ್ನೃಪಃ ॥ ೧೭೧ ॥

ಅಥ ವಿದ್ರುಮರತ್ನಸ್ಯ ಲಕ್ಷಣಂ ವೃಕ್ಷ್ಯತೇ ಮಯಾ ।
ವಲಸ್ಯಪಿಶಿತಾಜ್ಜಾತಾ ಬಹುಧಾ ತಸ್ಯ ಸತ್ವನಿಃ ॥ ೧೭೨ ॥

ಯಯಾ ತನ್ವಾ ಪುರಾ ಬ್ರಹ್ಮಾ ಪಿತ್ರ್ಯಾಣಾಮಸೃಜತ್ಕುಲಂ ।
ತಯಾ ಸಂಧ್ಯಾತ್ಮನಾ ತನ್ವಾ ಯತ್ರ ಯತ್ರ ಮಲಾನಿ ಹಿ ॥ ೧೭೩ ॥

---

ಗಳಿಗೆ ಸಮನಾದ ಕಾಂತಿಯನ್ನು ಹೊಂದಿ ನುಣುಪಾಗಿರುವ ಆಕಾರವುಳ್ಳದ್ದಾಗಿ, ಭಾರವಾಗಿ, ನಿರ್ಮಲವಾಗಿರುವ ವೈಡೂರ್ಯ ರತ್ನವು ಶ್ರೇಷ್ಠವಾದದ್ದೆಂದು ಹೇಳಿರುವರು. ಬಲಭಾಗಕ್ಕೆ ಕಾಂತಿಯು ಹೊರಡುತ್ತಿರುವ ವೈಡೂರ್ಯ ರತ್ನವನ್ನು ಬ್ರಾಹ್ಮಣ ಜಾತಿಯದೆಂದು ಹೇಳುವರು.

೧೭೦-೧೭೧. ಎಡಭಾಗಕ್ಕೆ ಕಾಂತಿಯು ಹೊರಡುತ್ತಿದ್ದರೆ ಅದನ್ನು ಕ್ಷತ್ರಿಯ ಜಾತಿಯ ವೈಡೂರ್ಯ ರತ್ನವೆಂದು ಹೇಳುವರು. ಹಿಂದುಗಡೆಗೆ ಕಾಂತಿಯು ಹೊರಡುತ್ತಿದ್ದರೆ ಅದು ವೈಶ್ಯ ಜಾತಿಯ ವೈಡೂರ್ಯ ರತ್ನವಾಗಿರುವುದು. ಪೂರ್ವ ದಿಕ್ಕಿಗೆ ಕಾಂತಿಯು ಹೊರಡುತ್ತಿರುವ ವೈಡೂರ್ಯ ರತ್ನವು ಶೂದ್ರ ಜಾತಿಗೆ ಸೇರಿರುವುದು. ಇವುಗಳೆಲ್ಲವೂ ಪ್ರತಿದಿನವೂ ಪೂಜಾರ್ಹವಾದವುಗಳು. ಇವುಗಳನ್ನು ಪೂಜಿಸಿ ರಾಜನು ಧರಿಸಬೇಕು.

೧೭೨-೧೭೪. ವಿದ್ರುಮ ರತ್ನದ (ಹವಳ)ಲಕ್ಷಣವನ್ನು ಹೇಳುವೆನು. ಬಲಾಸುರನ ಮಾಂಸದಿಂದ ವಿದ್ರುಮ ರತ್ನದ ಗಣಿಯು ಅನೇಕ ವಿಧವಾಯಿತು. ರತ್ನದ

ತ್ಯಕ್ತಾನಿ ತತ್ರ ತತ್ರಾರ್ಸವಿವಿಧಾ ಆಕರಾ ಅಪಿ ।
ವಜ್ರಪಾಣಿಃ ಪುರಾ ಶಕ್ರೋ ಲೋಕನಾಶಂ ವಿತನ್ವತಾಂ ॥ ೧೭೪ ॥

ಪಕ್ಷಸ್ಯ ಕದನಂ ಚಕ್ರೇ ಪತತಾಂ ಧರಣೀಭೃತಾಂ ।
ನ್ಯಪತನ್ನಂಬರಾ ಚ್ಛೈತೇ ಲೂನಪಕ್ಷಾಃ ಮಹೀಧರಾಃ ॥ ೧೭೫ ॥

ಗಿರೀಣಾಂ ಪತಮಾನಾನಾಂ ಪಕ್ಷಶಾತಸಮುದ್ಭವಾಃ ।
ನಿಪೇತುಃ ಕ್ಷತಜಾಃ ಯತ್ರ ಖನಿಸ್ತತ್ರ ಸಮುದ್ಭವಾ ॥ ೧೭೬ ॥

ಫುಲ್ಲಕಿಂಶುಕಸಚ್ಛಾಯಾ ವಿದ್ರುಮಾ ಸ್ತತ್ರ ಸಂಭವಾಃ ।
ಮಾತ್ರಾ ವಿಭಿನ್ನದೇಹಸ್ಯ ಸಪ್ತಸಪ್ತೇಶ್ಚ ಸಾರಥೇಃ ॥ ೧೭೭ ॥

ನಿಪೇತುರಂಡಖಂಡಾನಿ ಯಾಸು ಯಾಸು ಸ್ಥಲೀಷು ಚ ।
ತಾಸು ತಾಸ್ವಾಕರಾ ಆರ್ಸವಿದ್ರುಮಾಣಾಂ ಪ್ರಸೂತಯೇ ॥ ೧೭೮ ॥

---

ಕಾಂತಿಯುಳ್ಳ ಶರೀರದಿಂದ ಬ್ರಹ್ಮನು ಪೂರ್ವದಲ್ಲಿ ಪಿತೃಗಳ ಕುಲವನ್ನು ನಿರ್ಮಿಸಿದನು. ಮಲದಿಂದ ಕೂಡಿರುವ ಆ ಶರೀರದ ಮಲವು ಬಿದ್ದ ಕಡೆಯಲ್ಲಿ ವಿದ್ರುಮ ರತ್ನದ ಅನೇಕ ವಿಧವಾದ ಗಣಿಗಳು ಉಂಟಾದವು.

೧೭೫-೧೭೮. ಪೂರ್ವದಲ್ಲಿ ಇಂದ್ರನು ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದಾಗ ರೆಕ್ಕೆಗಳು ಭೂಮಿಯಲ್ಲಿ ಅಲ್ಲಲ್ಲಿ ಬಿದ್ದವು. ರೆಕ್ಕೆಗಳನ್ನು ಕಳೆದುಕೊಂಡ ಪರ್ವತಗಳು ಅಂತರಿಕ್ಷದಿಂದ ಭೂಮಿಗೆ ಬೀಳುವಾಗ ರೆಕ್ಕೆಗಳನ್ನು ಕತ್ತರಿಸಿದ ಕಾರಣ ಅವುಗಳ ಗಾಯವು ಇರುವ ಪ್ರದೇಶಗಳಲ್ಲಿ ವಿದ್ರುಮ ರತ್ನದ ಗಣಿಗಳಾದವು. ಅರಳಿರುವ ಮುತ್ತುಗದ ಹೂವಿನಂತೆ ಕಾಂತಿಯುಳ್ಳ ಹವಳಗಳು ಅಲ್ಲಿ ಉತ್ಪನ್ನವಾಗಿರುವವು. ವಿನತಾದೇವಿಯು ತನ್ನ ಪುತ್ರನಾದ ಅರುಣನ ಮೊಟ್ಟೆಯನ್ನು ಒಡೆದ ಕಾಲದಲ್ಲಿ ಅದರ ಚೂರುಗಳು ವಿದ್ರುಮರತ್ನದ ಗಣಿಗಳಾದವು.

**ಯದಾ ಜಘಾನ ಭಗವಾನ್ ಕೇಶವೋ ಮಧುಕೈಟಭೌ ।**
**ಯತ್ರ ಶ್ಲಿಷ್ಟಂ ತಯೋರ್ಮಾಂಸಂ ತತ್ರ ವಿದ್ರುಮಸಂಭವಃ ॥ ೧೭೯ ॥**

**ಪಕ್ವಬಿಂಬಫಲಾಕಾರಂ ಜಪಾಕುಸುಮಸನ್ನಿಭಂ ।**
**ಶುಕತುಂಡಸಮಚ್ಛಾಯಂ ಪ್ರವಾಳಮತಿಶೋಭನಂ ॥ ೧೮೦ ॥**

**ದೋಷತ್ರಯಮಿದಂ ತೇಷಾಂ ವಿದ್ರುಮಾಣಾಂ ಚ ಶಾಸ್ತ್ರತಃ ।**
**ಪಂಕಾಶ್ರಯಂ ಛಿದ್ರವಕ್ತ್ರಂ ಕ್ರಿಮಿದೂಷಣ ಮೇವ ಚ ॥ ೧೮೧ ॥**

**ಏವಂ ಪ್ರವಾಳಂ ನಿರ್ದೋಷಂ ಕಾಮಿನ್ಯಶ್ಚ ವಿಶೇಷತಃ ।**
**ಧಾರಯೇಯು ಸ್ಸುಖಾಯುಷ್ಯಸುಪುತ್ರಾರೋಗ್ಯಸಿದ್ಧಯೇ ॥ ೧೮೨ ॥**

**ಸೂರ್ಯಾಂಶುಸ್ಪರ್ಶಮಾತ್ರೇಣ ವಹ್ನಿಂ ವಮತಿ ಯತ್ ಕ್ಷಣಾತ್ ।**
**ಸೂರ್ಯಕಾಂತಂ ತದಾಖ್ಯಾತಂ ಸ್ಫಟಿಕಂ ರತ್ನವೇದಿಭಿಃ ॥ ೧೮೩ ॥**

---

೧೭೯–೧೮೦. ಷಡ್ಗುಣೈಶ್ವರ್ಯ ಸಂಪನ್ನನಾದ ವಿಷ್ಣುವು ಮಧುಕೈಟಭ ರಾಕ್ಷಸರನ್ನು ವಧಿಸಿದಾಗ ಅವರ ಮಾಂಸವು ಬಿದ್ದ ಕಡೆಯಲ್ಲಿ ವಿದ್ರುಮ ರತ್ನದ ಗಣಿಗಳಾದವು. ತೊಂಡೆಹಣ್ಣಿಗೆ ಸಮನಾದ ಆಕಾರವನ್ನು ಹೊಂದಿ, ದಾಸವಾಳದ ಹೂವಿನ ಕಾಂತಿಯನ್ನು ಹೊಂದಿರುವ, ಗಿಣಿಯ ಕೊಕ್ಕಿನ ಕಾಂತಿಯನ್ನು ಹೊಂದಿರುವ ಹವಳವು ಉತ್ತಮವಾದದ್ದು.

೧೮೧–೧೮೨. ಕೆಸರಿನಂತೆ ಇರುವ ಕಪ್ಪು ಮಚ್ಚೆಯುಳ್ಳದ್ದು, ರಂಧ್ರ ಬಿದ್ದಿರುವುದು, ಹುಳುವಿನಿಂದ ದೂಷಿತವಾದದ್ದು, ಎಂದು ಹವಳಕ್ಕೆ ಮೂರು ದೋಷಗಳಿರುವವು. ಈ ದೋಷವಿಲ್ಲದೆ ಇರುವ ಗುಣಯುಕ್ತವಾದ ಹವಳವನ್ನು ಸ್ತ್ರೀಯರು ಅತಿಶಯವಾಗಿ ಧರಿಸುವರು. ಇದರಿಂದ ಸುಖವೂ, ಆಯುಸ್ಸೂ, ಆರೋಗ್ಯವೂ ಉಂಟಾಗಿ ಸುಪುತ್ರರು ಹುಟ್ಟುವರು.

೧೮೩–೧೮೪ ಸೂರ್ಯನ ಕಿರಣವು ತಗಲಿದ ಕೂಡಲೆ ಅಗ್ನಿಯನ್ನು ಉಗುಳುತ್ತಿರುವ ಸ್ಫಟಿಕವನ್ನು ಸೂರ್ಯಕಾಂತವೆಂದು ರತ್ನ ಶಾಸ್ತ್ರವನ್ನು ಬಲ್ಲವರು ಹೇಳುವರು.

**ಅಮೃತಾಂಶುಕರಸ್ಪರ್ಶಾತ್ಯತ್ ಕ್ಷರತ್ಯಮೃತಂ ಕ್ಷಣಾತ್ ।**
**ಚಂದ್ರಕಾಂತಂ ತದಾಖ್ಯಾತಂ ದುರ್ಲಭಂ ಸ್ಯಾತ್ಕಲೌ ಯುಗೇ ॥ ೧೮೪ ॥**

**ಸೂರ್ಯಕಾಂತಂ ಚಂದ್ರಕಾಂತಂ ರತ್ನಮಧ್ಯೇ ವಿದು ರ್ಬುಧಾಃ ।**
**ಇತ್ಯುಕ್ತ್ವಾ ವೈಶ್ಯವರ್ಯಸ್ತು ಕಾರಯಿತ್ವಾ ಸುಮಂಡಲಂ ॥ ೧೮೫ ॥**

**ಉತ್ತರಾಭಿಮುಖೋ ಭೂತ್ವಾ ತತ್ರಾಸ್ತೀರ್ಯ ನವಾಂಶುಕಂ ।**
**ಮಧ್ಯೇ ತು ಪದ್ಮರಾಗಂ ಚ ಮುಕ್ತಾದೀನಿ ಯಥಾಕ್ರಮಂ ॥ ೧೮೬ ॥**

**ಪೂರ್ವಾದಿದಿಕ್ಷು ವಿನ್ಯಸ್ಯ ಗ್ರಹಮಂತ್ರೈರ್ವಿಧಾನತಃ ।**
**ತತ್ತತ್ಪುಷ್ಪೈ ಸ್ಸಮಭ್ಯರ್ಚ್ಯ ಸುಂದರೇಶಂ ಸಮೀಕ್ಷ್ಯ ಚ ॥ ೧೮೭ ॥**

**ಮಂಗಳಾನಿ ಸಮಸ್ತಾನಿ ಕುಮಾರಸ್ಯಾಸ್ಯ ಸಂತ್ವಿತಿ ।**
**ಉಕ್ತ್ವಾ ಗಂಭೀರಯಾ ವಾಚಾ ಮಹಾಂತಿ ಚ ಬಹೂನಿ ಚ ॥ ೧೮೮ ॥**

---

ಚಂದ್ರನ ಕಿರಣವು ಸ್ಪರ್ಶವಾದ ಕೂಡಲೆ ಜಲವನ್ನು ಸುರಿಸುವ ಸ್ಫಟಿಕವನ್ನು ಚಂದ್ರಕಾಂತ ಶಿಲೆಯೆಂದು ರತ್ನಗಳ ಲಕ್ಷಣವನ್ನು ಬಲ್ಲವರು ತಿಳಿಸಿರುವರು. ಈ ಬಗೆಯ ಚಂದ್ರಕಾಂತವು ಕಲಿಯುಗದಲ್ಲಿ ಸಿಕ್ಕುವುದಿಲ್ಲ. ಸೂರ್ಯಕಾಂತ, ಚಂದ್ರಕಾಂತಗಳನ್ನು ರತ್ನಗಳ ಮಧ್ಯದಲ್ಲಿ ಎಣಿಸಿರುವರು.

೧೮೫--೧೮೮. ವೈಶ್ಯನು ಹೀಗೆಂದು ಹೇಳಿ ಉತ್ತರಾಭಿಮುಖವಾಗಿ ಕುಳಿತುಕೊಂಡು ಹೊಸವಸ್ತ್ರವನ್ನು ಹಾಸಿ ಮಧ್ಯದಲ್ಲಿ ಪದ್ಮರಾಗರತ್ನವನ್ನೂ ಇತರ ವಿಧವಾದ ರತ್ನಗಳನ್ನೂ ಕ್ರಮಕ್ಕನುಸಾರವಾಗಿ ಇರಿಸಿ, ಆಯಾಯ ರತ್ನಗಳಿಗೆ ಅನುಸಾರವಾಗಿ ಉಕ್ತವಾದ ಗ್ರಹಗಳ ಮಂತ್ರಗಳಿಂದ ಶಾಸ್ತ್ರಕ್ರಮವಾಗಿ ಆಯಾಯ ಹೂವುಗಳಿಂದ ಪೂಜಿಸಿದನು. ಅನಂತರದಲ್ಲಿ ಸುಂದರೇಶ್ವರನನ್ನು ನೋಡುತ್ತಾ, ಈ ಬಾಲಕನಿಗೆ ಎಲ್ಲಾ ವಿಧವಾದ ಮಂಗಳಗಳೂ ಉಂಟಾಗಲಿ, ಎಂದು ಗಂಭೀರಧ್ವನಿಯಿಂದ ಆಶೀರ್ವಾದವನ್ನು ಮಾಡಿದನು.

ರತ್ನಾನಿ ಚ ವಿಚಿತ್ರಾಣಿ ಮುದಾ ಸದಯಯಾ ದದೌ ।
ಸಂತೋಷಸಾಗರೇ ಸರ್ವೇ ಮಜ್ಜಂತೋ ಮಂತ್ರಿಣಸ್ತದಾ ॥ ೧೮೯ ॥

ನವರತ್ನಾನ್ಯನರ್ಘಾಣಿ ವೈಶ್ಯವರ್ಯಾತ್ಪ್ರಗೃಹ್ಯ ಚ ।
ತತೋ ವೈಶ್ಯಂ ಚ ಸಂಪ್ರಾರ್ಥ್ಯ ತ್ವಮತ್ರೋಪವಿಶೇತಿ ತೇ ॥ ೧೯೦ ॥

ವಿಧಿನಾ ಕಾರಯಾಮಾಸುಃ ಕಿರೀಟಂ ಸುಮನೋಹರಂ ।
ಹೋಮದಾನಾದಿಕಂ ಕೃತ್ವಾ ವಿದ್ವದ್ಭಿರ್ಬ್ರಾಹ್ಮಣೈರಪಿ ॥ ೧೯೧ ॥

ಕುಮಾರಮಭಿಷಿಚ್ಯಾದ್ಭಿ ರ್ಮಂತ್ರಿತಾಭಿ ಸ್ಸಮಂತ್ರಕೈಃ ।
ಕಿರೀಟಶೋಭಿತಂ ಕೃತ್ವಾ ಕುಮಾರಸ್ಯೋ ತ್ತಮಾಂಗಕಂ ॥ ೧೯೨ ॥

ಛತ್ರಚಾಮರಮುಖ್ಯೈಶ್ಚ ರಾಜಚಿಹ್ನೈ ರ್ವಿಶೇಷತಃ ।
ಕುಮಾರಂ ಸಮಲಂಕೃತ್ವಾ ನತ್ವಾ ಸರ್ವೇ ಚ ಮಂತ್ರಿಣಃ ॥ ೧೯೩ ॥

ಅಥಾ ಭಿಷೇಕಪಾಂಡ್ಯೋಯ ಮಿತಿ ಚಕ್ರುಶ್ಚ ನಾಮ ತೇ ।
ಸರ್ವೇ ಜನಾ ಮುಮುದಿರೇ ಪ್ರಶಂಸ ಸುಂದರೇಶ್ವರಂ ॥ ೧೯೪ ॥

---

೧೮೯–೧೯೪. ಆಮೇಲೆ ಆ ವೈಶ್ಯನು ದೊಡ್ಡದಾದ, ಅನೇಕವಾದ, ಆ ರತ್ನಗಳೆಲ್ಲವನ್ನೂ ಸಂತೋಷದಿಂದ ಆ ಮಂತ್ರಿಗಳಿಗೆ ಕೊಟ್ಟನು. ಮಂತ್ರಿಗಳು ಬಹಳ ಸಂತೋಷವುಳ್ಳವರಾಗಿ ಶ್ರೇಷ್ಠನಾದ ಆ ವೈಶ್ಯನಿಂದ ಬಹಳ ಬೆಲೆಬಾಳುವ ಆ ರತ್ನಗಳನ್ನು ತೆಗೆದುಕೊಂಡು ಆ ವೈಶ್ಯನನ್ನು "ಇಲ್ಲಿಯೇ ನೀನು ಇರಬೇಕು" ಎಂದು ಪ್ರಾರ್ಥಿಸಿದರು. ಅವರು ಆ ರತ್ನಗಳಿಂದ ಕಿರೀಟವನ್ನು ಮಾಡಿಸಿದರು. ಹೋಮದಾನ ಇವುಗಳನ್ನು ಮಂತ್ರಜ್ಞರಾದ ಮತ್ತು ವಿದ್ವಾಂಸರಾದ ಬ್ರಾಹ್ಮಣರಿಂದ ಮಾಡಿಸಿ ಆ ಬಾಲಕನಿಗೆ ಪಟ್ಟಾಭಿಷೇಕವನ್ನು ಮಾಡಿದರು. ಅವನ ಶಿರಸ್ಸಿನಲ್ಲಿ ಕಿರೀಟವನ್ನು ಇಟ್ಟು, ಛತ್ರ ಚಾಮರ ಮೊದಲಾದ ರಾಜಚಿಹ್ನೆಗಳೆಲ್ಲವನ್ನೂ ಅವನಿಗೆ ಕೊಟ್ಟು, ಆ. ಮಂತ್ರಿಗಳು ಅವನನ್ನು ಅಲಂಕರಿಸಿ, ಅವನಿಗೆ ಅಭಿಷೇಕಪಾಂಡ್ಯನೆಂದು ಹೆಸರಿಟ್ಟರು. ಜನರೆಲ್ಲರೂ ಸಂತೋಷಪಟ್ಟು ಸುಂದರೇಶ್ವರನನ್ನು ಸ್ತುತಿಮಾಡಿದರು.

ಮಂತ್ರಿಣೋ ವೈಶ್ಯವರ್ಯಂ ಚ ಸಂಭಾವಯಿತು ಮುದ್ಯತಾಃ ।
ಹಿರಣ್ಯಾನಿ ಸುವಸ್ತ್ರಾಣಿ ಗೃಹೀತ್ವಾ ಸುಬಹೂನಿ ಚ ॥ ೧೯೫ ॥

ಆಜಗ್ಮು ರಂತಿಕಂ ತಸ್ಯ ದೃಷ್ಟ್ವಾ ವೈಶ್ಯವರಸ್ತು ತಾನ್ ।
ಮಂದಸ್ಮಿತೇನ ಕರುಣಾಕಟಾಕ್ಷೇಣಾನುಗೃಹ್ಯ ಚ ॥ ೧೯೬ ॥

ಜ್ಯೋತಿರ್ಮಯವಪು ರ್ಧೃತ್ವಾ ಮೂಲಲಿಂಗೇ ತಿರೋದಧೇ ।
ವಿಸ್ಮಿತಾ ಏವ ಮೂಚುಸ್ತೇ ವೈಶ್ಯೋಽಯಂ ಮೌಳಿರತ್ನದಃ ॥ ೧೯೭ ॥

ಶಿವ ಏವ ನ ಸಂದೇಹಶ್ಚಿರಂಜೀವೀ ನೃಪಾತ್ಮಜಃ ।
ಇತ್ಯುಕ್ತ್ವಾ ಹೃಷ್ಟಮನಸೋ ಯಯು ರ್ಗೇಹಾನಿ ಮಂತ್ರಿಣಃ ॥ ೧೯೮ ॥

ಶಿಶುಸ್ಸನ್ನಪಿ ದೇವೇಶಪ್ರಸಾದಾತ್ಪೂರ್ಣಸೈನಿಕಃ ।
ದಾಯಾದಾನ್ ಕೋಶಲುಂಟಾಕಾನ್ ಪ್ರಹೃತ್ಯಾರ್ಥಂ ಸಮಗ್ರಹೀತ್ ॥೧೯೯॥

---

೧೯೫. ಅನಂತರದಲ್ಲಿ ಮಂತ್ರಿಗಳು ರತ್ನಗಳನ್ನು ಕೊಟ್ಟ ವೈಶ್ಯನಿಗೆ ಮರ್ಯಾದೆ ಮಾಡುವುದಕ್ಕಾಗಿ ಚಿನ್ನ, ಉತ್ತಮವಾದ ವಸ್ತ್ರ, ಇವುಗಳನ್ನು ತೆಗೆದುಕೊಂಡು ವೈಶ್ಯನ ಹತ್ತಿರಕ್ಕೆ ಬಂದರು. ವೈಶ್ಯನು ಅವರನ್ನು ನೋಡಿ ಮಂದಹಾಸವುಳ್ಳವನಾಗಿ ದಯೆಯಿಂದ ಕೂಡಿದ ಕಟಾಕ್ಷವುಳ್ಳವನಾಗಿ, ಅದೆಲ್ಲವನ್ನೂ ಕಟಾಕ್ಷದಿಂದಲೇ ಅನುಗ್ರಹಿಸಿ, ಜ್ಯೋತಿರ್ಮಯವಾದ ಆಕಾರವನ್ನು ಧರಿಸಿ, ಹಾಲಾಸ್ಯೇಶ್ವರ ಮೂಲಲಿಂಗದಲ್ಲಿ ಅದೃಶ್ಯನಾದನು.

೧೯೬–೧೯೮. ಆಗ ಮಂತ್ರಿಗಳು "ಶಿವನು ವೈಶ್ಯನ ಆಕಾರದಿಂದ ಬಂದು ಕಿರೀಟಕ್ಕಾಗಿ ರತ್ನಗಳನ್ನು ಕೊಟ್ಟಿರುವನು, ಇದರಲ್ಲಿ ಸಂಶಯವಿಲ್ಲವು. ಈ ರಾಜಪುತ್ರನು ಶಿವನ ಅನುಗ್ರಹಕ್ಕೆ ಪಾತ್ರನಾಗಿರುವುದರಿಂದ ಇವನು ಚಿರಂಜೀವಿಯು" ಎಂದು ಹೇಳುತ್ತಾ ಸಂತೋಷದಿಂದ ತಮ್ಮ ತಮ್ಮ ಮನೆಗಳಿಗೆ ಹೋದರು.

೧೯೯–೨೦೦. ಅಭಿಷೇಕ ಪಾಂಡ್ಯರಾಜನು ಬಾಲಕನಾಗಿದ್ದಾಗ್ಯೂ ದೇವದೇವನ ಅನುಗ್ರಹಕ್ಕೆ ಪಾತ್ರನಾಗಿ, ಸೇನೆಯನ್ನು ಸೇರಿಸಿ, ಭಂಡಾರವನ್ನು ಲೂಟಿಮಾಡಿದ್ದ

ಸೈನ್ಯಾನಶ್ವಾನ್ ಗಜಾಂಶ್ಚೈವ ಸ್ವೀಕೃತ್ಯ ಬಹುವತ್ಸರಂ ।
ಪಾಲಯಾಮಾಸ ಮನುವತ್ಪಾರ್ಥಿವೋ ಮಹತೀಂ ಮಹೀಂ ॥ ೨೦೦ ॥

ಏವಂ ಸಪ್ತದಶೀ ಲೀಲಾ ಸಂಪ್ರೋಕ್ತಾ ಸುಂದರೇಶಿತುಃ ।
ಸಕೃಚ್ಛೃತಾ ವಾ ಪಠಿತಾ ಸರ್ವರತ್ನಸಮೃದ್ಧಿದಾ ॥ ೨೦೧ ॥

ಆಯುರಾರೋಗ್ಯಸತ್ಪುತ್ರಸರ್ವಸಂಪತ್ಸುಖಪ್ರದಾ ।
ಇಹ ಭೋಗಾಂಶ್ಚ ವಿಪುಲಾನಂತೇ ಮುಕ್ತಿಂ ದದಾತಿ ಸಾ ॥ ೨೦೨

ಇತಿ ಶ್ರೀ ಸ್ಕಾಂದೇ ಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ನವರತ್ನವಿಕ್ರಯೋ ನಾಮ
ತ್ರಯೋ ವಿಂಶೋಽಧ್ಯಾಯಃ

---

ಕಳ್ಳರೆಲ್ಲರನ್ನೂ ಶಿಕ್ಷಿಸಿ, ದ್ರವ್ಯವೆಲ್ಲವನ್ನೂ ವಶಮಾಡಿಕೊಂಡನು. ಆನೆ, ಕುದುರೆ ಸೇನೆ, ಇವೆಲ್ಲವನ್ನೂ ತನ್ನ ಅಧೀನದಲ್ಲಿ ಇರಿಸಿಕೊಂಡು ಮನುಚಕ್ರವರ್ತಿಯು ರಾಜ್ಯವನ್ನು ರಕ್ಷಿಸಿದ ಹಾಗೆ ಭೂಮಿಯೆಲ್ಲವನ್ನೂ ರಕ್ಷಿಸಿದನು.

೨೦೧-೨. ಸುಂದರೇಶ್ವರನ ಹದಿನೇಳನೆಯ ಲೀಲೆಯನ್ನು ಹೀಗೆ ಹೇಳಿರುವೆನು. ಇದನ್ನು ಒಂದು ಸಾರಿ ಪಾರಾಯಣ ಮಾಡಿದ ಮಾತ್ರಕ್ಕಾಗಲಿ, ಕೇಳಿದ್ದರಿಂದಲಾಗಲಿ, ರತ್ನಗಳ ಸಮೃದ್ಧಿಯು ಅವರಿಗೆ ಉಂಟಾಗುವುದು. ಇದರಿಂದ ಆಯುಸ್ಸೂ, ಆರೋಗ್ಯವೂ ಹೆಚ್ಚುವವು. ಎಲ್ಲಾ ವಿಧವಾದ ಸಂಪತ್ತುಗಳೂ, ಸುಖವೂ ಉಂಟಾಗುವುದು. ಇದರಿಂದ ಬಹಳ ಭೋಗಗಳನ್ನು ಅನುಭವಿಸಿದನಂತರ ಮುಕ್ತಿಯುಂಟಾಗುವುದು.

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯ
ಯಲ್ಲಿ ನವರತ್ನ ವಿಕ್ರಯವೆಂದು ಹೆಸರುಳ್ಳ ಇಪ್ಪತ್ತ
ಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯಮಾಹಾತ್ಮ್ಯಂ



## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಚತುರ್ವಿಂಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಮೇಘೈಸ್ಸಾಗರಪಾನಂ ಚ ಕಾರಯಾಮಾಸ ಶಂಕರಃ ।
ಲೀಲಯಾ ಚ ಯಯಾ ತಾಂ ಚ ಶೃಣುಧ್ವಂ ಮುನಿಪುಂಗವಾಃ ॥ ೧ ॥

ಸ ಚಾಭಿಷಿಕ್ತಪಾಂಡ್ಯಸ್ತು ಹಾಲಾಸ್ಯೇಶೇಽತಿ ಭಕ್ತಿಮಾನ್ ।
ದಿನೇ ದಿನೇ ಮಹಾಲಿಂಗ ಮಭಿಷೇಕಪ್ರಿಯಂ ಪ್ರಿಯಾತ್ ॥ ೨ ॥

---

### ಇಪ್ಪತ್ತುನಾಲ್ಕನೆಯ ಅಧ್ಯಾಯವು.

೧–೨. ಅಗಸ್ತ್ಯಋಷಿಯು ಹೇಳಿದನು:—ಶಂಕರನು ತನ್ನ ಲೀಲೆಯಿಂದ ಮೇಘಗಳು ಸಮುದ್ರದ ನೀರನ್ನು ಪೂರ್ತಿಯಾಗಿ ಕುಡಿಯುವಂತೆ ಮಾಡಿದ ಬಗೆಯನ್ನು ಹೇಳುವೆನು! ಮುನಿಶ್ರೇಷ್ಠರಾದ ನೀವೆಲ್ಲರೂ ಕೇಳಿರಿ. ಅಭಿಷೇಕ ಪಾಂಡ ರಾಜನು ಹಾಲಾಸ್ಯೇಶ್ವರನಲ್ಲಿ ಬಹಳ ಭಕ್ತಿಯುಳ್ಳವನಾಗಿ ಪ್ರತಿದಿವಸದಲ್ಲಿಯೂ ಅಭಿಷೇಕ ಪ್ರಿಯನಾದ ಹಾಲಾಸ್ಯೇಶ್ವರ ಮೂಲಲಿಂಗವನ್ನು ಪೂಜಿಸುತ್ತಿದ್ದನು. ಆ ರಾಜನು ದೇವ ದೇವನ ಅಭಿಷೇಕಕ್ಕಾಗಿ ಹಸುವಿನ ಹಾಲು ಮುಂತಾದ ಪಂಚಾಮೃತ ದ್ರವ್ಯಗಳು, ಗಂಧೋದಕ, ಪುಷ್ಪೋದಕ, ರತ್ನೋದಕ, ಹಣ್ಣುಗಳ ಉದಕ, ಕಬ್ಬಿನ

ಗವ್ಯೈಃ ಪಂಚಾಮೃತೈ ರ್ಗಂಧಪುಷ್ಪರತೋದಕೈ ರಪಿ ।
ಫಲಸಾರೈ ರಿಕ್ಷುಸಾರೈ ರ್ವಸ್ತ್ರಪೂತೈ ಶ್ಚ ವಾರಿಭಿಃ ॥ ೩ ॥

ಸ್ನಾಪಯಿತ್ವಾ ವಿಧಾನೇನ ಹಿಮತೋಯಪ್ರಕಲ್ಪಿತೈಃ ।
ಕರ್ಪೂರಪಂಕೈ ರಾಲಿಪ್ಯ ಗಂಧಾದ್ಯೈ ರುಪಚಾರಕೈಃ ॥ ೪ ॥

ಪರಮಾನ್ನಾದಿಭಕ್ಷ್ಯೈಶ್ಚ ಶ್ಚಾಪೂಪೈ ಸ್ಸವ್ಯಂಜನೈಃ ಫಲೈಃ ।
ಶರ್ಕರಾಜ್ಯದಧಿಕ್ಷೀರೈಃ ಕ್ಷೌದ್ರೈ ಸ್ಸಮ್ಯಕ್ಸುಶೋಧಿತೈಃ ॥ ೫ ॥

ವಾಸಿತೈಃ ಪಾನಕೈ ಸ್ಸಮ್ಯಕ್ ಪೃಥಕ್ಪಾತ್ರಪ್ರಪೂರಿತೈಃ ।
ಪಾನೀಯೈ ರಪಿ ತಾಂಬೂಲೈಃ ಕರ್ಪೂರಾರಾರ್ತಿಕೈರಪಿ ॥ ೬ ॥

ಸಪರ್ಯಾಂ ಸುಂದರೇಶಸ್ಯ ಕಾರಯಾಮಾಸ ಭಕ್ತಿತಃ ।
ಸ ಏಕದಾ ಚ ಭೂಪಾಲಃ ಕರ್ಪೂರಾಲೇಪಿತಂ ಶಿವಂ ॥ ೭ ॥

---

ಹಾಲು, ಬಟ್ಟೆಯಿಂದ ಶೋಧಿಸಿದ ನೀರು, ಇವುಗಳನ್ನು ಸಿದ್ಧಮಾಡಿ, ಅವುಗಳಿಂದ ಅಭಿಷೇಕವನ್ನು ಮಾಡಿದ ನಂತರ, ಪಚ್ಚಕರ್ಪೂರದಿಂದ ಕೂಡಿರುವ ಗಂಧಗಳಿಂದ ಶಿವಲಿಂಗವನ್ನು ಅನುಲೇಪನ ಮಾಡುತ್ತಿದ್ದನು.

೪-೭. ಅನಂತರದಲ್ಲಿ ಪರಮಾನ್ನವೇ ಮೊದಲಾದ ಅನ್ನಗಳು, ಅನೇಕ ವಿಧವಾದ ಭಕ್ಷ್ಯಗಳು. ಹಣ್ಣುಗಳು, ವ್ಯಂಜನ ಪದಾರ್ಥಗಳು ಇವುಗಳನ್ನು ನೀವೇದನ ಮಾಡಿ, ಸಕ್ಕರೆಯಿಂದ ಕೂಡಿದ ಹಾಲು, ಮೊಸರು, ಜೇನು, ಪರಿಮಳದ್ರವ್ಯಗಳಿಂದ ಕೂಡಿದ ಪಾನಕ, ಇವೇ ಮೊದಲಾದ ಪಾನೀಯಗಳನ್ನು ಒಪ್ಪಿಸಿದ ನಂತರ, ಕರ್ಪೂರ ಯುಕ್ತವಾದ ತಾಂಬೂಲವನ್ನು ಸಮರ್ಪಣೆ ಮಾಡಿ ಆರತಿಯನ್ನು ಎತ್ತಿ, ಸುಂದರೇಶ್ವರನ ಪೂಜೆಯನ್ನು ಭಕ್ತಿಯಿಂದ ಮಾಡುತ್ತಿದ್ದನು. ಹೀಗೆಯೇ ಪೂಜಿಸುತ್ತಿರುವಾಗ ಒಂದು ಕಾಲದಲ್ಲಿ ಪಚ್ಚಕರ್ಪೂರದ ಗಂಧದಿಂದ ಅನುಲಿಪ್ತವಾದ ಶಿವಲಿಂಗವನ್ನು ನೋಡಿ, ಕರ್ಪೂರ ಸುಂದರೇಶ್ವರನೆಂಬ ಹೆಸರಿನಿಂದ ಕರೆಯುತ್ತಿದ್ದನು.

ಆಲೋಕ್ಯ ಚಾಕರೋತ್ಪ್ರೀತ್ಯಾ ನಾಮ್ನಾ ಕರ್ಪೂರಸುಂದರಂ ।
ಕದಾಚಿತ್ಪೌರ್ಣಮಾಸ್ಯಾಂ ತು ಚೈತ್ರ್ಯಾಂ ಶಂಭೋಸ್ತು ಪೂಜನಂ ॥ ೮ ॥

ಚಂದ್ರಚಂದನಕಸ್ತೂರೀರೋಚನಾಕುಂಕುಮಾದಿಭಿಃ ।
ಸುಮನೋಭಿ ಸ್ಸುಗಂಧಾಭಿ ರನ್ಯೈ ರ್ವಿಭವವಿಸ್ತರೈಃ ॥ ೯ ॥

ಭೂಪಾಲೇ ಕರ್ತುಮುದ್ಯುಕ್ತೇ ಶಿವಭಕ್ತಶಿರೋಮಣೌ ।
ದೇವೇಂದ್ರೋ ಪ್ಯರ್ಹಣಾಂ ಕರ್ತುಂ ಸಮಾಗತ್ಯ ಸಸಂಭ್ರಮಂ ॥ ೧೦ ॥

ಅವಕಾಶ ಮಲಬ್ಧ್ವಾ ತು ವರಿವಸ್ಯಾಂ ಚ ತತ್ಕೃತಾಂ ।
ವಿಲೋಕ್ಯ ವಿಸ್ಮಿತೋ ಭೂತ್ವಾ ಚಿರಂ ತತ್ರೈವ ತಸ್ಥಿವಾನ್ ॥ ೧೧ ॥

ಸಮಾಪ್ತಾಯಾಂ ಸಪರ್ಯಾಯಾಂ ವಾಸವೋ ಪ್ಯತಿಭಕ್ತಿತಃ ।
ಸ್ನಾನಾದ್ಯಂ ನಿಯಮಂ ಸರ್ವಂ ಮಹಾತೀರ್ಥೇ ವಿಧಾಯ ಚ ॥ ೧೨ ॥

ಸೌವರ್ಣೈಃ ಪಂಕಜೈಃಸೌಮ್ಯೈಃ ಸೋಮೇಶಂ ಸಂಪ್ರಪೂಜ್ಯ ಚ ।
ಸಂಪ್ರಾಪ್ಯಾತ್ಮೀಯಭವನಂ ಸುಧರ್ಮಾಯಾಂ ಸುರಾಧಿಪಃ ॥ ೧೩ ॥

---

೮–೧೧. ಚೈತ್ರಶುದ್ಧ ಪೂರ್ಣಿಮಾ ದಿವಸದಲ್ಲಿ ಶಿವಭಕ್ತ ಶ್ರೇಷ್ಠನಾದ ಅಭಿಷೇಕಪಾಂಡ್ಯರಾಜನು ಹಾಲಾಸ್ಯೇಶ್ವರನನ್ನು ಪೂಜಿಸುವುದಕ್ಕಾಗಿ, ತನ್ನ ವೈಭವಕ್ಕನುಸಾರವಾಗಿ ಪಚ್ಚಕರ್ಪೂರ, ಕುಂಕುಮದಹೂವು, ಅನೇಕ ವಿಧವಾದ ಹೂವುಗಳು ಇವುಗಳನ್ನು ಸಿದ್ಧಪಡಿಸಿಕೊಂಡು ಪೂಜಿಸುತ್ತಿರುವ ಕಾಲಕ್ಕೆ ಸರಿಯಾಗಿ ಇಂದ್ರನು ಹಾಲಾಸ್ಯೇಶ್ವರನನ್ನು ಪೂಜಿಸುವುದಕ್ಕಾಗಿ ಅಲ್ಲಿಗೆ ಬಂದನು. ಅವನಿಗೆ ಅವಕಾಶವು ದೊರೆಯಲ್ಲಿಲ್ಲವಾದ ಕಾರಣ, ಆ ರಾಜನು ಮಾಡುವ ಪೂಜೆಯನ್ನು ಆಶ್ಚರ್ಯದಿಂದ ನೋಡುತ್ತಾ ಕೆಲವು ಕಾಲ ಸುಮ್ಮನಿದ್ದನು.

೧೨–೧೪. ಅಭಿಷೇಕಪಾಂಡ್ಯರಾಜನು ಪೂಜೆಯನ್ನು ಮಾಡಿದ ನಂತರ ಇಂದ್ರನು ಬಹಳ ಭಕ್ತಿಯಿಂದ,ಮಹಾತೀರ್ಥದಲ್ಲಿ ಸ್ನಾನಾದಿಗಳನ್ನು ಮಾಡಿಕೊಂಡು, ಮೃದುವಾಗಿಯೂ ಮತ್ತು ಮನೋಹರವಾಗಿಯೂ ಇರುವ ಚಿನ್ನದ ಹೂವುಗಳಿಂದ

ಅಧ್ಯತಿಷ್ಠದ್ಭದ್ರಪೀಠಂ ಚಿಂತಾಮಣಿವಿರಾಜಿತಂ ।
ತಸ್ಮಿನ್ ಕಾಲೇ ಜಲಾಧೀಶೋ ದೇವೇಂದ್ರಂ ದ್ರಷ್ಟುಮಾಯಯೌ ॥ ೧೪ ॥

ಪ್ರಣಮ್ಯ ತಂ ದೇವರಾಜಂ ಭೇಜೆ ನಿರ್ದಿಷ್ಟಮಾಸನಂ ।
ತದುಕ್ತಕುಶಲಪ್ರಶ್ನ ಸಂಭಾವಿತಉದಾರಧೀಃ ॥ ೧೫ ॥

ಜಲೇಶಃ ಸ್ತೋಷಯಾಮಾಸ ಸ್ತುತಿಭಿಶ್ಚ ಶತಕ್ರತುಂ ।
ಪುನರ್ವಿಲೋಕ್ಯ ತದ್ವಕ್ತ್ರಂ ಶ್ರಮಬಿಂದುವಿರಾಜಿತಂ ॥ ೧೬ ॥

ಸಸ್ಮಿತಃ ಪ್ರಾಹ ವೃತ್ರಾರಿಂ ವದ ಭೋ ಶ್ರಮಕಾರಣಂ ।
ಇತಿ ಸಂಪ್ರಾರ್ಥಿತೇ ತಸ್ಮಿನ್ ಜಲೇಶೇ ವಿಮಲಾಶಯೇ ॥ ೧೭ ॥

ವಕ್ತುಮಾರಭತೇ ಸರ್ವಂ ಶ್ರೀಹಾಲಾಸ್ಯೇಶವೈಭವಂ ।
॥ ಇಂದ್ರ ಉವಾಚ ॥
ಸುಂದರೇಶ ಇತಿ ಖ್ಯಾತೋ ಭೂತಲೇ ಪಾಂಡ್ಯಮಂಡಲೇ ॥ ೧೮ ॥

---

ಹಾಲಾಸ್ಯೇಶ್ವರನನ್ನು ಪೂಜಿಸಿ ಸ್ವರ್ಗಕ್ಕೆ ಹೋಗಿ, ತನ್ನ ಸುಧರ್ಮಾ ಎಂಬ ಸಭೆಯಲ್ಲಿ ಚಿಂತಾಮಣಿ ಎಂಬ ರತ್ನದಿಂದ ಪ್ರಕಾಶಿಸುತ್ತಿರುವ ಸಿಂಹಾಸನದಲ್ಲಿ ಕುಳಿತುಕೊಂಡು ಇರುವಾಗ ಜಲಾಧೀಶನಾದ ವರುಣನು ಇವನನ್ನು ನೋಡುವುದಕ್ಕಾಗಿ ಬಂದನು.

೧೫–೧೭. ವರುಣನು ಇಂದ್ರನಿಗೆ ನಮಸ್ಕಾರಮಾಡಿ ತನಗಾಗಿ ಸಿದ್ಧ ಮಾಡಿದ ಆಸನದಲ್ಲಿ ಕುಳಿತುಕೊಂಡನು. ಆಗ ಇಂದ್ರನು ಕುಶಲ ಪ್ರಶ್ನೆಗಳನ್ನು ಮಾಡಿದನು. ಅದಕ್ಕೆ ಸರಿಯಾದ ಪ್ರತ್ಯುತ್ತರವನ್ನು ಹೇಳಿ ಇಂದ್ರನನ್ನು ಸ್ತೋತ್ರ ಮಾಡಿ ಉದಾರವಾದ ಮನಸ್ಸಿನಿಂದ ವರುಣನು ಇಂದ್ರನಿಗೆ ಸಂತೋಷಪಡಿಸಿದನು. ಆಗ ಇಂದ್ರನ ಮುಖದಲ್ಲಿ ಬೆವರಿನ ಹನಿಗಳು ಬಂದಿರುವುದನ್ನು ವರುಣನು ಆಶ್ಚರ್ಯದಿಂದ ನೋಡಿ, " ಇಷ್ಟು ಆಯಾಸವಾಗಲು ಕಾರಣವೇನು ? " ಎಂದು ಪ್ರಶ್ನೆ ಮಾಡಿದನು. ಪರಿಶುದ್ಧವಾದ ಮನಸ್ಸುಳ್ಳ ವರುಣನು ಕೇಳಿದ ಪ್ರಶ್ನೆಗೆ ಇಂದ್ರನು ಹಾಲಾಸ್ಯೇಶ್ವರನ ಮಹಿಮೆಯನ್ನು ಶ್ಲಾಘಿಸುತ್ತಾ ಉತ್ತರವನ್ನು ಹೇಳಿದನು.

೧೮–೨೧. ಇಂದ್ರನು ಹೇಳಿದನು:—" ಪಾಂಡ್ಯದೇಶವು ಪೂರ್ವದಿಂದಲೂ ಪ್ರಸಿದ್ಧವಾಗಿರುವುದು. ಆ ದೇಶದಲ್ಲಿರುವ ಕದಂಬವನದ ಮಧ್ಯದಲ್ಲಿ ಸುಂದರೇಶ್ವರನೆಂಬ

ಕರೋತಿ ನಿತ್ಯಂ ಸಾನ್ನಿಧ್ಯಂ ಕದಂಬಾರಣ್ಯಮಧ್ಯಮೇ ।
ಅದೌ ಮಯಾರಾಧಿತಂ ತತ್ ಮೂಲಲಿಂಗಂ ಕೃತೇ ಯುಗೇ ॥ ೧೯ ॥

ಸಮರ್ಪಿತಸ್ಸತ್ಪ್ರಾಸಾದೋ ಗಜೈ ಸ್ಸಿಂಹೈರ್ವಿರಾಜಿತಃ ।
ಲಿಂಗದರ್ಶನಮಾತ್ರೇಣ ವೃತ್ರಹತ್ಯಾ ವಿನಶ್ಯತಿ ॥ ೨೦ ॥

ಭಕ್ತ್ಯಾ ಪಾಂಡ್ಯಮಹೀಪಸ್ಯ ತುಲ್ಯಾ ಭಕ್ತಿರ್ನ ಕುತ್ರಚಿತ್ ।
ಸುಂದರೇಶಸ್ಯ ಲಿಂಗಸ್ಯ ಲಿಂಗಂ ತುಲ್ಯಂ ನ ವಿದ್ಯತೇ ॥ ೨೧ ॥

ತಲ್ಲಿಂಗಾರ್ಚಾಪರೋ ಭೂತ್ವಾ ಗತೋಽಸ್ಮಿ ಪೃಥಿವೀಮಹಂ ।
ತತ್ರ ತೀರ್ಥೋತ್ತಮೇ ಸ್ನಾತ್ವಾ ರಾಕಾಯಾಂ ಮಧುಮಾಸಕೇ ॥೨೨॥

ತದುದ್ಭೂತೈಃ ಪಂಕಜೈಶ್ಚ ಸೌವರ್ಣೈಃ ಸುಂದರೇಶ್ವರಂ ।
ಸಾಂಬಮಾರಾಧ್ಯ ಸಂಸ್ತುತ್ಯ ಪ್ರಣಮ್ಯ ಪ್ರಾರ್ಥ್ಯಕಾಂಕ್ಷಿತಂ ॥ ೨೩ ॥

---

ಹೆಸರಿನಿಂದ ಇರುವ ಮೂಲಲಿಂಗವನ್ನು ನಾನು ಕೃತಯುಗದಲ್ಲಿ ಮೊದಲು ಪೂಜಿಸಿ ಆನೆ, ಸಿಂಹ ಇವುಗಳಿಂದ ಪ್ರಕಾಶಿಸುವ ಪ್ರಾಸಾದಾದಿಗಳನ್ನು ನಿರ್ಮಿಸಿದೆನು. ಆ ಶಿವ ಲಿಂಗದ ಆರಾಧನೆಯಿಂದ ಬ್ರಹ್ಮಹತ್ಯೆಯೇ ಮೊದಲಾದವುಗಳೆಲ್ಲವೂ ನಾಶ ವಾಗುವುವು. ದರ್ಶನಮಾತ್ರದಿಂದ ಪವಿತ್ರತೆಯನ್ನು ಉಂಟುಮಾಡುವ ಸುಂದರೇ ಶ್ವರನಿಗೆ ಸಮನಾದ ಶಿವಲಿಂಗವು ಭೂಮಿಯಲ್ಲಿ ಎಲ್ಲಿಯೂ ಇಲ್ಲವು. ಪಾಂಡ್ಯ ರಾಜನು ಹೊಂದಿರುವ ಶಿವಭಕ್ತಿಗೆ ಸಮನಾದ ಶಿವ ಭಕ್ತಿಯುಳ್ಳವರು ಎಲ್ಲಿಯೂ ಇಲ್ಲವು.

೨೨–೨೫. ಈಗ ನಾನು ಭೂಲೋಕಕ್ಕೆ ಆ ಶಿವಲಿಂಗವನ್ನು ಪೂಜಿಸು ವುದಕ್ಕಾಗಿ ಹೋಗಿದ್ದೆನು. ಮಾಘಮಾಸದ ಪೂರ್ಣಿಮೆಯಲ್ಲಿ ಉತ್ತಮವಾದ ತೀರ್ಥದಲ್ಲಿ ಸ್ನಾನವನ್ನುಮಾಡಿ ಚಿನ್ನದ ಕಮಲಗಳಿಂದ ಸುಂದರೇಶ್ವರನನ್ನು ಪೂಜಿಸಿ, ನಮಸ್ಕರಿಸಿ, ನನ್ನ ಇಷ್ಟಗಳು ನೆರವೇರುವಂತೆ ಪ್ರಾರ್ಥಿಸಿಕೊಂಡು, ಶಿವ

**ಯಾತೋಽಸ್ಮ್ಯಹಂ ಪುನಃ ಸ್ವರ್ಗಂ ಪೂಜಾಪೂರ್ಣಮನೋರಥಃ ।**
**ತಲ್ಲಿಂಗಸ್ಮರಣಾದೇವ ಮಹಾಪಾಪಭಯಂ ನ ಹಿ ॥ ೨೪ ॥**

**ತಸ್ಯ ದೇವೀ ಸುಮೀನಾಕ್ಷೀ ಸರ್ವಾಭೀಷ್ಟಪ್ರದಾಯಿನೀ ।**
**ತನ್ನಾಮಸ್ಮರಣಾದೇವ ಸರ್ವಾ ಸ್ಸಿಧ್ಯಂತಿ ಸಂಪದಃ ॥ ೨೫ ॥**

**ದೇವ್ಯಾಸ್ತು ಸನ್ನಿಧೌ ತೀರ್ಥಂ ಹೇಮಪದ್ಮಾಕರಂ ಶುಭಂ ।**
**ತಸ್ಮಿನ್ ಸಕೃತ್ಸ್ನಾನಮಾತ್ರಾ ಜ್ಜನಾನಾಂ ಪಾಪಿನಾಮಪಿ ॥೨೬ ॥**

**ಆಯು ರಾರೋಗ್ಯ ಮೈಶ್ವರ್ಯಂ ಸಂತತಿಶ್ಚ ಪ್ರವರ್ಧತೇ ।**
**ಹಾಲಾಸ್ಯಂ ನಾಮ ತತ್ಕ್ಷೇತ್ರಂ ಪ್ರವೇಶಾ ದಘನಾಶನಂ ॥ ೨೭ ॥**

**ಮಯಿ ಪ್ರವಿಷ್ಟೇ ತತ್ರಾಭೂದ್ವೃತ್ರಹತ್ಯಾತಿದೂರಗಾ ।**
**ತಸ್ಯ ಕ್ಷೇತ್ರಸ್ಯ ತೀರ್ಥಸ್ಯ ದೇವ್ಯಾ ಲಿಂಗವರಸ್ಯ ಚ ॥ ೨೮ ॥**

---

ಲಿಂಗದ ಆರಾಧನೆಯು ಪೂರ್ಣವಾದ ಕಾರಣ ನನ್ನ ಇಷ್ಟವು ನೆರವೇರಿದ್ದರಿಂದ ಸಂತೋಷವಾಗಿ ಈಗ ಸ್ವರ್ಗಕ್ಕೆ ಬಂದಿರುತ್ತೇನೆ. ಆ ಶಿವಲಿಂಗದ ಸ್ಮರಣೆಮಾಡಿದ ಮಾತ್ರದಿಂದಲೇ ಮಹಾಪಾತಕಗಳು ನಾಶವಾಗುವವು. ಪಾಪಗಳ ಭಯವು ಇರುವುದಿಲ್ಲ. ಆ ದೇವನ ಸಮೀಪದಲ್ಲಿರುವ ಮೀನಾಕ್ಷೀದೇವಿಯು ಎಲ್ಲರಿಗೂ ಎಲ್ಲಾ ಇಷ್ಟಸಿದ್ಧಿಗಳನ್ನುಂಟುಮಾಡುತ್ತಿರುವಳು. ಆ ಮೀನಾಕ್ಷೀದೇವಿಯು ಸ್ಮರಣೆ ಮಾತ್ರದಿಂದಲೇ ಸಕಲ ವಿಧವಾದ ಸಂಪತ್ತುಗಳು ಲಭಿಸುವವು.

೨೬–೨೮. ಮಿನಾಕ್ಷೀದೇವಿಯು ಸನ್ನಿಧಿಯಲ್ಲಿ ಇರುವ ಹೇಮಪದ್ಮಾಕರ ವೆಂಬ ತೀರ್ಥದಲ್ಲಿ ಒಂದು ಸಾರಿಯಾದರೂ ಸ್ನಾನಮಾಡಿದ ಜನರಿಗೆ ಅವರು ಪಾಪಿಗಳಾಗಿ ಇದ್ದಾಗ್ಯೂ ಆಯುರಾರೋಗ್ಯ ಐಶ್ವರ್ಯಗಳು ಹೆಚ್ಚುವುದಲ್ಲದೆ ಸಂತತಿಯೂ ವೃದ್ಧಿಯಾಗುವುದು· ಹಾಲಾಸ್ಯವೆಂಬ ಕ್ಷೇತ್ರವು ಪ್ರವೇಶಿಸಿದಮಾತ್ರಕ್ಕೆ ಪಾಪವನ್ನು ನಾಶಪಡಿಸುವುದು. ನಾನು ಅದನ್ನು ಪ್ರವೇಶಿಸಿದಕೂಡಲೇ ನನ್ನಲ್ಲಿದ್ದ ವೃತ್ರಹತ್ಯೆಯು ದೂರಕ್ಕೆ ಹೊರಟುಹೋಯಿತು. ಆ ಹಾಲಾಸ್ಯಕ್ಷೇತ್ರ, ಆ ಹೇಮ

ವಕ್ತುಂ ನ ಶಕ್ಯಂ ಮಾಹಾತ್ಮ್ಯಂ ವಾಚಸ್ಪತಿಮುಖೈರಪಿ ।
ಇತಿ ತತ್ಸದಸಿ ಪ್ರೋಕ್ತಂ ವಾಸವೇನ ಮಹಾತ್ಮನಾ ॥ ೨೯ ॥

ಶ್ರುತ್ವಾ ಲಿಂಗಾದಿಮಹಿಮಾಂ ಪುನಃ ಪ್ರಾಹ ಜಲಾಧಿಪಃ ।
ತವ ಸಂದರ್ಶನಂ ಕರ್ತುಂ ನಿರ್ಗತೇ ಮಯಿ ವೇಶ್ಮನಃ ॥ ೩೦ ॥

ಕಾಮಧೇನುಃ ಸಮಾಯಾತಿ ಸವತ್ಸಾ ಸರ್ವಕಾಮದಾ ।
ಪುನರ್ಮಾರ್ಗಯಾತಿಸೌಮ್ಯಾನಿ ದೃಷ್ಟಾನಿ ಶಕುನಾನಿ ಚ ॥ ೩೧ ॥

ತತ್ಫಲಂ ಪ್ರಾಪ್ತವಾನಸ್ಮಿ ಶ್ರುತ್ವಾ ಲಿಂಗಾದಿವೈಭವಂ ।
ಜಲೋದರೋ ಮಹಾರೋಗೋ ಮಾಂ ಬಾಧಯತಿ ಸರ್ವದಾ ॥ ೩೨ ॥

ಪರಿಹರ್ತುಂ ನ ಶಕ್ತೌ ತಂ ದಿವ್ಯಾವಪಿ ಭಿಷಗ್ವರೌ ।
ತದ್ರೋಗಪರಿಹಾರಾಯ ವದೋಪಾಯ ಮಯುತ್ನತಃ ॥ ೩೩ ॥

ಪದ್ಮಾಕರತೀರ್ಥ, ಆ ಮೀನಾಕ್ಷೀದೇವಿ, ಆ ಸುಂದರೇಶ್ವರ ಇವರ ಮಹಿಮೆಯನ್ನು ಇಷ್ಟೇ ಸರಿ ಎಂದು ಬೃಹಸ್ಪತಿಯೂ ಕೂಡ ಹೇಳಲು ಸಾಧ್ಯವಿಲ್ಲ." ಈ ರೀತಿಯಾಗಿ ಸುಧರ್ಮಾ ಎಂಬ ಸಭೆಯಲ್ಲಿ ಮಹಾತ್ಮನಾದ ಇಂದ್ರನು ಹೇಳುತ್ತಿರುವುದನ್ನು ವರುಣನು ಕೇಳಿದನು.

೩೦-೩೩. ಇಂದ್ರನ ಮಾತನ್ನು ವರುಣನು ಕೇಳಿ "ನಿನ್ನ ದರ್ಶನಕ್ಕಾಗಿ ನಾನು ಮನೆಯಿಂದ ಹೊರಕ್ಕೆ ಹೊರಡುವ ಸಮಯಕ್ಕೆ ಸರಿಯಾಗಿ ಕಾಮಧೇನುವು ಕೇಳಿದ ಇಷ್ಟವನ್ನು ಕೊಡುವುದಾಗಿ ತನ್ನ ಕರುವಿನೊಡನೆ ನನಗೆ ಎದುರಾಗಿ ಬಂತು. ನಾನು ನೋಡಿದಾಗ ಅದು ಬಹಳ ಸಂತೋಷದಿಂದ ಕೂಡಿತ್ತು. ನನಗೆ ಅನೇಕ ಶುಭ ಶಕುನಗಳಾದುವು. ಇವೆಲ್ಲಕ್ಕೂ ನೀನು ಹೇಳಿದ ಶಿವಲಿಂಗದ ಮಹಿಮೆಯನ್ನು ಕೇಳಿರುವುದೇ ಫಲವಾಗಿರುವುದು. ಜಲೋದರವೆಂಬ ರೋಗವು ನನ್ನನ್ನು ಯಾವಾಗಲೂ ಪೀಡಿಸುತ್ತಿರುವುದು. ಅದರಿಂದ ಉಂಟಾದ ತೊಂದರೆಯನ್ನು ತಪ್ಪಿಸಲು ದೇವವೈದ್ಯರಾದ ಅಶ್ವಿನೀ ದೇವತೆಗಳಿಗೂ ಸಾಧ್ಯವಾಗಲಿಲ್ಲ. ನನಗೆ ಈ ಜಲೋದರರೋಗವು ಹೋಗುವುದಕ್ಕೆ ತಕ್ಕ ಸುಲಭವಾದ ಉಪಾಯವನ್ನು ಹೇಳು" ಎಂದು ಇಂದ್ರನ ಸಂಗಡ ಹೇಳಿದನು.

ಇತಿ ಶ್ರುತ್ವಾ ದೇವರಾಜೋಃ ವರುಣಸ್ಯ ವಚಾಂಸಿ ಚ ।
ಪ್ರಾಹ ಪ್ರಗಲ್ಭಯಾ ವಾಚಾ ಸುಧಾಸಾರಸಮಾನಯಾ ॥ ೩೪ ॥

॥ ಇಂದ್ರ ಉವಾಚ ॥

ಯೇ ಮಹಾವ್ಯಾಧಿಸಂತಪ್ತಾ ಯೇ ಮಹಾಪಾಪಕಾರಿಣಃ ।
ಅಪಮೃತ್ಯುಪ್ರಭೀತಾ ಯೇ ಯೇ ಭೀತಾಃ ಕಾಲಮೃತ್ಯುತಃ ॥ ೩೫ ॥

ತೈಸ್ಸಂಸೇವ್ಯೋ ಮಹಾದೇವೋ ಹಾಲಾಸ್ಯೇಶೋ ದಯಾನಿಧಿಃ ।
ತ್ರಿವಿಧೈಃ ಕರಣೈಃ ಶುದ್ಧೈರ್ದ್ರವ್ಯೈಃ ಶಕ್ತ್ಯಾತಿಭಕ್ತಿತಃ ॥ ೩೬ ॥

ತಲ್ಲಿಂಗಸ್ಯ ಪ್ರಭಾವ್ಯಂ ಚ ಭಕ್ತಿಂ ಪಾಂಡ್ಯನೃಪಸ್ಯ ಚ ।
ಪರೀಕ್ಷ್ಯ ಪಶ್ಚಾದ್ವಾರೀಶ ತಲ್ಲಿಂಗಾರಾಧನಂ ಕುರು ॥ ೩೭ ॥

ತದನುಗ್ರಹತ ಸ್ಸದ್ಯಸ್ತ್ವದೀಯಸ್ತು ಜಲೋದರಃ ।
ಮಹಾವ್ಯಾಧಿಃ ಶಮಂ ಯಾತಿ ದಾವಾಗ್ನಿರಿವ ವರ್ಷತಃ ॥ ೩೮ ॥

---

೩೪–೩೮. ದೇವರಾಜನಾದ ಇಂದ್ರನು ವರುಣನ ಮಾತುಗಳನ್ನು ಕೇಳಿ, ಅಮೃತಕ್ಕೆ ಸಮನಾದ (ಹಿತಕರವಾದ) ಮೃದುವಾದ ಮಾತುಗಳನ್ನು ಹೇಳಿದನು.

ಇಂದ್ರನು ಹೇಳಿದನು:— " ಮಹಾವ್ಯಾಧಿಗಳಿಂದ ಕಷ್ಟಪಡುತ್ತಿರುವವರೂ, ಮಹಾಪಾಪಗಳನ್ನು ಮಾಡಿರುವವರೂ, ಅಪಮೃತ್ಯುವಿನಿಂದ ಹೆದರಿರುವವರೂ, ಕಾಲಮೃತ್ಯುವಿನಿಂದ ಹೆದರಿಕೆಯುಳ್ಳವರೂ, ಇವರೆಲ್ಲರೂ ದಯಾನಿಧಿಯಾದ ಹಾಲಾಸ್ಯೇಶ್ವರನನ್ನು (ಆರಾಧಿಸಬೇಕು) ಭಕ್ತಿಯಿಂದ ಸೇವಿಸಬೇಕು. ತ್ರಿಕರಣಗಳಿಂದ ಶುದ್ಧರಾಗಿ, ತಮ್ಮ ಶಕ್ತ್ಯನುಸಾರವಾಗಿ ಹೆಚ್ಚಾದ ಭಕ್ತಿಯಿಂದ ಹಾಲಾಸ್ಯೇಶ್ವರನ ಸೇವೆಯನ್ನು ಮಾಡಬೇಕು. ಎಲೈ ಜಲಾಧಿಪನಾದ ವರುಣನೇ ಕೇಳು. ನೀನು ಪಾಂಡ್ಯರಾಜನ ಭಕ್ತಿಯನ್ನೂ, ದೇವದೇವನಾದ ಹಾಲಾಸ್ಯೇಶ್ವರನ ಮಹಿಮೆಯನ್ನೂ ಪರೀಕ್ಷಿಸಿ ನೋಡಿ ಅನಂತರ ಸುಂದರೇಶ್ವರನನ್ನು ಸೇವಿಸು. ನೀನು ಮಾಡುವ ಹಾಲಾಸ್ಯೇಶ್ವರನ ಆರಾಧನೆಯಿಂದ ನೀನು ದೇವ ದೇವನ ಅನುಗ್ರಹಕ್ಕೆ ಪಾತ್ರನಾಗುತ್ತೀಯೆ. ಅದರಿಂದ ನಿನ್ನ ಜಲೋದರ ರೋಗವು ದೊಡ್ಡ ಮಳೆಯಿಂದ ಕಾಡುಕಿಚ್ಚು ಹೋಗುವಂತೆ ಹೋಗುವುದು."

ಇತಿ ಶ್ರುತ್ವಾ ಶಕ್ರವಾಕ್ಯ ಮಭಿಸಂಧ್ಯ ಮುಹುರ್ಮುಹುಃ ।
ಪುರಂದರ ಮಥಾಪೃಚ್ಛ್ಯನಿಜಲೋಕಂ ಮುದಾ ಯಯೌ ॥ ೩೯ ॥

ತತಃ ಕದಾಚಿದ್ವರುಣೋ ಹಾಲಾಸ್ಯೇಶಸ್ಯ ವೈಭವಂ ।
ಉತ್ಸಾಹಂ ಪಾಂಡ್ಯಭೂಪಸ್ಯ ಭಕ್ತಿಂ ಚ ಪರಮೇಶ್ವರೇ ॥ ೪೦ ॥

ದ್ರಷ್ಟುಕಾಮೋ ಗ್ರಸೇತ್ಯಬ್ಧಿಂ ಶಶಾಸ ಮಧುರಾಪುರೀಂ ।
ತಚ್ಛ್ರುತ್ವಾ ಸ್ವಾಮಿನೋ ವಾಕ್ಯಂ ಸಹಸಾ ಸಂಭ್ರಮಾನ್ವಿತಂ ॥ ೪೧ ॥

ಭೀಮಫೇನಿಲಸಂಯುಕ್ತಂ ತರಂಗಾಲಂಕೃತಿಕೃತಿಂ ।
ವೇಗೋತ್ಕ್ಷಿಪ್ತಾಹಿಸಂಘಾತಮುಲ್ಲಸಚ್ಛಫರಾಕುಲಂ ॥ ೪೨ ॥

ಉದ್ಯನ್ಮಣಿಪ್ರಭಾಜಾಲಸ್ಫುರಿತಾಖಿಲವೀಚಿಮತ್ ।
ಪ್ರಸಸಾರ ಜಲಂ ಸದ್ಯಃ ಪಯೋಧೇ ರ್ಭೂಮಿಮಂಡಲೇ ॥ ೪೩ ॥

---

೩೯–೪೧. ಆಗ ವರುಣನು ಇಂದ್ರನ ಮಾತನ್ನು ಕೇಳಿ ಬಹುವಾಗಿ ಶ್ಲಾಘಿಸಿ ಸಂತೋಷದಿಂದ ಇಂದ್ರನ ಸಮ್ಮತಿಯನ್ನು ಪಡೆದು ತನ್ನ ಲೋಕಕ್ಕೆ ಹೋದನು. ಅನಂತರದಲ್ಲಿ ಅವನು ಹಾಲಾಸ್ಯೇಶ್ವರನ ಮಹಿಮೆಯನ್ನೂ ಪಾಂಡ್ಯರಾಜನ ಭಕ್ತಿಯನ್ನೂ ಪರೀಕ್ಷಿಸುವುದಕ್ಕಾಗಿ ಸಮುದ್ರನನ್ನು ಕರೆದು " ನೀನು ಮಧುರಾನಗರವನ್ನು ಮುಳುಗಿಸು" ಎಂದು ಅಪ್ಪಣೆ ಮಾಡಿದನು. ಸಮುದ್ರನು ತನ್ನ ಪ್ರಭುವಿನ ಮಾತನ್ನು ಕೇಳಿ, ನೀರನ್ನು ಮೇಲಕ್ಕೆ ಎಬ್ಬಿಸಿಕೊಂಡು ದಡವನ್ನು ಮೀರಿ ತೆರೆಗಳ ಮೂಲಕವಾಗಿ ಭೂಮಿಯ ಮೇಲೆ ಬರಲುದ್ಯುಕ್ತನಾದನು.

೪೨–೪೩. ಆಗ ಸಮುದ್ರದಿಂದ ಭಯಂಕರವಾದ ನೊರೆಗಳಿಂದ ಕೂಡಿದ ತೆರೆಗಳು ಬರಲು ಪ್ರಾರಂಭವಾಯಿತು. ಅವುಗಳಲ್ಲಿ ಹಾವುಗಳೂ, ಮೀನುಗಳೂ, ಮೇಲೆ ಮೇಲೆ ಬರುತ್ತಿದ್ದವು. ಸೂರ್ಯನು ಉದಯಿಸುವಾಗ ಅವನ ಕಿರಣಗಳು ಇರುವಂತೆ

ದೇವಾಸ್ಸಿದ್ಧಾಶ್ಚ ಗಂಧರ್ವಾ ಶ್ಚಾರಣಾ ಅಪಿ ಮಾನವಾಃ ।
ಪುಣ್ಯವೃದ್ಧ್ಯೈ ಚ ಭೋಗಾರ್ಥಂ ಮೋಕ್ಷಾರ್ಥಂ ನಿವಸಂತಿ ಯೇ ॥ ೪೪ ॥

ಹಾಲಾಸ್ಯಕ್ಷೇತ್ರಮಹಿಮಾಂ ಜ್ಞಾತ್ವಾಮ್ನಾಯೇಷು ಘೋಷಿತಾಂ ।
ಜಲಪ್ರವಾಹಂ ತೇ ಸರ್ವೇ ದೃಷ್ಟ್ವಾ ತು ಭಯವಿಹ್ವಲಾಃ ॥ ೪೫ ॥

ಲಿಂಗಮೂರ್ತಿಧರಂ ದೇವಂ ಸಮಸ್ತದುರಿತಾಪಹಂ ।
ಭಕ್ತವತ್ಸಲ ಮೀಶಾನಂ ಶಂಕರಂ ಸೋಮಸುಂದರಂ ॥ ೪೬ ॥

ಶಂಭುಂ ಶಶಾಂಕಶಕಲಶೇಖರಂ ಶರಣಂ ಗತಾಃ ।
ಅಕಾಲೇ ಗ್ರಸತೇ ಭೂಮಿಂ ಪಯೋಧಿಃ ಪಾಲಯ ಪ್ರಭೋ ॥ ೪೭ ॥

ತೂಷ್ಣೀಂ ತಿಷ್ಠಸಿ ಚೇತ್ಕ್ಷಿಪ್ರಂ ವಿನಷ್ಟಾನ್ವಿದ್ಧಿ ನೋಽಖಿಲಾನ್ ।
ಇತ್ಯುಕ್ತ್ವಾ ಭೀತಮನಸಾ ಕೃತ್ವಾ ನತಿ ಮವಸ್ಥಿತಾಃ ॥ ೪೮ ॥

---

ಕೆಂಪು ಕಾಂತಿಯುಳ್ಳ ಅಲೆಗಳು ಉಬ್ಬಿ ಉಬ್ಬಿ ಬರುತ್ತಿದ್ದವು. ದೇವತೆಗಳೂ, ಸಿದ್ಧರೂ, ಗಂಧರ್ವರೂ, ಮನುಷ್ಯರೂ, ಚಾರಣರೂ, ಪುಣ್ಯಕ್ಷೇತ್ರವಾದ, ಶಾಸ್ತ್ರಪ್ರಸಿದ್ಧವಾದ, ಹಾಲಾಸ್ಯ ಕ್ಷೇತ್ರದಲ್ಲಿ ತಮ್ಮ ಪುಣ್ಯವನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ತಪಸ್ಸನ್ನು ಇತರರು ಆಚರಿಸುವ ಎಲ್ಲರೂ ನೀರಿನ ಆ ಪ್ರಕಾರವಾದ ಪ್ರವಾಹವನ್ನು ನೋಡಿ ಹೆದರಿಕೊಂಡು ಇದ್ದರು.

೪೬-೪೮. ನೀರಿನ ಪ್ರವಾಹವು ಹೀಗೆಯೇ ಹೆಚ್ಚುತ್ತಿರುವುದನ್ನು ನೋಡಿ ಶಿವಲಿಂಗದ ಆಕಾರವನ್ನು ಧರಿಸಿಕೊಂಡು, ಪಾಪಗಳೆಲ್ಲವನ್ನೂ ನಾಶಮಾಡುತ್ತಾ, ಭಕ್ತರಲ್ಲಿ ಪ್ರೀತಿಯುಳ್ಳವನಾಗಿ, ಶಂಕರ, ಸೋಮಸುಂದರನೆಂದು ಹೆಸರನ್ನು ಧರಿಸಿ, ಅರ್ಧಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವ ಶಂಭುವನ್ನು ಅವರು ಶರಣು ಹೊಂದಿ, "ಎಲೈ ಪ್ರಭುವೆ ಇದು ಪ್ರಳಯಕಾಲವಾಗದೆ ಇದ್ದಾಗ್ಯೂ ಸಮುದ್ರವು ಭೂಮಿಯನ್ನು ಮುಳುಗಿಸುವುದು. ನೀನು ಉದಾಸೀನನಾಗಿದ್ದರೆ ನಾವೆಲ್ಲರೂ ನಾಶವಾಗುವುದು ಖಂಡಿತವು" ಎಂದು ಹೇಳುತ್ತಾ ಹಾಲಾಸ್ಯೇಶ್ವರನಿಗೆ ನಮಸ್ಕಾರವನ್ನು ಮಾಡಿ ಸುಮ್ಮನೆ ನಿಂತಿದ್ದರು.

ತದಾ ಪಾಂಡ್ಯೋ ಭಯಾವಿಷ್ಟಚೇತಾ ಸ್ಸತ್ವರ ಮುತ್ಥಿತಃ ।
ದೇವಸ್ಯ ಸನ್ನಿಧಿಂ ಪ್ರಾಪ್ಯ ಪ್ರಣಿಪತ್ಯ ಪುನಃ ಪುನಃ　　　　॥ ೪೯ ॥

ದೇವದೇವ ಕೃಪಾರಾಶೇ ಜಗದುತ್ಪತ್ತಿಕಾರಣ ।
ಜಗತ್ಪಾಲನಸಂಹಾರಕರ ಭಕ್ತಾರ್ತಿ ಭಂಜನ　　　　॥ ೫೦ ॥

ಸಮುದ್ರಜಲಸಂಭೂತಾದ್ಭಯಾ ತ್ಸರ್ವಾಃ ಪ್ರಜಾಶ್ಚ ಮಾಂ ।
ಭಗವನ್ ಪಾಹಿ ಪಾಹೀತಿ ಕಾಲಕೂಟಾ ದ್ಯಥಾಮರಾನ್　　　　॥ ೫೧ ॥

ಏವಂ ಸ್ತುತ್ವಾ ಮಹೇಶಾನಂ ಪ್ರಣತೋ ಭೂತ್ ಸ ಪಾಂಡ್ಯರಾಟ್ ।
ಪ್ರಣತಾರ್ತಿಹರೋ ದೇವಸ್ತೇಷಾಂ ದೃಷ್ಟ್ವಾ ಭಯಂ ಮಹತ್　　　　॥ ೫೨ ॥

ಸ್ವಕಪರ್ದಾಗ್ರತ ಸ್ಸದ್ಯ ಶ್ಚತುರೋಽಥ ವಲಾಹಕಾನ್ ।
ಉತ್ಪಾಟ್ಯ ಪ್ರೇಷಯಾಮಾಸ ಪಿಬಂತ್ವಭ್ಯಾಗತಂ ಜಲಂ　　　　॥ ೫೩ ॥

---

೪೯–೫೨. ಅಭಿಷೇಕ ಪಾಂಡ್ಯರಾಜನೂ ಕೂಡ ಭಯವುಳ್ಳ ಮನಸ್ಸಿನಿಂದ ಬೇಗನೆ ಎದ್ದು, ಹಾಲಾಸ್ಯೇಶ್ವರನ ಹತ್ತಿರಕ್ಕೆ ಬಂದು, ಪದೇ ಪದೇ ನಮಸ್ಕಾರಗಳನ್ನು ಮಾಡಿ “ ಜಗತ್ತಿನ ಉತ್ಪತ್ತಿಗೆ ಕಾರಣನಾದ ಎಲೈ ದೇವ ದೇವನೆ, ದಯಾನಿಧಿಯೇ, ಜಗತ್ತಿನ ರಕ್ಷಣ, ಸಂಹಾರಗಳನ್ನು ನೀನು ಮಾಡುತ್ತಿರುವೆ. ಭಕ್ತರ ಸಂಕಟಗಳನ್ನು ಪರಿಹರಿಸುತ್ತೀಯೆ. ನಾವೆಲ್ಲರೂ ಸಮುದ್ರದ ನೀರಿನ ಹೆದರಿಕೆಯಿಂದ ಸಂಕಟಪಡುತ್ತಿರುವೆವು. ನೀನು ವಿಷದ ಭಯದಿಂದ ದೇವತೆಗಳನ್ನು ರಕ್ಷಿಸಿದಂತೆ, ಪ್ರಜೆಗಳೆಲ್ಲರನ್ನೂ ನನ್ನನ್ನೂ ರಕ್ಷಿಸು ” ಎಂದು ಹೇಳುತ್ತಾ ನಮಸ್ಕರಿಸಿದನು. ನಮಸ್ಕಾರ ಮಾಡಿದವರ ಭಯವನ್ನು ಪರಿಹರಿಸುವ ದೇವ ದೇವನು ಅವರ ಭಯವನ್ನು ತಿಳಿದುಕೊಂಡನು.

೫೩–೫೫. ಆಗ ಸೋಮಸುಂದರೇಶ್ವರನು ತನ್ನ ಜಡೆಯಿಂದ ನಾಲ್ಕು ಮೇಘಗಳನ್ನು ಕರೆದು “ಭೂಮಿಯಮೇಲೆ ಉಬ್ಬಿ ಬರುತ್ತಿರುವ ನೀರನ್ನು ನೀವು ಕುಡಿಯಿರಿ” ಎಂದು ಆಜ್ಞೆಯನ್ನು ಮಾಡಿ ಅವುಗಳನ್ನು ಕಳುಹಿಸಿದನು. ಈ ಪ್ರಕಾರದಿಂದ ಇರುವ

ಈಶಾಜ್ಞಾವಚನಂ ಶ್ರುತ್ವಾ ಪಪು ಸ್ತೇ ತತ್ಕ್ಷಣಾಜ್ಜಲಂ ।
ದೃಷ್ಟ್ವೈತತ್ಕರ್ಮ ರಾಜಾ ಚ ಜನಾಸ್ಸರ್ವೇಽತಿವಿಸ್ಮಿತಾಃ ॥ ೫೪ ॥

ಸಮುದ್ರಜಲಸಂಭೂತಾಂ ಭೀತಿಂ ತ್ಯಕ್ತ್ವಾ ನೃಪಾದಯಃ ।
ಹಾಲಾಸ್ಯೇಶಸ್ಯ ಮಾಹಾತ್ಮ್ಯಂ ಭಕ್ತವತ್ಸಲ ಮಸ್ತುವರ್ ॥ ೫೫ ॥

ಏವ ಮಷ್ಟಾದಶೀಂ ಲೀಲಾಂ ಯಃ ಶೃಣೋತಿ ಸಕೃನ್ನರಃ ।
ಸಮಸ್ತಾಪದ್ವಿನಿರ್ಮುಕ್ತ ಇಹಾಮುತ್ರ ಸುಖೀ ಭವೇತ್ ॥ ೫೬ ॥

ಇತಿ ಶ್ರೀ ಸ್ಕಾಂದ ಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಮೇಘೈಃ ಸಾಗರಪಾನಂ ನಾಮ
ಚತುರ್ವಿಂಶೋಽಧ್ಯಾಯಃ

---

ಜಗದೀಶನ ಆಜ್ಞೆಯನ್ನು ಕೇಳಿದ ಕೂಡಲೆ ಆ ಮೋಡಗಳು ನೀರನ್ನೆಲ್ಲವನ್ನೂ ಹೀರಿ ಬಿಟ್ಟವು. ಅಭಿಷೇಕ ಪಾಂಡ್ಯರಾಜನೂ ಜನರೂ ಎಲ್ಲರೂ ಇದನ್ನು ನೋಡಿ ಆಶ್ಚರ್ಯ ಪಟ್ಟರು. ಸಮುದ್ರದ ನೀರಿನಿಂದ ಉಂಟಾದ ಭಯವನ್ನು ಬಿಟ್ಟು ರಾಜನೇ ಮೊದ ಲಾದವರು ಭಕ್ತವತ್ಸಲನಾದ ಹಾಲಾಸ್ಯೇಶ್ವರನ ಮಹಿಮೆಯನ್ನು ಹೊಗಳಿದರು.

೫೬. ಹಾಲಾಸ್ಯೇಶ್ವರನ ಈ ಪ್ರಕಾರವಾದ ಹದಿನೆಂಟನೆಯ ಲೀಲೆಯನ್ನು ಒಂದು ಸಾರಿಯಾದರೂ ಕೇಳಿದವನು ತನ್ನ ಎಲ್ಲಾ ವಿಧವಾದ ಪಾಪಗಳನ್ನು ಕಳೆದು ಕೊಂಡು ಇಹಪರಗಳಲ್ಲಿ ಸುಖವನ್ನು ಹೊಂದುವನು.

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯೇಶ್ವರ ಮಾಹಾತ್ಮ್ಯೆ
ಯಲ್ಲಿ ಮೇಘಸಾಗರಪಾನವೆಂದು ಹೆಸರುಳ್ಳ ಇಪ್ಪತ್ತನಾಲ್ಕನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥
॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ
## ಪಂಚವಿಂಶೋಽಧ್ಯಾಯಃ



॥ ಅಗಸ್ತ್ಯ ಉವಾಚ ॥

ಅಥ ವೃಷ್ಟಿಭಯಾತ್ತತ್ರ ಹಾಲಾಸ್ಯೇಶಃ ಕೃಪಾಲಯಃ ।
ಯಯಾ ಚ ಲೀಲಯಾ ಸರ್ವಾನ್ ಜನಾನ್ ರಕ್ಷತಿ ತಾಂ ಪರಾಂ ॥ ೧ ॥

ಲೀಲಾಂ ಶೃಣುಧ್ವಂ ವಿಪೇಂದ್ರಾ ಅದ್ಭುತಾ ಮಘನಾಶಿನೀಂ ।
ಪಯೋಧಿ ಮರ್ಧಸಲಿಲಂ ದೃಷ್ಟ್ವಾ ಚಾಮರ್ಷಸಂಯುತಃ ॥ ೨ ॥

ಕೋಪೋಪರಕ್ತನೇತ್ರಾಂತೋ ಭೃಕುಟೀಭೀಷಣಾನನಃ ।
ವೀಳಾವಿಷಾದಸಮ್ಮಿಶ್ರವಿಹಿತಾಕುಲಮಾನಸಃ ॥ ೩ ॥

---

### ಇಪ್ಪತ್ತೈದನೆಯ ಅಧ್ಯಾಯವು.

೧. ಅಗಸ್ತ್ಯಋಷಿಯು ಹೇಳಿದನು:—" ಬಹಳ ದಯಾಶಾಲಿಯಾಗಿರುವ ಹಾಲಾಸ್ಯೇಶ್ವರನು ಮಳೆಯ ಭಯದಿಂದ ಕಷ್ಟಪಡುತ್ತಿದ್ದ ಜನಗಳೆಲ್ಲರನ್ನೂ ರಕ್ಷಿಸಿದ ಪಾಪ ನಾಶಕವಾದ ಮತ್ತು ಆಶ್ಚರ್ಯಕರವಾದ ಲೀಲೆಯನ್ನು ಹೇಳುವೆನು ನೀವೆಲ್ಲರೂ ಕೇಳಿರಿ.

೨–೪. ಹಾಲಾಸ್ಯೇಶ್ವರನು ಸಮುದ್ರದಿಂದ ಉಂಟಾದ ತೊಂದರೆಯನ್ನು ತಪ್ಪಿಸುವುದಕ್ಕೆ ಮಾಡಿದ ಉಪಾಯದಿಂದ ಸಮುದ್ರದ ನೀರು ಮೊದಲು ಇದ್ದದ ಕ್ಕಿಂತಲೂ ಅರ್ಧಮಟ್ಟಿಗೆ ಕಡಿಮೆಯಾಯಿತು. ವರುಣನಿಗೆ ಇದನ್ನು ನೋಡಿದ

**ಪುಷ್ಕಲಾವರ್ತಕಾದ್ಯಾಂಶ್ಚ ಚತುರೋ ಮೇಘನಾಯಕಾನ್ ।**
**ಆಹೂಯ ವರ್ಷತೇತ್ಯಾಹ ವರುಣೋತೀವ ವಿಸ್ಮಿತಃ ॥ ೪ ॥**

**ತದಾ ಜಲಧರಾ ಸ್ಸದ್ಯ ಸ್ತದಾಜ್ಞಾಜಾತಸಾಧ್ವಸಾಃ ।**
**ಗಣೈರಶೇಷೈ ರ್ಮೇಘಾನಾಂ ದಿಗಂತರಸಮಾಗತೈಃ ॥ ೫ ॥**

**ಉದಜೃಂಭಂತ ಸಹಸಾ ಮಧುರಾಯಾಸ್ಸಮೀಪತಃ ।**
**ಘನೀಕೃತಘನಚ್ಛನ್ನ ಮಂಧೀಕೃತದಿಗಂತರಂ ॥ ೬ ॥**

**ಸಹಸಾ ದುರ್ದಿನ ಮಭೂತ್ ಸರ್ವೇಷಾಂ ದುರ್ದಿನಂ ತದಾ ।**
**ಚಪಲಾಜಾತಸಂಜಾತಧ್ವಾಂತಾಭಾವಾತಿವೇಗಿನೀ ॥ ೭ ॥**

---

ಮಾತ್ರದಿಂದಲೇ ಕೋಪವೂ ಹೆಚ್ಚಾಯಿತು. ಅವನು ಕೋಪದಿಂದ ಕಣ್ಣುಗಳನ್ನು ಕೆಂಡದ ಹಾಗೆ ಕೆರಳಿಸಿಕೊಂಡು, ಹುಬ್ಬು ಗಂಟುಹಾಕಿದ ಮುಖವುಳ್ಳವನಾಗಿ ನೋಡಿದವರಿಗೆ ಭಯವನ್ನು ಉಂಟುಮಾಡುವಂತೆ ಇದ್ದನು. ಅವನಿಗೆ ತನ್ನ ಕೆಲಸವು ಕೆಟ್ಟದ್ದಕ್ಕಾಗಿ ನಾಚಿಕೆಯೂ, ದುಃಖವೂ ಉಂಟಾದ ಕಾರಣ ಇವೆರಡರಿಂದಲೂ ಕೂಡಿದ ಮನಸ್ಸುಳ್ಳವನಾಗಿ ಆವನು ಪುಷ್ಕಲ, ಆವರ್ತಕ ಎಂಬ ಇವೇ ಮೊದಲಾದ ಹೆಸರುಳ್ಳ ನಾಲ್ಕು ಜನ ಮೇಘಾಧಿಪತಿಗಳನ್ನು ಕರೆದು "ನೀವು ಬಲವಾಗಿ ಮಳೆಯನ್ನು ಸುರಿಸಿ" ಎಂದು ಅಪ್ಪಣೆ ಮಾಡಿದನು.

೫-೭. ಅವನ ಅಪ್ಪಣೆಯಾದ ಕೂಡಲೆ, ತಮ್ಮ ಪ್ರಭುವಾದ ವರುಣನ ಆಜ್ಞೆಗೆ ಹೆದರಿ ಮೋಡಗಳು ತಮ್ಮ ತಮ್ಮ ಪರಿವಾರಗಳೆಲ್ಲವನ್ನೂ ಬರಮಾಡಿಕೊಂಡು ದಿಕ್ಕುಗಳ ಕೊನೆಯಿಂದ ಬಂದ ಅವರೊಡನೆ ಸೇರಿಕೊಂಡು ಮಧುರಾನಗರದ ಹತ್ತಿರದಲ್ಲಿ ತಮ್ಮ ಸಾಮರ್ಥ್ಯವನ್ನು ತೋರಿಸಲು ಪ್ರಾರಂಭಿಸಿದವು. ಆಗ ಆ ಪ್ರದೇಶವೆಲ್ಲವೂ ದಟ್ಟವಾದ ಮೋಡಗಳಿಂದ ವ್ಯಾಪ್ತವಾಯಿತು. ದಿಕ್ಕುಗಳೆಲ್ಲದರಲ್ಲಿಯೂ ಕತ್ತಲೆಯು ಕವಿಯಿತು. ಸೂರ್ಯನ ಕಿರಣವೇ ಬೀಳಲು ಅವಕಾಶವಿಲ್ಲದಿರುವ ದುರ್ದಿನವೆಂಬುದು ಸಾರ್ಥಕವಾಗಿ ಎಲ್ಲರಿಗೂ ಕೆಟ್ಟ ದಿನವಾಗಿ ಪರಿಣಮಿಸಿತು. ಆ ಕಾಲದಲ್ಲಿ ವೇಗವಾದ ಮಿಂಚುಗಳು ಆ ಕ್ಷಣದಮಟ್ಟಿಗೆ ಕತ್ತಲೆಯನ್ನು ನಾಶಮಾಡುತ್ತಿದ್ದವು.

ಅಂಬುದಾನ್ಯೋನ್ಯಸಂಘಟ್ಟಜಾತಾಗ್ನಿಕಣಸಂಕುಲಾ ।
ನಿರಂತರಿತನಿರ್ಘೋಷಬಧಿರೀಕೃತತಿಗ್ಗಜಾ ॥ ೮ ॥

ಸ್ಫಾಟಿಕಸ್ತಂಭಸಂಕಾಶಪರಿಷ್ಕೃತಪಯಃ ಪ್ರಭಾ ।
ಘನೋಪಲಸಮೂಹೇನ ಕಲಿತಾವನಿಮಂಡಲಾ ॥ ೯ ॥

ಅತಿವೃಷ್ಟಿಶ್ಚ ಸಂಜಾತಾ ಸರ್ವೇಷಾಮತಿಭೀತಿದಾ ।
ತಾಂ ದೃಷ್ಟ್ವಾ ಪೂರ್ವವದ್ಭೀತಾ ಜನಾ ಸ್ಸರ್ವೇ ಸಪಾರ್ಥಿವಾಃ ॥ ೧೦ ॥

ಅಶೇಷಜಗದಾಧಾರ ಮಹಾಲಿಂಗಸ್ವರೂಪಿಣಃ ।
ಸಮಸ್ತಭಯಸಂಹರ್ತು ಸ್ಸರ್ವಸಂಪತ್ಪ್ರದಾಯಿನಃ ॥ ೧೧ ॥

---

೮-೧೦. ಮೋಡಗಳು ಒಂದಕ್ಕೊಂದು ಉಜ್ಜುವುದರಿಂದ ಬೆಂಕಿಯ ಕಿಡಿಗಳು ಹೊರಡುತ್ತಿದ್ದವು. ಮೋಡಗಳಿಂದ ಉಂಟಾದ ಗುಡುಗಿನ ಧ್ವನಿಯಿಂದ ದಿಗ್ಗಜಗಳ ಕಿವಿಗಳೆಲ್ಲವೂ ಕಿವುಡಾಯಿತು.ಮೋಡಗಳಿಂದ ಸುರಿಯುವ ನೀರಿನ ಧಾರೆಯು ಸ್ಫಟಿಕದ ಕಂಭಗಳನ್ನು ಭೂಮಿಗೆ ನೆಟ್ಟಿರುವಂತೆ ಕಾಣಿಸುತ್ತಿತ್ತು. ಆನೆಕಲ್ಲುಗಳು ಭೂಮಿಯಲ್ಲಿ ಬಿದ್ದು ಅವುಗಳನ್ನು ಮುಚ್ಚಿರುವಂತೆ ಕಾಣಿಸುತ್ತಿದ್ದವು. ಎಲ್ಲರಿಗೂ ಬಹಳವಾಗಿ ಭಯವನ್ನುಂಟುಮಾಡುವ ಮಳೆಯು ವಿಶೇಷವಾಗಿ ಆ ಪ್ರದೇಶದಲ್ಲಿ ಬೀಳುತ್ತಿತ್ತು ಜನರೆಲ್ಲರೂ ಅದನ್ನು ನೋಡಿದರು. ರಾಜನೂ ಈ ಪ್ರಕಾರದಿಂದ ಸುರಿಯುತ್ತಿರುವ ಅತಿ ವೃಷ್ಟಿಯನ್ನು ನೋಡಿದನು. ಅವರೆಲ್ಲರಿಗೂ ಹಿಂದೆ ಆಗಿದ್ದಂತೆಯೇ ಭಯವು ಹೆಚ್ಚಾಗಿ ಉಂಟಾಯಿತು.

೧೧-೧೩. ಆಗ ಅವರೆಲ್ಲರೂ ಜಗತ್ತುಗಳೆಲ್ಲಕ್ಕೂ ಆಧಾರವಾಗಿ ಮಹಾಲಿಂಗದ ಆಕಾರದಿಂದ ಇರುವ,ಎಲ್ಲಾ ಭಯವನ್ನೂ ಪರಿಹರಿಸುವ,ಎಲ್ಲಾ ವಿಧವಾದ ಐಶ್ವರ್ಯ ವನ್ನೂ ಕೊಡುವ, ಹಾಲಾಸ್ಯೇಶ್ವರನ ಸಮೀಪಕ್ಕೆ ಬೇಗನೆ ಬಂದು ದಯಾನಿಧಿಯಾದ

ಶ್ರೀಮದ್ಧಾಲಾಸ್ಯನಾಥಸ್ಯ ಸನ್ನಿಧಿಂ ಪ್ರಾಪ್ಯ ಸತ್ವರಂ ।
ಪ್ರಣಿಪತ್ಯ ಪ್ರಾರ್ಥಯಂತಿ ದೇವದೇವಂ ಕೃಪಾನಿಧಿಂ ॥ ೧೨ ॥

ಸುಂದರೇಶ ಕೃಪಾರಾಶೇ ಸಮಸ್ತದುರಿತಾಪಹ ।
ಅತಿವೃಷ್ಟ್ಯಾ ಪುನರ್ಭೀತಾನ್ ನಸ್ಮಾನ್ ಪಾಹಿ ಕಟಾಕ್ಷತಃ ॥ ೧೩ ॥

ಭಕ್ತಾನಾಮತಿಭೀತಾನಾಂ ವಾಕ್ಯ ಮಾಕರ್ಣ್ಯ ಶಂಕರಃ ।
ಶಫರಾಕ್ಷೀಪತಿಃ ಶಂಭುಃ ಶಂಬರಾರಿಹರೋ ಹರಃ ॥ ೧೪ ॥

ಶರಣ್ಯಃ ಸರ್ವಭೂತಾನಾಂ ಚಂದ್ರಾರ್ಧಕೃತಶೇಖರಃ ।
ಅತಿವೃಷ್ಟಿಭಯಂ ಹರ್ತುಂ ವಿಚಿಂತ್ಯೋಪಾಯ ಮದ್ಭುತಂ ॥ ೧೫ ॥

ಪುರಾತ್ಮೀಯಕಪರ್ದಾತ್ತು ಸಮುದ್ಭೂತಾನ್ ವಲಾಹಕಾನ್ ।
ಪೀತಾಶೇಷಾಬ್ಧಿಸಲಿಲಾನ್ ಚತುರಃ ಕಾಮರೂಪಿಣಃ ॥ ೧೬ ॥

ಆಹೂಯಾಜ್ಞಾಪಯಾಮಾಸ ಪರಿತೋ ಮಧುರಾಪುರೀಂ ।
ಕೂಟಾಕಾರೇಣ ಯೂಯಂ ತು ಚತುರ್ದಿಕ್ಷು ಸುಸಂಗತಾಃ ॥ ೧೭ ॥

---

ಆ ದೇವನಿಗೆ ನಮಸ್ಕಾರವನ್ನು ಮಾಡಿ "ದಯಾಶಾಲಿಯಾದ ಸುಂದರೇಶ್ವರನೇ, ಎಲ್ಲಾ ವಿಧವಾದ ಪಾಪಗಳನ್ನೂ ಪರಿಹರಿಸುವ ನೀನು ಅತಿವೃಷ್ಟಿಯ ಭಯದಿಂದ ಸಂಕಟಕ್ಕೆ ಒಳಗಾಗಿರುವ ನಮ್ಮನ್ನು ಹಿಂದಿನಂತೆ ನಿನ್ನ ಕಟಾಕ್ಷದಿಂದ ರಕ್ಷಿಸು" ಎಂದು ಬೇಡಿಕೊಂಡರು.

೧೪-೧೫. ಎಲ್ಲಾ ಪ್ರಾಣಿಗಳಿಗೂ ಅಭಯವನ್ನು ಕೊಡುವ, ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿ ಇರುವ, ಮನ್ಮಥನನ್ನು ನಾಶಮಾಡಿದ, ಮೀನಾಕ್ಷೀದೇವಿಗೆ ಪತಿಯಾದ, ಸರ್ವಸಂಹಾರಕನಾದ ಶಂಕರನಾದ ಹಾಲಾಸ್ಯೇಶ್ವರನು ಅವರ ಮಾತನ್ನು ಕೇಳಿ ಅತಿವೃಷ್ಟಿಯ ಭಯವನ್ನು ತಪ್ಪಿಸಲು ಆಶ್ಚರ್ಯಕರವಾದ ಉಪಾಯವನ್ನು ಯೋಚಿಸಿದನು.

೧೬-೨೦. ಸೋಮಸುಂದರೇಶ್ವರನು ತನ್ನ ಜಟೆಯಿಂದ ಸೃಷ್ಟಿಮಾಡಿ ಸಮುದ್ರದ ನೀರನ್ನು ಪಾನಮಾಡಲು ಕಳುಹಿಸಿದ್ದ ಕಾಮರೂಪಿಗಳಾಗಿರುವ ನಾಲ್ಕು ಮೇಘಗಳನ್ನು ಕರೆದು "ನೀವು ಈ ಮಧುರಾನಗರದ ಸುತ್ತಲೂ ಎರಡು ಯೋಜನಗಳ

ಪ್ರವೇಶೋ ವರ್ಷಧಾರಾಣಾಂ ಯಥಾ ನಾಸ್ತಿ ತಥಾತ್ರ ತು ।
ಕುರ್ವಂತು ಸುವಿಶಾಲಾಂಗಾಃ ಯೋಜನದ್ವಯಮಾತ್ರತಃ ॥ ೧೮ ॥

ಇತ್ಯಾಜ್ಞಾಂ ದೇವದೇವಸ್ಯ ಲಬ್ಧ್ವಾ ಮೇಘಾಃ ಕಪರ್ದಜಾಃ ।
ಪುಷ್ಕಲಾವರ್ತಕಾದೀನಾಂ ವರ್ಷಕಾಂ ವರುಣಾಜ್ಞಯಾ ॥ ೧೯ ॥

ಅಂಭೋದೀನಾ ಮಧೋಭಾಗೇ ಮಂಟಪಾಕಾರತಾಂ ಗತಾಃ ।
ವೃಷ್ಟಿಂ ನಿರೋಧಯಾಮಾಸು ರ್ಮಹತೀ ಮತಿಭೀಷಣಾಂ ॥ ೨೦ ॥

ಅಥ ವೀತಭಯಾ ಸ್ಸರ್ವೇ ಮಧುರಾಪುರವಾಸಿನಃ ।
ರಾ ಜ್ಞಾಭಿಷೇಕಪಾಂಡ್ಯೇನ ಸಹ ಪ್ರಾಪುಃ ಪರಾಂ ಮುದಂ ॥ ೨೧ ॥

ಮೇಘ್ಯೈ ರುಪರಿಸಂಛನ್ನಂ ಪರಿತಸ್ತು ಪರಿಸ್ರುತೈಃ ।
ಜಲಪ್ರವಾಹೈಃ ಸ್ಫಟಿಕಭಿತ್ತ್ಯಾಕಾರೈ ರ್ವಿರಾಜಿತಂ ॥ ೨೨ ॥

ಅಭ್ರಂಲಿಹೈ ರ್ಗೋಪುರೈಶ್ಚ ಶಿಖರೈಃ ಸ್ತಂಭಸನ್ನಿಭೈಃ ।
ಮಹಾಂತಂ ಮಂಟಪಮಿವ ಹಾಲಾಸ್ಯಕ್ಷೇತ್ರ ಮಾಬಭೌ ॥ ೨೩ ॥

---

ಪ್ರದೇಶದಲ್ಲಿ ದಟ್ಟವಾದ ಮೇಲುಛಾವಣಿಯಾಗಿ ಇದ್ದುಕೊಂಡು, ಈ ಪ್ರದೇಶಕ್ಕೆ ನಾಲ್ಕು ದಿಕ್ಕಿನಿಂದಲೂ ಬೀಳುವ ಮಳೆಯ ನೀರನ್ನು ತಡೆಗಟ್ಟಬೇಕು." ಎಂದು ಅಪ್ಪಣೆಮಾಡಿದನು. ಆಗ ಮೇಘಗಳು ಈಶ್ವರನ ಆಜ್ಞಾನುಸಾರವಾಗಿ, ವರುಣನ ಅಪ್ಪಣೆಯಂತೆ ಮಳೆಯನ್ನು ಹುಯ್ಯುತ್ತಿರುವ ಪುಷ್ಕಳಾವರ್ತಕ ಮೇಘಗಳ ಕೆಳಗಡೆಯಲ್ಲಿ ಮಧುರಾನಗರದ ಮೇಲುಭಾಗದಲ್ಲಿ, ಮಂಟಪದ ಆಕಾರವನ್ನು ಧರಿಸಿ ಬಹಳ ಭಯವನ್ನುಂಟುಮಾಡುವಂತೆ ಸುರಿಯುತ್ತಿರುವ ಮಳೆಯ ನೀರನ್ನು ತಡೆದವು.

೨೧–೨೫. ಮಧುರಾನಗರದಲ್ಲಿ ವಾಸಮಾಡುತ್ತಿರುವ ಜನರೂ, ಅಭಿಷೇಕ ಪಾಂಡ್ಯರಾಜನೂ ಮಳೆಯಿಂದ ಉಂಟಾಗುತ್ತಿದ್ದ ಭಯವನ್ನು ಬಿಟ್ಟು ಬಹಳ ಸಂತೋಷವನ್ನು ಹೊಂದಿದರು. ಮಧುರಾನಗರದ ಮೇಲುಗಡೆಯಲ್ಲಿ ಸ್ಫಟಿಕದ ಸ್ತಂಭಗಳಂತೆ ಮಳೆಯ ಹನಿಗಳು ಬೀಳುತ್ತಾ ಇರುವುದರಿಂದಲೂ, ಅದಕ್ಕೆ ತಡೆಯಾಗಿ ಮೋಡಗಳು ಸುತ್ತಲೂ ಇರುವುದರಿಂದಲೂ, ಗೋಪುರಗಳಿಂದ ಮೇಲುಛಾವಣಿಯಿಂದ ಕೂಡಿರುವ ಮಂಟಪದ ಹಾಗೆ ಹಾಲಾಸ್ಯಕ್ಷೇತ್ರವು ಪ್ರಕಾಶಿಸುತ್ತಿತ್ತು.

ದೃಷ್ಟ್ವಾ ವಿಸ್ಮಯ ಮಾಪನ್ನಾ ಅಮರಾ ಶ್ಚಾಸುರಾ ನರಾಃ ।
ಗಂಧರ್ವಾಃ ಕಿನ್ನರಾ ಯಕ್ಷಾಃ ಸಿದ್ಧಾ ವಿದ್ಯಾಧರಾ ಅಪಿ ॥ ೨೪ ॥

ಭೋಗಾಪವರ್ಗಕಾಮಾ ಯೇ ಹಾಲಾಸ್ಯಕ್ಷೇತ್ರವಾಸಿನಃ ।
ಸುಖೇನ ನಿವಸಂತಿ ಸ್ಮ ಸರ್ವೇ ಭೀತಿವಿವರ್ಜಿತಾಃ ॥ ೨೫ ॥

ವರುಣೋಽಪಿ ತದಾ ಭೀತಚೇತಾಃ ಸತ್ವರ ಮಂಬುದಾನ್ ।
ನಿವಾರಯಾಮಾಸ ತತೋ ವೃಷ್ಟಿ ರ್ಮಾಸ್ತ್ವಿತಿ ಮಾಸ್ತ್ವಿತಿ ॥ ೨೬ ॥

ಅಥ ತಂ ನಗರೀವಾಸಸರ್ವಭೂತಭಯಾಪಹಾ ।
ಅತಿವೃಷ್ಟಿ ರ್ವಿನಷ್ಟಾಽಭೂತ್ ಚಪಲಾಜಾತಭೂಷಣಾ ॥ ೨೭ ॥

ತದಾಽತಿಭಕ್ತಿಸಂಯುಕ್ತಾ ದೇವಾದ್ಯಾಸ್ತೇ ಸ್ತುತಿಂ ವ್ಯಧುಃ ।
ಶ್ರೀಹಾಲಾಸ್ಯೇಶ್ವರ ತ್ವಂ ಹಿ ಜಗತ್ಪಾಲನತತ್ಪರ ॥ ೨೮ ॥

ಭವತ್ಪಾದಶರಣ್ಯಾನಾ ಮಸ್ಮಾಕಂ ಸಾಧ್ವಸಂ ಕುತಃ ।
ಇತಿ ಬ್ರುವಂತೋ ದೇವೇಶಂ ನಮಸ್ಕೃತ್ಯ ಪುನಃ ಪುನಃ ॥ ೨೯ ॥

---

ಆಗ ಈ ದೇವತೆಗಳೂ, ಅಸುರರೂ, ಮನುಷ್ಯರೂ, ಯಕ್ಷರೂ, ಗಂಧರ್ವರೂ, ಸಿದ್ಧರೂ, ವಿದ್ಯಾಧರರೂ ಭೋಗಾಪವರ್ಗಗಳಿಗಾಗಿ ಹಾಲಾಸ್ಯ ಕ್ಷೇತ್ರದಲ್ಲಿ ವಾಸ ಮಾಡುವ ಇತರರೂ ಎಲ್ಲರೂ, ಯಾವ ಭಯವೂ ಇಲ್ಲದವರಾಗಿ, ಆಶ್ಚರ್ಯಪಡುತ್ತಾ ಸುಖದಿಂದ ಇದ್ದರು.

೨೬-೨೯. ಆಗ ವರುಣನು ಹೆದರಿದ ಮನಸ್ಸುಳ್ಳವನಾಗಿ ತಾನು ಕಳುಹಿಸಿದ್ದ ಮೇಘಗಳನ್ನು "ನೀವು ಮಳೆಯನ್ನು ಸುರಿಸಬೇಡಿ" ಎಂದು ಬೇಗ ಅಪ್ಪಣೆಮಾಡಿ ಅಲ್ಲಿ ಬೀಳುತ್ತಿರುವ ಮಳೆಯನ್ನು ತಪ್ಪಿಸಿದನು. ಇದರಿಂದ ಆ ನಗರದಲ್ಲಿ ಎಲ್ಲಾ ಪ್ರಾಣಿಗಳಿಗೂ ಭಯವನ್ನುಂಟುಮಾಡುತ್ತಿದ್ದ ಮಿಂಚುಗಳ ಆಭರಣದಿಂದ ಮಾಡಿದ ಅತಿವೃಷ್ಟಿಯ ಭಯವು ತಪ್ಪಿಹೋಯಿತು. ಆಗ ದೇವತೆಗಳೇ ಮೊದಲಾದವರು ಎಲ್ಲರೂ ಹಾಲಾಸ್ಯೇಶ್ವರನಲ್ಲಿ ಬಹಳ ಭಕ್ತಿಯುಳ್ಳವರಾಗಿ "ಎಲೈ ಹಾಲಾಸ್ಯಪ್ರಭುವೇ, ನೀನು ಜಗತ್ತನ್ನು ರಕ್ಷಿಸುವುದರಲ್ಲಿ ಆಸಕ್ತನಾಗಿ ಇರುವಾಗ, ನಿನ್ನ ಪಾದಕಮಲಗಳನ್ನೇ ಗತಿ ಎಂದು ನಂಬಿರುವ ನಮಗೆ ಯಾವ ವಿಧವಾದ ಭಯವೂ ಇರುವುದಿಲ್ಲ" ಎಂದು ಸ್ತುತಿಮಾಡುತ್ತಾ ಆ ದೇವದೇವನಿಗೆ ನಮಸ್ಕರಿಸಿ ಶಿವನನ್ನು ಶ್ಲಾಘಿಸುತ್ತಾ ಹೊರಟು ಹೋದರು.

ಸರ್ವೇ ತೇ ನಿರ್ಭಯಾ ಜಗ್ಮುಃ ಪ್ರಶಂಸಂತೋ ಮಹೇಶ್ವರಂ ।
ಪಾಶೀ ಭಕ್ತಿಪ್ರೀತಿಭೀತಿವಿಸ್ಮಯೈಶ್ಚ ಸಮನ್ವಿತಃ ॥ ೩೦ ॥

ಜಲೋದರಮಹಾವ್ಯಾಧಿವಿನಾಶಂ ಕಾಮಯನ್ ಹೃದಿ ।
ಪರಿಪೂರ್ಣಂ ಪರಶಿವಂ ಹಾಲಾಸ್ಯೇಶಂ ಹೃದಿ ಸ್ಮರನ್ ॥ ೩೧ ॥

ಸದ್ಯಃ ಸಂಪ್ರಾಪ ಹಾಲಾಸ್ಯಂ ಸಮುದ್ರೈಃ ಸರಿತಾಂ ಗಣೈಃ ।
ಸರಸ್ವತೀಸುರನದೀಕಾಳಿಂದೀಪ್ರಮುಖೈರಪಿ ॥ ೩೨ ॥

ಪಾಶಹಸ್ತೈರನೇಕೈಶ್ಚ ಪರಿವಾರೈಶ್ಚ ದೈವತೈಃ ।
ಶುದ್ಧಸ್ಫಟಿಕಸಂಕಾಶೈ ರ್ಧವಳಾಂಬರ ಭೂಷಣೈಃ ॥ ೩೩ ॥

ಅನ್ಯೈ ಸ್ನಾನಾವಿಧೈ ರ್ದೇವೈ ರ್ವಿದ್ವದ್ಭಿ ರ್ಮುನಿಪುಂಗವೈಃ ।
ಹೇಮಪದ್ಮಾಕರೇ ಸ್ನಾತ್ವಾ ಸಂಕಲ್ಪ್ಯ ಚ ಸಚೇಲಕಂ ॥ ೩೪ ॥

---

೩೦. ಅನಂತರದಲ್ಲಿ ತನಗೆ ಹಾಲಾಸ್ಯೇಶ್ವರನಲ್ಲಿ ಮಹಿಮೆಯು ಗೋಚರವಾದ ಕಾರಣ ವರುಣನಿಗೆ ಭಕ್ತಿ ಸಂತೋಷ ಭಯ ಆಶ್ಚರ್ಯಗಳುಂಟಾದುವು. ಭಕ್ತರಾದ ಅಭಿಷೇಕಪಾಂಡ್ಯನೇ ಮೊದಲಾದವರನ್ನು ರಕ್ಷಿಸಿದ ಕಾರಣ, ತನಗೂ ಸುಖವು ಉಂಟಾಗುವುದೆಂದು ವಿಶ್ವಾಸವು ಉಂಟಾಯಿತು. ತಾನು ಹಾಲಾಸ್ಯೇಶ್ವರನನ್ನು ಪರೀಕ್ಷೆಮಾಡಿದ ಕಾರಣ ಭಯವು ಉಂಟಾಯಿತು. ತಾನು ಮಾಡಿದ ವಿಪತ್ತುಗಳಿಗೆ ತಕ್ಕ ಪ್ರತೀಕಾರವನ್ನು ನೋಡಿ ಆಶ್ಚರ್ಯವು ಉಂಟಾಯಿತು.

೩೧–೩೪. ಆಗ ಅವನು ತನಗೆ ಉಂಟಾಗಿರುವ ಜಲೋದರವ್ಯಾಧಿಯನ್ನು ಪರಿಹರಿಸಿಕೊಳ್ಳುವ ಇಚ್ಛೆಯುಳ್ಳವನಾಗಿ, ಪರಿಪೂರ್ಣನಾಗಿ, ಪರಶಿವಭಾವದಿಂದ ಇರುವ ಹಾಲಾಸ್ಯೇಶ್ವರನನ್ನು ಆರಾಧಿಸಲು ಆ ಕ್ಷಣದಲ್ಲಿಯೇ ತನ್ನ ಪರಿವಾರಸಹಿತನಾಗಿ ಹಾಲಾಸ್ಯಕ್ಷೇತ್ರಕ್ಕೆ ಬಂದನು. ವರುಣನ ಜೊತೆಯಲ್ಲಿ ಸರಸ್ವತೀ, ಗಂಗಾ, ಯಮುನಾ ಮೊದಲಾದ ನದಿಗಳು ಆಕಾರವನ್ನು ಧರಿಸಿ ಬಂದವು. ಶುದ್ಧವಾದ ಸ್ಫಟಿಕದ ಹಾಗೆ ಶುಭ್ರವಾದ ವಸ್ತ್ರಾಭರಣಗಳನ್ನು ಧರಿಸಿ ಇರುವ ಇವರಿಂದಲೂ,

ಜಲೋದರಮಹಾವ್ಯಾಧಿ ಸ್ತದಾನೀಂ ತಸ್ಯ ನಶ್ಯತಿ ।
ಲಘುಕಾಯೋಽತಿಹೃಷ್ಟಸ್ಸ ತೀರ್ಥಾದುತ್ತೀರ್ಯ ವಾಸಸೀ ॥ ೩೫ ॥

ಪರಿಧಾಯ ಸಮುದ್ಧೂಳ್ಯ ಭಸ್ಮನಾಥ ಕಳೇಬರಂ ।
ರುದ್ರಾಕ್ಷಾಣಾಂ ಚ ಮಾಲಾಭಿ ರಲಂಕೃತ್ಯ ತ್ರಿಪುಂಡ್ರಕೈಃ ॥ ೩೬ ॥

ಸುಮೀನಾಕ್ಷೀಂ ಸುಸಂತೋಷ್ಯ ಸಮಸ್ತೈ ರುಪಚಾರಕೈಃ ।
ಪ್ರದಕ್ಷಿಣಕ್ರಮೇಣಾಥ ಗತ್ವಾ ದಿವ್ಯವಿಮಾನಗಂ ॥ ೩೭ ॥

ಶಿವಲಿಂಗಂ ಸಮಾಲೋಕ್ಯ ಪ್ರಣಿಪತ್ಯಾ ವಶೋಭವತ್ ।
ಉತ್ಥಾಯಾಥ ಮಹಾಭಕ್ತ್ಯಾ ಕರ್ತುಮರ್ಹಾಂ ಸಮುದ್ಯತಃ ॥ ೩೮ ॥

ಗಂಗಾದ್ಯಾಃ ಪುಣ್ಯಸರಿತಃ ಪುಣ್ಯತೀರ್ಥೋದಕಾನಿ ಚ ।
ಪ್ರಯಚ್ಛಂತ್ಯಭಿಷೇಕಾಯ ಹೇಮಕುಂಭೋದ್ಧೃತಾನಿ ಚ ॥ ೩೯ ॥

---

ಪಾಶವನ್ನು ಹಸ್ತದಲ್ಲಿ ಹಿಡಿದುಕೊಂಡು ಇರುವ ಅನುಚರರಿಂದಲೂ, ಅನೇಕ ವಿಧರಾದ ದೇವತೆಗಳೂ, ಋಷಿಗಳೂ ಇವರೆಲ್ಲರಿಂದಲೂ ಕೂಡಿದವನಾಗಿ, ವರುಣನು ಆ ಕ್ಷೇತ್ರದಲ್ಲಿರುವ ಹೇಮಪದ್ಮಾಕರ ತೀರ್ಥದಲ್ಲಿ ಸಂಕಲ್ಪಪೂರ್ವಕವಾಗಿ ಸ್ನಾನಮಾಡಿದನು.

೩೫–೩೮. ತೀರ್ಥದಲ್ಲಿ ಸ್ನಾನಮಾಡಿದ್ದರಿಂದ ಅವನ ಜಲೋಧರವ್ಯಾಧಿಯು ಹೋಯಿತು. ಅದರಿಂದ ಅವನಿಗೆ ಶರೀರದಲ್ಲಿ ಲಾಘವವು ಹುಟ್ಟಿದ ಕಾರಣ ಬಹಳ ಸಂತೋಷವುಳ್ಳವನಾಗಿ ಆ ತೀರ್ಥದಿಂದ ಮೇಲಕ್ಕೆ ಎದ್ದು, ವಸ್ತ್ರಗಳನ್ನು ಧರಿಸಿ, ಭಸ್ಮರುದ್ರಾಕ್ಷಗಳನ್ನು ಧರಿಸಿ, ಎಲ್ಲಾ ವಿಧವಾದ ಉಪಚಾರಗಳಿಂದ ಮೀನಾಕ್ಷೀ ದೇವಿಯ ಪೂಜೆಯನ್ನು ಮಾಡಿ, ಪ್ರದಕ್ಷಿಣೆಯ ಕ್ರಮದಿಂದ ಹಾಲಾಸ್ಯೇಶ್ವರನ ದಿವ್ಯ ವಿಮಾನದ ಹತ್ತಿರಕ್ಕೆ ಬಂದನು. ಅವನು ಅಲ್ಲಿ ಶಿವಲಿಂಗವನ್ನು ಕಂಡು ನಮಸ್ಕರಿಸಿ, ಎದ್ದು ನಿಂತು, ಭಕ್ತಿಪರವಶನಾಗಿ ಹಾಲಾಸ್ಯೇಶ್ವರನನ್ನು ಪೂಜಿಸಲು ಉದ್ಯುಕ್ತನಾದನು.

೩೯–೪೩. ವರುಣನು ಹಾಲಾಸ್ಯೇಶ್ವರನನ್ನು ಪೂಜಿಸುತ್ತಿರುವಾಗ ಗಂಗೆಯೇ ಮೊದಲಾದ ಪುಣ್ಯಕರವಾದ ನದಿಗಳು ಚಿನ್ನದ ಕಲಶಗಳಿಂದ ಅಭಿಷೇಕಕ್ಕಾಗಿ ಪುಣ್ಯ ತೀರ್ಥಗಳನ್ನು ತಂದುಕೊಡುತ್ತಿದ್ದವು. ಕಲ್ಪವೃಕ್ಷವು ಪೂಜೆಗೆ ಬೇಕಾದ ಸೂಕ್ಷ್ಮವಾದ, ಉತ್ತಮವಾದ, ಅನೇಕ ಬಣ್ಣಗಳುಳ್ಳ ವಸ್ತ್ರಗಳು, ಹಾರ, ಕಿರೀಟ ಇವೇ

ಅಂಬರಾಣಿ ಚ ದಿವ್ಯಾನಿ ಸುಸೂಕ್ಷ್ಮಾಣ್ಯಮಲಾನಿ ಚ ।
ಭೂಷಣಾನಿ ವಿಚಿತ್ರಾಣಿ ಮುಕುಟಪ್ರಮುಖಾನಿ ಚ ॥ ೪೦ ॥

ಚಂದನಾನಿ ಸುಗಂಧೀನಿ ಪುಷ್ಪಾಣಿ ಸುರಭೀಣಿ ಚ ।
ಬಹೂನಿ ಭಿನ್ನವರ್ಣಾನಿ ಕಲ್ಪವೃಕ್ಷಸ್ತದಾ ದದೌ ॥ ೪೧ ॥

ಸಾಜ್ಯಗುಗ್ಗುಲುಧೂಪಂ ಚ ಸಾಜ್ಯವರ್ತಿಪ್ರದೀಪಕಂ ।
ಪಂಚಾಮೃತಂ ಪಂಚಗವ್ಯಂ ಫಲಾನಿ ವಿವಿಧಾನಿ ಚ ॥ ೪೨ ॥

ಪರಮಾನ್ನಾದಿಭಕ್ಷ್ಯಾಣಿ ಕಾಮಧೇನುಃ ಪ್ರಯಚ್ಛತಿ ।
ಏವಂ ಸಪರ್ಯಾಸಾಮಗ್ರೀಸಂಪನ್ನೋ ಯಾದಸಾಂ ಪತಿಃ ॥ ೪೩ ॥

ವಿಧಿನಾ ರಾಧಯಾಮಾಸ ತ್ರಿವಿಧೈಃ ಕರಣೈರಪಿ ।
ಅಥ ಮುಕ್ತಾಫಲೈಃ ಸ್ಥೂಲೈರ್ಭಾರ್ಗವಾಕಾರ ಸನ್ನಿಭೈಃ ॥ ೪೪ ॥
ಸಹಸ್ರನಾಮಭಿಃ ಪೂಜ್ಯ ಸ್ತುತಿಂ ಕರ್ತುಂ ಪ್ರಚಕ್ರಮೇ ।

---

ಮೊದಲಾದ ಆಭರಣಗಳು, ಸುವಾಸನೆಯಾಗಿರುವ ಹೂವುಗಳು, ಉತ್ತಮವಾದ ಗಂಧವೇ ಮೊದಲಾದ ಪರಿಮಳ ದ್ರವ್ಯಗಳು, ಇವುಗಳೆಲ್ಲವನ್ನೂ ಕೊಡುತ್ತಿತ್ತು. ಕಾಮಧೇನುವು ಗುಗ್ಗುಲುಧೂಪ, ದೀಪ, ಪಂಚಾಮೃತ ದ್ರವ್ಯಗಳು, ಪಂಚಗವ್ಯ ಪದಾರ್ಥಗಳು, ಪರಮಾನ್ನ ಇವೇ ಮೊದಲಾದ ನೈವೇದ್ಯಪದಾರ್ಥಗಳು ಇವುಗಳನ್ನು ಕೊಡುತ್ತಿತ್ತು. ವರುಣನು ಈ ಪ್ರಕಾರವಾದ ಪೂಜಾದ್ರವ್ಯಗಳನ್ನು ಸಿದ್ಧಪಡಿಸಿಕೊಂಡು ತ್ರಿಕರಣಶುದ್ಧನಾಗಿ ಶಾಸ್ತ್ರಕ್ರಮಕ್ಕನುಸಾರವಾಗಿ ಹಾಲಾಸ್ಯೇಶ್ವರನನ್ನು ಪೂಜಿಸಿದನು.

೪೪. ಅನಂತರದಲ್ಲಿ ಅವನು ಅಂತರಿಕ್ಷದಲ್ಲಿ ಕಾಣುತ್ತಿರುವ ಶುಕ್ರನಕ್ಷತ್ರದ ಹಾಗೆ ಇರುವ ಕಾಂತಿಯುಳ್ಳ ಮುತ್ತುಗಳಿಂದ ಸಹಸ್ರನಾಮ ಪೂಜೆಯನ್ನು ಮಾಡಿ ದೇವದೇವನಾದ ಸುಂದರೇಶ್ವರನನ್ನು ಸ್ತೋತ್ರಮಾಡಿದನು.

॥ ವರುಣ ಉವಾಚ ॥

ಕಲ್ಯಾಣಶೈಲಪರಿಕಲ್ಪಿತಕಾರ್ಮುಕಾಯ ।
ಮೌರ್ವೀಕೃತಾಖಿಲಮಹೋರಗನಾಯಕಾಯ
ಪೃಥ್ವೀರಥಾಯ ಕಮಲಾಪತಿಸಾಯಕಾಯ
ಹಾಲಾಸ್ಯಮಧ್ಯನಿಲಯಾಯ ನಮಃ ಶಿವಾಯ ॥ ೪೫ ॥

ಭಕ್ತಾರ್ತಿಭಂಜನಪರಾಯ ಪರಾತ್ಪರಾಯ
ಕಾಲಾಭ್ರಕಾಂತಿಗರಳಾಂಕಿತ ಕಂಧರಾಯ
ಭೂತೇಶ್ವರಾಯ ಭುವನತ್ರಯಕಾರಣಾಯ—
ಹಾಲಾಸ್ಯಮಧ್ಯನಿಲಯಾಯ ನಮಃ ಶಿವಾಯ ॥ ೪೬ ॥

ಭೂದಾರಮೂರ್ತಿಪರಿಮೃಗ್ಯಪದಾಂಬುಜಾಯ-
ಹಂಸಾಬ್ಜಸಂಭವಸುದೂರಸುಮಸ್ತಕಾಯ ।

---

೪೫. "ಮೇರುಪರ್ವತವನ್ನು ಧನುಸ್ಸನ್ನಾಗಿ ಮಾಡಿಕೊಂಡು, ವಾಸುಕಿಯನ್ನು ಹೆದೆಯಾಗಿ ಕಟ್ಟಿ, ಭೂಮಿಯನ್ನು ರಥವಾಗಿ ಉಪಯೋಗಿಸಿಕೊಂಡು, ಅದರಲ್ಲಿ ಕುಳಿತುಕೊಂಡು ವಿಷ್ಣುವನ್ನೇ ಬಾಣವಾಗಿ ಮಾಡಿ, ತ್ರಿಪುರವನ್ನು ನಾಶಪಡಿಸಿದ ಶಿವನು, ಹಾಲಾಸ್ಯಕ್ಷೇತ್ರದ ಮಧ್ಯದಲ್ಲಿ ವಾಸವಾಗಿರುವನು. ಈ ದೇವನಿಗೆ ನಮಸ್ಕಾರವು.

೪೬. ಭಕ್ತರಾದವರ ಸಂಕಟವನ್ನು ಪರಿಹರಿಸುವುದರಲ್ಲಿ ಆಸಕ್ತನಾಗಿ, ಪ್ರಕೃತಿಯೇ ಮೊದಲಾದ ಎಲ್ಲಾ ವಸ್ತುಗಳಿಗಿಂತಲೂ ಪರರೂಪದಿಂದ ಇರುವ, ಪ್ರಳಯಕಾಲದ ಮೇಘದ ಹಾಗೆ ಕಪ್ಪಗೆ ಇರುವ ಕಂಠಕಾಂತಿಯುಳ್ಳವನಾದ, ಭೂತಗಳಿಗೆ ಅಧಿಪತಿಯಾಗಿ ಮೂರು ಲೋಕಗಳಿಗೂ ಕಾರಣನಾದ ಶಿವನು, ಹಾಲಾಸ್ಯಕ್ಷೇತ್ರದ ಮಧ್ಯದಲ್ಲಿ ಇರುವನು. ಈ ದೇವನಿಗೆ ನಮಸ್ಕಾರವು.

೪೭. ಯಜ್ಞವರಾಹರೂಪವನ್ನು ಧರಿಸಿದ ವಿಷ್ಣುವು, ಈ ದೇವನ ಪಾದಗಳನ್ನು ಕಂಡುಹಿಡಿಯುವುದಕ್ಕಾಗಿ ಯತ್ನಮಾಡಿದನು. ಹಂಸವನ್ನು ವಾಹನವಾಗಿ ಉಳ್ಳ ಬ್ರಹ್ಮನು ಈ ದೇವನ ಶಿರಸ್ಸನ್ನು ಕಾಣಲು ಯತ್ನಮಾಡಿದನು. ಇವರಿಬ್ಬರಿಗೂ

ಜ್ಯೋತಿರ್ಮಯಸ್ಫುರಿತದಿವ್ಯವಪುರ್ಧರಾಯ ।
ಹಾಲಾಸ್ಯಮಧ್ಯನಿಲಯಾಯ ನಮಃ ಶಿವಾಯ ॥ ೪೭ ॥

ಕಾದಂಬಕಾನನನಿವಾಸಕುತೂಹಲಾಯ—
ಕಾಂತಾರ್ಧಕಾಯಕಮನೀಯಕಳೇಬರಾಯ ।
ಕಾಲಾಂತಕಾಯ ಕರುಣಾಮೃತಸಾಗರಾಯ-
ಹಾಲಾಸ್ಯಮಧ್ಯನಿಲಯಾಯ ನಮಃ ಶಿವಾಯ ॥ ೪೮ ॥

ವಿಶ್ವೇಶ್ವರಾಯ ವಿಬುಧೇಶ್ವರಪೂಜಿತಾಯ—
ವಿದ್ಯಾವಿಶಿಷ್ಟವಿದಿತಾತ್ಮಸುವೈಭವಾಯ ।
ವಿದ್ಯಾಪ್ರದಾಯ ವಿಮಲೇಂದ್ರವಿಮಾನಗಾಯ-
ಹಾಲಾಸ್ಯಮಧ್ಯನಿಲಯಾಯ ನಮಃ ಶಿವಾಯ ॥ ೪೯ ॥

ಸಂಪತ್ಪ್ರದಾಯ ಸಕಲಾಗಮಮಸ್ತಕೇಷು-
ಸಂಘೋಷಿತಾತ್ಮವಿಭವಾಯ ಸದಾಶಿವಾಯ ।

---

ದರ್ಶನಮಾಡಲು ಸಾಧ್ಯವಿಲ್ಲದಿರುವ, ಜ್ಯೋತಿಸ್ವರೂಪವಾದ ಶರೀರವನ್ನು ಧರಿಸಿ ಶಿವನು ಹಾಲಾಸ್ಯಕ್ಷೇತ್ರದ ಮಧ್ಯದಲ್ಲಿ ನೆಲಸಿರುವನು. ಈ ದೇವನಿಗೆ ನಮಸ್ಕಾರವು.

೪೮. ಕದಂಬವನದಲ್ಲಿ ವಾಸಮಾಡಲು ಆಸಕ್ತನಾಗಿ, ಸ್ತ್ರೀಶರೀರವನ್ನು ತನ್ನ ಶರೀರದ ಅರ್ಧಭಾಗದಲ್ಲಿ ಹೊಂದಿ ಯಮನಿಗೂ ಯಮಸ್ವರೂಪದಿಂದ ಇರುತ್ತಾ, ಭಕ್ತರ ವಿಷಯದಲ್ಲಿ ಬಹಳ ದಯೆಯಿಂದ ಇರುವ, ಮಹಾದೇವನು ಹಾಲಾಸ್ಯಕ್ಷೇತ್ರದ ಮಧ್ಯದಲ್ಲಿ ನೆಲಸಿರುವನು. ಈ ದೇವನಿಗೆ ನಮಸ್ಕಾರವು.

೪೯. ಪ್ರಪಂಚಗಳೆಲ್ಲಕ್ಕೂ ಅಧಿಪತಿಯಾಗಿರುತ್ತಾ, ಇಂದ್ರನಿಂದ ಪೂಜೆಯನ್ನು ಸ್ವೀಕರಿಸುವವನಾಗಿ, ಅಪಾರ ಜ್ಞಾನವುಳ್ಳವರಿಗೆ ತಿಳಿಯಲನುಕೂಲವಾದ ಮಹಿಮೆಯುಳ್ಳವನಾಗಿ ಈ ಪರಮೇಶ್ವರನು, ವಿದ್ಯೆಯನ್ನು ಉಪದೇಶಮಾಡಿದನು. ಹಾಲಾಸ್ಯಕ್ಷೇತ್ರದ ಮಧ್ಯದಲ್ಲಿ ಇಂದ್ರನ ವಿಮಾನದಲ್ಲಿ ನೆಲಸಿರುವನು. ಈ ದೇವನಿಗೆ ನಮಸ್ಕಾರವು.

೫೦. (ತನ್ನನ್ನು ಆರಾಧಿಸುವವನಿಗೆ) ಎಲ್ಲಾ ವಿಧವಾದ ಸಂಪತ್ತುಗಳನ್ನೂ ಅನುಗ್ರಹಿಸುತ್ತಾ ಇರುವ, ಈ ಪರಮೇಶ್ವರನ ಮಹಿಮೆಯನ್ನು ಆಗಮಗಳೆಲ್ಲವೂ ಚೆನ್ನಾಗಿ ತಿಳಿಸುತ್ತಿರುವವು. "ಯಾವಾಗಲೂ ಮಂಗಳಕರ"ನೆಂಬ ಅರ್ಥವನ್ನು

ಸರ್ವಾತ್ಮನೇ ಸಕಲದುಃಖ ಸಮೂಲಹಂತ್ರೇ
ಹಾಲಾಸ್ಯಮಧ್ಯನಿಲಯಾಯ ನಮಃ ಶಿವಾಯ ॥ ೫೦ ॥

ಗಂಗಾಧರಾಯ ಗರುಡಧ್ವಜವಂದಿತಾಯ
ಗಂಡಸ್ಫುರದ್ಭುಜಗಕುಂಡಲ ಮಂಡಿತಾಯ ।
ಗಂಧರ್ವಕಿನ್ನರಸುಗೀತ ಗುಣಾತ್ಮಕಾಯ
ಹಾಲಾಸ್ಯಮಧ್ಯನಿಲಯಾಯ ನಮಃ ಶಿವಾಯ ॥ ೫೧ ॥

ಪಾಣಿಂ ಪ್ರಗೃಹ್ಯ ಮಲಯಧ್ವಜಭೂಪಪುತ್ರ್ಯಾ
ಪಾಂಡ್ಯೇಶ್ವರ ಸ್ಸ್ವಯಮಭೂತ್ ಪರಮೇಶ್ವರೋ ಯಃ ।
ತಸ್ಮೈ ಜಗತ್ಪ್ರಥಿತಸುಂದರಪಾಂಡ್ಯನಾಮ್ನೇ
ಹಾಲಾಸ್ಯಮಧ್ಯನಿಲಯಾಯ ನಮಃ ಶಿವಾಯ ॥ ೫೨ ॥

---

ಕೊಡುವ ಸದಾಶಿವನೆಂಬ ಹೆಸರಿನಿಂದ ಇರುತ್ತಾ, ಪ್ರಪಂಚವೇ ಮೊದಲಾದ ಎಲ್ಲಾ ರೂಪಗಳಿಂದ ಎಲ್ಲಾ ವಿಧವಾದ ವಿಪತ್ತುಗಳನ್ನೂ ಅವುಗಳ ಕಾರಣಸಹಿತ ವಾಗಿ ಪರಿಹರಿಸುವ, ಪರಶಿವನು ಈ ಹಾಲಾಸ್ಯಕ್ಷೇತ್ರದ ಮಧ್ಯದಲ್ಲಿ ನೆಲಸಿರುವನು. ಈ ದೇವನಿಗೆ ನಮಸ್ಕಾರವು.

೫೧. ಈ ದೇವನು ಗಂಗೆಯನ್ನು ಶಿರಸ್ಸಿನಲ್ಲಿ ಧರಿಸಿರುವನು. ವಿಷ್ಣುವು ಈ ದೇವನಿಗೆ ನಮಸ್ಕರಿಸುತ್ತಿರುವನು. ಸರ್ಪಗಳನ್ನು ಕುಂಡಲಗಳಾಗಿ ಧರಿಸಿರುವ ಈ ದೇವದೇವನ ಗುಣಗಳನ್ನು ಗಂಧರ್ವರೂ, ಕಿನ್ನರೂ ಗಾನಮಾಡುತ್ತಿರುವರು. ಈ ಪ್ರಕಾರವಾದ ಮಹಿಮೆಯನ್ನು ಹೊಂದಿರುವ ಪರಶಿವನು ಹಾಲಾಸ್ಯಕ್ಷೇತ್ರದ ಮಧ್ಯದಲ್ಲಿ ನೆಲಸಿರುವನು. ಈ ದೇವನಿಗೆ ನಮಸ್ಕಾರವು.

೫೨. ಪರಮೇಶ್ವರನು ಸುಂದರಪಾಂಡ್ಯನೆಂಬ ಹೆಸರಿನಿಂದ ಮಲಯ ಧ್ವಜರಾಜನ ಮಗಳನ್ನು ವಿವಾಹಮಾಡಿಕೊಂಡು ಪಾಂಡ್ಯದೇಶದ ರಾಜ ನಾಗಿರುವನು. ಪರಮೇಶ್ವರನೇ ಹಾಲಾಸ್ಯಕ್ಷೇತ್ರದ ಮಧ್ಯದಲ್ಲಿ ನೆಲಸಿರುವನು. ಈ ದೇವನಿಗೆ ನಮಸ್ಕಾರವು.

ಗೀರ್ವಾಣದೇಶಿಕಗಿರಾ ಮಪಿ ದೂರಗಂ ಯತ್-
ವಕ್ತುಂ ಮಹತ್ವಮಿಹಕೋ ಭವತಃ ಪ್ರವೀಣಃ ।
ಶಂಭೋ ಕ್ಷಮಸ್ವ ಭಗವಂಶ್ಚರಣಾರವಿಂದ-
ಭಕ್ತ್ಯಾ ಕೃತಾಂ ಸ್ತುತಿ ಮಿಮಾಂ ಮಮ ಸುಂದರೇಶ ॥ ೫೩ ॥

ಇತಿ ಸ್ತುತ್ವಾ ಸುಂದರೇಶಂ ನಮಸ್ಕೃತ್ಯ ಪುನಃ ಪುನಃ ।
ಭಕ್ತಿಂ ಪರಾಂ ಗತೋ ಭೂತ್ವಾ ತಸ್ಥಾವಂಜಲಿ ಮಾಚರನ್ ॥ ೫೪ ॥

ಅಥಾವಿರಾಸೀತ್ ಭಗವಾನ್ ಕದಂಬವನನಾಯಕಃ ।
ಸಾಂಬ ಸ್ಸರ್ವಜಗನ್ನಾಥ ಸ್ಸರ್ವಾಭರಣಭೂಷಿತಃ ॥ ೫೫ ॥

ಸ್ವಚ್ಛವರೌಕ್ತಿಕಸಂಕಾಶಭೂಷಣಾಂಬರಮೂರ್ತಿಮಾನ್ ।
ಭಾಸರ್ಯನ್ ಪಾಣಿಭಿ ರ್ವಹ್ನಿವರಾಭಯಪರಶ್ವಧಾನ್ ॥ ೫೬ ॥

ವರುಣೋಽಪಿ ವಿಲೋಕ್ಯೇಶಂ ಮನೋವಾಚಾ ಮಗೋಚರಂ ।
ವಿಸ್ಮೃತ್ಯ ಕರ್ಮ ಕರ್ತವ್ಯಂ ಚಿತ್ರನ್ಯಸ್ತ ಇವ ಸ್ಥಿತಃ ॥ ೫೭ ॥

---

೫೩. ಎಲೈ ಸುಂದರೇಶ್ವರನೆ, ಬೃಹಸ್ಪತಿಯೂ ಕೂಡ ನಿನ್ನ ಮಹಿಮೆಯನ್ನು ತನ್ನ ಮಾತುಗಳಿಂದ ಹೇಳಲು ಆಗದಿರುವಾಗ, ಯಾರು ತಾನೇ ನಿನ್ನ ಮಹಿಮೆಯನ್ನು ಹೇಳಲು ಆದೀತು. ಆದಾಗ್ಯೂ ನಿನ್ನ ವಿಷಯದಲ್ಲಿ ಉಂಟಾದ ಭಕ್ತಿಯಿಂದ ನಾನು ಹೇಳಿದ ಈ ಸ್ತೋತ್ರವನ್ನು ಕೇಳಿ, ನನ್ನ ಅಪರಾಧವನ್ನು ಕ್ಷಮಿಸು."

೫೪–೫೬. ವರುಣನು ಈ ಪ್ರಕಾರದಿಂದ ಹಾಲಾಸ್ಯೇಶ್ವರನನ್ನು ಸ್ತೋತ್ರ ಮಾಡಿ, ಅನೇಕಸಾರಿ ನಮಸ್ಕಾರಮಾಡಿ, ಭಕ್ತಿಯ ಪರಾಕಾಷ್ಠೆಯನ್ನು ಹೊಂದಿ, ಬೊಗಸೆಯನ್ನು ಕಟ್ಟಿಕೊಂಡು ಸುಮ್ಮನೆ ನಿಂತಿದ್ದನು. ಆಗ ಎಲ್ಲಾ ಬ್ರಹ್ಮಾಂಡ ಗಳಿಗೂ ಒಡೆಯನಾಗಿ ಇರುವ, ಕದಂಬವನಾಧಿಪನಾದ ಪರಮೇಶ್ವರನು, ನಿರ್ಮಲವಾದ ಮುತ್ತುಗಳಿಗೆ ಸಮನಾದ ಕಾಂತಿಯುಳ್ಳ ವಸ್ತ್ರಾಭರಣಗಳನ್ನು ಧರಿಸಿರುವವನಾಗಿ ಚತುರ್ಬಾಹುಗಳಿಂದ ಅಗ್ನಿ, ವರದ ಹಸ್ತ, ಅಭಯಹಸ್ತ, ಕೊಡಲಿ ಎಂಬ ಆಯುಧ ಗಳನ್ನು ಧರಿಸಿ ವರುಣನಿಗೆ ಪ್ರತ್ಯಕ್ಷನಾದನು.

೫೭-೫೯. ಮನಸ್ಸಿಗೂ ವಾಕ್ಕಿಗೂ ಕೂಡ ಗೋಚರನಾಗದಿರುವ ಪರಮೇಶ್ವರ ನನ್ನು ನೋಡಿ, ವರುಣನು ಆಶ್ಚರ್ಯದಿಂದ ತಾನು ಮಾಡಬೇಕಾದ ಕರ್ತವ್ಯವನ್ನು

ಮಹೇಶಃ ಪ್ರಾಹ ವಾರೀಶಂ ವರಂ ವರಯ ವಾಂಛಿತಂ ।
ಇತ್ಯುಕ್ತೇ ಸತಿ ವಾರೀಶೋ ವಂದನಾನಿ ವಿಧಾಯ ಚ ॥ ೫೮ ॥

ಭಗವನ್ ಪಾರ್ವತೀನಾಥ ಮಯಾಽಜ್ಞಾನವಶೇನ ತು ।
ಸಮುದ್ರಜಲವರ್ಷಾಭ್ಯಾ ಮಪರಾಧದ್ವಯಂ ಕೃತಂ ॥ ೫೯ ॥

ಕ್ಷಮಸ್ವ ಕರುಣಾಸಿಂಧೋ ಕಾಲಕೂಟವಿಷಾಪಹ ।
ತ್ವಲ್ಲಿಂಗದರ್ಶನಾತ್ಪೂರ್ವಂ ಮಹಾವ್ಯಾಧಿ ರ್ಜಲೋದರಃ ॥ ೬೦ ॥

ಮದೀಯಃ ಶಾಂತಿಮಭ್ಯೇತಿ ತ್ವತ್ತೀರ್ಥಸ್ಯತು ವೈಭವಾತ್ ।
ಇತಿ ತಸ್ಯ ವಚಃ ಶ್ರುತ್ವಾ ಪ್ರಾಹ ಹಾಲಾಸ್ಯನಾಯಕಃ ॥ ೬೧ ॥

ತವಾಸ್ತು ಸರ್ವಸೌಭಾಗ್ಯಂ ನಿತ್ಯಮೂರ್ಧ್ವಬಲಾನ್ವಿತಂ ।
ಪಠತಾಂ ತ್ವತ್ಕೃತಸ್ತೋತ್ರಂ ಹಾಲಾಸ್ಯಾಷ್ಟಕ ಮಿಷ್ಟದಂ ॥ ೬೨ ॥

---

ಚಿತ್ರದಲ್ಲಿ ಬರದಂತೆ ಇದ್ದನು. ಮಹೇಶ್ವರನು "ಎಲೈ ವರುಣನೆ, ನಿನಗೆ ಬೇಕಾದ ವರವನ್ನು ಕೇಳು" ಎಂದು ಹೇಳಿದನು. ಆ ಮಾತನ್ನು ಕೇಳಿ ವರುಣನು ದೇವ ದೇವನಿಗೆ ನಮಸ್ಕಾರವನ್ನು ಮಾಡಿ, "ಪೂಜ್ಯನಾದ ಪಾರ್ವತೀಶನೆ, ನಾನು ನಿನ್ನ ಮಹಿಮೆಯನ್ನು ತಿಳಿಯದೆ, ಸಮುದ್ರವನ್ನು ಪ್ರೇರಿಸಿರುವುದು, ಅತಿವೃಷ್ಟಿಯನ್ನು ಮಾಡಿಸಿರುವುದು, ಎಂಬ ಎರಡು ಅಪರಾಧಗಳನ್ನು ಮಾಡಿದ್ದೇನೆ. ಅದನ್ನು ನೀನು ಕ್ಷಮಿಸು. ಕಾಲಕೂಟವಿಷದ ಬಾಧೆಯನ್ನು ತಪ್ಪಿಸಿದ ಅಪರಿಮಿತ ದಯಾಶಾಲಿಯಾದ ನಿನ್ನ ತೀರ್ಥದ ಮಹಿಮೆಯಿಂದ, ಹಾಲಾಸ್ಯೇಶ್ವರ ಲಿಂಗವನ್ನು ದರ್ಶನಮಾಡು ವುದಕ್ಕಿಂತ ಮೊದಲೇ ನನ್ನ ಜಲೋದರ ವ್ಯಾಧಿಯು ಹೋಯಿತು." ಎಂದು ಹೇಳಿದನು.

೬೧–೬೩. ಅವನ ಮಾತನ್ನು ಕೇಳಿ ಹಾಲಾಸ್ಯಾಧಿಪನಾದ ಸುಂದರೇಶ್ವರನು "ನಿನಗೆ ಎಲ್ಲಾ ವಿಧವಾದ ಶ್ರೇಯಸ್ಸುಂಟಾಗಲಿ, ನೀನು ಯಾವಾಗಲೂ ಬಹಳ ಶಕ್ತಿಯುಳ್ಳವನಾಗಿ ಇರು. ನೀನು ಸ್ತೋತ್ರಮಾಡಿರುವ ಹಾಲಾಸ್ಯೇಶ್ವರಾಷ್ಟಕವನ್ನು

ಚತುರ್ವಿಧಾರ್ಥಸಿದ್ಧ್ಯೈ ಚ ಜಪ್ತವ್ಯಂ ಪಾಪಶಾಂತಯೇ ।
ಇತ್ಯುಕ್ತ್ವಾಂತರ್ದಧೇ ದೇವಃ ಪರಿಪೂರ್ಣಃ ಪರಃ ಶಿವಃ ॥ ೬೩ ॥

ವರುಣೋಽಥ ಮಹಾಲಿಂಗಂ ನತ್ವಾ ತುಷ್ಟಾವ ವೈ ಪುನಃ ।
ನಮಃ ಶಿವಾಯ ದೇವಾಯ ಕದಂಬವನವಾಸಿನೇ ॥ ೬೪ ॥

ಮಹಾದೇವಾಯ ಶರ್ವಾಯ ನೀಲಕಂಠಾಯ ಶೂಲಿನೇ ।
ಕಪಾಲಿನೇ ಕರಾಳಾಯ ಶಮ್ಯಾಕಸ್ರಗ್ಧರಾಯ ಚ ॥ ೬೫ ॥

ಯೋಗಾಯ ಯೋಗಗಮ್ಯಾಯ ಯೋಗಿನಾಂ ಪತಯೇ ನಮಃ ।
ಕಾಲಾಯ ಕಾಲಹಂತ್ರೇ ಚ ಕಾಲರೂಪಧರಾಯ ಚ ॥ ೬೬ ॥

ಶೂಲಾಯ ಶೂರಾಯ ಶುಭಪ್ರದಾಯ—
ಶುಭ್ರಾಭ್ರಯೂಥದ್ಯುತಯೇ ನಮಸ್ತೇ ।

---

ಪಾರಾಯಣ ಮಾಡುವವರಿಗೆ ನಾಲ್ಕು ವಿಧವಾದ ಪುರುಷಾರ್ಥಗಳೂ ಉಂಟಾಗಲಿ ಎಲ್ಲಾ ವಿಧವಾದ ಪಾಪಗಳೂ ಶಾಂತವಾಗಲಿ" ಎಂದು ಹೇಳಿ ಪರಿಪೂರ್ಣಪರಶಿವ ಭಾವದಿಂದ ಅದೃಶ್ಯನಾದನು.

೬೪–೬೬. ಅನಂತರದಲ್ಲಿ ವರುಣನು ಮಹಾಲಿಂಗಕ್ಕೆ ನಮಸ್ಕರಿಸಿ, ಪುನಃ ಸ್ತೋತ್ರಮಾಡಿದನು. "ಕದಂಬವನವಾಸಿಯಾದ ಶಿವನಿಗೆ ನಮಸ್ಕಾರವು. ಮಹಾದೇವ, ಶರ್ವ, ನೀಲಕಂಠ, ಶೂಲಿ ಎಂಬ ಹೆಸರಿನಿಂದ ಪ್ರಸಿದ್ಧನಾದ ಶಿವನಿಗೆ ನಮಸ್ಕಾರವು. ಕಪಾಲವನ್ನು ಹಿಡಿದುಕೊಂಡು, ಭಯಂಕರನಾಗಿ ಶಮ್ಯಾಕಪುಷ್ಪ, (ಕಕ್ಕೆಯ ಹೂವನ್ನು) ಮಾಲೆಯನ್ನಾಗಿ ಧರಿಸಿರುವ ಶಿವನಿಗೆ ನಮಸ್ಕಾರವು. ಚಿತ್ತ ನಿಗ್ರಹಸಾಧನವಾದ ಯೋಗರೂಪದಿಂದ ಇರುವ, ಯೋಗಾಭ್ಯಾಸಮಾಡುವವರಿಗೆ ಗಮ್ಯನಾಗಿ, ಯೋಗಿಗಳಿಗೆ ಈಶ್ವರನಾದ ಶಿವನಿಗೆ ನಮಸ್ಕಾರವು. ಕಾಲರೂಪದಿಂದ ಇರುತ್ತಾ, ಯಮನನ್ನು ನಿಗ್ರಹಿಸಿರುವ, ಭಯಂಕರವಾದ ಆಕಾರವನ್ನು ಹೊಂದಿರುವ ಶಿವನಿಗೆ ನಮಸ್ಕಾರವು.

೬೭–೬೮. ದುಷ್ಟರಿಗೆ ಶೂಲವಾಗಿಯೂ, ದುಷ್ಟರನ್ನು ನಿಗ್ರಹಿಸುವ ಶೂರನಾಗಿಯೂ, ಶಿಷ್ಟರಿಗೆ ಶುಭಪ್ರದನಾಗಿಯೂ, ಶುಭ್ರವಾದ ನೀರಿಲ್ಲದೆ ಇರುವ ಮೋಘದ ಕಾಂತಿಯುಳ್ಳ ಶಿವನಿಗೆ ನಮಸ್ಕಾರವು. ವಿಷ್ಣು, ಬ್ರಹ್ಮ ಇವರಿಂದಲೂ ನಮಸ್ಕಾರ

ನಾರಾಯಣಾಂಭೋರುಹಸಂಭವಾದ್ಯೈ
ರ್ವಂದ್ಯಾಯ ದೇವೈರ್ನಳಿನಾನನಾಯ ॥ ೬೭ ॥

ಅಪರಾಧಂ ಕ್ಷಮಸ್ವೇತಿ ಪುನಃ ಪುನರುದೀರಯರ್ನ್ ।
ಅತ್ಯಂತತುಷ್ಟಹೃದಯಃ ಸ್ವಾಲಯಂ ವರುಣೋ ಯಯೌ ॥ ೬೮ ॥

ತದಾ ಪ್ರಭೃತಿ ಹಾಲಾಸ್ಯಂ ಚತುಷ್ಕೂಟಪುರಂ ವಿದುಃ ।
ಏಕೋನವಿಂಶತಿಂಲೀಲಾಂ ವರ್ಷರಕ್ಷಣಲಕ್ಷಿತಾಂ ॥ ೬೯ ॥

ಜೀವನ್ ವರ್ಷಸಹಸ್ರಾಣಿ ಭುವಿ ಪುತ್ರಾದಿಸಂಯುತಃ ।
ಅನುಭೂಯ ಮಹಾಸೌಖ್ಯಮಂತೇ ಸಾಯುಜ್ಯಮೇಷ್ಯತಿ ॥ ೭೦ ॥

ಇತಿ ಶ್ರೀ ಸ್ಕಾಂದ ಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ವರ್ಷರಕ್ಷಣಂ ನಾಮ
ಪಂಚ ವಿಂಶೋಽಧ್ಯಾಯಃ

---

ಗಳನ್ನು ಹೊಂದುತ್ತಾ ದೇವಪೂಜ್ಯನಾಗಿ, ಕಮಲದಂತಿರುವ ಮುಖವುಳ್ಳ ಶಿವನಿಗೆ ನಮಸ್ಕಾರವು. ಎಲೈ ಪರಶಿವನೆ ನನ್ನ ಅಪರಾಧಗಳನ್ನು ಕ್ಷಮಿಸು" ಎಂದು ಅನೇಕ ಸಾರಿ ಬೇಡಿಕೊಂಡು, ವರುಣನು ಸಂತೋಷದಿಂದ ತನ್ನ ಮನೆಗೆ ಹೋದನು.

೬೯-೭೦. ವರುಣನು ಹಾಲಾಸ್ಯೇಶ್ವರನ ಮಹಿಮೆಯನ್ನು ಪರೀಕ್ಷಿಸಿದ ಕಾಲ ಮೊದಲುಗೊಂಡು ಮಧುರಾನಗರಕ್ಕೆ ಚತುಷ್ಕೂಟಪುರವೆಂದು ಹೆಸರುಬಂದಿರುವುದು. ಹತ್ತೊಂಬತ್ತನೆಯದಾದ ಈ ಲೀಲೆಯು ಮಳೆಯ ರಕ್ಷಣದಿಂದ ಕೂಡಿರುವುದು. ಈ ಲೀಲೆಯನ್ನು ಕೇಳಿದವನೂ, ಪಾರಾಯಣ ಮಾಡಿದವನೂ, ಅನೇಕ ವರ್ಷಗಳವರೆಗೆ ಜೀವಿಸಿ, ಪುತ್ರಪೌತ್ರಾದಿ ಸುಖಗಳನ್ನು ಅನುಭವಿಸಿ, ಕೊನೆಯಲ್ಲಿ ಶಿವಸಾಯುಜ್ಯವನ್ನು ಹೊಂದುವನು.

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ
ವರ್ಷರಕ್ಷಣವೆಂಬ ಹೆಸರಿನ ಇಪ್ಪತ್ತೈದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಷಡ್ವಿಂಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ವಕ್ಷ್ಯೇ ಯುಷ್ಮಾಕಮಾಶ್ಚರ್ಯಂ ಹಾಲಾಸ್ಯೇಶಕೃತಂ ದ್ವಿಜಾಃ ।
ಚಿತ್ರಂ ಸಿದ್ಧಚರಿತ್ರಂ ಚ ಶೃಣುಧ್ವಂ ಮುನಿಪುಂಗವಾಃ ॥ ೧ ॥

ಹಾಲಾಸ್ಯವಾಸೀ ದೇವಸ್ತು ಕನಕಾಚಲಕಾರ್ಮುಕಃ ।
ಕರ್ತುಂ ಲೀಲಾ ವಿಚಿತ್ರಾಶ್ಚ ಸಮರ್ಥೋ ಭಕ್ತವತ್ಸಲಃ ॥ ೨ ॥

ವಿಶ್ವಕರ್ಮವಿನಿಷ್ಪನ್ನವಿಮಾನಾವಾಸಸುಪ್ರಿಯಃ ।
ಮಹದೈಶ್ವರ್ಯದಾನಾರ್ಥಂ ಮಧುರಾಪುರವಾಸಿನಾಂ ॥ ೩ ॥

ತಸ್ಯಾಭಿಷೇಕಪಾಂಡ್ಯಸ್ಯ ಮಹಾಭಕ್ತಿಯುತಸ್ಯ ಚ ।
ದಾತುಂ ಸರ್ವಾರ್ಥಸಿದ್ಧೀಶ್ಚ ಸಿದ್ಧವೇಷಂ ಸಮಗ್ರಹೀತ್ ॥ ೪ ॥

---

### ಇಪ್ಪತ್ತಾರನೆಯ ಅಧ್ಯಾಯವು.

೧–೨. ಅಗಸ್ತ್ಯಋಷಿಯು ಹೇಳಿದನು:—"ಎಲೈ ಋಷಿಶ್ರೇಷ್ಠರೇ ಕೇಳಿರಿ. ನಾನು ಹಾಲಾಸ್ಯೇಶ್ವರನು ನಡೆಸಿದ ಸಿದ್ಧಪುರುಷನ ಚರಿತ್ರೆಯನ್ನು ಹೇಳುವೆನು. (ಭಕ್ತರ ವಿಷಯದಲ್ಲಿ ಪ್ರೀತಿಯುಳ್ಳನಾದ) ಹಾಲಾಸ್ಯೇಶ್ವರನು ಮೇರು ಪರ್ವತವನ್ನು ಧನುಸ್ಸನ್ನಾಗಿ ಮಾಡಿಕೊಂಡಿರುವ ಹಾಗೆ, ಬಹಳ ವಿಧವಾದ ಲೀಲೆಗಳನ್ನು ಮಾಡಲು ಸಮರ್ಥನಾಗಿರುವನು."

೩–೪. ವಿಶ್ವಕರ್ಮನು ನಿರ್ಮಿಸಿದ ವಿಮಾನದಲ್ಲಿ ಪ್ರೀತಿಯಿಂದ ವಾಸ ಮಾಡುತ್ತಾ ಹಾಲಾಸ್ಯೇಶ್ವರನು ಮಧುರಾನಗರ ವಾಸಿಗಳಿಗೆ ಅಪರಿಮಿತೈಶ್ವರ್ಯವನ್ನು ಕೊಡುವುದಕ್ಕಾಗಿಯೂ, ಬಹಳ ಭಕ್ತಿಯುಳ್ಳವನಾದ ಅಭಿಷೇಕ ಪಾಂಡ್ಯರಾಜನಿಗೆ ಎಲ್ಲಾ ಕಾರ್ಯಸಿದ್ಧಿಯನ್ನೂ ಉಂಟುಮಾಡುವುದಕ್ಕೂ, ಸಿದ್ಧಪುರುಷನ ವೇಷವನ್ನು ಪರಿಗ್ರಹಿಸಿದನು.

ಕಟಕಾಭ್ಯಾಂ ನೂಪುರಾಭ್ಯಾಮಲಂಕೃತಪದದ್ವಯಃ ।
ಆಚ್ಛಾದನಂ ಚ ಕೌಪೀನಂ ಧೃತ್ವಾ ಶಾರ್ದೂಲಚರ್ಮಣಾ ॥ ೫ ॥

ಖಟ್ವಾಂಗವಿಲಸತ್ಪಾಣಿರ್ಭಸ್ಮೋದ್ಧೂಳಿತವಿಗ್ರಹಃ ।
ಭಸ್ಮಧಾರಾಭಿರಾಮಾಂಕೋ ಮಹಾಮೇರುಸಮುನ್ನತಃ ॥ ೬ ॥

ಸರ್ವಸನ್ನದ್ಧಕಪಿಲಹ್ರಸ್ವಕುಂಚಿತಸಜ್ಜಟಃ
ಶುದ್ಧಸ್ಫಟಿಕಸಂಕಾಶಕುಂಡಲಾಭ್ಯಾಂ ಮನೋಹರಃ ॥ ೭ ॥

ಮಂದಸ್ಮಿತಲಸದ್ವಕ್ತ್ರಃ ಕುಂದಕುಟ್ಮಲದಂತವಾನ್ ।
ಶುಭ್ರಾಭಿರಸ್ಥಿ ಮಾಲಾಭಿರಾವೇಷ್ಟಿತಕಳೇಬರಃ ॥ ೮ ॥

ವಿಚಿತ್ರೋಡ್ಯಾಣಬಂಧೇನ ಕಟಿಶೋಭಾಂ ವಿಧಾಯ ಚ ।
ಷೋಡಶಾಬ್ದಾಕೃತಿಃ ಸೌಮ್ಯೋ ಯೋಗಪಟ್ಟಂ ಸಮುದ್ವಹನ್ ॥ ೯ ॥

೫–೬. ಸಿದ್ಧಪುರುಷನು ಕಾಲಿಗೆ ಕಡಗ, ನೂಪುರಗಳನ್ನು ಧರಿಸಿದ್ದನು. ಕೌಪೀನವನ್ನು ಹಾಕಿಕೊಂಡು ಹುಲಿಯ ಚರ್ಮವನ್ನು ಹೊದ್ದು ಕೊಂಡಿದ್ದನು. ಖಟ್ವಾಂಗ ಎಂಬ ಆಯುಧವನ್ನು ಹಿಡಿದುಕೊಂಡು, ಶರೀರವೆಲ್ಲವನ್ನೂ ಭಸ್ಮದಿಂದ ಉದ್ಧೂಳನೆ ಮಾಡಿಕೊಂಡು ಇದ್ದನು. ಭಸ್ಮದ ರಾಶಿಯಂತೆ ಇರುವ ಮನೋಹರವಾದ ಹೆಗಲುಳ್ಳವನಾಗಿ ಮೇರುಪರ್ವತದಂತೆ ಎತ್ತರವಾಗಿದ್ದನು.

೭–೧೦. ಆ ಸಿದ್ಧಪುರುಷನು ತನ್ನ ಜಟೆಯನ್ನು ಹ್ರಸ್ವವಾಗಿ ಮಾಡಿಕೊಂಡು, ಅದನ್ನು ಒಟ್ಟುಗೂಡಿಸಿ, ಕಪಿಲವರ್ಣವಾಗಿರುವ ಆ ಜಟೆಯ ಮೇಲುಗಡೆಯಲ್ಲಿ ಹಾವನ್ನು ಸುತ್ತಿಕೊಂಡಿದ್ದನು. ಶುದ್ಧವಾದ ಸ್ಫಟಿಕದಂತೆ ಇರುವ ಕಾಂತಿಯುಳ್ಳವನಾಗಿ, ಕಿವಿಗೆ ಕುಂಡಲಗಳನ್ನು ಧರಿಸಿದ್ದನು. ಮಂದ ಹಾಸದಿಂದ ಕೂಡಿದ ಮುಖದಿಂದ ಪ್ರಕಾಶಿಸುತ್ತಾ ಮಾಘಮಾಸದಲ್ಲಿರುವ ಮಲ್ಲಿಗೆ ಮೊಗ್ಗಿನಂತಿರುವ ದಂತಪಂಕ್ತಿಯುಳ್ಳವನಾಗಿದ್ದನು. ಅವನು ತನ್ನ ಶರೀರದಲ್ಲಿ ಶುಭ್ರವಾದ ಮೂಳೆಗಳನ್ನು ಅಲಂ

ವೇತ್ರಂ ಚ ಕಾಂಚನಮಯಂ ಧೃತ್ವಾ ಧಕ್ಷಕರೇಣ ಚ ।
ಸಿದ್ಧಸ್ಸ ಮಧುರಾವೀಥ್ಯಾಂ ಚರತಿಸ್ಮ ಮುದಾನ್ವಿತಃ ॥ ೧೦ ॥

ಯೇ ಯೇ ಜನಾಃ ಸಮಾಹೂಯ ತಂ ಸಿದ್ಧಂ ಪರಿಪೂಜ್ಯ ಚ ।
ಪ್ರಾರ್ಥಯಂತಿ ಚ ಯದ್ವಸ್ತು ತೇಭ್ಯಸ್ತೇಭ್ಯೋ ದದಾತಿ ತತ್ ॥ ೧೧ ॥

ಕೇಚಿದ್ವೃದ್ಧಾಸ್ತದಾಗತ್ಯ ಜರ್ಝರೀಕೃತವಿಗ್ರಹಾಃ ।
ನಿರ್ದಂತಾ ಕಾಶಕೇಶಾಶ್ಚ ಪ್ರಾರ್ಥಯಂತಿ ಚ ಯೌವನಂ ॥ ೧೨ ॥

ದಿವ್ಯಯಾ ವೇತ್ರಯಷ್ಟ್ಯಾ ಚ ತೇಷಾಂ ಮೂರ್ಧಸು ಸಂಸ್ಪೃಶ ।
ಯುವತ್ವಂ ಪ್ರದದೌ ತೇಭ್ಯೋ ಮಹಾಸಿದ್ಧೋ ಮಹೇಶ್ವರಃ ॥ ೧೩ ॥

ವಂಧ್ಯಾಃ ಕಾಶ್ಚಿತ್ಸಮಾಯಾತಾಃ ಶೃತ್ವಾ ಸಿದ್ಧಸ್ಯ ವೈಭವಂ ।
ತಾ ಸಾಂ ಫಾಲೇ ಭಸ್ಮ ದತ್ವಾ ಗರ್ಭವತ್ಯಶ್ಚಕಾರ ಸಃ ॥ ೧೪ ॥

---

ಕಾರವಾಗಿ ಧರಿಸಿದ್ದನು. ಆಶ್ಚರ್ಯಕರವಾದ ನಡುಗಟ್ಟಿನಿಂದ ಮೆರೆಯುತ್ತಾ ಹದಿನಾರು ವರ್ಷದ ವಯಸ್ಸಿಗೆ ಅನುಗುಣವಾದ ಆಕೃತಿಯುಳ್ಳವನಾಗಿ, ಯೋಗಪಟ್ಟವನ್ನು ಹಿಡಿದುಕೊಂಡು, ಬಲಗೈಯ್ಯಿನಲ್ಲಿ ಚಿನ್ನದ ಬೆತ್ತವನ್ನು ಹಿಡಿದುಕೊಂಡು, ಮಧುರಾ ನಗರದ ಬೀದಿಯಲ್ಲಿ ಸಂತೋಷದಿಂದ ಓಡಾಡುತ್ತಿದ್ದನು.

೧೧-೧೩. ಈ ಸಿದ್ಧಪುರುಷನನ್ನು ನೋಡಿ ಅವನನ್ನು ಕರೆದು, ಪೂಜಿಸಿದ ಜನರೆಲ್ಲರಿಗೂ ಅವರವರ ಇಷ್ಟಗಳನ್ನು ನಡೆಸಿಕೊಡುತ್ತಿದ್ದನು. ಆಗ ಮುಪ್ಪಿನಿಂದ ಗಲಿತ ವಾದ ಶರೀರವುಳ್ಳ, ಹಲ್ಲುಗಳು ಇಲ್ಲದಿರುವ, ನರೆತು ಬೆಳ್ಳಗಾದ ಕೂದಲಿನ ತಲೆಯ ಮುದುಕರು, ಆ ಸಿದ್ಧನ ಹತ್ತಿರಕ್ಕೆ ಬಂದು ತಾವು ಕಪ್ಪು ಕೂದಲುಗಳುಳ್ಳ ಯೌವನಸ್ಥ ರಾಗಲು ಕೇಳಿಕೊಂಡರು. ದೊಡ್ಡ ಸಿದ್ಧಪುರುಷನಾದ ಮಹೇಶ್ವರನು ಶ್ರೇಷ್ಠವಾದ ತನ್ನ ಬೆತ್ತದಿಂದ ಅವರ ತಲೆಯನ್ನು ಮುಟ್ಟಿ ಅವರಿಗೆ ಯೌವನವನ್ನು ಕೊಟ್ಟನು.

೧೪-೧೬. ಮಕ್ಕಳಿಲ್ಲದ ಕೆಲವು ಹೆಂಗಸರು ಸಿದ್ಧ ಪುರುಷನ ವೈಭವವನ್ನು ಕೇಳಿ ಅವನನ್ನು, ತಮಗೆ ಮಕ್ಕಳು ಆಗಬೇಕೆಂದು ಬೇಡಿಕೊಂಡರು. ಅವನು ಅವರ ಹುಬ್ಬಿಗೆ ಭಸ್ಮವನ್ನು ಹಚ್ಚಿದನು. ಅದರಿಂದ ಅವರು ಗರ್ಭವತಿಯರಾದರು. ಕಣ್ಣಿಲ್ಲ

ಅಂಧಾಶ್ಚ ಬಧಿರಾಶ್ಚಾನ್ಯೇ ಸಮಾಯಾಂತಿ ಸಸಂಭ್ರಮಾಃ ।
ತೇಭ್ಯಶ್ಚಾಂಜನದಾನೇನ ತದ್ದೋಷಂ ಹರತಿಸ್ಮ ಸಃ ॥ ೧೫ ॥

ಪಂಗವಃ ಪಾಣಿಹೀನಾಶ್ಚ ಕುಬ್ಜಾಶ್ಚಾನ್ಯೇ ಸಮಾಯಯುಃ ।
ಭಸ್ಮವೇತ್ರಪ್ರಹಾರಾಭ್ಯಾಂ ರಕ್ಷಯಾಮಾಸ ತಾನ್ಮುದಾ ॥ ೧೬ ॥

ಭೂತಪ್ರೇತಪಿಶಾಚಾದ್ಯೈಃ ಪೀಡಿತಾ ಬಹವೋ ಜನಾಃ ।
ಆಗತ್ಯ ದೃಷ್ಟ್ವಾ ತಂ ಸಿದ್ಧಂ ವಿಮುಕ್ತಾ ವಿವಿಧಾಪದಃ ॥ ೧೭ ॥

ಕುಷ್ಠಮಷ್ಟಾದಶವಿಧಂ ಪರಿಹೃತ್ಯ ಚ ಭಸ್ಮನಾ ।
ಕುಷ್ಠವ್ಯಾಧಿಯುತಾನಾಂ ಚ ಪ್ರಕರೋತಿ ಮಹತ್ಪ್ರಿಯಂ ॥ ೧೮ ॥

ಶಿರಃಕರ್ಣಾಕ್ಷಿರೋಗಾರ್ತಾ ಜ್ವರಗುಲ್ಮಾದಿಪೀಡಿತಾಃ ।
ಸರ್ವೇ ನೀರೋಗತಾಂ ಪ್ರಾಪುಸ್ತತ್ಸಿದ್ಧಸ್ಯ ಕಟಾಕ್ಷತಃ ॥ ೧೯ ॥

ದಾರಿದ್ರ್ಯಕರ್ಶಿತಾನಾಂ ಚ ಜನಾನಾಂ ಭವನಾನಿ ಚ ।
ಧನಧಾನ್ಯಸಮ್ಪೂರ್ಣಾನಿ ಸಿದ್ಧೇನ ಚ ಕೃತಾನಿ ಚ ॥ ೨೦ ॥

---

ದವರೂ, ಕಿವುಡರೂ ಆ ಸಿದ್ಧನ ಹತ್ತಿರಕ್ಕೆ ಬಂದು ಅವನು ಕೊಟ್ಟ ಅಂಜನದಿಂದ ತಮ್ಮ ತಮ್ಮ ಇಂದ್ರಿಯಗಳ ದೋಷಗಳನ್ನು ಕಳೆದುಕೊಂಡರು. ಹೆಳವರು, ಕೈಯ್ಯಿಲ್ಲದವರು, ಕುಳ್ಳರು ಇವರೆಲ್ಲರೂ ಸಂಭ್ರಮದಿಂದ ಅವನ ಹತ್ತಿರಕ್ಕೆ ಬಂದರು. ಅವನು ಅವರ ಶರೀರವನ್ನು ತನ್ನ ಬೆತ್ತದಿಂದ ಸ್ಪರ್ಶಮಾಡಿ ಅವರ ನ್ಯೂನತೆಯನ್ನು ಪರಿಹಾರ ಮಾಡಿದನು.

೧೭–೨೦. ಭೂತ, ಪ್ರೇತ, ಪಿಶಾಚ ಇವುಗಳ ಬಾಧೆಗೆ ಒಳಗಾದ ಬಹು ಜನರು, ಆ ಸಿದ್ಧಪುರುಷನ ದಯೆಯಿಂದ ತಮ್ಮ ವಿಪತ್ತುಗಳನ್ನು ಪರಿಹರಿಸಿಕೊಂಡರು. ಆ ಸಿದ್ಧಪುರುಷನು ಹದಿನೆಂಟು ವಿಧವಾದ ಕುಷ್ಠರೋಗವನ್ನು ಭಸ್ಮದಿಂದಲೇ ಪರಿಹರಿಸಿದನು. ಅದರಿಂದ ಕುಷ್ಠರೋಗವುಳ್ಳವರಿಗೆ ಬಹಳ ಉಪಕಾರ ಮಾಡಿದನು. ತಲೆಯ ನೋವು, ಕಣ್ಣುನೋವು, ಜ್ವರದಗಡ್ಡೆ ಇವುಗಳ ಬಾಧೆಯನ್ನು ಅನುಭವಿಸುತ್ತಿದ್ದವರೆಲ್ಲರೂ, ಆ ಸಿದ್ಧಪುರುಷನ ಕಟಾಕ್ಷದಿಂದ ತಮ್ಮ ತಮ್ಮ ರೋಗಗಳನ್ನು ಕಳೆದುಕೊಂಡರು. ಆರೋಗ್ಯವುಳ್ಳವರಾದರು. ಬಡತನದಿಂದ ಕೊರಗುತ್ತಿರುವ ಅನೇಕ ಜನರು ಆ ಸಿದ್ಧಪುರುಷನ ದಯೆಯಿಂದ ಬೇಕಾದಷ್ಟು ಧನ, ಧಾನ್ಯಗಳನ್ನು ತಮ್ಮ ತಮ್ಮ ಮನೆಗಳಲ್ಲಿ ತುಂಬಿಕೊಂಡರು.

ವಶ್ಯವಾದವಯಸ್ತಂಭಾ ನ ದೃಶ್ಯಾ ಕರ್ಷಣಾಂಜನಂ ।
ಏವಂ ವಕಾರತ್ರಿತಯಂ ಮಕಾರತ್ರಿತಯಂ ತಥಾ ॥ ೨೧ ॥

ಯೂನಾಂ ತು ದರ್ಶಯಿತ್ವಾ ತಾ ಮೋಹಯಾಮಾಸ ಸುಂದರಂ ।
ಇಂದ್ರಜಾಲಮಹಾಜಾಲಪ್ರಮುಖಾನಿ ಮಹಾಂತಿ ಚ ॥ ೨೨ ॥

ವಿಚಿತ್ರಾಣಿ ಚ ಕರ್ಮಾಣಿ ದರ್ಶಯಾಮಾಸ ವೈ ಮುಹುಃ ।
ವಶ್ಯಾಕರ್ಷಣವಿದ್ವೇಷಸ್ತಂಭನೋಚ್ಚಾಟನಾದಿಭಿಃ ॥ ೨೩ ॥

ವಶೀಕೃತಾ ಜನಾಸ್ಸರ್ವೇ ಶಂಭುನಾ ಸಿದ್ಧರೂಪಿಣಾ ।
ಅಶ್ವಾಂಶ್ಚ ರಾಸಭಾಕಾರಾನಶ್ವಾಕಾರಾಂಶ್ಚ ರಾಸಭಾ ॥ ೨೪ ॥

ಬಿಡಾಲಾಂಶ್ಚ ಮಹಾವ್ಯಾಘ್ರಾ ಪುನರ್ವ್ಯಾಘ್ರಾ ಬಿಡಾಲಕಾ ।
ವೃದ್ಧಾಂಶ್ಚ ಬಾಲರೂಪೇಣ ಬಾಲಾ ವೃದ್ಧಸ್ವರೂಪತಃ ॥ ೨೫ ॥

---

೨೧-೨೪. ಆ ಸಿದ್ಧಪುರುಷನು ವಶ್ಯ (ಇತರರನ್ನು ವಶ ಮಾಡಿಕೊಳ್ಳುವುದು) ವಾದ(ಪಾದರಸದಿಂದ ಚಿನ್ನ ಮಾಡುವುದು)ವಯಸ್ತಂಭ (ವಯಸ್ಸು ಕಾಣದಿರುವಂತೆ ಶರೀರದ ಯೌವನವನ್ನು ನಿಲ್ಲಿಸಿಕೊಳ್ಳುವುದು) ಅದೃಶ್ಯ, (ತಾನು ಇದ್ದರೂ ಇತರರಿಗೆ ಕಾಣಿಸದೆ ಇರುವುದು) ಆಕರ್ಷಣ (ವಸ್ತುಗಳನ್ನೂ, ಪ್ರಾಣಿಗಳನ್ನೂ ಬೇರೆಯಕಡೆಗೆ ಹೋಗುವಂತೆ ಮಾಡುವುದು) ಇವುಗಳಿಗೆ ಉಪಯುಕ್ತವಾದ ಅಂಜನದಿಂದ ವಾದ, ವಶ್ಯ, ವಯಸ್ತಂಭಗಳೆಂಬ ವಕಾರತ್ರಯವನ್ನು ಆಚರಿಸುವಂತೆ, ಮಾಯಾ, ಮೋಹ, ಮೋಸಗಳೆಂಬ ಮಕಾರತ್ರಯವನ್ನು ನಡೆಸುತ್ತಿದ್ದನು. ಅವನು ಇಂದ್ರಜಾಲವಿದ್ಯೆ, ಮಹಾಜಾಲವಿದ್ಯೆಯೇ ಮೊದಲಾದ ವಿದ್ಯೆಗಳನ್ನು ತೋರಿಸಿ ಯೌವನಸ್ಥರನ್ನು ಮೋಹಗೊಳಿಸಿದನು. ಆಶ್ಚರ್ಯಕರವಾದ ಅನೇಕ ಕೆಲಸಗಳನ್ನು ಪದೇ ಪದೇ ಮಾಡುತ್ತಿದ್ದ ಆ ಸಿದ್ಧಪುರುಷನಿಗೆ ವಶ್ಯ, ಆಕರ್ಷಣ, ವಿದ್ವೇಷ, ಸ್ತಂಭನ, ಉಚ್ಚಾಟನ, ಈ ಕಾರ್ಯಗಳನ್ನು ಮಾಡಿಸುವ ಜನರೆಲ್ಲರೂ ಅಧೀನದಲ್ಲಿರುವವ ರಾದರು.

೨೫-೨೯. ಆ ಸಿದ್ಧಪುರುಷನಾದ ಪರಮೇಶ್ವರನು ಕುದುರೆಗಳನ್ನು ಕತ್ತೆಯ ಆಕಾರವುಳ್ಳವುಗಳನ್ನಾಗಿಯೂ, ಕತ್ತೆಗಳನ್ನು ಕುದುರೆಗಳನ್ನಾಗಿಯೂ, ಬೆಕ್ಕುಗಳನ್ನು ಹುಲಿಗಳನ್ನಾಗಿಯೂ, ಹುಲಿಗಳನ್ನು ಬೆಕ್ಕುಗಳನ್ನಾಗಿಯೂ, ಮುದುಕರನ್ನು ಹುಡು

ಏವಂ ಬಹುವಿಧಂ ಕರ್ಮ ಕೃತ್ವಾ ವಿಹರತಿ ಪ್ರಭುಃ ।
ಪುರೋಪವನಮಾಸಾದ್ಯ ತತ್ರ ಚಿತ್ರಾಣ್ಯದರ್ಶಯತ್ ॥ ೨೬ ॥

ಲಾಂಗಲೀವೃಕ್ಷವೃಂದಾನಿ ತಾಲವೃಕ್ಷಾನ್ ಕರೋತಿ ಚ ।
ತಾಲಾಂಶ್ಚ ಲಾಂಗಲೀವೃಕ್ಷಾನ್ ಪುನರಪ್ಯಕರೋತ್ಪ್ರಭುಃ ॥ ೨೬ ॥

ಏವಂ ವೃಕ್ಷವಿಪರ್ಯಾಸಂ ಕೃತ್ವಾನೇಕಪ್ರಕಾರತಃ ।
ಅಪುಷ್ಪಿತಾನ್ ಪುಷ್ಪಿತಾಂಶ್ಚ ಸಫಲಾನಫಲಾನಪಿ ॥ ೨೮ ॥

ಉನ್ನತಾನಪಿ ಹ್ರಸ್ವಾಂಶ್ಚ ಹ್ರಸ್ವಾನತ್ಯುನ್ನತಾನಪಿ ।
ಪೂಗಪುನ್ನಾಗಪನಸಸಹಕಾರಾದಿಪಾದಪಾನ್ ॥ ೨೯ ॥

ಇತಿ ಕೃತ್ವಾ ವೇಗವತೀಂ ನಿರ್ಜಲಾಂ ಸಜಲಾಂ ವ್ಯಧಾತ್ ।
ಭೂಯಶ್ಚ ನಿರ್ಜಲಾಂ ಕೃತ್ವಾ ಕ್ರೀಡಯಾಮಾಸ ತೈರ್ಜನೈಃ ॥ ೩೦ ॥

---

ಗರನ್ನಾಗಿಯೂ, ಹುಡುಗರನ್ನು ಮುದುಕರನ್ನಾಗಿಯೂ, ಮಾಡುವ ಇದೇ ವಿಧವಾದ ಆಶ್ಚರ್ಯಕರವಾದ ಕೆಲಸಗಳನ್ನು ಮಾಡುತ್ತಾ ಆಟವಾಡುತ್ತಿದ್ದನು. ಆ ಸಿದ್ಧ ಪುರುಷನು ಮಧುರಾನಗರದ ಉದ್ಯಾನವನದಲ್ಲಿರುವ ತೆಂಗಿನ ಮರಗಳನ್ನು ತಾಳೆಮರವನ್ನಾಗಿಯೂ, ತಾಳೇ ಮರವನ್ನು ತೆಂಗಿನ ಮರವನ್ನಾಗಿಯೂ ಮಾಡಿದನು. ಮರಗಳ ಬದಲಾವಣೆಯನ್ನು ಹೀಗೆ ಬಹು ವಿಧವಾಗಿ ಮಾಡಿ, ಹೂವಿಲ್ಲದ ಗಿಡಗಳಲ್ಲಿ ಹೂವನ್ನೂ, ಹೂವಿರುವ ಗಿಡಗಳಲ್ಲಿ ಹೂವಿಲ್ಲದಂತೆಯೂ, ಹಣ್ಣು ಕಾಯಿಗಳು ಇಲ್ಲದಿರುವ ಮರಗಳಲ್ಲಿ ಹಣ್ಣು ಕಾಯಿಗಳು ಉಂಟಾಗುವಂತೆಯೂ, ಸಫಲವಾಗಿರುವ ಮರಗಿಡಗಳು ಅಫಲವಾಗಿರುವಂತೆಯೂ ಮಾಡುತ್ತಿದ್ದನು. ಅವನು ಎತ್ತರವಾಗಿರುವ ಅಡಿಕೆ, ಪುನ್ನಾಗ, ಹಲಸು, ಮಾವು, ಈ ಮರಗಳನ್ನು ಕುಳ್ಳಾಗಿರುವಂತೆಯೂ, ಕುಳ್ಳಾಗಿ ಇರುವ ಮರಗಳನ್ನು ಎತ್ತರವಾಗಿ ಬೆಳೆಯುವಂತೆಯೂ ಮಾಡುತ್ತಿದ್ದನು.

೩೦–೩೪. ವೇಗವತೀ ನದಿಯಲ್ಲಿ ನೀರು ಇದ್ದರೆ, ಇಲ್ಲದಂತೆಯೂ, ನೀರು ಇಲ್ಲದಿದ್ದರೆ, ನೀರು ಇರುವಂತೆಯೂ ಮಾಡುತ್ತಾ, ಪುನಃ ನೀರಿಲ್ಲದಂತೆ ಮಾಡುತ್ತಾ, ಜನರೊಡನೆ ಆಟವಾಡುತ್ತಿದ್ದ ಸಿದ್ಧಪುರುಷನು, ಹತ್ತಿರದಲ್ಲಿರುವ ಬೆಟ್ಟವನ್ನು ದೂರ

ದೂರಸ್ಥಂ ಪರ್ವತಮಪಿ ಸಮೀಪಸ್ಥಮಿವಾಕರೋತ್ ।
ಸಮೀಪಸ್ಥಂ ಪರ್ವತಂ ಚ ದೂರಸ್ಥಂ ತಮಿವಾಕರೋತ್ ॥ ೩೧ ॥

ರಾತ್ರಿಚಿಹ್ನಾನಿ ಸರ್ವಾಣಿ ದಿವಾಕಾಲೇಪ್ಯದರ್ಶಯತ್ ।
ದಿವಾಚಿಹ್ನಾನಿ ಸರ್ವಾಣಿ ರಾತ್ರೌ ದರ್ಶಯತಿ ಪ್ರಭುಃ ॥ ೩೨ ॥

ಖಟ್ವಾಂಗಮಂಬರೇ ಸ್ಥಾಪ್ಯ ತಸ್ಮಿನ್ಸೂಚೀಂ ನಿಧಾಯ ಚ ।
ಪಾದಾಂಗುಷ್ಠಾಗ್ರತಸ್ತಸ್ಯಾಂ ಸ್ಥಿತ್ವಾ ಭ್ರಮಣಮಾತನೋತ್ ॥ ೩೩ ॥

ಪುನಸ್ತಸ್ಯಾಂ ಶಿರಃ ಸ್ಥಾಪ್ಯ ಪಾದಾವೂರ್ಧ್ವಂ ಪ್ರಸಾರ್ಯ ಚ ।
ವೇಗಾತ್ಕರೋತಿ ಭ್ರಮಣಂ ಸಿದ್ಧೋ ವಿಸ್ಮಾಪಯನ್ ಜನಾನ್ ॥ ೩೪ ॥

ಪುನಃ ಸಿದ್ಧಃ ಖೇಚರಸ್ಸನ್ ಚಕಾರ ವಿಹಗೇಂದ್ರವತ್ ।
ಅಥ ಮೇಘಪಥಂ ಗತ್ವಾ ಕಾಲಮೇಘಂ ಸುಗರ್ಜಿತಂ ॥ ೩೫ ॥

---

ದಲ್ಲಿರುವಂತೆಯೂ, ದೂರದ ಬೆಟ್ಟವನ್ನು ಹತ್ತಿರದಲ್ಲಿರುವಂತೆಯೂ ಮಾಡುತ್ತಿದ್ದನು. ಅವನು ರಾತ್ರಿಯ ಚಿಹ್ನೆಗಳು ಎಲ್ಲವನ್ನೂ ಹಗಲಿನಲ್ಲಿ ಎಲ್ಲರೂ ನೋಡುವಂತೆ ಮಾಡುತ್ತಿದ್ದನು. ಹಗಲಿನ ಚಿಹ್ನೆಗಳು ರಾತ್ರಿಯಲ್ಲಿ ಕಾಣುವ ಹಾಗೆ ಮಾಡುತಿದ್ದನು. ಸಿದ್ಧಪುರುಷನು ತನ್ನ ಕೈಯ್ಯಿನಲ್ಲಿರುವ ಖಡ್ವಾಂಗವನ್ನು ಆಕಾಶದಲ್ಲಿ ಇರಿಸಿ, ಅದರ ತುದಿಗೆ ಸೂಜಿಯನ್ನು ನೆಟ್ಟು, ಸೂಜಿಯ ತುದಿಯಲ್ಲಿ ತನ್ನ ಕಾಲಿನ ಹೆಬ್ಬೆರಳಿನಿಂದ ಸುತ್ತುತ್ತಿದ್ದನು. ಆ ಸೂಜಿಯ ತುದಿಗೆ ತನ್ನ ತಲೆಯನ್ನು ಸಿಕ್ಕಿಸಿ, ತನ್ನ ಕಾಲುಗಳನ್ನು ಮೇಲಕ್ಕೆ ನೀಡಿಕೊಂಡು ಜನರಿಗೆ ಆಶ್ಚರ್ಯವನ್ನುಂಟುಮಾಡುತ್ತಾ ವೇಗವಾಗಿ ಸುತ್ತುತ್ತಿದ್ದನು.

೩೫–೩೭ ಆ ಸಿದ್ಧಪುರುಷನು ಅಂತರಿಕ್ಷದಲ್ಲಿ ಸಂಚರಿಸುತ್ತಾ, ಹಕ್ಕಿಯಂತೆ ಹಾರಿ, ಮೇಘಗಳು ಇರುವ ಪ್ರದೇಶಕ್ಕೆ ಹೋಗಿ, ಗರ್ಜಿಸುತ್ತಿರುವ, ನೀರು ತುಂಬಿರುವ ಮೇಘವನ್ನು ಭೂಮಿಗೆ ತನ್ನ ತೋಳುಗಳಿಂದ ಎಳದುಕೊಂಡು ಬೇಗಬಂದು ಮಿಂಚಿನ ಸಮೂಹದಿಂದ ಕೂಡಿರುವ ಅದನ್ನು ಜನರೆಲ್ಲರಿಗೂ ತೋರಿಸುವನು.

ಆಕ್ಷಿಪ್ಯ ಭುಜದಂಡಾಭ್ಯಾಂ ವೇಗಾತ್ಪ್ರಾಪ್ಯ ಮಹೀತಲಂ ।
ದರ್ಶಯಿತ್ವಾ ಜನಾನಾಂ ತಂ ವಿದ್ಯುನ್ಮಾಲಾವಿಭೂಷಿತಂ ॥ ೩೬ ॥

ಪಶ್ಚಾನ್ಮುಮೋಚ ತನ್ಮೇಘಂ ಸೋಽಪಿ ಸ್ವಪದಮಾಯಯೌ ।
ಅನ್ಯಾಂಶ್ಚ ಖೇಚರಾನ್ಸರ್ವಾನ್ ಬಲಾದಾಕೃಷ್ಯ ಭೂತಲೇ ॥ ೩೭ ॥

ಪುನರ್ಮುಂಚತಿ ತಾನ್ಸರ್ವಾನ್ ಭೀತ್ಯಾ ಧಾವಂತಿ ತೇ ದ್ರುತಂ ।
ದಿವ್ಯಾಂಜನಪ್ರದಾನೇನ ಭೂಗತಾನಿ ಬಹೂನಿ ಚ ॥ ೩೮ ॥

---

ಆಮೇಲೆ ಆಗನ್ನು ಅದರ ಸ್ಥಾನಕ್ಕೆ ಪುನಃ ಸೇರಿಸಿ, ತಾನು ಮೊದಲು ಇದ್ದ ಪ್ರದೇಶಕ್ಕೆ ಬರುತ್ತಿದ್ದನು. ಅಂತರಿಕ್ಷದಲ್ಲಿ ಓಡಾಡುತ್ತಿರುವ ಪ್ರಾಣಿಗಳನ್ನೂ ಇತರರನ್ನೂ ಬಲಾತ್ಕಾರದಿಂದ ಭೂಮಿಗೆ ಎಳೆದು ತಂದು ಅನಂತರದಲ್ಲಿ. ಅವುಗಳನ್ನು ಮೊದಲಿನಂತೆಯೇ ಇರಲು ಹಿಂದಕ್ಕೆ ಆ ಸಿದ್ಧ ಪುರುಷನು ಬಿಟ್ಟುಕೊಡಲೆ, ಭಯದಿಂದ ಅವುಗಳು ವೇಗವಾಗಿ ಓಡಿಹೋಗುತ್ತಿದ್ದವು.

೩೮–೪೧. ಆ ಸಿದ್ಧ ಪುರುಷನು ತನ್ನಲ್ಲಿರುವ ಶ್ರೇಷ್ಠವಾದ ಅಂಜನವನ್ನು ಇತರರಿಗೆ ಕೊಟ್ಟು, ಭೂಮಿಯಲ್ಲಿರುವ ಸಕಲ ಬೆಲೆಬಾಳುವ ರತ್ನ, ಚಿನ್ನವೇ ಮೊದಲಾದ ದ್ರವ್ಯರಾಶಿಗಳು ಅವರಿಗೆ ಗೋಚರವಾಗುವಂತೆ ಮಾಡುತ್ತಿದ್ದನು. ಅವನು ಅಗ್ನಿಸ್ತಂಭ, ಜಲಸ್ತಂಭ, ವಾಯುಸ್ತಂಭಗಳೇ ಮೊದಲಾದ ಅರವತ್ತು ನಾಲ್ಕು ಕಲೆಗಳನ್ನೂ ಮತ್ತು ಇತರ ವಿದ್ಯೆಗಳ ಪಾಂಡಿತ್ಯವನ್ನೂ ಎಲ್ಲರಿಗೂ ಪ್ರದರ್ಶಿಸುತ್ತಿದ್ದನು. ಭೋಗದಲ್ಲಿ ಆಸಕ್ತರಾದ ಜನಗಳೂ, ಮೋಕ್ಷವನ್ನು ಹೊಂದಲು ಅಪೇಕ್ಷಿಸುವ ಜನಗಳೂ, ಅಪೇಕ್ಷಿಸಿದ ವಸ್ತುಗಳೆಲ್ಲವನ್ನೂ ಆ ಸಿದ್ಧ ಪುರುಷನು ಅವರವರಿಗೆ ಪ್ರಯತ್ನಪೂರ್ವಕವಾಗಿ ಒದಗಿಸಿ ಕೊಡುತ್ತಿದ್ದನು.

1 ಅರುವತ್ತುನಾಲ್ಕು ಕಲೆಗಳು (ಬಾಯಿಂದಲಿ ಗಾನಮಾಡುವುದು. 2. ವಾದ್ಯವನ್ನು ಊದುವುದು. 3. ನರ್ತನಮಾಡುವುದು, 4 ಅಭಿನಯ ಮಾಡುವುದು, 5. ಚಿತ್ರ ಬರೆಯುವುದು, 6. ಚಿತ್ರದ ಆಕಾರವಾಗಿ ಕತ್ತರಿಸುವುದು 7. ಅಕ್ಕಿಕಾಳು, ಹೂವು ಇವುಗಳಿಂದ ಆಕೃತಿಗಳನ್ನು ಬರೆಯುವುದು, 8. ಬಣ್ಣಗಳು ಹೊಂದುವಂತೆ ಹೂವುಗಳನ್ನು ಜೋಡಿಸುವುದು. 9. ಹಲ್ಲುಗಳನ್ನು ಕಟ್ಟುವುದು. 10. ಬಟ್ಟೆನೆಯ್ಯುವುದು. ಗಂಧವನ್ನು (ಪರಿಮಳ ದ್ರವ್ಯವನ್ನು) ನಿರ್ಮಿಸು

**ಅನರ್ಘ್ಯರತ್ನ ಕನಕಕಲಧೌತಮುಖಾನಿ ಚ ।**
**ವಿವಿಧಾನಿ ಚ ವಸ್ತೂನಿ ಸಿದ್ಧೋ ವ್ಯಕ್ತಂ ಕರೋತಿ ಚ　　॥ ೩೯ ॥**

**ಅಗ್ನಿಸ್ತಂಭ ಜಲಸ್ತಂಭ ವಾಯುಸ್ತಂಭ ಮುಖಾಃ ಕ್ರಿಯಾಃ ।**
**ಚತುಃಷಷ್ಟಿಕಲಾಶ್ಚಾನ್ಯಾಃ ಸರ್ವಾ ವಿದ್ಯಾಃ ಪ್ರದರ್ಶಿತಾಃ　　॥ ೪೦ ॥**

---

ವುದು 11. ಹಾಸಿಗೆಯನ್ನು ಮಾಡುವುದು. 12. ನೀರಿನಿಂದ ವಾದ್ಯವನ್ನು ಬಾರಿಸುವುದು 13. ನೀರಿನಿಂದ ಹೊಡೆದಾಡುವುದು. 14. ಚಿತ್ರಗಳಿಗೆ ಬಣ್ಣವನ್ನು ತುಂಬುವುದು. 15. ಹೂವಿನ ಹಾರಗಳನ್ನು ಕಟ್ಟುವುದು. 16. ಕಿರೀಟ ಮೊದಲಾದ ಆಭರಣಗಳನ್ನು ಮಾಡುವುದು. 17. ನಾಟಕದಲ್ಲಿ ವೇಷವನ್ನು ಹಾಕುವುದು 18. ಕಿವಿಯ ಆಭರಣಗಳನ್ನು ಮಾಡುವುದು. 19. ಪರಿಮಳ ದ್ರವ್ಯಗಳನ್ನು ಸಿದ್ಧಪಡಿಸುವುದು 20. ಆಭರಣಗಳನ್ನು ತೊಡಿಸುವುದು. 21. ಇಂದ್ರಜಾಲ (ಯಕ್ಷಿಣೀ) 21. ಅಂಜನವನ್ನು ಮಾಡುವ ಯೋಗಗಳು. 22. ಗುರಿಯನ್ನು ತಪ್ಪದೆ ಭೇದಿಸುವುದು. 23. ಅನೇಕ ವಿಧವಾದ ಭಕ್ಷ್ಯಗಳನ್ನು ಮಾಡುವುದು. 24. ಪಾನಕ, ರುಚಿಕರವಾದ ಮದ್ಯಗಳನ್ನು ಮಾಡುವುದು. 25. ಸೂಜಿಯ ಕೆಲಸಗಳು. 26. ದಾರದಿಂದ ಆಡುವುದು. 27. ಪ್ರಹೇಳಿಕಾ (ಒಗಟು) 28. ಪ್ರತ್ಯುತ್ತರವನ್ನು ಕೊಡುವುದು. 29. ದುರ್ವಚಕಯೋಗಾಃ. 30. ಪುಸ್ತಕವನ್ನು ಓದುವುದು. 31. ನಾಟಕಾದಿಗಳನ್ನು ನೋಡುವುದು. 32. ಕಾವ್ಯದ ಸಮಸ್ಯೆಯನ್ನು ಪೂರ್ತಿಮಾಡುವುದು. 33. ಹಲಗೆ, ಬೆತ್ತದ ಕೆಲಸಗಳು. 34. ಕತ್ತರಿ ಕೆಲಸ 35. ಮರವನ್ನು ಕೆತ್ತುವುದು. 36. ವಾಸ್ತು ವಿದ್ಯೆಯು. 37. ಬೆಳ್ಳಿ, ಚಿನ್ನ ರತ್ನ ಇವುಗಳ ಪರೀಕ್ಷೆಯು. 38. ಚಿನ್ನ ಮಾಡುವುದು. 39. ರತ್ನಗಳ ಬಣ್ಣವನ್ನು ತಿಳಿಯುವುದು. 40. ಗಣಿಗಳನ್ನು ಗೊತ್ತುಮಾಡುವುದು. 41. ವೃಕ್ಷಾಯುರ್ವೇದ ಜ್ಞಾನ. 42. ಕುರಿ, ಕೋಳಿ, ಲಾವಕಹಕ್ಕಿ ಇವುಗಳ ಸಂಗಡ ಜಗಳವಾಡಿಸುವುದು. 43. ಗಿಣಿ, ಸಾರಿಕಾ ಇವುಗಳ ಮಾತನ್ನು ತಿಳಿಯುವುದು. 44. ಶತ್ರುಗಳನ್ನು ಓಡಿಸುವುದು. 45. ತಲೆಯ ಕೂದಲನ್ನು ಅಲಂಕರಿಸಿಕೊಳ್ಳುವ ನೈಪುಣ್ಯ. 46. ಅಕ್ಷರ ಮುಷ್ಟಿಕಾ ಕಥನಂ. 47. ಭಾಷಾಂತರದಲ್ಲಿ ಮಾತನಾಡುವುದು. 48. ದೇಶಭಾಷೆಯನ್ನು ತಿಳಿಯುವುದು. 49. ಶಕುನಗಳನ್ನು ತಿಳಿಯುವುದು. 50. ಯಂತ್ರಾಕ್ಷರಗಳನ್ನು ತಿಳಿಯುವುದು. 51. ಧಾರಣ ಶಕ್ತಿಯನ್ನು ಹೊಂದಿರುವುದು. 52. ಲಾಭ ಸಂಪಾದನೆಯು. 53. ಮಾನಸಿಕ ಕಾವ್ಯಕರಣ. 54. ಫಲಂ ಪ್ರತ್ಯನೇಕೋ ವಾಯಾನುಸರಣಂ. 55. ಮೋಸನೈಪುಣ್ಯಂ

ಅಪೇಕ್ಷಿತಾನಿ ಸರ್ವಾಣಿ ಭೋಗಮೋಕ್ಷಪರಾಯಣೈಃ ।
ಯಾನಿ ತಾನಿ ಚ ಸರ್ವಾಣಿ ಸಿದ್ಧೋ ಯತ್ನಾದ್ದದಾತಿ ಚ ॥ ೪೧ ॥

ವೇದಶಾಸ್ತ್ರಪುರಾಣಾದಿ ವಿದ್ಯಾಃ ಸರ್ವಾಃ ಸಲಕ್ಷಣಾಃ ।
ವಸಂತು ಜಿಹ್ವಾಸ್ವಸ್ಮಾಕಮಿತಿ ವವ್ರುಶ್ಚ ಕೇ ಚ ನ ॥ ೪೨ ॥

ತೇಷಾಂ ದ್ವಿಜಾನಾಂ ಜಿಹ್ವಾಸು ಭಸ್ಮ ಸುಕ್ಷೇಪಮಾತ್ರತಃ ।
ಸರ್ವವಿದ್ಯಾ ಸ್ಸಮುಭರ್ವ ಪುರಸ್ತಾತ್ ಸಿದ್ಧವೈಭವಾತ್ ॥ ೪೩ ॥

ಕರೋತಿ ತಾಸಾಂ ತಾರುಣ್ಯರೂಪಲಾವಣ್ಯಸಂಯುತಂ ॥ ೪೪

ಅಂತರ್ವತ್ನ್ಯಃ ಸಮುಭರ್ವ ಪುನಸ್ತಾಸ್ಸಿದ್ಧವೈಭವಾತ್ ।
ಏವ ಮನ್ಯಾನ್ಯನೇಕಾನಿ ದರ್ಶಿತಾನ್ಯದ್ಭುತಾನಿ ಚ- ॥ ೪೫ ॥

---

56. ಪರ್ಯಾಯ ಶಬ್ದ ಮತ್ತು ಕೋಶಜ್ಞಾನಂ. 57. ಛಂದೋಜ್ಞಾನ. 58. ವಸ್ತ್ರಗೋಪನಂ. 59. ದ್ಯೂತನೈಪುಣ್ಯಂ. 60. ಆಕರ್ಷಕ್ರೀಡಾ. 61. ಬಾಲಕ್ರೀಡಾ. 62. ವೈನಾಯಿಕಾ ಚರಣ. 63. ವೈತಾಳಿಕ ಕರ್ಮ. 64. ಯಾವಾಗಲೂ ಜಯಶೀಲನಾಗಿರುವಿಕೆ.

೪೨-೪೪. ಕೆಲವರು ವೇದಶಾಸ್ತ್ರ ಪುರಾಣಾದಿಗಳನ್ನು ಅವುಗಳ ಲಕ್ಷಣಗಳೊಡನೆ ಹೇಳುವ ಶಕ್ತಿಯು ನಮಗೆ ಉಂಟಾಗಲಿ ಎಂದು ಆ ಸಿದ್ಧಪುರುಷನನ್ನು ಬೇಡಿಕೊಂಡರು. ಅವನು ಅವರ ನಾಲಿಗೆಯ ಮೇಲೆ ಭಸ್ಮವನ್ನು ಹಾಕಿದನು. ಅಷ್ಟು ಮಾತ್ರದಿಂದಲೇ ಅವನ ಎದುರಿಗೇ ಅವರಿಗೆ ಎಲ್ಲಾ ವಿದ್ಯೆಗಳೂ ಬಂದವು. ಕುರೂಪಿಯರಾದ ಸ್ತ್ರೀಯರೂ ಮುದುಕಿಯರೂ ಕೂಡ ಆ ಸಿದ್ಧನ ಮಹಿಮೆಯಿಂದ ಯೌವನವನ್ನೂ ಸೌಂದರ್ಯವನ್ನೂ ಹೊಂದಿ ಗರ್ಭವತಿಯರಾದರು. ಇದೇ ರೀತಿಯಾಗಿ ಅನೇಕ ವಿಧವಾದ ಆಶ್ಚರ್ಯಗಳನ್ನು ಸಿದ್ಧನು ತೋರಿಸುತ್ತಿದ್ದನು. ಅದೆಲ್ಲವನ್ನೂ ಬೃಹಸ್ಪತಿಯು ಹೇಳಬಲ್ಲನೇ ಹೊರತು ನಾನು ಹೇಳಲು ನನಗೆ ಸಾಮರ್ಥ್ಯವಿಲ್ಲವು.

೪೫-೪೮. ನೋಡತಕ್ಕವರಿಗೆ ಬಹಳ ಆಶ್ಚರ್ಯವನ್ನೂ ಸಂತೋಷವನ್ನೂ ಉಂಟುಮಾಡುವ ಬಹಳ ಕಾರ್ಯಗಳನ್ನು ಮಾಡುತ್ತಾ ಪ್ರಭುವಾದ ಪರಮೇಶ್ವರನು ಸಿದ್ಧಪುರುಷನ ವೇಷದಿಂದ ಸಂಚರಿಸುತ್ತಿದ್ದನು. ಅವನು ಒಂದು ಕ್ಷಣಕಾಲಕ್ಕೆ ದಪ್ಪ

ಕಃ ಶಕ್ತ ಸ್ತಾನಿ ಸರ್ವಾಣಿ ವಕ್ತುಂ ವಾಗೀಶ್ವರಂ ವಿನಾ ।
ಪಶ್ಯತಾಂ ಚ ಜನಾನಾಂ ಚ ಪರಮಾನಂದದಾನಿ ಚ　　॥ ೪೬ ॥

ಏವಂ ವಿಚಿತ್ರಕರ್ಮಾಣಿ ಕೃತ್ವಾ ಸಂಚರತಿ ಪ್ರಭುಃ ।
ಸ್ಥೂಲಃ ಕದಾಚಿತ್ಕ್ಷೀಣಶ್ಚ ಕ್ಷಿಣೋ ದೀರ್ಘೋಽಥ ವಾಮನಃ　　॥ ೪೭ ॥

ಅದೃಶ್ಯಶ್ಚ ಕ್ಷಣಂ ದೃಶ್ಯ ಸ್ತೇಜಸ್ವೀ ಮಾಯಯಾ ವೃತಃ ।
ಜನ್ಯೈ ರಪೂರ್ವವಸ್ತೂನಿ ತಪೋಭಿ ದುರ್ಲಭಾನಿ ಚ　　॥ ೪೮ ॥

ಪ್ರಾರ್ಥಿತಾನಿ ಚ ಸರ್ವಾಣಿ ಪ್ರದದಾತಿ ಕೃಪಾನಿಧಿಃ ।
ಸರ್ವಸಿದ್ಧಿಪ್ರದಂ ಸಿದ್ಧಂ ಸರ್ವಸದ್ಗುಣಸಂಯುತಂ　　॥ ೪೯ ॥

ಶಾಂತಂ ಕಾರುಣ್ಯಸಂಪೂರ್ಣಂ ಜನಾದೃಷ್ಟ್ವಾತಿವಿಸ್ಮಿತಾಃ ।
ಆಶ್ಚರ್ಯಾಣ್ಯೇವ ಮಾಲೋಕ್ಯ ವರ್ತಂತೇ ತಸ್ಯ ಪಾರ್ಶ್ವತಃ　　॥ ೫೦ ॥

---

ನಾಗಿ ಕಾಣುವನು. ಇನ್ನೊಂದು ಕ್ಷಣದ ಹೊತ್ತಿಗೆ ಕೃಶನಾಗಿರುವನು. ಹಾಗೆಯೇ ಉದ್ದವಾದ ಶರೀರವುಳ್ಳವನಾಗಿಯೂ, ಹ್ರಸ್ವಾಕಾರವುಳ್ಳವನಾಗಿಯೂ ಕೆಲವು ವೇಳೆ ಕಾಣಿಸುವನು. ಕೆಲವು ವೇಳೆ ಯಾರಿಗೂ ಕಾಣಿಸದೆ ತನ್ನ ಮಾಯೆಯಿಂದ ಮರೆಯಾಗುವನು. ಕೆಲವು ವೇಳೆ ಅವನು ಬಹಳ ತೇಜಶ್ಶಾಲಿಯಾಗಿ ಕಾಣುವನು. ಜನರಿಗೆ ತಪಸ್ಸಿನಿಂದಲೂ ಹೊಂದಲಸಾಧ್ಯವಾದ ಅಪೂರ್ವವಾದ ವಸ್ತುಗಳನ್ನು ಎಲ್ಲವನ್ನೂ ಅವರವರ ಇಚ್ಛಾನುಸಾರವಾಗಿ ಕೊಡುವನು.

೪೯–೫೦. ಮಧುರಾನಗರದಲ್ಲಿರುವ ಜನರೆಲ್ಲರೂ ಎಲ್ಲಾ ವಿಧವಾದ ಸಿದ್ಧಿಯನ್ನು ಕೊಡುತ್ತಾ ಉಪಶಾಂತನಾಗಿ, ಎಲ್ಲರಲ್ಲಿಯೂ ದಯೆಯಿಂದ ಪೂರ್ಣವಾದ ಭಾವದಿಂದ ಇರುವ, ಈ ಸಿದ್ಧಪುರುಷನನ್ನು ನೋಡಿ ಬಹಳ ಆಶ್ಚರ್ಯವುಳ್ಳವರಾಗಿ ಅವನು ಮಾಡುವ ಆಶ್ಚರ್ಯಕರವಾದ ಕೆಲಸಗಳನ್ನು ನೋಡುತ್ತಾ ಅವನ ಪಾರ್ಶ್ವಗಳಲ್ಲಿ ತುಂಬಿರುತ್ತಿದ್ದರು.

ರಾಜಾ ಭಿಷೇಕಪಾಂಡ್ಯೋಽಪಿ ಶ್ರುತ್ವಾ ಸಿದ್ಧಸ್ಯ ವೈಭವಂ ।
ಸ್ವಜನಾನ್ ಪ್ರೇಷಯಾಮಾಸ ಕಾಂಶ್ಚಿತ್ಕರ್ಮಕರಾನ್ ಶಿಶೂನ್ ॥ ೫೧ ॥

ಯೇನ ಕೇನ ಪ್ರಕಾರೇಣ ಸಿದ್ಧಂ ದರ್ಶಯತೇತಿ ತಾನ್ ।
ಉದ್ಯುಜ್ಯ ತೇ ಗ್ರಹೀತುಂ ತಂ ಜನತಾ ಸಾ ತು ತದ್ವಶಾ ॥ ೫೨ ॥

ತತ್ಕೃತಾನಿ ವಿಚಿತ್ರಾಣಿ ವಿಲೋಕ್ಯಾತೀವ ವಿಸ್ಮಿತಾಃ ।
ಚರಂತಿ ಸ್ಮ ಮುದಾ ಯುಕ್ತಾ ಸ್ತಸ್ಯ ಸಿದ್ಧಸ್ಯ ಪೃಷ್ಠತಃ ॥ ೫೩ ॥

ಇತಿ ಸಿದ್ಧಸ್ಯ ಚರಿತಂ ಶೃಣೋತಿ ಪಠತೀಹ ಯಃ ।
ತಸ್ಯ ಸರ್ವಾಣಿ ಸೌಖ್ಯಾನಿ ವರ್ಧಂತೇ ಸರ್ವಸಂಪದಃ ॥ ೫೪ ॥

ಏವಂ ವಿಂಶತಿಲೀಲಾಸಾ ಸುಂದರೇಶಮಹೇಶಿತುಃ ।
ಶ್ರುತಾ ವಾ ಪಠಿತಾ ಸಾಽಪಿ ಸರ್ವಸೌಖ್ಯಪ್ರದಾಯಿನೀ ॥ ೫೫ ॥

---

೫೧–೫೩. ಅಭಿಷೇಕಪಾಂಡ್ಯರಾಜನು ಸಿದ್ಧಪುರುಷನ ಮಹಿಮೆಯನ್ನು ಕೇಳಿ, ತನ್ನ ಸೇವಕರಲ್ಲಿ ಕೆಲವು ಜನ ಹುಡುಗರನ್ನು ಕರೆದು "ನೀವು ಯಾವ ಬಗೆಯಿಂದಲಾದರೂ ಸಿದ್ಧನನ್ನು ನನಗೆ ತೋರಿಸಿ" ಎಂದು ಹೇಳಿ ಕಳುಹಿಸಿದನು. ಅವರು ಆ ಸಿದ್ಧಪುರುಷನ ಹತ್ತಿರದಲ್ಲಿ ಅವನಿಗೆ ಅಧೀನವಾಗಿ ಇದ್ದ ಜನರ ಸಮೂಹದಲ್ಲಿ ಸೇರಿ, ಸಿದ್ಧಪುರುಷನನ್ನು ಮಾತನಾಡಿಸಲು ಆಗದೆ, ಅವನು ಮಾಡುತ್ತಿರುವ ಆಶ್ಚರ್ಯಕರವಾದ ಕೆಲಸಗಳನ್ನು ನೋಡುತ್ತಾ ಸಂತೋಷದಿಂದ ಅವನ ಹಿಂದುಗಡೆಯಲ್ಲಿ ಓಡಾಡುತ್ತಿದ್ದರು.

೫೪–೫೫. ಸಿದ್ಧಪುರುಷನ ಚರಿತ್ರೆಯನ್ನು ಪಾರಾಯಣ ಮಾಡುವವನೂ ಕೇಳುವವನೂ ಹೆಚ್ಚಾಗಿರುವ ಸಂಪತ್ತುಗಳನ್ನೂ, ಸೌಖ್ಯವನ್ನೂ ಹೊಂದುವನು. ಸುಂದರೇಶ್ವರನ ಇಪ್ಪತ್ತನೆಯ ಲೀಲೆಯು ಈ ಪ್ರಕಾರದಿಂದ ಇರುವುದು. ಹೇಳಿದವರಿಗೂ ಕೇಳಿದವರಿಗೂ ಇದು ಎಲ್ಲಾ ವಿಧವಾದ ಸುಖವನ್ನೂ ಉಂಟುಮಾಡುವುದು.

**ಇತಿ ಶ್ರೀ ಸ್ಕಾಂದ ಪುರಾಣೇ ಅಗಸ್ತ್ಯ ಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಸಿದ್ಧಚರಿತ್ರಂ ನಾಮ ಷಡ್ವಿಂಶೋಽಧ್ಯಾಯಃ**

---

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ ಸಿದ್ಧಚರಿತವೆಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||
|| ಶ್ರೀ ಶಿವಾಯ ನಮಃ ||

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಸಪ್ತವಿಂಶೋಽಧ್ಯಾಯಃ

|| ಅಗಸ್ತ್ಯ ಉವಾಚ ||

ಕುಂಭಸಂಭವ ಸರ್ವಜ್ಞ ತವ ವಾಗಮೃತಂ ವಯಂ ।
ಪೀತ್ವಾ ಶ್ರವಣಮಾತ್ರೇಣ ತೃಪ್ತಿಂ ಚ ನ ಲಭಾಮಹೇ || ೧ ||

ಕಿಂ ಕರೋತಿ ಪುನಃ ಸಿದ್ಧಃ ಕಿಂ ಕರೋತಿ ಸ ಪಾಂಡ್ಯರಾಟ್ ।
ಇತಿ ಸರ್ವಂ ಸಮಾಚಕ್ಷ್ವ ಶ್ರೋತುಂ ಕೌತೂಹಲಂ ಹಿ ನಃ || ೨ ||

ತೇಷಾಂ ವಾಕ್ಯಂ ಸಮಾಕರ್ಣ್ಯ ಭಗವಾನ್ ಕುಂಭಸಂಭವಃ ।
ವಕ್ತು ಮಾರಭತೇ ಸರ್ವಂ ಚರಿತ್ರಂ ನೃಪಸಿದ್ಧಯೋಃ || ೩ ||

---

## ಇಪ್ಪತ್ತೇಳನೆಯ ಅಧ್ಯಾಯ

೧-೩. ಋಷಿಗಳು ಹೇಳಿದರು :—"ಸರ್ವಜ್ಞನಾದ ಅಗಸ್ತ್ಯಋಷಿಯೇ ನೀನು ಹೇಳಿರುವ ಹಿತವಾದ ಮಾತುಗಳನ್ನು ಕೇಳಿದ್ದರಿಂದ ನಮಗೆ ಇನ್ನೂ ತೃಪ್ತಿಯು ಉಂಟಾಗಲಿಲ್ಲ. ಆ ಸಿದ್ಧಪುರುಷನು ಏನು ಮಾಡಿದನು. ಅಭಿಷೇಕಪಾಂಡ್ಯರಾಜನು ಏನನ್ನು ಮಾಡಿದನು. ಎಂಬುವುದನ್ನು ನಾವು ಕೇಳುವುದಕ್ಕೆ ಆಸೆಯುಳ್ಳವರಾಗಿ ರುತ್ತೇವೆ! ಅದನ್ನು ಹೇಳು." ಅವರ ಮಾತನ್ನು ಕೇಳಿ, ಅಗಸ್ತ್ಯಋಷಿಯು, ಸಿದ್ಧಪುರುಷನು ಮತ್ತು ಅಭಿಷೇಕಪಾಂಡ್ಯರಾಜನೂ ಮಾಡಿದ ಕೆಲಸಗಳನ್ನು ಹೇಳಲು ಪಕ್ರಮಿಸಿದನು.

॥ ಅಗಸ್ತ್ಯ ಉವಾಚ ॥

ಶೃಣುಧ್ವಮಥ ವಿಪ್ರೇಂದ್ರಾ ಲೀಲಾಂ ಹಾಲಾಸ್ಯವಾಸಿನಃ ।
ಇಕ್ಷುದಂಡಪ್ರದಾನಾಖ್ಯಾಂ ಶಿಲಾಮಯಗಜಾಯ ಚ ॥ ೪ ॥

ಅಥಾ ಭಿಷೇಕಪಾಂಡ್ಯಸ್ತು ಪ್ರೇಕ್ಷಯಾಮಾಸ ಮಂತ್ರಿಣಃ ।
ಕರ್ತುಂ ಸಿದ್ಧಸ್ಯ ಚಾಹ್ವಾನಂ ಸಮರ್ಥಾನ್ ಸರ್ವಕರ್ಮಸು ॥ ೫ ॥

ತೇ ಗತ್ವಾ ಪ್ರಾರ್ಥಯಾಮಾಸು ರಂತಿಕಂ ಸಿದ್ಧರೂಪಿಣಃ ।
ಸ್ವಾಮಿನ್ ಸಿದ್ಧ ಸಮಾಗಚ್ಛ ಮಹಾರಾಜಸ್ಯ ಮಂದಿರಂ ॥ ೬ ॥

ಸರ್ವಾನುಗ್ರಹಕೃತ್ ತ್ವಂ ಹಿ ಕುರು ತಸ್ಯಾಪ್ಯನುಗ್ರಹಂ ।
ಸಿದ್ಧಃ ಶ್ರುತ್ವಾ ವಚಸ್ತೇಷಾಂ ಪ್ರಾಹ ಪ್ರಹಸಿತಾನನಃ ॥ ೭ ॥

ಅಭಿಷೇಕಧರಃ ಪಾಂಡ್ಯಃ ಸ ಮಹಾರಾಜಶೇಖರಃ ।
ಅಹಂ ಸಿದ್ಧಸ್ತಪಸ್ವೀ ಚ ಕಿಂ ಕಾರ್ಯಂ ಮಮ ತೇನ ವೈ ॥ ೮ ॥

---

೪–೭. ಹಾಲಾಸ್ಯೇಶ್ವರನು ಸಿದ್ಧಪುರುಷನ ಆಕಾರದಿಂದ ಇರುತ್ತಾ, ಕಲ್ಲಿನ ಆನೆಗೆ ಕಬ್ಬನ್ನು ತಿನ್ನಿಸಿದ ಲೀಲೆಯನ್ನು ಹೇಳುವೆನು. ಅಭಿಷೇಕಪಾಂಡ್ಯರಾಜನು ಎಲ್ಲಾ ಕೆಲಸಗಳನ್ನೂ ಮಾಡುವದರಲ್ಲಿ ನಿಪುಣರಾದ ಮಂತ್ರಿಗಳನ್ನು ಕರೆದು "ನೀವು ಈ ಮಧುರಾನಗರದಲ್ಲಿ ಸಂಚರಿಸುತ್ತಿರುವ ಸಿದ್ಧಪುರುಷನನ್ನು ಕರೆದುಕೊಂಡು ಬನ್ನಿರಿ" ಎಂದು ಹೇಳಿ ಕಳುಹಿಸಿದನು. ಅವರು ಸಿದ್ಧಪುರುಷನ ಹತ್ತಿರಕ್ಕೆ ಹೋಗಿ "ಎಲೈ ಸಮರ್ಥನಾದ ಸಿದ್ಧಪುರುಷನೆ, ನೀನು ಎಲ್ಲರಿಗೂ ಅನುಗ್ರಹವನ್ನು ಮಾಡುತ್ತಿರುತ್ತೀಯೆ. ನಮ್ಮ ಮಹಾರಾಜನ ಅರಮನೆಗೆ ಬಂದು ಅವನಿಗೂ ಅನುಗ್ರಹವನ್ನು ಮಾಡು" ಎಂದು ಪ್ರಾರ್ಥಿಸಿದರು. ಸಿದ್ಧಪುರುಷನು ಅವರು ಹೇಳಿದ ಮಾತನ್ನು ಕೇಳಿ ನಗುತ್ತಾ, "ಪಾಂಡ್ಯರಾಜನು ಪಟ್ಟಾಭಿಷೇಕಮಾಡಿಕೊಂಡು ಇರುವವನು. ನಾನು ತಪಸ್ಸನ್ನು ಮಾಡುವ ಸಿದ್ಧನು. ನನಗೆ ಆ ರಾಜನಿಂದ ಏನು ಆಗಬೇಕಾದದ್ದು ?" ಎಂದು ಹೇಳಿದನು.

೮–೧೩. ಪಾಂಡ್ಯರಾಜನ ಮಂತ್ರಿಗಳೆಲ್ಲರೂ ಆ ಸಿದ್ಧನ ಮಾತನ್ನು ಕೇಳಿ, ಹಿಂತಿರುಗಿ ಬಂದು, ತಮ್ಮ ರಾಜನಿಗೆ ಅವನು ಹೇಳಿದ ಮಾತನ್ನು ತಿಳಿಸಿದರು.

ಇತ್ಯುಕ್ತ್ವಾ ಪ್ರೇಷಿತಾಃ ಸರ್ವೇ ಸಚಿವಾಃ ಪಾಂಡ್ಯಭೂಪತೇಃ ।
ಶ್ರುತ್ವಾಭಿಷೇಕಪಾಂಡ್ಯೋಽಪಿ ಸಿದ್ಧಸ್ಯ ವಚನಂ ಚ ತೈಃ ॥ ೯ ॥

ಗರ್ವೇಣ ಮಹತಾ ಯುಕ್ತಸ್ತೇನ ಕಿಂ ವಾ ಭವಿಷ್ಯತಿ ।
ಇತಿ ಮತ್ವಾ ಚ ಮನಸಿ ತೂಷ್ಣೀ ಮಾಸ್ತೇ ಸ ಭೂಪತಿಃ ॥ ೧೦ ॥

ಏಕದಾ ಸುಂದರೇಶಸ್ಯ ಶಂಭೋ ರಾಯತನಾಶ್ರಿತಂ ।
ವಾಯುವ್ಯದಿಗ್ಗಜಂ ಪಶ್ಯನ್ ಸ ಸಿದ್ಧಃ ಸಮವಸ್ಥಿತಃ ॥ ೧೧ ॥

ತದಾ ಮಕರಸಂಕ್ರಾಂತಿಪುಣ್ಯಕಾಲಃ ಸಮಾಗತಃ ।
ಹೇಮಪದ್ಮಾಕರೇ ಸ್ನಾತ್ವಾ ಮಹಾನ್ ಪಾಂಡ್ಯಮಹೀಪತಿಃ ॥ ೧೨ ॥

ನಂತು ಮೀಶಂ ಕೃತೋದ್ಯೋಗ ಸ್ತದಾನೀಂ ಸಹಸಾ ಭ್ಯಗಾತ್ ।
ಪುರೋ ಗತಾಃ ಕಂಚುಕಿನೋ ಮಹಾಕಾಯಾ ಮಹಾಬಲಾಃ ॥ ೧೩ ॥

"ರಾಜನಾದ ನನಗೆ ಅವನಿಂದ ಏನು ಆಗಬೇಕಾಗಿದೆ?" ಎಂದು ಮನಸ್ಸಿನಲ್ಲಿಯೇ ಯೋಚಿಸಿ, ಬಹಳ ಗರ್ವದಿಂದ ಕೂಡಿದವನಾಗಿ ಅಭಿಷೇಕಪಾಂಡ್ಯನು ಸುಮ್ಮನಿದ್ದನು. ಹೀಗೆ ಇರುವಾಗ ಒಂದು ದಿನ ಸುಂದರೇಶ್ವರನ ದೇವಾಲಯದ ವಾಯುವ್ಯದಿಕ್ಕಿನಲ್ಲಿ ಇರುವ ಒಂದು ಕಲ್ಲಿನ ಆನೆಯನ್ನು ಸಿದ್ಧನು ನೋಡುತ್ತಾ ಇದ್ದನು. ಆ ದಿವಸ ಮಕರ ಸಂಕ್ರಮಣ ದಿವಸವಾಗಿತ್ತು. ಪಾಂಡ್ಯರಾಜನು ಪುಣ್ಯಕಾಲದ ಪ್ರಯುಕ್ತ ಹೇಮ ಪದ್ಮಾಕರತೀರ್ಥದಲ್ಲಿ ಸ್ನಾನಮಾಡಿ, ಸುಂದರೇಶ್ವರನ ದರ್ಶನವನ್ನು ಮಾಡಿ ನಮಸ್ಕರಿಸುವುದಕ್ಕಾಗಿ ದೇವಾಲಯಕ್ಕೆ ಹೊರಟನು.

೧೩–೧೬. ಆಗ ಆ ರಾಜನ ಸೇವಕರು ಬಹಳ ಬಲಿಷ್ಠರಾಗಿ, ದೊಡ್ಡ ಆಕಾರವುಳ್ಳವರಾಗಿ (ಬಹಳ ಮತ್ತರಾಗಿ) ಅಹಂಕಾರದಿಂದ ಕೂಡಿ, ಆಭರಣಗಳಿಂದ ಅಲಂಕೃತರಾಗಿ, ಚಿನ್ನದ ಬೆತ್ತವನ್ನು ಹಿಡಿದುಕೊಂಡು, ಸಿದ್ಧನನ್ನು ದೇವಾಲಯದಿಂದ ಹೊರಗಡೆ ಕಳುಹಿಸುವುದಕ್ಕಾಗಿ ಅವನನ್ನು ಹೊಡೆಯಲು ಸಿದ್ಧರಾದರು. "ಎಲೈ

**ಮದೋದ್ಧತಾ ದೂಷಿತಾಶ್ಚ ಪಾಂಡ್ಯಪಾರ್ಥಿವಕಿಂಕರಾಃ**
**ಸಿದ್ಧಂ ಪ್ರಹರ್ತುಮುದ್ಯುಕ್ತಾ ಹೇಮವೇತ್ರಲಸತ್ಕರಾಃ ॥ ೧೪ ॥**

**ಉತ್ತಿಷ್ಠೋತ್ತಿಷ್ಠ ಹೇ ಸಿದ್ಧ ದುರ್ಬುದ್ಧೇ ಗಚ್ಛ ಸತ್ವರಂ ।**
**ದೇವಂ ವಂದಿತುಮಾಯಾತಿ ಪ್ರದಕ್ಷಿಣವಶಾ ನ್ನೃಪಃ ॥ ೧೫ ॥**

**ಮುಹುರ್ಮುಹುರಿತಿ ಪ್ರೋಚ್ಚೈಃ ಪ್ರಾಹುಸ್ತೇ ಸೋಽಪಿ ನಿರ್ಭಯಃ ।**
**ನ ಚಚಾಲ ಸ ಕಿಂಚಿಚ್ಚ ಬಬಂಧ ದೃಢಮಾಸನಂ ॥ ೧೬ ॥**

**ತತಃ ಪಾಂಡ್ಯಮಹೀಪಾಲಃ ಸಿದ್ಧಸ್ಯಾಂತಿಕ ಮಾಯಯೌ ।**
**ನಿಶ್ಚಲಂ ಚಿತ್ರಗಮಿವ ಸಿದ್ಧವೇಷಧರಂ ಹರಂ ॥ ೧೭ ॥**

**ವಿಲೋಕ್ಯ ವಿಸ್ಮಿತೋ ಭೂತ್ವಾ ಸಸ್ಮಿತಂ ಪರಿಪೃಚ್ಛತಿ ।**
**ಭವಾನ್ ಕಃ ಕುತ ಆಯಾತಃ ಕಿಮರ್ಥ ಮಿಹ ವರ್ತಸೇ ॥ ೧೮ ॥**

ದುರ್ಬುದ್ಧಿಯುಳ್ಳ ಸಿದ್ಧನೇ, ಏಳು, ಮೇಲಕ್ಕೆ ಏಳು, ಬೇಗ ಹೊರಕ್ಕೆ ಹೋಗು, ದೇವಾಲಯದಿಂದ ಹೊರಗೆ ಹೊರಡು, ನಮ್ಮ ರಾಜನು ಪ್ರದಕ್ಷಿಣೆಮಾಡಿಕೊಂಡು (ದೇವನನ್ನು ನಮಸ್ಕರಿಸಲು ಬರುವನು) ಹಾಲಾಸ್ಯೇಶ್ವರನಿಗೆ ನಮಸ್ಕಾರಮಾಡಲು ಬರುವನು.'' ಎಂದು ಪದೇಪದೇ ಹೇಳುತ್ತಾ ಇದ್ದರು. ಇವರ ಮಾತಿಗೆ ಹೆದರದೇ ಅವನು ಕೊಂಚವೂ ಅಲ್ಲಾಡಲಿಲ್ಲ. ಆದರೆ ಬಲವಾಗಿ ಆಸನವನ್ನು ಹಾಕಿಕೊಂಡು ಕುಳಿತುಬಿಟ್ಟನು.

೧೭–೧೯. ಅಭಿಷೇಕ ಪಾಂಡ್ಯರಾಜನು ದೇವಾಲಯಕ್ಕೆ ಬಂದು ಪ್ರದಕ್ಷಿಣೆಯನ್ನು ಮಾಡುತ್ತಾ ಸಿದ್ಧನ ಹತ್ತಿರಕ್ಕೆ ಬಂದನು. ಚಿತ್ರದಲ್ಲಿ ಬರೆದಿರುವ ವಿಗ್ರಹದಂತೆ ಚಲನೆಯಿಲ್ಲದೆ ಇರುವ ಅವನನ್ನು ನೋಡಿ, ಆಶ್ಚರ್ಯಪಡುತ್ತಾ ಮಂದಹಾಸದಿಂದ " ನೀನು ಯಾರು ? ಎಲ್ಲಿಂದ ಬಂದೆ ? ಯಾತಕ್ಕಾಗಿ ಇಲ್ಲಿ ಇರುತ್ತೀಯೆ ?

ಕಾ ವಿದ್ಯಾ ತವ ಕಾ ಶಕ್ತಿಃ ಕಾ ಸಂಜ್ಞಾ ಕಥಯಾದ್ಯ ನಃ ।
ಇತಿ ರಾಜವಚಃ ಶ್ರುತ್ವಾ ಸಿದ್ಧೋ ವಕ್ತುಂ ಪ್ರಚಕ್ರಮೇ ॥ ೧೯ ॥

॥ ಸಿದ್ಧ ಉವಾಚ ॥

ರಾಜನ್ ಪಾಂಡ್ಯಕುಲೋತ್ತುಂಗ ಸರ್ವಾಂ ಸ್ವಾಂ ಚೇಷ್ಟಿತಂ ಶ್ರೋತುಮರ್ಹಸಿ ।
ಅಹಂ ಸಿದ್ಧೋ ಹ್ಯನಾಥಸ್ತು ಭಿಕ್ಷಾಶೀ ಸ್ವೈರಸಂಚರಃ ॥ ೨೦ ॥

ಮಮ ದೇಶಸ್ತು ಕಾಶ್ಮೀರಃ ಪುರೀ ವಾರಾಣಸೀ ಪ್ರಭೋ ।
ತತ್ಪ್ರದೇಶಾದ್ವಿನಿರ್ಗತ್ಯ ಶಿವಕ್ಷೇತ್ರಾಣಿ ದರ್ಶಯನ್ ॥ ೨೧ ॥

ಅಹಂ ಕತಿಪಯೈ ರ್ಮಾಸೈ ರಾಗತೋಽಸ್ಮಿ ಶನೈಶ್ಶನೈಃ ।
ಅನಾದಿಭೂತಮಖಿಲಜಗತ್ಕಾರಣಮವ್ಯಯಂ ॥ ೨೨ ॥

---

ನೀನು ಏನನ್ನು ತಿಳಿದುಕೊಂಡಿರುತ್ತೀಯೆ? ನಿನ್ನ ಸಾಮರ್ಥ್ಯವೇನು? ನಿನ್ನ ಹೆಸರೇನು? ಇವುಗಳಿಗೆ ಉತ್ತರವನ್ನು ಹೇಳು" ಎಂದು ಪ್ರಶ್ನೆಮಾಡಿದನು. ರಾಜನ ಮಾತನ್ನು ಕೇಳಿ, ಸಿದ್ಧಪುರುಷನು ಉತ್ತರವನ್ನು ಹೇಳಲು ಪ್ರಾರಂಭಿಸಿದನು.

೨೦–೨೬. ಸಿದ್ಧನು ಹೇಳಿದನು:–"ಪಾಂಡ್ಯರಾಜರ ವಂಶಚೂಡಾಮಣಿಯಾದ ಎಲೈ ರಾಜನೆ, ನೀನು ಕೇಳಿದ್ದೆಲ್ಲವನ್ನೂ ಹೇಳುವೆನು! ಕೇಳು. ನಾನು ಸಿದ್ಧಪುರುಷನು. ನಾನು ದಿಕ್ಕಿಲ್ಲದವನು. ನನಗೆ ರಕ್ಷಕರು ಯಾರೂ ಇಲ್ಲ. ಅಲ್ಲಲ್ಲಿ ಭಿಕ್ಷೆ ಮಾಡಿಕೊಂಡು ಅದರಿಂದ ಜೀವನ ಮಾಡುತ್ತಿದ್ದೇನೆ. ನನ್ನ ಮನಸ್ಸು ಬಂದಹಾಗೆ ಸಂಚರಿಸುತ್ತಿದ್ದೇನೆ. ನಾನು ಕಾಶ್ಮೀರದೇಶದವನು. ಆದರೆ ಕಾಶೀನಗರದಲ್ಲಿರುವೆನು ಆ ನಗರದಿಂದ ಹೊರಟು ಶಿವಕ್ಷೇತ್ರಗಳಲ್ಲಿ ತೀರ್ಥ ಯಾತ್ರೆಗಾಗಿ ತಿರುಗುತ್ತಾ ಮೆಲ್ಲಗೆ ಈ ಕಾಶೀಕ್ಷೇತ್ರಕ್ಕೆ ಬಂದಿದ್ದೇನೆ. ಇಲ್ಲಿಗೆ ಬಂದು ಕೆಲವು ತಿಂಗಳುಗಳು ಕಳೆದು ಹೋದುವು. ಆದಿ ಮಧ್ಯಾಂತ ರಹಿತನಾಗಿ, ಪರಿಪೂರ್ಣನಾಗಿರುವ, ಜಗತ್ಕಾರಣನಾದ ಹಾಲಾಸ್ಯೇಶ್ವರನೆಂದು ಪ್ರಸಿದ್ಧವಾದ ಶಿವಲಿಂಗವನ್ನು ದರ್ಶನಮಾಡಲು ಜನರೆಲ್ಲರೂ ಬರುವರು. ನನ್ನ ಮಹಿಮೆಯನ್ನು ಅವರಿಗೆ ಆಶ್ಚರ್ಯವಾಗುವಂತೆ ಅನೇಕ ರೀತಿಯಿಂದ

ಶ್ರೀಮದ್ಧಾಲಾಸ್ಯನಾಥಾಖ್ಯಂ ಮೂಲಲಿಂಗಂ ಚ ದರ್ಶಿತಂ ।
ಮನುಜಾನಾಂ ಚ ಸರ್ವೇಷಾಂ ಮಧುರಾಪುರವಾಸಿನಾಂ ॥ ೨೩ ॥

ವಿವಿಧಾರ್ ಮತ್ಪ್ರತಾಪಾಂಶ್ಚ ಪ್ರದರ್ಶಯಿತು ಮುದ್ಯತಾನ್ ।
ಪ್ರದಾತುಂ ವಾಂಛಿತಾರ್ಥಾಂಶ್ಚ ವರ್ತೇಽಸ್ಯಾಂ ಪುರಿ ಭೂಪತೇ ॥ ೨೪ ॥

ನಾಸ್ತಿ ವಿದ್ಯಾಸು ಸರ್ವಾಸು ಲೋಕೇಷ್ವವಿದಿತಂ ಮಯಾ ।
ಮಯಿ ಸಂತಿ ಮಹೀಪಾಲ ಸದಾ ಸರ್ವಾಶ್ಚ ಶಕ್ತಯಃ ॥ ೨೫ ॥

ಅಜ್ಞಾ ಸಿದ್ಧಶ್ಚ ನಾಮ್ನಾಹಂ ಕಿಂ ಕಾರ್ಯಂ ತೇ ಮಹಾಪ್ರಭೋ ।
ಇತ್ಯುಕ್ತ್ವಾ ಸ್ಮಿತವಕ್ತ್ರಸ್ಸನ್ ಯಥಾಪೂರ್ವಂ ಸುಖಂ ಸ್ಥಿತಃ ॥ ೨೬ ॥

ನೈರಪೇಕ್ಷ್ಯಂ ಚ ದರ್ಪಂ ಚ ದೃಷ್ಟ್ವಾ ಧೈರ್ಯಂ ಚ ಭೂಪತಿಃ ।
ತೂಷ್ಣೀಂ ತಿಷ್ಠತಿ ತತ್ರೈವ ಕಿಂ ಕರ್ತವ್ಯಮಿತಿ ಸ್ಮರನ್ ॥ ೨೭ ॥

ತದಾ ಕೃಷೀವಲಃ ಕಶ್ಚಿತ್ ರಾಜಾನಂ ದ್ರಷ್ಟು ಮಾಗತಃ ।
ಇಕ್ಷುದಂಡ ಮತಿಸ್ಥೂಲ ಮತಿದೀರ್ಘಂ ಸುಕೋಮಲಂ ॥ ೨೮ ॥

---

ತೋರಿಸಿರುತ್ತೇನೆ. ಮತ್ತು ಅವರವರ ಕೋರಿಕೆಗಳನ್ನು ಪೂರ್ಣಮಾಡಿಕೊಡುವುದಕ್ಕಾಗಿ ಈ ನಗರದಲ್ಲಿ ವಾಸಮಾಡಿಕೊಂಡು ಇರುತ್ತೇನೆ. ಎಲೈ ರಾಜನೇ ! ಕೇಳು ಯಾವ ಲೋಕದಲ್ಲಿಯೂ ನನಗೆ ತಿಳಿಯದಿರುವ ವಿದ್ಯೆಯಿಲ್ಲ. ಎಲ್ಲಾ ವಿಧವಾದ ಸಾಮರ್ಥ್ಯವೂ ನನಗೆ ಬಹಳವಾಗಿ ಇದೆ. ನನಗೆ ಅಜ್ಞಾಸಿದ್ಧನೆಂದು ಹೆಸರು. ನಿನಗೆ ನನ್ನಿಂದ ಏನಾಗಬೇಕು ! ಅದನ್ನು ಹೇಳು." ರಾಜನು ಸಿದ್ಧನ ಮಾತನ್ನು ಕೇಳಿ ನಗುತ್ತಾ, ಮೊದಲಿನಂತೆ ಸಂತೋಷದಿಂದ ಇದ್ದನು.

೨೬-೨೮. ಅಭಿಷೇಕ ಪಾಂಡ್ಯರಾಜನಿಗೆ ಆ ಸಿದ್ಧಪುರುಷನಿಗೆ ಆಸೆಯಿಲ್ಲದಿರುವಿಕೆ, ಮತ್ತು ಅವನ ಅಹಂಕಾರ, ಧೈರ್ಯ ಇವುಗಳನ್ನು ನೋಡಿ, "ಈಗ ನಾನು ಏನು ಮಾಡಲಿ" ಎಂದು ಯೋಚಿಸುತ್ತಾ, ಇರುವ ಕಾಲಕ್ಕೆ ಸರಿಯಾಗಿ, ಒಬ್ಬ (ಶೂದ್ರನು) ವ್ಯವಸಾಯಗಾರನು ದೊರೆಯನ್ನು ನೋಡುವುದಕ್ಕಾಗಿ ಬಂದನು. ಅವನು ಉದ್ದವಾಗಿಯೂ, ದಪ್ಪವಾಗಿಯೂ ದೊಡ್ಡ ಗಿಣ್ಣುಗಳಿಂದ ಕೂಡಿರುವುದಾಗಿ ಎಳೆಯದಾಗಿ ಇರುವ ಚೆನ್ನಾಗಿ ಬೆಳೆದು ನೋಡುವುದಕ್ಕೆ ಅಂದವಾಗಿರುವ ಕಬ್ಬಿನ ಜಲ್ಲೆಯನ್ನು ರಾಜನಿಗೆ ಕಾಣಿಕೆಯಾಗಿ ಒಪ್ಪಿಸಿದನು.

ವಿಶಾಲಪರ್ವಸಂಯುಕ್ತಂ ನಯನಾನಂದದಾಯಕಂ ।
ಪ್ರಯಚ್ಛತಿ ಮಹೀಪಾಲೋ ಹಸ್ತೇನಾಪಿ ತ ಮಗ್ರಹೀತ್ ॥ ೨೯ ॥

ಅಪೂರ್ವ ಮಿಕ್ಷುಕಾಂಡಂ ಚ ವಿಲೋಕ್ಯ ಪ್ರೀತಮಾನಸಃ ।
ಪುನಃ ಪ್ರಾಹ ಚ ತಂ ಸಿದ್ಧಂ ಶಿಲಾನಿಶ್ಚಲವಿಗ್ರಹಂ ॥ ೩೦ ॥

ಆಜ್ಞಾ ಸಿದ್ಧೋ ಭವಾನ್ ಸಿದ್ಧಸ್ಸತ್ಯಂ ಚೇನ್ಮಮ ಹಸ್ತಗಂ ।
ಇಕ್ಷುಕಾಂಡಂ ಭಕ್ಷಯತು ವಿಮಾನಾಧಾರದಿಗ್ಗಜಃ ॥ ೩೧ ॥

ಶಿಲಾಮಯಗಜಸ್ತಂ ತು ಭಕ್ಷಯಿಷ್ಯತಿ ಚೇತ್ತತಃ ।
ಸರ್ವಂ ದದಾಮಿ ತ್ವೇಷ್ಟಂ ಭೋಮನ್ನಾಥಶ್ಚ ಭವಿಷ್ಯಸಿ ॥ ೩೨ ॥

ತಚ್ಛ್ರುತ್ವಾ ಸಹಸಾ ಸಿದ್ಧೋ ನೃಪತೇರ್ವಾಕ್ಯವಿಸ್ತರಂ ।
ಸ್ಮಯಮಾನಮುಖಾಂಭೋಜಃ ಇದಂ ವಚನಮಬ್ರವೀತ್ ॥ ೩೩ ॥

---

೨೯-೩೧. ದೊರೆಯು ಅದನ್ನು ಸ್ವೀಕರಿಸಿ, ಅಷ್ಟು ಚೆನ್ನಾಗಿ ಇರುವ ಆದನ್ನು ನೋಡಿ, ಸಂತೋಷವುಳ್ಳ ಮನಸ್ಸಿನಿಂದ ಕಲ್ಲಿನಂತೆ ನಿಶ್ಚಲನಾಗಿರುವ ಸಿದ್ಧನನ್ನು ನೋಡಿ "ನೀನು ಆಜ್ಞಾಸಿದ್ಧನಾಗಿ ಇದ್ದೀಯೆ. ನಿನ್ನ ಮಾತಿನಂತೆ ನೀನು ಸಿದ್ಧ ಪುರುಷನಾಗಿರುವುದು ನಿಜವಾಗಿದ್ದರೆ, ಈ ದೇವಾಲಯದಲ್ಲಿ ವಿಮಾನಕ್ಕೆ ಆಧಾರವಾದ ದಿಗ್ಗಜವು ಇದನ್ನು ತಿನ್ನುವಂತೆ ಮಾಡು. ಕಲ್ಲಿನ ಆನೆಯು ಇದನ್ನು ತಿಂದರೆ, ನಿನಗೆ ನಾನು ಎಲ್ಲವನ್ನೂ ಕೊಡುತ್ತೇನೆ. ನಿನ್ನನ್ನು ನನ್ನ ಪ್ರಭುವನ್ನಾಗಿ ತಿಳಿಯುತ್ತೇನೆ." ಎಂದು ಸಿದ್ಧನಿಗೆ ಹೇಳಿದನು.

೩೨-೩೬. ಸಿದ್ಧನು ರಾಜನು ಹೇಳಿದ ಅಷ್ಟು ಉದಾರವಾದ ಮಾತನ್ನು ಕೇಳಿ, "ಚಂದ್ರವಂಶದ ರಾಜರಿಗೆ ಅಧಿಪತಿಯಾಗಿರುವ ಎಲೈ ರಾಜನೆ, ನೀನು ಎಲ್ಲವನ್ನೂ ಕೊಡುತ್ತೇನೆ ಎಂದು ಸುಮ್ಮನೆ ಹೇಳಿರುತ್ತೀಯೆ. ಈ ಮಾತಿಗೆ ಫಲವಿಲ್ಲ. ಒಂದು ವಿದ್ಯೆಯಾದರೂ ಮನುಷ್ಯನಿಗೆ ಚೆನ್ನಾಗಿ ಬಂದಿದ್ದರೆ ಅವನು ಪುರುಷಶ್ರೇಷ್ಠನಾಗಿರುವನು. ನಾನು ಎಲ್ಲಾ ಲೋಕಗಳಲ್ಲಿಯೂ ಪೂಜ್ಯನಾಗಿರುವೆನು. ಎಲ್ಲಾ ವಿದ್ಯೆಗಳಲ್ಲಿಯೂ, ಎಲ್ಲರಿಗಿಂತಲೂ ಅಧಿಕನಾಗಿರುವೆನು. ಎಲ್ಲರಿಗೂ ಬೇಕಾಗಿರುವ

ರಾಜರ್ಷಶಶಿಕುಲಾಧೀಶ ಶಾಸಿತಾರಾತಿಮಂಡಲ ।
ತವ ಸರ್ವಂ ದದಾಮೀತಿ ನಿರರ್ಥಕವಚೋऽಬ್ರವೀಃ ॥ ೩೪ ॥

ಏಕ್ಯಾನವದ್ಯಾ ವಿಧ್ಯಾ ಚೇದ್ಯಸ್ಮಿನ್ ಸ ಪುರುಷೋತ್ತಮಃ ।
ಸರ್ವಲೋಕಾದಿಪೂಜ್ಯಶ್ಚ ಸರ್ವವಿದ್ಯಾಧಿಕಸ್ತ್ವಹಂ ॥ ೩೫ ॥

ಅರ್ಥೋऽಭಿಲಷಿತ ಸ್ಸರ್ವೈಃ ಮಯ್ಯಸ್ತಿ ಹಿ ಮಹೀಪತೇ ।
ಕಿಂಚಿನ್ನಾಸ್ತಿ ಮಹೀಪಾಲ ಮಯಾ ತ್ವತ್ತೋऽಭಿಕಾಂಕ್ಷಿತಂ ॥ ೩೬ ॥

ಪಶ್ಯ ಪಶ್ಯ ನೃಪೇ ತ್ಯುಕ್ತ್ವಾ ಗಜಸ್ಯಾಜ್ಞಾಂ ದದೌ ದೃಶಾ ।
ಭೂಪತೇ ಭರ್ಗಜಗಂ ಸದ್ಯಃ ಇಕ್ಷುಕಾಂಡಂ ಮನೋಹರಂ ॥ ೩೭ ॥

ಆದಾಯ ಚರ ಮಾತಂಗ ಸುಂದರಾಜ್ಞಾ ತನಾ ಸ್ತ್ವಿತಿ ।
ಶ್ರುತ್ವಾ ಜ್ಞಾವಚನಂ ತಸ್ಯ ಮಹಾಸಿದ್ಧಸ್ಯ ಚಾದ್ಭುತಂ ॥ ೩೮ ॥

ಯುಗಾಂತಮೇಘಸದೃಶಮಹಾಬೃಂಹಿತಸಂಯುತಃ ।
ಇಭಸ್ತು ಭೂಪಹಸ್ತಾತ್ತ ಮಾದಾಯ ಅಭಕ್ಷಯತ್ ಕ್ಷಣಾತ್ ॥ ೩೯ ॥

ಮಹಾದೀರ್ಘಾಂ ಮಹಾದೀಪ್ತಾಮಾನೀತಾಂ ಚ ಮಹೀಪತೇಃ
ಮೃಣಾಳಶಂಕಯಾಥಾಸ್ಯ ಜಗ್ರಾಹೈ ಕಾವಲೀ ಮಪಿ ॥ ೪೦ ॥

---

ಇಷ್ಟಗಳೆಲ್ಲವೂ ನನ್ನಲ್ಲಿರುವವು. ಹೀಗಿರುವಾಗ ನಿನ್ನಿಂದ ಬೇಕಾಗಿರುವುದು ಯಾವುದೂ ಇಲ್ಲ." ಎಂದು ಹೇಳಿ, "ನೀನು ಹೇಳಿದಂತೆ ಆನೆಯು ಕಬ್ಬನ್ನು ತಿನ್ನುವುದನ್ನು ನೋಡು, ನೋಡು" ಎಂದು ಹೇಳುತ್ತಾ ತನ್ನ ದೃಷ್ಟಿಯಿಂದಲೇ ಆನೆಗೆ ಅಪ್ಪಣೆ ಮಾಡಿದನು.

೩೭-೪೦. ಆಗ ಆನೆಯು ಮಹಾಸಿದ್ಧನಾಗಿರುವ ಅವನ ಅಪ್ಪಣೆಯನ್ನು ಕೇಳಿ "ಎಲೈ ಸುಂದರೇಶ್ವರನೇ ನಿನ್ನ ಅಪ್ಪಣೆಯಾದಂತೆ ಆಗಲಿ" ಎಂದು ಹೇಳಿ, ದೊರೆಯು ಹಿಡಿದಿದ್ದ ಮನೋಹರವಾದ ಕಬ್ಬಿನ ಜಲ್ಲೆಯನ್ನು ಎಳೆದುಕೊಂಡು ಪ್ರಳಯಕಾಲದ ಮೇಘದಂತೆ ಧ್ವನಿಮಾಡುತ್ತಾ ಒಂದು ಕ್ಷಣದಲ್ಲಿ ತಿಂದುಹಾಕಿತು. ಬಹಳ ಉದ್ದವಾಗಿ ಚೆನ್ನಾಗಿರುವ ಕಬ್ಬನ್ನು ತಿಂದು ಆ ಆನೆಯು ದೊರೆಯ ಕುತ್ತಿಗೆಯಲ್ಲಿ ಇದ್ದ ಏಕಾವಲೀ ಸರವನ್ನು ತಾವರೆಯ ದಂಟು ಎಂಬ ಭ್ರಾಂತಿಯಿಂದ ಎಳೆದುಕೊಂಡಿತು.

ತಾ ಮಾದಾತುಂ ಸಮುದ್ಯುಕ್ತಾ ಹಾ ಹೇತಿ ನಿಕಟಸ್ಥಿತಾಃ ।
ಗಜ ತ್ವಂ ಭಕ್ಷಯೇತ್ಯುಕ್ತ್ವಾ ಸಿದ್ಧ ಶ್ಚಾಜ್ಞಾಂ ದದೌ ಕ್ರುಧಾ ॥ ೪೧ ॥

ತದಾ ಗಂಭೀರಘೀಟ್ಕಾರ ಮುಕುರ್ವಂಶ್ಚ ಮತಂಗಜಃ ।
ಭಕ್ಷಯಾಮಾಸ ಸಿದ್ಧಸ್ಯ ತಸ್ಯ ವಾಕ್ಯಾಭಿಚೋದಿತಃ ॥ ೪೨ ॥

ನೃಪೋ ವಿಷಾದೀಕ್ರುದ್ಧಸ್ಸ ಆಜ್ಞಾಸಿದ್ಧ ಮಲೋಕಯತ್ ।
ಪ್ರಹರ್ತುಂ ಕೃತಸನ್ನಾಹಾ ಯೋಧಾ ಸ್ಸಿದ್ಧಾಂತಿಕಂ ಗತಾಃ ॥ ೪೩ ॥

ಸಹಸೋತ್ಥಾಯ ಸಿದ್ಧಶ್ಚ ತಾನ್ವಿಲೋಕ್ಯ ಬಹೂನ್ಭಟಾನ್ ।
ಅಭಯೀಕೃತಹಸ್ತಸ್ಸ ಸ್ತಂಭಯಿತ್ವಾ ಸ್ವಶಕ್ತಿತಃ ॥ ೪೪ ॥

---

೪೧–೪೪. ಆಗ ದೊರೆಯು ಹತ್ತಿರದಲ್ಲಿ ಇದ್ದವರೆಲ್ಲರೂ ಹಾಹಾಕಾರ ಮಾಡುತ್ತಾ ಏಕಾವಳೀ ಹಾರವನ್ನು ಕಿತ್ತುಕೊಳ್ಳಲು, "ಅದನ್ನು" ತಿನ್ನು ಎಂದು ಆನೆಗೆ ಅಪ್ಪಣೆ ಮಾಡಿದನು. ಆಗ ಗಂಭೀರವಾದ ಧ್ವನಿಯನ್ನು ಮಾಡುತ್ತಾ ಆ ಆನೆಯು ಸಿದ್ಧನ ಮಾತನ್ನು ಕೇಳಿ ಏಕಾವಳೀ ಹಾರವನ್ನು ತಿಂದುಬಿಟ್ಟಿತು. ರಾಜನು ಕೊಂಚ ಮನೋವ್ಯಾಕುಲತೆಯಿಂದ ಸಿದ್ಧನನ್ನು ಕ್ರೂರವಾದ ದೃಷ್ಟಿಯಿಂದ ನೋಡಿದನು. ಸಿದ್ಧನನ್ನು ಹೊಡೆಯುವುದಕ್ಕಾಗಿ ರಾಜ (ದೂತರು) ಸೈನಿಕರು ಸಿದ್ಧರಾಗಿ ಸಿದ್ಧ ಪುರುಷನ ಹತ್ತಿರಕ್ಕೆ ಬಂದರು. ಕೂಡಲೆ ಸಿದ್ಧನು ಮೇಲಕ್ಕೆ ಎದ್ದು ನಿಂತು ರಾಜ ದೂತರು ಬಹಳ ಜನರು ಇರುವುದರಿಂದ ಅಭಯ ಹಸ್ತವನ್ನು ಅವರಿಗೆ ತೋರಿಸಿ ಅವರ ಕೈಕಾಲುಗಳು ಚಲಿಸುವುದಕ್ಕೆ ಆಗದಂತೆ ಅವರನ್ನು ಸ್ತಂಭಿಸಿದನು. ಮತ್ತು ತನ್ನ ಸಾಮರ್ಥ್ಯದಿಂದ ಅವರನ್ನು " ಅಲ್ಲಿ ನಿಲ್ಲು ! ನಿಲ್ಲು ! " ಎಂದು ಬೆದರಿಸಿ ತಾನು ಮಾತ್ರ ನಗುತ್ತಾ ಇದ್ದಲ್ಲಿಯೇ ನಿಂತುಕೊಂಡನು.

ತಿಷ್ಠ ತಿಷ್ಠೇತಿ ಭಕ್ಸ್ಯೈರ್ಕರ್ತಾ ಹಸಂ ಸ್ತತ್ರೈವ ತಿಷ್ಠತಿ ।
ತ್ಯಕ್ತ್ವಾ ರೋಷಂ ವಿಸ್ಮಿತ ಸ್ಸನ್ ವಿಲೋಕ್ಯಾಸ್ಯ ಚ ವೈಭವಂ　　॥ ೪೫ ॥

ಸಚಿವೈ ಸ್ಸಂವೃತ ಸ್ಸಮ್ರಾಟ್ ಸಿದ್ಧಪಾದಾಂಬುಜದ್ವಯಂ ।
ಸ್ವೋತ್ತಮಾಂಗಂ ಸಮಾರೋಪ್ಯ ಪುಲಕಾಂಚಿತವಿಗ್ರಹಃ　　॥ ೪೬ ॥

ಅಪರಾಧಂ ಕ್ಷಮಸ್ವೇತಿ ಪುನಃ ಪುನರುದೀರಯನ್ ।
ಪರಂ ಪರವಶೋ ಭೂತ್ವಾ ತಸ್ಥೌ ಸ್ತಂಭ ಇವಾಚಲಃ　　॥ ೪೭ ॥

ಅಥ ಸಿದ್ಧಸ್ಸಮಾಲೋಕ್ಯ ಭಕ್ತ್ಯಾ ಭೀತ್ಯಾ ಚ ಸಂಯುತಂ ।
ವಾಂಛಿತಾರ್ಥಂ ಪ್ರಾರ್ಥಯ ತ್ವಮಿತಿ ಪ್ರಾಹ ಮಹೀಪತಿಂ　　॥ ೪೮ ॥

ಸಿದ್ಧವಾಕ್ಯಂ ಸಮಾಕರ್ಣ್ಯ ಪ್ರಣಿಪತ್ಯ ಕೃತಾಂಜಲಿಃ ।
ಪುತ್ರಂ ಸದ್ಗುಣಸಂಯುಕ್ತಂ ಪ್ರಾರ್ಥಯಾಮಿ ಪ್ರಯಚ್ಛ ಭೋ　　॥ ೪೯ ॥

ಇತಿ ತತ್ಪ್ರಾರ್ಥನಾಂ ಶ್ರುತ್ವಾ ಸಿದ್ಧವೇಷಧರೋऽಬ್ರವೀತ್ ।
ತವಾಸ್ತು ಪುತ್ರಸೌಭಾಗ್ಯಂ ಮಹದೈಶ್ವರ್ಯಸಂಯುತಂ　　॥ ೫೦ ॥

---

೪೫-೪೭. ಆಗ ಅಭಿಷೇಕ ಪಾಂಡ್ಯರಾಜನು ಸಿದ್ಧನ ವಿಷಯದಲ್ಲಿ ತನಗೆ ಉಂಟಾಗಿದ್ದ ರೋಷವನ್ನು ಬಿಟ್ಟು, ಆಶ್ಚರ್ಯವುಳ್ಳವನಾಗಿ ಆ ಸಿದ್ಧಪುರುಷನ ಕಮಲದಂತಿರುವ ಎರಡು ಪಾದಗಳನ್ನೂ ತನ್ನ ತಲೆಯು ಮುಟ್ಟುವಂತೆ ನಮಸ್ಕಾರ ಮಾಡಿದನು. ಸಂತೋಷದಿಂದ ರೋಮಾಂಚವುಳ್ಳವನಾಗಿ "ನನ್ನ ಅಪರಾಧವನ್ನು ನೀನು ಕ್ಷಮಿಸು" ಎಂದು ಪದೇ ಪದೇ ಹೇಳುತ್ತಾ ಕಂಬದ ಹಾಗೆ ನಿಶ್ಚಲನಾಗಿ ಸುಮ್ಮನೆ ನಿಂತಿದ್ದನು.

೪೮-೫೩. ಆಗ ಸಿದ್ಧಪುರುಷನು ರಾಜನಿಗೆ ಇರುವ ಭಯ, ಭಕ್ತಿಗಳನ್ನು ನೋಡಿ "ಎಲೈ ರಾಜನೆ ನಿನ್ನ ಇಷ್ಟಾರ್ಥವನ್ನು ಪ್ರಾರ್ಥನೆ ಮಾಡಿಕೋ" ಎಂದು ಹೇಳಿದನು. ರಾಜನು ಅವನ ಮಾತನ್ನು ಕೇಳಿ ಅವನಿಗೆ ನಮಸ್ಕಾರ ಮಾಡಿ ಅಂಜಲಿಬದ್ಧನಾಗಿ ಎಲೈ ಪ್ರಭುವೆ, ಗುಣವಂತನಾಗಿರುವ ಪುತ್ರನು ನನಗೆ ಆಗಲಿ. ಎಂದು ಬೇಡಿಕೊಂಡನು. ಸಿದ್ಧವೇಷವನ್ನು ಧರಿಸಿದ ಸುಂದರೇಶ್ವರನು ನಿನಗೆ ಅತುಲ

ಯಶಶ್ಚ ದೀರ್ಘಮಾಯುಶ್ಚ ಪಶ್ಚಾನ್ಮುಕ್ತಿಶ್ಚ ಶಾಶ್ವತೀ ।
ಇತ್ಯುಕ್ತ್ವಾ ಗಜವಕ್ತ್ರಾಚ್ಚ ಗೃಹೀತ್ವೈಕಾವಲೀಮಪಿ ॥ ೫೧

ದತ್ವಾಶೀರ್ಭಿಶ್ಚ ಸಂವರ್ಧ್ಯ ಪಾಣಿಭ್ಯಾಂ ಪರಿಮೃಶ್ಯ ತಂ ।
ಇತಿ ಪಾಂಡ್ಯಮಹೀಪಾಲಂ ಪರಿತೋಷ್ಯ ವರಾರ್ಪಣಾತ್ ॥ ೫೨

ಸಿದ್ಧರೂಪೀ ಪರಶಿವ ಸ್ಸತ್ಯಾನಂದಚಿದಾತ್ಮಕಃ ।
ಹಾಲಾಸ್ಯನಾಥೋ ಭಗವಾನ್ ಅಂತರ್ಧಾನಮಗಾತ್ ಕ್ಷಣಾತ್ ॥ ೫೩

ವಿಚಿತ್ರಂ ತಚ್ಚರಿತ್ರಂ ಚ ಸಿದ್ಧಸ್ಯಾಲೋಕ್ಯ ಭೂಪತಿಃ ।
ನಿಶ್ಚಿತ್ಯ ಸುಂದರೇಶಸ್ಯ ವಿನೋದಮಿತಿ ಮಾನಸೇ ॥ ೫೪

---

ಐಶ್ವರ್ಯವಂತನಾದ ಮಗನು ಉಂಟಾಗಲಿ. ಕೀರ್ತಿಯೂ ಅಧಿಕವಾದ ಆಯುಷ್ಯವ
ಅನಂತರದಲ್ಲಿ ಅತ್ಯುತ್ತಮವಾದ ಮುಕ್ತಿಯೂ ಉಂಟಾಗಲಿ, ಎಂದು ಆಶೀರ್ವಾ
ಮಾಡಿದನು. ಸಿದ್ಧನು ಹೀಗೆಂದು ಹೇಳಿ ಆನೆಯ ಬಾಯಿನಿಂದ ಏಕಾವಳೀ ಹ
ವನ್ನು ತೆಗೆದುಕೊಟ್ಟು, ಆಶೀರ್ವಾದದಿಂದ ಅವನಿಗೆ ಸಂತೋಷವು ಆಗುವ ಹ
ಮಾಡಿ, ಅವನನ್ನು ತನ್ನ ಹಸ್ತದಿಂದ ಸ್ಪರ್ಶಮಾಡಿ, ಸಚ್ಚಿದಾನಂದ ರೂಪನಾದ ಸಿ
ರೂಪದಿಂದ ಇರುವ ಹಾಲಾಸ್ಯೇಶ್ವರನಾದ ಪರಶಿವನು ಆಕ್ಷಣದಲ್ಲಿಯೇ (ಅಂತರ್ಧಾ
ವಾದನು) ಅದೃಶ್ಯನಾದನು.

೫೫-೫೬. ರಾಜನು ಆಶ್ಚರ್ಯಕರವಾದ ಆ ಸಿದ್ಧನ (ಚರಿತ್ರೆಯನ್ನು) ನ
ಯನ್ನು ನೋಡಿ, ಇದು ಸುಂದರೇಶ್ವರನ ಲೀಲೆಯು, ಎಂದು ಮನಸ್ಸಿನಲ್ಲಿ ನಿಶ್ಚಯಿ
ಮೂಲಲಿಂಗದ ಹತ್ತಿರಕ್ಕೆ ಬಂದು, ಭಕ್ತಿಯಿಂದ ನಮಸ್ಕಾರ ಮಾಡಿ, ಸ್ತೋ
ಮಾಡಲು ಪ್ರಾರಂಭ ಮಾಡಿದನು. ಅಭಿಷೇಕ ಪಾಂಡ್ಯನು ಹೇಳಿದನು :

ಲಿಂಗಮೂರ್ತಿಧರಸ್ಯಾಥಸುಂದರೇಶಸ್ಯ ಸನ್ನಿಧಿಂ ।
ಪ್ರಾಪ್ಯ ಭಕ್ತ್ಯಾ ಪ್ರಣಮ್ಯಾಥ ಕರ್ತುಮಾರಭತೇ ಸ್ತುತಿಂ ॥ ೫೫ ॥

॥ ಅಭಿಷೇಕಪಾಂಡ್ಯ ಉವಾಚ ॥

ಪರಿಪೂರ್ಣ ಪರಾನಂದ ಪರಿಚಿತ್ಸತ್ಯವಿಗ್ರಹ ।
ಸುಂದರೇಶ್ವರ ಸರ್ವಜ್ಞ ತ್ರಾಹಿ ಮಾಮಪರಾಧಿನಂ ॥ ೫೬ ॥

ಫಾಲಾಕ್ಷಿಜಾತಜ್ವಲನಲೀಲಿಹಾನಮನೋಭವ ।
ಜೀವನ್ಮುಕ್ತಿಪುರೀನಾಥ ತ್ರಾಹಿ ಮಾಮಪರಾಧಿನಂ ॥ ೫೭ ॥

ಪಾರಿಜಾತಗುಣಾತೀತಪಾದಪಂಕಜವೈಭವ ।
ಕದಂಬಕಾನನಾಧ್ಯಕ್ಷ ತ್ರಾಹಿ ಮಾಮಪರಾಧಿನಂ ॥ ೫೮ ॥

ಭಕ್ತಪ್ರಾರ್ಥಿತಸರ್ವಾರ್ಥಕಾಮಧೇನೋ ಪುರಾಂತಕ ।
ಕರುಣಾ ವರುಣಾವಾಸ ತ್ರಾಹಿ ಮಾಮಪರಾಧಿನಂ ॥ ೫೯ ॥

---

"ಪ್ರಪಂಚದಲ್ಲಿ ಎಲ್ಲಾ ಕಡೆಯಲ್ಲಿಯೂ ಪರಿಪೂರ್ಣನಾಗಿ, ಶ್ರೇಷ್ಠವಾದ ಆನಂದವುಳ್ಳ ಸಚ್ಚಿದ್ರೂಪನಾಗಿರುವ. ಮತ್ತು ಸರ್ವಜ್ಞನಾದ ಸುಂದರೇಶ್ವರನೇ, ನಿನ್ನ ವಿಷಯದಲ್ಲಿ ತಪ್ಪನ್ನು ಮಾಡಿರುವ ನನ್ನನ್ನು ಕ್ಷಮಿಸು.

೫೭-೫೯. ಎಲೈ ಸುಂದರೇಶ್ವರನೇ, ನಿನ್ನ ಹಣೆಯಲ್ಲಿರುವ ಕಣ್ಣಿನಿಂದ ಉತ್ಪನ್ನನಾಗಿ ಉರಿಯುತ್ತಿರುವ ಅಗ್ನಿಯಲ್ಲಿ ಮನ್ಮಥನು ನಾಶವನ್ನು ಹೊಂದಿರುವನು. ನೀನು ಜೀವನ್ಮುಕ್ತ ನಗರಕ್ಕೆ ಅಧಿಪತಿಯಾಗಿ ಇರುತ್ತೀಯೆ. ಕಮಲದಂತಿರುವ ನಿನ್ನ ಪಾದಗಳ ಮಹಿಮೆಯು ಪಾರಿಜಾತವೆಂಬ ಕಲ್ಪವೃಕ್ಷವನ್ನು ಮೀರಿಸಿ ಇರುವುದು. ನೀನು ಕದಂಬವನಕ್ಕೆ ಅಧಿಪನಾಗಿ ಇರುತ್ತೀಯೆ. ಭಕ್ತರು ಪ್ರಾರ್ಥನೆ ಮಾಡಿದವುಗಳೆಲ್ಲವನ್ನೂ, ಕಾಮಧೇನುವು ಇಷ್ಟಾರ್ಥಗಳನ್ನು ಕೊಡುವಂತೆ, ನೀನು ಕೊಡುತ್ತಿರುತ್ತೀಯೆ. ಎಲೈ ದಯಾಸಮುದ್ರನೇ ನನ್ನ ಅಪರಾಧವನ್ನು ಮನ್ನಿಸು.

ಕೈವಲ್ಯದಾನನಿರತ ಕಾಲಕೂಟಭಯಾಪಹ ।
ಕನ್ಯಕಾನಗರೀನಾಥ ತ್ರಾಹಿ ಮಾಮಪರಾಧಿನಂ ॥ ೬೦ ॥

ಕಮಲಾಪತಿ ವಾಗೀಶ ಶಚೀಶಪ್ರಮುಖಾಮರೈಃ ।
ಪರಿಪೂಜಿತಪಾದಾಬ್ಜ ತ್ರಾಹಿ ಮಾಮಪರಾಧಿನಂ ॥ ೬೧ ॥

ಪಂಚಾಸ್ಯಪನ್ನಗಾಂಕಾಭಪರಾನಂದಪ್ರದಾಯಕ ।
ಪರ್ವತಾಧೀಶಜಾಮಾತಃ ತ್ರಾಹಿ ಮಾಮಪರಾಧಿನಂ ॥ ೬೨ ॥

ಪರಾತ್ಪರಪದಾಂಭೋಜಪರಿಧ್ಯಾನರತಾತ್ಮನಾಂ ।
ಕಾಂಕ್ಷಿತಾರ್ಥಪ್ರದ ಸ್ವಾಮಿನ್ ತ್ರಾಹಿ ಮಾಮಪರಾಧಿನಂ ॥ ೬೩ ॥

ಸುಂದರೇಶ್ವರ ಸರ್ವೇಶ ಸರ್ವಸೌಭಾಗ್ಯಸಿದ್ಧಿದ ।
ಶ್ರೀಮತ್ಸುಂದರಪಾಂಡ್ಯೇಶ ತ್ರಾಹಿ ಮಾಮಪರಾಧಿನಂ ॥ ೬೪ ॥

---

೬೦-೬೨. ಎಲೈ ಸುಂದರೇಶ್ವರನೇ, ನೀನು ಮೋಕ್ಷವನ್ನು ಕೊಡುವುದರಲ್ಲಿ ಆಸಕ್ತನಾಗಿರುತ್ತೀಯೆ. ಕಾಲಕೂಟವೆಂಬ ವಿಷದ ಬಾಧೆಯನ್ನು ಪರಿಹರಿಸಿರುವೆ. ಮಧುರಾ ನಗರಕ್ಕೆ ಅಧಿಪನಾದ ನೀನು ನನ್ನ ಅಪರಾಧವನ್ನು ಮನ್ನಿಸು. ವಿಷ್ಣು, ಬ್ರಹ್ಮ ಇಂದ್ರರೇ ಮೊದಲಾದ ದೇವತೆಗಳು ಪೂಜಿಸುತ್ತಿರುವ ಪಾದಗಳುಳ್ಳವನಾದ ನೀನು ಅಪರಾಧವನ್ನು ಮನ್ನಿಸು. ಶಿವಸಾಸೂಪ್ಯಮುಕ್ತಿಯನ್ನು ಅನುಗ್ರಹಿಸುವವನಾದ, ಹಿಮವತ್ಪರ್ವತದ ಪುತ್ರಿಯಾದ ಪಾರ್ವತಿಗೆ ಪತಿಯಾದ ಸುಂದರೇಶ್ವರನೇ ನನ್ನ ಅಪರಾಧವನ್ನು ಕ್ಷಮಿಸು.

೬೩-೬೪. ಎಲ್ಲಕ್ಕಿಂತಲೂ ಶ್ರೇಷ್ಠವಾದ ನಿನ್ನ ಕಮಲದಂತಿರುವ ಪಾದಗಳನ್ನು ಧ್ಯಾನ ಮಾಡುತ್ತಿರುವವರ ಇಷ್ಟಾರ್ಥಗಳನ್ನು ನೆರವೇರಿಸಿ ಕೊಡುವ ಎಲೈ ಪ್ರಭುವೆ, ನನ್ನ ಅಪರಾಧವನ್ನು ಮನ್ನಿಸು. ಎಲ್ಲರಿಗೂ ಅಧಿಪನಾದ, ಎಲ್ಲಾ ವಿಧವಾದ ಶ್ರೇಯಸ್ಸನ್ನೂ ಉಂಟುಮಾಡುವ, ಸುಂದರಪಾಂಡ್ಯರಾಜನೆಂದು ಹೆಸರುಳ್ಳ ಸುಂದರೇಶ್ವರನೇ ನನ್ನ ಅಪರಾಧವನ್ನು ಮನ್ನಿಸು.

ಅಪರಾಧಾಷ್ಟಕಂ ಸ್ತೋತ್ರಂ ಯಃ ಪಠೇತ್ತವ ಸನ್ನಿಧೌ ।
ತಸ್ಯಾನಂತಾಪರಾಧಂ ಚ ಕ್ಷಮಸ್ವ ಕರುಣಾಂಬುಧೇ ॥ ೬೫ ॥

ಇತಿ ಸ್ತುತ್ವಾ ಮಹಾಲಿಂಗಂ ಪ್ರಣಿಪತ್ಯ ಮುಹುರ್ಮುಹುಃ ।
ಪುನರಪ್ಯನ್ಯಯಾ ಭೂಪಸ್ತುಷ್ಟಾವ ಪರಮೇಶ್ವರಂ ॥ ೬೬ ॥

ಹಾಲಾಸ್ಯನಾಥಶಂಭೋ ಪರಿಕೃತಭಕ್ತಾಪರಾಧ ಏವ ತ್ವಂ ।
ಅಹಮಪಿ ತವ ಪಾದಾಂಬುಜಶರಣ ಸ್ತ್ವಂ ಪಾಹಿ ಮಾಂ ಮಹೇಶಾನ ॥೬೭॥

ಕದಂಬಕಾಂತಕಾಂತಾರಕಲ್ಪಿತೇಂದ್ರವಿಮಾನಗ ।
ಕ್ಷಮ್ಯತಾ ಮಪರಾಧಂ ಮತ್ಕೃತಮಜ್ಞಾನತಃ ಪ್ರಭೋ ॥ ೬೮ ॥

ಇತ್ಯಾದಿಭಿಶ್ಚ ಸ್ತುತಿಭಿಃ ಸ್ತುತ್ವಾ ವಿಸ್ಮಿತಮಾನಸಃ ।
ಪುನಃ ಪುನಃ ಪ್ರಣಮ್ಯಾಥ ನೃಪ ಸ್ಸ್ವಾಲಯ ಮಾಯಯೌ ॥ ೬೯ ॥

---

೬೫-೬೯. ದಯಾನಿಧಿಯಾದ ಸುಂದರೇಶ್ವರನೇ ಅಪರಾಧಾಷ್ಟಕವೆಂಬ ಹೆಸರುಳ್ಳ ಈ ಸ್ತೋತ್ರವನ್ನು ನಿನ್ನ ಸನ್ನಿಧಿಯಲ್ಲಿ ಹೇಳುವವರ ಅಪರಾಧಗಳು ಯಾವುವು ಇದ್ದರೂ ಅವೆಲ್ಲವನ್ನೂ ನೀನು ಮನ್ನಿಸು. " ಎಂದು ಅಭಿಷೇಕ ಪಾಂಡ್ಯ ರಾಜನು ಸುಂದರೇಶ್ವರನನ್ನು ಸ್ತುತಿಮಾಡಿ ಮಹಾಲಿಂಗಕ್ಕೆ ನಮಸ್ಕಾರ ಮಾಡಿದನು. ಅನೇಕ ಸಾರಿ ನಮಸ್ಕರಿಸಿದ ನಂತರ ಆ ರಾಜನು ಪರಮೇಶ್ವರನನ್ನು ಬೇರೆಯ ವಿಧ ದಿಂದ ತಿರಿಗಿ ಸ್ತೋತ್ರ ಮಾಡಿದನು.

" ಎಲೈ ಹಾಲಾಸ್ಯನಾಥನಾದ ಪರಮೇಶ್ವರನೇ, ನೀನು ಯಾವಾಗಲೂ ಭಕ್ತರ ಅಪರಾಧಗಳನ್ನು ನಾಶಮಾಡುತ್ತಲೇ ಇರುತ್ತೀಯೆ. ನಾನೂ ಕೂಡ ನಿನ್ನ ಪಾದಸೇವಕ ನಾಗಿ ಇರುತ್ತೇನೆಯಾಗಿ ನನ್ನನ್ನು ರಕ್ಷಿಸು. ಕದಂಬವನದ ಮಧ್ಯದಲ್ಲಿರುವ ಸುಂದರ ವಾದ ಇಂದ್ರ ವಿಮಾನದ ಮಧ್ಯದಲ್ಲಿ ವಾಸಮಾಡುತ್ತಿರುವ ಸುಂದರೇಶ್ವರನೇ, ನಾನು ತಿಳಿಯದೆ ಮಾಡಿದ ಅಪರಾಧವನ್ನು ಪ್ರಭುವಾದ ನೀನು ಕ್ಷಮಿಸಿ ರಕ್ಷಿಸು." ಇದೇ ಮೊದಲಾಗಿ ಅಭಿಷೇಕ ಪಾಂಡ್ಯರಾಜನು ಸ್ತೋತ್ರವನ್ನು ಮಾಡಿ, ಆಶ್ಚರ್ಯವುಳ್ಳ ಮನಸ್ಸುಳ್ಳವನಾಗಿ ಅನೇಕ ಸಾರಿ ನಮಸ್ಕರಿಸಿ ತನ್ನ ಮನೆಗೆ ಹೋದನು.

ಅಥ ವಿಕ್ರಮಪಾಂಡ್ಯಾಖ್ಯಂ ಪುತ್ರಂ ಲಬ್ಧ್ವಾ ಮಹೌಜಸಂ ।
ತಸ್ಮಿನ್ನಿಕ್ಷಿಪ್ಯ ಭೂಭಾರ ಮಭಿಷೇಕಧರೋ ನೃಪಃ ॥ ೭೦ ॥

ಶ್ರೀಮದ್ಧಾಲಾಸ್ಯನಾಥಸ್ಯ ಕೃಪಾಪ್ರಾಪ್ತಮನೋರಥಃ ।
ಭುವಿ ಭುಕ್ತ್ವಾ ಚಿರಂ ಭೋಗಾನಂತೇ ಕೈವಲ್ಯಮಾಪ್ತವಾನ್ ॥ ೭೧ ॥

ಪುನರ್ವಿಕ್ರಮಪಾಂಡ್ಯೋಽಪಿ ಪಿತುರಪ್ಯಧಿಕಾಂ ಶ್ರಿಯಂ ।
ಲಬ್ಧ್ವಾ ಸುಂದರನಾಥಸ್ಯ ಮಹೇಶಸ್ಯ ಕೃಪಾಬಲಾತ್ ॥ ೭೨ ॥

ವಿದ್ಯಾವಿನಯಸೌಭಾಗ್ಯಸರ್ವಸಂಪತ್ಸಮನ್ವಿತಃ ।
ರಾಜ್ಯಂ ಚಕಾರ ನಿತ್ಯಂ ಚ ಸರ್ವಲೋಕಾಭಿವಂದಿತಃ ॥ ೭೩ ॥

ಯಸ್ಯಾಜ್ಞಯೇಕ್ಷುಕಾಂಡಂ ಚ ಜಗ್ರಾಹ ಗ್ರಾವಕುಂಜರಃ ।
ಉದ್ದಂಡಶುಂಡಾದಂಡಸ್ಸನ್ನಮಸ್ತಸ್ಮೈ ಪಿನಾಕಿನೇ ॥ ೭೪ ॥

ಇತಿ ಹಾಲಾಸ್ಯನಾಥಸ್ಯ ಸಿದ್ಧವೇಷಧರಸ್ಯ ಚ ।
ಇತ್ಯೇಕವಿಂಶತಿಂ ಲೀಲಾಂ ಯಃ ಶೃಣೋತಿ ನರಸ್ಸದಾ ॥ ೭೫ ॥

---

೭೦-೭೪. ಅಭಿಷೇಕಪಾಂಡ್ಯರಾಜನಿಗೆ ವಿಕ್ರಮಪಾಂಡ್ಯನೆಂಬ ಮಗನು ಹುಟ್ಟಿದನು. ಅವನು ಬಹಳ ಪರಾಕ್ರಮಶಾಲಿಯಾಗಿ ಇದ್ದನು. ಅವನಿಗೆ ರಾಜ್ಯದಲ್ಲಿ ಪಟ್ಟವನ್ನು ಕಟ್ಟಿ ಅಭಿಷೇಕ ಪಾಂಡ್ಯರಾಜನು ಹಾಲಾಸ್ಯೇಶ್ವರನ ಕೃಪೆಯಿಂದ ಬೇಕಾದ ಸುಖಗಳನ್ನು ಅನುಭವಿಸಿದ ನಂತರ ಕೊನೆಯಲ್ಲಿ ಮುಕ್ತಿಯನ್ನು ಹೊಂದಿದನು. ವಿಕ್ರಮಪಾಂಡ್ಯರಾಜನು ಮಹೇಶ್ವರನ ದಯೆಯಿಂದ ತಂದೆಗಿಂತಲೂ ಹೆಚ್ಚಾದ ಕಾಂತಿಯನ್ನು ಹೊಂದಿ, ವಿದ್ಯಾ, ವಿನಯ, ಸೌಭಾಗ್ಯ, ಸಂಪತ್ತುಗಳಿಂದ ಕೂಡಿದವನಾಗಿ, ಪ್ರಜೆಗಳ ಎಲ್ಲರ ಮೆಚ್ಚಿಗೆಗೂ ಪಾತ್ರನಾಗಿ ರಾಜ್ಯ ಪರಿಪಾಲನೆಯನ್ನು ಮಾಡುತ್ತಿದ್ದನು.

೭೪-೭೬. ಪರಮೇಶ್ವರನ ಆಜ್ಞೆಯನ್ನು ಅನುಸರಿಸಿ ಕಲ್ಲಿನ ಆನೆಯು ತನ್ನ ಸೊಂಡಲಿನಿಂದ ಕಬ್ಬಿನ ಜಲ್ಲೆಯನ್ನು ತಿಂದಿತು. ಅಚೇತನವಾದ ವಸ್ತುವಿಗೂ ಚೈತನ್ಯವನ್ನೂ, ಪ್ರಾಣವನ್ನೂ ಅನುಗ್ರಹಿಸುವ ಮಹೇಶ್ವರನಿಗೆ ನಮಸ್ಕಾರವು. ಸಿದ್ಧನ

ಲೀಲಾಶ್ರವಣಮಾತ್ರೇಣ ನರಃ ಪಾಪವಿವರ್ಜಿತಃ ।
ಲಬ್ಧ್ವಾ ಸರ್ವಾಂಶ್ಚ ಸಿದ್ಧೀಶ್ಚ ಭುಕ್ತ್ವಾ ಭೋಗಾನಿ ಹೋತ್ತಮಾ ॥೭೬॥
ಜ್ಞಾನೋಡುಪೇನ ತರತಿ ದುಸ್ತರಂ ಭವಸಾಗರಂ ।

ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಶಿಲಾಗಜೇಕ್ಷು ಕಾಂಡಪ್ರದಾನಂ ನಾಮ
ಸಪ್ತವಿಂಶೋಽಧ್ಯಾಯಃ

---

ವೇಷವನ್ನು ಧರಿಸಿರುವ ಹಾಲಾಸ್ಯೇಶ್ವರನು ಆಚರಿಸಿದ ಇಪ್ಪತ್ತೊಂದನೆಯ ಈ ಲೀಲೆಯನ್ನು ಮನುಷ್ಯನು ಕೇಳಿದ ಮಾತ್ರದಿಂದ ಪಾಪಗಳನ್ನು ಕಳೆದುಕೊಂಡು, ಎಲ್ಲಾ ವಿಧವಾದ ಸಿದ್ಧಿಯನ್ನೂ ಹೊಂದಿ, ಬಹಳ ಸುಖವನ್ನು ಅನುಭವಿಸಿ, ಕೊನೆಯಲ್ಲಿ ಆತ್ಮಜ್ಞಾನದಿಂದ ಮುಕ್ತನಾಗುವನು.

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆ
ಯಲ್ಲಿ ಶಿಲಾಗಜೇಕ್ಷುಕಾಂಡ ದಾನವೆಂದು ಹೆಸರುಳ್ಳ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಅಷ್ಟಾವಿಂಶೋಽಧ್ಯಾಯಃ

|| ಅಗಸ್ತ್ಯ ಉವಾಚ ||

ನಗ್ನಪ್ರೇಷಿತಮತ್ತೇಭಂ ಯಯಾ ಸಂಹರತೀಶ್ವರಃ ।
ತಾಂ ಲೀಲಾಮದ್ಯ ವಕ್ಷ್ಯೇಽಹಂ ಶೃಣುಧ್ವಂ ಮುನಿಪುಂಗವಾಃ || ೧ ||

ಅಥ ವಿಕ್ರಮಪಾಂಡ್ಯೇಶೇ ಶಿವಭಕ್ತಿಪರಾಯಣೇ ।
ರಾಜರಾಜಸಮೇ ರಾಜಶೇಖರೇ ರಾಜಸೇವಿತೇ || ೨ ||

ಸ್ವನಾಮಧೇಯಸದೃಶವಿಕ್ರಮಾತಿಶಯಾನ್ವಿತೇ ।
ರಾಜನೀತ್ಯಾ ಮಹತ್ಯಾ ಚ ಪ್ರಶಾಸತಿ ಸತಿ ಕ್ಷಿತಿಂ || ೩ ||

---

### ಇಪ್ಪತ್ತೆಂಟನೆಯ ಅಧ್ಯಾಯವು

೧-೩. ಮಂತ್ರವಾದಿಗಳಾದ ಕ್ಷಪಣಕರು ಮಂತ್ರ ಬಲದಿಂದ ನಿರ್ಮಿಸಿದ ಮದಿಸಿದ ಆನೆಯನ್ನು ಸುಂದರೇಶ್ವರನು ನಿಗ್ರಹಮಾಡಿದ ಲೀಲೆಯನ್ನು ತಿಳಿಸುವೆನು ನೀವೆಲ್ಲರೂ ಕೇಳಿರಿ. ಶಿವನಲ್ಲಿ ಬಹಳ ಭಕ್ತಿಯಿಂದ ಇರುವ ವಿಕ್ರಮ ಪಾಂಡ್ಯರಾಜನು ಅನೇಕ ರಾಜರಿಂದ ಸೇವಿತನಾಗಿ, ತನ್ನ ಹೆಸರಿಗೆ ಅನುಸಾರವಾದ ಪರಾಕ್ರಮದಿಂದ ಕೂಡಿದವನಾಗಿ, ಕುಬೇರನಿಗೆ ಸಮನಾಗಿ, ರಾಜರೆಲ್ಲರಿಗಿಂತಲೂ ಶ್ರೇಷ್ಠನಾಗಿ, ರಾಜನೀತಿಯನ್ನು ಅನುಸರಿಸಿ ರಾಜ್ಯವನ್ನು ಪಾಲಿಸುತ್ತಿದ್ದನು.

ಪ್ರವೃತ್ತಾ ವೈದಿಕಾ ಧರ್ಮಾಸ್ಸರ್ವತ್ರ ಕ್ಷಿತಿಮಂಡಲೇ ।
ವೇದಬಾಹ್ಯಜನಾ ಯೇ ಚ ತೇ ಗಚ್ಛಂತಿ ಸುದೂರತಃ ॥ ೪ ॥

ಬ್ರಾಹ್ಮಣಾದ್ಯಾ ಜನಾಸ್ಸರ್ವೇ ಭಸ್ಮಪಾಂಡರವಿಗ್ರಹಾಃ ।
ರುದ್ರಾಕ್ಷಾಲಂಕೃತಾ ಶ್ಶಂಭೋರ್ಲಿಂಗಾರಾಧನತತ್ಪರಾಃ ॥ ೫ ॥

ವೈದಿಕಾಶೇಷಕರ್ಮಾಣಿ ಪ್ರಕುರ್ವಂತಿ ನಿರಂತರಂ ।
ರಾಜಾಪಿ ಪುಣ್ಯನಿಲಯಃ ಪುರುಹೂತಸಮದ್ಯುತಿಃ ॥ ೬ ॥

ಪೂಜಿತಂ ಪುರುಹೂತೇನ ಪುರಾಕಲ್ಪೇಽಘಶಾಂತಯೇ ।
ಪುರಾತನಂ ಮಹಾಲಿಂಗಂ ಸುಂದರೇಶ್ವರಸಂಜ್ಞಿತಂ ॥ ೭ ॥

ಸರ್ವಕಾಮಪ್ರದಂ ಸದ್ಯಃ ಪೂಜಯತ್ಯನುವಾಸರಂ ।
ಮೂಲಪ್ರಾಸಾದವಾಯವ್ಯದೇಶೇ ಸಿದ್ಧಸ್ಯ ಚಾಲಯಂ ॥ ೮ ॥

ಕೃತ್ವಾ ಸಿದ್ಧಂ ಪ್ರತಿಷ್ಠಾಪ್ಯ ನಾಮ್ನಾ ಜ್ಞಾಸಿದ್ಧಮೀಶ್ವರಂ । ॥ ೯ ॥

---

೪-೭. ಆಗ ಭೂಮಿಯಲ್ಲಿ ವೈದಿಕ ಧರ್ಮಗಳೆಲ್ಲವೂ ಚೆನ್ನಾಗಿ ನಡೆಯುತ್ತಿದ್ದವು ವೇದಗಳನ್ನು ದೂಷಿಸುವ ಜನರು ದೂರಕ್ಕೆ ಹೋಗುತ್ತಿದ್ದರು. ಬ್ರಾಹ್ಮಣರೇ ಮೊದಲಾದವರು ಭಸ್ಮ ರುದ್ರಾಕ್ಷಿಗಳಿಂದ ಅಲಂಕೃತರಾಗಿ, ಶಿವನನ್ನು ಪೂಜಿಸುವುದರಲ್ಲಿ ಆಸಕ್ತರಾಗಿ, ವೇದೋಕ್ತವಾದ ಕರ್ಮಗಳೆಲ್ಲವನ್ನೂ ಆಯಾಯ ಕಾಲಕ್ಕನುಸಾರವಾಗಿ ಮಾಡುತ್ತಿದ್ದರು. ಇಂದ್ರನಂತೆ ತೇಜಶ್ಶಾಲಿಯಾದ, ಬಹಳ ಪುಣ್ಯವಂತನಾದ ವಿಕ್ರಮ ಪಾಂಡ್ಯರಾಜನು ಹಿಂದಿನ ಕಲ್ಪದಲ್ಲಿ ಇಂದ್ರನು ಪೂಜಿಸಿ, ತನ್ನ ಪಾಪವನ್ನು ನಾಶಪಡಿಸಿಕೊಂಡಿದ್ದ ಪುರಾತನವಾದ ಸುಂದರೇಶ್ವರನೆಂದು ಹೆಸರುಳ್ಳ, ಎಲ್ಲಾ ವಿಧವಾದ ಇಷ್ಟಸಿದ್ಧಿಯನ್ನುಂಟುಮಾಡುವ, ಶಿವಲಿಂಗವನ್ನು ಪ್ರತಿದಿವಸವೂ ಪೂಜಿಸುತ್ತಿದ್ದನು.

೮-೧೩. ವಿಕ್ರಮ ಪಾಂಡ್ಯರಾಜನು ಸುಂದರೇಶ್ವರನಿಗೆ ವಾಯುವ್ಯ ದಿಕ್ಕಿನಲ್ಲಿ ದೇವಾಲಯವನ್ನು ಮಾಡಿಸಿ, ಅಲ್ಲಿ ತನ್ನ ತಂದೆಯ ಮಾತಿನಂತೆ, ಅಜ್ಞಾಸಿದ್ಧೇಶ್ವರನೆಂಬ ಹೆಸರಿನಿಂದ ಶಿವಲಿಂಗವನ್ನು ಪ್ರತಿಷ್ಠೆಮಾಡಿಸಿ, ಆ ಶಿವಲಿಂಗಕ್ಕೂ ವಿಶೇಷ ಪೂಜೆಯನ್ನು ಮಾಡುತ್ತಿದ್ದನು. ತಾನು ಮಾಡಿರುವ ಪುಣ್ಯದಿಂದಲೂ, ಪ್ರಜೆಗಳು

ತಸ್ಯಾಪಿ ಮಹತೀಂ ಪೂಜಾಂ ಕರೋತಿ ಪಿತೃವಾಕ್ಯತಃ ।
ಸ್ವಯಂಕೃತೇನ ಪುಣ್ಯೇನ ಪ್ರಜಾಭಿಃ ಕಾರಿತೇನ ಚ ॥ ೧೦ ॥

ಆಜ್ಞಾಸಿದ್ಧಕಟಾಕ್ಷೇಣ ಸರ್ವಸಿದ್ಧಿಪ್ರದೇನ ಚ ।
ಆಯುಷ್ಮಾನ್ ಬಲವಾನ್ ಸಂಪತ್ಸೌಭಾಗ್ಯಾರೋಗ್ಯವಾನಪಿ ॥ ೧೧ ॥

ಕೀರ್ತಿಮಾನ್ ಕಾಂತಿಮಾನ್ ಧೀಮಾನ್ ವೀರ್ಯವಾನಭವನ್ನೃಪಃ ॥
ತಥಾ ಶೈವಾನಿ ಶಾಸ್ತ್ರಾಣಿ ಪುರಾಣಾನಿ ಮಹಾಂತಿ ಚ ॥ ೧೨ ॥

ಶೃಣೋತಿ ವಿದ್ವದ್ವಕ್ತ್ರೇಭ್ಯಃ ಸಾವಧಾನಂ ಚ ಸಾದರಂ ।
ಶ್ರೀಮದ್ಧಾಲಾಸ್ಯನಾಥಸ್ಯ ಭಕ್ತಾನುಗ್ರಹಕಾರಿಣಃ ॥ ೧೩ ॥

ಪ್ರಸಾದಾತ್ಪಾಂಡ್ಯಭೂಪಾಲೋ ನಾಗಮಚ್ಛತ್ರುಲಕ್ಷ್ಯತಾಂ ।
ಅಥ ಕಾಂಚೀಪುರಾಧೀಶಶ್ಚೋಳಭೂಪೋ ಮಹಾಮತಿಃ ॥ ೧೪ ॥

---

ಮಾಡಿರುವ ಪುಣ್ಯದಿಂದಲೂ, ಎಲ್ಲಾ ಕಾರ್ಯಗಳೂ ಸಿದ್ಧಿಯಾಗುವಂತೆ ಅನುಗ್ರಹಿಸುವ ಸಿದ್ಧಪುರುಷನ ಕಟಾಕ್ಷದಿಂದಲೂ, ವಿಕ್ರಮಪಾಂಡ್ಯರಾಜನು ಆಯುಷ್ಮಂತನೂ, ಬಲವಂತನೂ, ಸಂಪತ್ತು, ಸೌಂದರ್ಯ, ಆರೋಗ್ಯ, ಕೀರ್ತಿ, ಕಾಂತಿ, ಬುದ್ಧಿ, ಶಕ್ತಿ, ಇವುಗಳುಳ್ಳವನಾಗಿ ಇದ್ದನು. ಶಿವಧರ್ಮಗಳನ್ನು ಬೋಧಿಸುವ ಶಾಸ್ತ್ರಗಳನ್ನೂ ದೊಡ್ಡ ದೊಡ್ಡ ಪುರಾಣಗಳನ್ನೂ ತಿಳಿದವರಿಂದ ಆದರದಿಂದಲೂ, ಜಾಗರೂಕತೆಯಿಂದಲೂ ಅವನು ಕೇಳುತ್ತಾ ಇದ್ದನು.

೧೪-೧೭. ಭಕ್ತರಿಗೆ ಅನುಗ್ರಹವನ್ನು ಮಾಡುವ ಹಾಲಾಸ್ಯೇಶ್ವರನ ಅನುಗ್ರಹದಿಂದ ಅವನು ಶತ್ರುಗಳಿಗೆ ಎದುರಾಗುತ್ತಿರಲಿಲ್ಲ. ಹೀಗೆ ಇರುವಾಗ ಕಾಂಚೀನಗರಕ್ಕೆ ರಾಜನಾದ ಚೋಳರಾಜನು ವಿಕ್ರಮಪಾಂಡ್ಯರಾಜನ ಭಯಂಕರವಾದ ಸಾಮರ್ಥ್ಯವನ್ನು ನೋಡಿ, " ಯಾವ ಉಪಾಯದಿಂದ ಇವನನ್ನು ನಾನು ಜಯಿಸಬೇಕು." ಎಂದು ಪ್ರತಿದಿನವೂ ಯೋಚನೆ ಮಾಡುತ್ತಿದ್ದನು. ಹೀಗೆಯೇ ಯೋಚಿಸುತ್ತಾ ಅವನು

ವೀರ್ಯಂ ವಿಕ್ರಮಪಾಂಡ್ಯಸ್ಯ ಶ್ರುತ್ವಾ ಜಾತಿಭಯಂಕರಂ ।
ಕೇನೋಪಾಯೇನ ಜೇಷ್ಯಾಮೀತ್ಯನ್ವಹಂ ಪ್ರವಿಚಾರ್ಯ ತಂ ॥ ೧೫ ॥

ಮಂತ್ರವಾದಮುಖೇನೇತಿ ನಿಶ್ಚಿನೋತಿ ಮಹಾಮತಿಃ ।
ಲೋಕೇ ಸರ್ವೇಷು ವೇದೇಷು ಮಂತ್ರವಾದೋ ಮಹಾನಭೂತ್ ॥ ೧೬ ॥

ತಸ್ಮಾದನೇನ ವಾದೇನ ಸಂಹರಿಷ್ಯಾಮಿ ಪಾಂಡ್ಯಪಂ ।
ಇತಿ ನಿಶ್ಚಿತ್ಯ ಮನಸಾ ಮಂತ್ರವಾದಪರೋಽಭವತ್ ॥ ೧೭ ॥

ಸಹ್ಯೇ ಗೋವರ್ಧನೇ ಕ್ರೌಂಚೇ ತ್ರಿಕೂಟೇಂಜನಪರ್ವತೇ ।
ವಿಂಧ್ಯೇ ಚ ಹೇಮಕೂಟೇ ಚ ತಥಾ ಕುಂಜರಪರ್ವತೇ ॥ ೧೮ ॥

ನಿವಸಂತಿ ಚ ಯೇನಗ್ನಾಃ ಪರ್ವತೇಷ್ವೇವಮಷ್ಟಸು ।
ತೇಷಾಂ ಪ್ರಧಾನಭೂತಾನಾ ಮಷ್ಟಸಾಹಸ್ರಸಂಖ್ಯಯಾ ॥ ೧೯ ॥

ಗಣಿತಾನಾಂ ಚ ನಗ್ನಾನಾ ಮಾಚಾರ್ಯಾಣಾಂ ಪೃಥಕ್ಪೃಥಕ್ ।
ಪತ್ರಿಕಾಂ ಪ್ರೇಷಯಿತ್ವಾಥ ಸತ್ವರಂ ತಾನ್ಸಮಾಹ್ವಯತ್ ॥ ೨೦ ॥

---

" ಮಂತ್ರವಾದದಿಂದಲೇ ವಿಕ್ರಮಪಾಂಡ್ಯನನ್ನು ಗೆಲ್ಲತಕ್ಕದ್ದು. ಎಲ್ಲಾ ವಿಧವಾದ ವಾದಗಳಿಗಿಂತ ಮಂತ್ರವಾದವು ದೊಡ್ಡದಾಗಿರುವುದು. ಆದ್ದರಿಂದ ಈ ಮಂತ್ರವಾದದಿಂದ ಈ ರಾಜನನ್ನು ಸಂಹಾರ ಮಾಡುತ್ತೇನೆ. ಎಂದು ನಿಶ್ಚಯ ಮಾಡಿದನು.

೧೮–೨೦. ಚೋಳರಾಜನು ಹೀಗೆ ನಿಶ್ಚಯ ಮಾಡಿಕೊಂಡು, ಮಂತ್ರವಾದವನ್ನು ಮಾಡಿಸುವುದರಲ್ಲಿ ಆಸಕ್ತನಾಗಿ, ಸಹ್ಯ ಪರ್ವತ, ಗೋವರ್ಧನ ಪರ್ವತ, ಕ್ರೌಂಚ ಪರ್ವತ, ತ್ರಿಕೂಟ ಪರ್ವತ, ಅಂಜನ ಪರ್ವತ, ವಿಂಧ್ಯ ಪರ್ವತ, ಹೇಮಕೂಟ ಪರ್ವತ, ಕುಂಜರ ಪರ್ವತ ಎಂಬ ಎಂಟು ಪರ್ವತಗಳಲ್ಲಿಯೂ ವಾಸಮಾಡುತ್ತಿರುವ ಕ್ಷಪಣಕರೆಲ್ಲರಿಗೂ ಮುಖ್ಯರಾದ ಎಂಟುಸಾವಿರ ಜನ ಆಚಾರ್ಯರಿಗೆ ಬೇರೆ ಬೇರೆಯಾಗಿ ಪತ್ರಿಕೆಗಳನ್ನು ಬರೆದು ಕಳುಹಿಸಿ, ಎಲ್ಲರನ್ನೂ ಬೇಗನೆ ಬರಮಾಡಿಕೊಂಡನು.

ತದಾ ಸಮೇತಾ ಸ್ತೇ ಸರ್ವೇ ನಗ್ನಾಶ್ಚರ್ಮವರಾಂಬರಾಃ ।
ವಿಕೇಶಾಃ ಪಿಂಛಹಸ್ತಾಶ್ಚ ಕಮಂಡಲುಸುಮಂಡಿತಾಃ ॥ ೨೧ ॥

ವಶ್ಯಾದಿಕರ್ಮಕುಶಲಾಃ ಮಂತ್ರಸಿದ್ಧಿಸಮನ್ವಿತಾಃ ।
ಕಾಂಚೀಪುರಂ ಸಮಾಸಾದ್ಯ ದೃಷ್ಟ್ವಾ ಚೋಳಮಹೀಪತಿಂ ॥ ೨೨ ॥

ಪಿಂಛೈಸ್ಸ್ಪೃಷ್ಟ್ವಾ ಶಿರ ಸ್ತಸ್ಯ ಕುರ್ವಂತ್ಯಾಶಿಷ ಮಾದರಾತ್ ।
ನೃಪೋಽಪಿ ನಗ್ನಾನ್ನತ್ವಾಥ ಪ್ರಾಹ ವಾಚಾ ಪ್ರಗಲ್ಭಯಾ ॥ ೨೩ ॥

ಅಸ್ಮತ್ಸಂರಕ್ಷಣಾರ್ಥಂ ಚ ಮಮ ಶತ್ರುವಧಾಯ ಚ ॥
ಭಗವಂತ ಸ್ಸಮಾಹೂತಾ ಸ್ಸಮರ್ಥಾ ಸ್ಸರ್ವಕರ್ಮಸು ॥ ೨೪ ॥

ಹಂತುಂ ವಿಕ್ರಮಪಾಂಡ್ಯಂ ತಮಾಭಿಚಾರವಿಧಾನತಃ ।
ಕುರ್ವಂತು ಯೂಯಮುದ್ಯೋಗಂ ಮದನುಗ್ರಹಕಾರಿಣಃ ॥ ೨೫ ॥

ಯುಷ್ಮತ್ಕ್ರಿಯಾ ಚೇತ್ಫಲಿತಾ ದಾಸ್ಯಾಮಿ ವಿಷಯೇ ಮಮ ।
ಅರ್ಧಭಾಗ ಮವಶ್ಯಂ ಚ ಮದ್ವಾಕ್ಯಂ ನಾನೃತಂ ಭವೇತ್ ॥ ೨೬ ॥

---

೨೧-೨೬. ಬೌದ್ಧ ಸನ್ಯಾಸಿಗಳೆಲ್ಲರೂ, ಚರ್ಮವನ್ನು ಹೊದ್ದುಕೊಂಡು, ತಲೆಯಲ್ಲಿ ಕೂದಲು ಇಲ್ಲದವರಾಗಿ, ಕೈಯ್ಯಿನಲ್ಲಿ ಕಮಂಡಲುವನ್ನೂ, ನವಿಲುಗರಿಯ ದೊಂದೆಯನ್ನೂ ಹಿಡಿದುಕೊಂಡು, ಮಂತ್ರ ಸಿದ್ಧಿಯುಳ್ಳವರಾಗಿ, ವಶ್ಯವೇ ಮೊದಲಾದ ಅಭಿಚಾರಕ ಕರ್ಮಗಳನ್ನೂ ನೆರವೇರಿಸುವುದರಲ್ಲಿ ನಿಪುಣರಾಗಿ ಇದ್ದರು. ಅವರೆಲ್ಲರೂ ಕಾಂಚೀಪುರದಲ್ಲಿ ಒಟ್ಟಿಗೆ ಸೇರಿ, ರಾಜನನ್ನು ನೋಡಿ, ಚೋಳರಾಜನಿಗೆ ತಮ್ಮ ಕೈಯಲ್ಲಿರುವ ನವಿಲುಗರಿಯ ದೊಂದೆಯಿಂದ ಆಶೀರ್ವಾದವನ್ನು ಮಾಡಿದರು. ಚೋಳರಾಜನು ಅವರೊಡನೆ " ನೀವುಗಳು ನನ್ನನ್ನು ರಕ್ಷಿಸುವುದಕ್ಕಾಗಿಯೂ, ನನ್ನ ಶತ್ರುವನ್ನು ನಾಶ ಮಾಡುವುದಕ್ಕಾಗಿಯೂ ಇಲ್ಲಿಗೆ ಬಂದಿರುತ್ತೀರಿ. ನೀವು ಯಾವಕಾರ್ಯವನ್ನು ಮಾಡುವುದಕ್ಕೂ ನಿಪುಣರಾಗಿರುವುದರಿಂದ ಅಭಿಚಾರಿಕ ಕರ್ಮದ ಮೂಲಕವಾಗಿ, ವಿಕ್ರಮಪಾಂಡ್ಯರಾಜನನ್ನು ಕೊಲ್ಲುವ ಕೆಲಸವನ್ನು ನನ್ನ ಮೇಲಿನ ಅನುಗ್ರಹಕ್ಕಾಗಿ ಮಾಡಿರಿ. ನಿಮ್ಮ ಕಾರ್ಯವು ಸಫಲವಾದದ್ದಾದರೆ, ನನ್ನ ರಾಜ್ಯದಲ್ಲಿ ಅರ್ಧಭಾಗವನ್ನು ನಿಮಗೆ ಕೊಡುವೆನು. ನಾನು ಸುಳ್ಳನ್ನು ಹೇಳುವುದಿಲ್ಲ" ಎಂದು ಪ್ರೌಢವಾಗಿ ಹೇಳಿ, ಅಭಿಚಾರಿಕ ಕರ್ಮವನ್ನು ಮಾಡುವುದಕ್ಕಾಗಿ ಹೇಳಿ ಕಳುಹಿಸಿದನು.

ಇತ್ಯುಕ್ತ್ವಾ ಪ್ರೇಷಯಾಮಾಸ ಕರ್ತುಂ ಕರ್ಮಾಭಿಚಾರಿಕಂ ।
ನಗ್ನಾ ಸ್ತದಾ ಮುದಾ ಯುಕ್ತಾಃ ಶ್ರುತ್ವಾ ಚೋಳವಚಾಂಸಿ ಚ ॥ ೨೭ ॥

ಶಿವಭಕ್ತಜನಾಕೀರ್ಣಾಂ ಹಂತುಂ ಚ ಮಧುರಾಪುರೀಂ ।
ತೀರೇ ಕ್ಷೀರತಂಗಿಣ್ಯಾ ಸ್ಸದ್ಯಃ ಕರ್ಮಫಲಪ್ರದೇ ॥ ೨೮ ॥

ಕೂಟಮು ಭ್ರಂಲಿಹಂ ಕೃತ್ವಾ ಯೋಜನದ್ವಯಮಾತ್ರತಃ ।
ಕುಂಡಂ ಚ ಯೋಜನಾಮಾತ್ರ ಮಷ್ಟಾಶ್ರಂ ಪರಿಕಲ್ಪ್ಯ ಚ ॥ ೨೯ ॥

ಇಂಧನೈ ರ್ವಿಷವೃಕ್ಷೋತ್ಥೈಃ ಪ್ರಜ್ವಾಲ್ಯಾಶು ಹುತಾಶನಂ ।
ಹೋಮಂ ಚಕ್ರುರ್ನಿಂಬತೈಲಸಮ್ಮಿಶ್ರೈರ್ಲವಣೈರಪಿ ॥ ೩೦ ॥

ಮರಿಚೈ ಸ್ತಿಲತೈಲಾಕ್ತೈ ಶ್ಶೋಣಿತೈ ರ್ಮೃಗಪಕ್ಷಿಣಾಂ ।
ಕಶ್ಚಿದ್ಗಿರಿನಿಭೋ ಭೀಮೋ ಮದಯುಕ್ತೋ ಮತಂಗಜಃ ॥ ೩೧ ॥

---

೨೭-೩೦. ಮಂತ್ರವಾದಿಗಳಾದ ಆ ಬೌದ್ಧರು ಚೋಳರಾಜನ ಮಾತನ್ನು ಕೇಳಿ ಸಂತೋಷಪಟ್ಟರು. ಶಿವಭಕ್ತರಾದ ಜನರಿಂದ ತುಂಬಿರುವ ಮಧುರಾನಗರವನ್ನು ಹಾಳುಮಾಡುವ ಉದ್ದೇಶದಿಂದ, ಕ್ರಿಯಾ ಸಿದ್ಧಿಯನ್ನುಂಟುಮಾಡುವ † ಕ್ಷೀರತರಂಗಿಣಿಯ ತೀರದಲ್ಲಿ ಬಹಳ ಎತ್ತರವಾದ, ಎರಡು ಯೋಜನ ಎತ್ತರದ ಪ್ರತಿಮೆಯನ್ನು ಮಾಡಿ, ಎಂಟು ಮೂಲೆಯುಳ್ಳ ಒಂದು ಯೋಜನ ವಿಸ್ತೀರ್ಣವಾದ ಹೋಮಕುಂಡವನ್ನು ಮಾಡಿದರು. ವಿಷವೃಕ್ಷಗಳ ಕಟ್ಟಿಗೆಯನ್ನು ಹಾಕಿ, ಬೇಗನೆ ಅಗ್ನಿಯನ್ನು ಸಿದ್ಧಪಡಿಸಿಕೊಂಡು, ಬೇವಿನಎಣ್ಣೆ, ಉಪ್ಪು, ಮೆಣಸು, ಎಳ್ಳು, ಮೃಗ ಮತ್ತು ಪಕ್ಷಿಗಳ ಮಾಂಸ, ಇವುಗಳನ್ನು ಹೋಮ ಮಾಡಿದರು.

೩೧-೩೪. ಇವರು ಹೋಮಮಾಡಿದ ಫಲರೂಪವಾಗಿ, ಸಮುದ್ರದಿಂದ ಕಾಲಕೂಟವಿಷವು ಹುಟ್ಟಿದಹಾಗೆ, ಅಗ್ನಿಕುಂಡದ ಮಧ್ಯದಿಂದ ಒಂದು ಮದಿಸಿದ ಆನೆಯು ಮೇಲಕ್ಕೆ ಎದ್ದು ಬಂದಿತು. ಆ ಆನೆಯು ಮೊರದ ಹಾಗೆ ಇರುವ ಕಿವಿಗಳನ್ನು

---

† ಕ್ಷೀರತರಂಗಿಣಿ=ವೇತ್ರವತೀ ನದಿ.

ಸಮುತ್ತ್ರಸ್ತೌ ಕುಂಡಮಧ್ಯಾತ್ಕಾಲಕೂಟ ಇವಾರ್ಣವಾತ್ ।
ಫೀಟ್ಕಾರರವಸಂಯುಕ್ತೈಃ ಶ್ರೋತ್ರಶೂರ್ಪಮಹಾನಿಲೈಃ ॥ ೩೨ ॥

ಶಿಥಿಲೀಕೃತ್ಯ ಮೇಘಾಂಶ್ಚ ದಂತಾಭ್ಯಾಂ ಪಾತಯನ್ಗಿರೀನ್ ।
ಆಕ್ರಮ್ಯ ಮೇದಿನೀಂ ಪಾದೈಶ್ಶುಂಡಯಾ ಮುದ್ಗರಂ ದಧತ್ ॥ ೩೩ ॥

ಸ್ಥಾವರಾಣಾಂ ಜಂಗಮಾನಾಂ ಜಗತಾಂ ಜನಯನ್ಭಯಂ ।
ತಂ ಗಜೇಂದ್ರಂ ವಿಲೋಕ್ಯೇತಿ ನಗ್ನಾಃ ಪ್ರಾಹು ರ್ಮುದಾ ಯುತಾಃ ॥೩೪॥

ಸಭೂಪಂ ಮಧುರಾದೇಶಂ ಸದ್ಯಃ ಸಂಹರ ಸಂಹರ ।
ಇತ್ಯಾಜ್ಞಾಂ ಕ್ಷಪಣಾನಾಂ ಚ ಲಬ್ಧ್ವಾ ವತ್ಸೋ ಮತಂಗಜಃ ॥ ೩೫ ॥

ವೇಗೇನ ಧಾವನಂ ಕೃತ್ವಾ ದಿಶಮುದ್ದಿಶ್ಯ ದಕ್ಷಿಣಾಂ ।
ಮಧುರಾಂ ಕಬಲೀಕರ್ತುಂ ತದೀಶಾನೀಂ ದಶಂ ಗತಃ ॥ ೩೬ ॥

---

ಅಲ್ಲಾಡಿಸುತ್ತಾ ಗಟ್ಟಿಯಾಗಿ ಕಿರುಚುತ್ತಾ, ತನ್ನ ಪಾದಗಳಿಂದ ಭೂಮಿಯನ್ನು ಆಕ್ರಮಿಸಿಕೊಂಡು, ಸೊಂಡಲಿನಿಂದ ಮುದ್ಗರಾಯುಧವನ್ನು ಹಿಡಿದುಕೊಂಡು, ಬೆಟ್ಟಗಳನ್ನು ತನ್ನ ದಂತಗಳಿಂದ ಕೆಡವುತ್ತಿತ್ತು. ಈ ಆನೆಯನ್ನು ನೋಡಿದ ಕೂಡಲೆ, ಸ್ಥಿರ ಚರಾತ್ಮಕವಾದ ಪ್ರಪಂಚಕ್ಕೆಲ್ಲಕ್ಕೂ ಭಯವಾಗುತ್ತಿತ್ತು. ಮಂತ್ರವಾದಿಗಳು ಆ ಆನೆಯನ್ನು ನೋಡಿ ಸಂತೋಷದಿಂದ "ಮಧುರಾನಗರವನ್ನೂ, ಅಲ್ಲಿಯ ರಾಜನನ್ನೂ ಬೇಗನೆ ಸಂಹಾರಮಾಡು"ಎಂದು ಅಪ್ಪಣೆ ಮಾಡಿದರು.

೩೫–೩೬. ಆ ಆನೆಯು ಅವರ ಅಪ್ಪಣೆಗೆ ಅನುಸಾರವಾಗಿ, ಬೇಗನೆ ದಕ್ಷಿಣ ದಿಕ್ಕಿಗೆ ಓಡಿತು. ಅಲ್ಲಿಂದ ಈಶಾನ್ಯ ದಿಕ್ಕಿನಲ್ಲಿರುವ ಮಧುರಾನಗರವನ್ನು ಹಾಳು ಮಾಡುವುದಕ್ಕಾಗಿ ಬೇಗನೆ ಬಂದಿತು.

ಧೀರೋಽಪಿ ಭೀತಹೃದಯಸ್ತಂ ಗಜಂ ಪ್ರತಿ ಪಾಂಡ್ಯಪಃ ।
ಸಂಪ್ರಾಪ್ಯ ಕರುಣಾವಾಸಂ ಸ್ವನಾಥಂ ಸೋಮಸುಂದರಂ ॥ ೩೭ ॥

ನತ್ವಾ ಸ್ತುತ್ವಾ ಪ್ರಾರ್ಥಯತಿ ಸಾಂಜಲಿ ಸ್ಸನ್ನಿಧೌ ಸ್ಥಿತಃ ।
ಶಕ್ತ ಸ್ಸಪತ್ನಾನ್ಸಂಜೇತುಂ ಶಂಭೋಽಹಂ ತ್ವತ್ಪ್ರಸಾದತಃ ॥ ೩೮ ॥

ನಗ್ನಾಭಿಚಾರಸಂಭೂತಃ ಪರ್ವತಾಕಾರಸನ್ನಿಭಃ ।
ಇಭಃ ಕಶ್ಚಿತ್ಸ ಮಾಯಾತಿ ಸಂಹರ್ತುಂ ಮಧುರಾಪುರೀಂ ॥ ೩೯ ॥

ಕಿಂ ಕರ್ತವ್ಯಂ ಮಯೇದಾನೀಂ ತ್ರಾಹಿ ಮಾಮಾಪದಃ ಕ್ಷಣಾತ್ ।
ಇತಿ ವಿಕ್ರಮಪಾಂಡ್ಯಸ್ಯ ವಾಚಂ ಶ್ರುತ್ವಾ ದಯಾನಿಧಿಃ ॥ ೪೦ ॥

ಪ್ರಾಹ ವಾಚ್ಯಾಶರೀರಿಣ್ಯಾ ದೇವೋ ನೀಪಾಟವೀಶ್ವರಃ ।
ಬಹಿಃ ಪ್ರಾಕಾರನಿಕಟೇ ಪ್ರಾಚ್ಯಾಂ ದಿಶಿ ಮಹೀಪತೇ ॥ ೪೧ ॥

---

೩೭–೩೯. ವಿಕ್ರಮಪಾಂಡ್ಯರಾಜನು ಧೈರ್ಯಶಾಲಿಯಾಗಿದ್ದಾಗ್ಯೂ ಆ ಆನೆಯಿಂದ ಹೆದರಿದವನಾಗಿ, ತನಗೆ ರಕ್ಷಕನಾಗಿರುವ, ದಯಾಶಾಲಿಯಾಗಿರುವ ಸೋಮಸುಂದರೇಶ್ವರನ ಹತ್ತಿರಕ್ಕೆ ಬಂದು ನಮಸ್ಕಾರಮಾಡಿ, ಸ್ತೋತ್ರಮಾಡಿದ ನಂತರ "ಎಲೈ ಪರಮೇಶ್ವರನೇ, ನಿನ್ನ ಅನುಗ್ರಹದಿಂದ ನಾನು ಶತ್ರುಗಳನ್ನು ಸಿಗ್ರಹಮಾಡುವ ಸಾಮರ್ಥ್ಯವನ್ನು ಹೊಂದಿರುತ್ತೇನೆ. ಆದರೆ ಮಂತ್ರವಾದಿಗಳಾದ ಬೌದ್ಧ ಸನ್ಯಾಸಿಗಳು ಅಭಿಚಾರಕವನ್ನು ಮಾಡಿ, ಬೆಟ್ಟದ ಆಕಾರದಂತಿರುವ ಆನೆಯನ್ನು ಮಧುರಾನಗರದ ವಿನಾಶಕ್ಕಾಗಿ ಕಳುಹಿಸಿರುವರು. ಈಗ ಈ ವಿಪತ್ತಿನಿಂದ ಬಿಡುಗಡೆಯನ್ನು ಹೊಂದುವುದಕ್ಕೆ ನಾನು ಮಾಡಬೇಕಾದ ಕರ್ತವ್ಯವನ್ನು ನನಗೆ ಅನುಗ್ರಹಿಸಬೇಕು" ಎಂದು ಬೇಡಿಕೊಂಡನು

೪೦–೪೩. ಕದಂಬವನಾಧಿಪನಾದ ದಯಾನಿಧಿಯಾದ ಸುಂದರೇಶ್ವರನು ವಿಕ್ರಮಪಾಂಡ್ಯರಾಜನ ಮಾತನ್ನು ಕೇಳಿ " ಎಲೈ ರಾಜನೆ, ಈ ನಗರದ ಪೂರ್ವದಿಕ್ಕಿನಲ್ಲಿ ಕೋಟೆಯ ಹೊರಗಡೆಯಲ್ಲಿ ಅಂದರೆ, ಕೋಟೆಯ ಹತ್ತಿರದಲ್ಲಿಯೇ ಒಂದು

ಅಟ್ಟಾಲಾಖ್ಯಂ ಮಂಟಪಂ ಚ ಷೋಡಶಸ್ತಂಭಸಂಯುತಂ ।
ಸ್ಥಪತೀನಾಂ ಸಮೂಹ್ಯೈ ಸ್ತ್ವಂ ಶಾಸ್ತ್ರತಃ ಕಾರಯ ಕ್ಷಣಾತ್ ॥ ೪೨ ॥

ಅಹಂ ತು ಧನ್ವೀ ತತ್ರಸ್ಥಸ್ತಂ ಹನಿಷ್ಯಾಮಿ ಸತ್ಯತಃ ।
ಇತಿ ಶ್ರುತ್ವಾ ಶುಭಂ ವಾಕ್ಯಂ ನೃಪತಿರ್ಮಂತ್ರಿಭಿಃ ಸಹ ॥ ೪೩ ॥

ಸರ್ವಾಲಂಕಾರಸಂಯುಕ್ತ ಮಟ್ಟಾಲಾಖ್ಯಂ ಚ ಮಂಟಪಂ ।
ಮುಹೂರ್ತಾ ತ್ಕಾರಯಾಮಾಸ ಶಿಲ್ಪಿಶಾಸ್ತ್ರೋಕ್ತವರ್ತ್ಮನಾ ॥ ೪೫ ॥

ತನ್ಮಧ್ಯೇ ಕಲ್ಪಿತೇ ಭದ್ರಪೀಠೇ ಹೈಮೇ ಸಮುನ್ನತೇ ।
ನವರತ್ನ ಪ್ರಭಾಜಾಲೈಃ ಪರಿತಃ ಪರಿಶೋಭತೇ ॥ ೪೬ ॥

ಆವಿರಾಸೀ ನ್ಮಹಾತೇಜಾ ಉದಯಾದ್ರೇ ರಿವಾಂಶುಮಾನ್ ।
ಹಾಲಾಸ್ಯನಾಥೋ ಭಗವಾ ಮಹಾಬಲಪರಾಕ್ರಮಃ ॥ ೪೭ ॥

---

ಅಟ್ಟಣೆಯನ್ನು ಕಟ್ಟಿಸು. ಆ ಅಟ್ಟಣೆಯು ಹದಿನಾರು ಕಂಬಗಳಿರುವಂತೆ ಸರಿಯಾದ ಶಿಲ್ಪಿಗಳಿಂದ ಶಾಸ್ತ್ರಕ್ಕನುಸಾರವಾಗಿರಬೇಕು. ಅದರಮೇಲೆ ನಾನು ಧನುರ್ಧಾರಿಯಾಗಿದ್ದುಕೊಂಡು ಆನೆಯನ್ನು ಬೇಗ ನಾಶಪಡಿಸುವೆನು." ಎಂದು ಅಶರೀರ ವಾಣಿಯಿಂದ ಹೇಳಿದನು.

೪೪–೪೮. ವಿಕ್ರಮಪಾಂಡ್ಯರಾಜನು ತನಗೆ ಹಿತಕರವಾದ ಆ ಮಾತನ್ನು ಕೇಳಿದ ಕೂಡಲೆ, ತನ್ನ ಮಂತ್ರಿಗಳೊಡನೆ ಆಲೋಚಿಸಿ, ಶಿಲ್ಪಶಾಸ್ತ್ರಕ್ಕನುಸಾರವಾಗಿ ಎಲ್ಲಾ ವಿಧವಾದ ಅಲಂಕಾರಗಳಿಂದ ಕೂಡಿರುವ ಹಾಗೆ, ಅಟ್ಟಾಲ (ಅಟ್ಟಣೆ) ಎಂಬ ಹೆಸರುಳ್ಳ ಮಂಟಪವನ್ನು ಮಾಡಿಸಿದನು. ಅದರ ಮಧ್ಯದಲ್ಲಿ ನವರತ್ನ ಖಚಿತವಾದ ಎತ್ತರವಾದ ಭದ್ರಪೀಠವನ್ನು ಇಡಿಸಿದನು. ಆ ಪೀಠದಲ್ಲಿ ಉದಯ ಪರ್ವತದಮೇಲೆ ಸೂರ್ಯನು ಇರುವಂತೆ, ಬಹಳ ತೇಜಶ್ಶಾಲಿಯಾದ ಹಾಲಾಸ್ಯೇಶ್ವರನು ಬಹಳ ಶಕ್ತಿ ಮತ್ತು ಪರಾಕ್ರಮಗಳಿಂದ ಕೂಡಿದವನಾಗಿ, ನಿಂತುಕೊಂಡನು. ಆಗ ಆ ದೇವನ ಎಡದ ತೋಳಿನಲ್ಲಿ ಸಿದ್ಧವಾದ ಧನಸ್ಸು ಇದ್ದಿತು. ಇನ್ನೊಂದು ಕೈಯ್ಯಿನಲ್ಲಿ ಬಹಳ

ವಾಮೇನ ಭುಜದಂಡೇನ ಧೃತ್ವಾ ಸಜ್ಯಂ ಶರಾಸನಂ ।
ಮಹಾಂತ ಮತಿತೀಕ್ಷ್ಣಾಗ್ರಂ ಬಾಣ ಮನ್ಯೇನ ಪಾಣಿನಾ ॥ ೪೮ ॥

ಅಸಿಧೇನ್ವಾಖ್ಯಶಸ್ತ್ರೇಣ ಹ್ಯಲಂಕುರ್ವ ನ್ಕಟೀತಟಂ ।
ಪಿಂಛಾಲಂಕೃತಭೃಂಗಾಭವೇಣೀಕೃತಶಿರೋರುಹಃ ॥ ೪೯ ॥

ತಮಾಲಶ್ಯಾಮಲಾಕಾರಃ ಶಂಖಕುಂಡಲಮಂಡಿತಃ ।
ಜಪಾಕುಸುಂಭಕುಸುಮಸನ್ನಿಭಾಂಬರಸಂಯುತಃ ॥ ೫೦ ॥

ಮುಕ್ತಾಫಲಕೃತಾಭಿಶ್ಚ ಮಾಲಾಭಿ ರ್ಮಹತೀಂ ತನುಂ ।
ಅತ್ಯಂತ ಶೋಭಿತಾಂ ಕೃತ್ವಾ ತ್ರಿಣೇತ್ರ ಶ್ಚಂದ್ರಶೇಖರಃ ॥ ೫೧ ॥

ಸೌಂದರ್ಯಸಾಗರೋತ್ಪನ್ನಪೂರ್ಣಚಂದ್ರನಿಭಾನನಃ ।
ಕೈರಾತಂ ವೇಷ ಮಾಸ್ಥಾಯ ಕೈವಲ್ಯನಿಧಿ ರೀಶ್ವರಃ ॥ ೫೨ ॥

---

ಮೊನೆಯುಳ್ಳ ಬಾಣವನ್ನು ಹಿಡಿದಿದ್ದನು. ಆ ದೇವನ ನಡುವಿನಲ್ಲಿ ಅಸಿಧೇನು ಎಂಬ ಹೆಸರಿನ ಸಣ್ಣ ಕತ್ತಿಯು ಇತ್ತು. ದುಂಬಿಯ ಬಣ್ಣವುಳ್ಳ ತಲೆಯ ಕೂದಲನ್ನು ಒಟ್ಟುಗೂಡಿಸಿ ನವಿಲುಗರಿಯನ್ನು ಅಲಂಕಾರವಾಗಿ ಅದರಲ್ಲಿ ಹಾಕಿಕೊಂಡು ಇದ್ದನು.

೪೯-೫೨. ಅವನು ಹೊಂಗೆಯಮರದಂತೆ ಕಪ್ಪಾದ ಶರೀರದಲ್ಲಿ ದಾಸವಾಳದ ಹೂವಿನಂತೆಯೂ, ಕುಸುಂಬ ಪುಷ್ಪದಂತೆಯೂ ಕೆಂಪಾಗಿರುವ ವಸ್ತ್ರವನ್ನು ಧರಿಸಿದ್ದನು. ಕಿವಿಯಲ್ಲಿ ಶಂಖವನ್ನು ಕುಂಡಲಗಳಾಗಿ ಇಟ್ಟುಕೊಂಡಿದ್ದನು. ಕುತ್ತಿಗೆಯಲ್ಲಿ ಮುತ್ತಿನ ಸರಗಳನ್ನು ಹಾಕಿಕೊಂಡು ತನ್ನ ಶರೀರವನ್ನು ಅಲಂಕಾರ ಮಾಡಿಕೊಂಡಿದ್ದನು. ಮೂರು ಕಣ್ಣುಗಳು ಉಳ್ಳವನಾಗಿಯೂ, ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವವನಾಗಿಯೂ ಇರುವ ಹಾಲಾಸ್ಯೇಶ್ವರನು ಪೂರ್ಣಚಂದ್ರನಂತೆ ಇರುವ ಮುಖದಿಂದ ಪ್ರಕಾಶಿಸುತ್ತ ಬಹಳ ಸುಂದರನಾಗಿದ್ದನು. ಮೋಕ್ಷವನ್ನು ಕೊಡುವ ಪ್ರಭುವಾಗಿದ್ದರೂ ಈ ಪ್ರಕಾರದ ಬೇಡರ ವೇಷವನ್ನು ಧರಿಸಿ, ಆ ಆನೆಯನ್ನು

ಜನಾನಾ ಮುಭಯಂ ಕರ್ತುಂ ಹರ್ತುಂ ಶೈಲ ಮಯಂ ಗಜಂ।
ಚರಣಂ ದಕ್ಷಿಣಂ ಪಶ್ಚಾ ನ್ನಿಧಾಯೇತರ ಮಗ್ರತಃ ॥ ೫೩ ॥

ಕ್ರೋಶಪಂಚಕಮಾತ್ರಸ್ಥಂ ಗಜಂ ಲಕ್ಷ್ಯಂ ವಿಲೋಕ್ಯ ಚ ।
ವೈಷ್ಣವಂ ನಾರಸಿಂಹಾಖ್ಯಂ ಮಹತ್ತೇಜೋ ಭಿಭಾವ್ಯ ಚ ॥ ೫೪ ॥

ನಾರಸಿಂಹಾಸ್ತ್ರಮತುಲಮುಜ್ವಲಂ ವಿಶ್ವತೋಮುಖಂ ।
ಅಟ್ಟಾಲವೀರೋ ವ್ಯಸೃಜ ದ್ಧನುರ್ವೇಧವಿದಾಂ ವರಃ ॥ ೫೫ ॥

ವಿರಮಂತಂ ಗಜಂ ಕೃತ್ವಾ ತದಸ್ತ್ರ ಮತಿಭೀಷಣಂ ।
ನಾರಸಿಂಹವಪು ರ್ಧೃತ್ವಾ ತತ್ರಾಸ್ತೇ ಶಂಕರಾಜ್ಞಯಾ ॥ ೫೬ ॥

---

ಕೊಂಡು ಜನರಿಗೆ ಹೆದರಿಕೆಯನ್ನು ತಪ್ಪಿಸುವುದಕ್ಕಾಗಿ ಎಡಗಾಲನ್ನು ಮುಂದಕ್ಕೂ, ಬಲಗಾಲನ್ನು ಹಿಂದುಗಡೆಗೂ ಇರಿಸಿಕೊಂಡು ಐದು ಹರಿದಾರಿ ದೂರದಲ್ಲಿರುವ ಆ ಆನೆಯನ್ನು ನೋಡಿ ಅದನ್ನು ಹೊಡೆಯಲು ಗುರಿಕಟ್ಟಿದನು.

೫೪–೫೬. ಆಗ ಕಿರಾತನ ವೇಷದಲ್ಲಿ ಇರುವ, ಧನುರ್ವೇದವನ್ನು ತಿಳಿದವನಾದ ಹಾಲಾಸ್ಯೇಶ್ವರನು, ವಿಷ್ಣು ಸಂಬಂಧವಾದ ಬಹಳ ತೇಜಸ್ಸಿನಿಂದ ಕೂಡಿರುವ ನಾರಸಿಂಹಾಸ್ತ್ರವನ್ನು ತನ್ನ ಬಿಲ್ಲಿನಲ್ಲಿ ಇರುವ ಬಾಣಕ್ಕೆ ಅಭಿಮಂತ್ರಿಸಿ ಆ ಆನೆಗೆ ಹೊಡೆದನು. ಯಾವ ಹೋಲಿಕೆಯೂ ಇಲ್ಲದ ಬಹಳ ತೇಜಸ್ಸಿನಿಂದ ಎಲ್ಲಾ ಕಡೆಯಲ್ಲಿಯೂ ನುಗ್ಗಿಬರುತ್ತಿರುವ ಆ ಅಸ್ತ್ರದ ವೇಗಕ್ಕೆ ಸಿಕ್ಕಿದ ಆನೆಯು ತನ್ನ ಪ್ರಾಣವನ್ನು ಬಿಟ್ಟಿತು. ಮಹಾವೀರನಾದ ಪರಮೇಶ್ವರನು ಬಿಟ್ಟ ಆ ಅಸ್ತ್ರವು ಆನೆಯನ್ನು ನಾಶಪಡಿಸಿದ ಪ್ರದೇಶದಲ್ಲಿ ಬಹಳ ಭಯಂಕರವಾದ ವಿಷ್ಣು ಸಂಬಂಧವಾದ ನರಸಿಂಹನ ಆಕಾರವನ್ನು ಧರಿಸಿ ಶಂಕರನ ಆಜ್ಞೆಯಂತೆ ಅಲ್ಲಿಯೇ ಸ್ಥಿರವಾಗಿ ನಿಂತಿತು.

ತದಾ ಪ್ರಭೃತಿ ತತ್ರಾಸೀ ದ್ಗಜಶ್ಶೈಲೋ ಗಜಾಕೃತಿಃ ।
ನಾರಸಿಂಹೋಽಪಿ ಸಾನ್ನಿಧ್ಯಂ ಸದಾ ತತ್ರ ಕರೋತಿ ಚ ॥ ೫೭ ॥

ರೋಮಶೋ ಭಗವಾಂ ಸ್ತತ್ರ ಕುಂಡಂ ಕೃತ್ವಾ ಸ್ವನಾಮತಃ ।
ಸ್ನಾತ್ವಾ ತಪೋ ಮಹತ್ಕೃತ್ವಾ ಸ ಲೇಭೇ ಸಿದ್ಧಿ ಮುತ್ತಮಾಂ ॥ ೫೮ ॥

ಪ್ರಹ್ಲಾದಪ್ರಮುಖಾಶ್ಚಾನ್ಯೇ ತತ್ರ ಸಿದ್ಧಿಂ ಪರಾಂ ಯಯುಃ ।
ವ್ಯಸುಂ ಗಜಂ ತತ್ರ ಗತ್ವಾ ದೃಷ್ಟ್ವಾ ವಿಕ್ರಮಭೂಪತಿಃ ॥ ೫೯ ॥

ತದ್ಗಜೇನ ಸಮಾಯಾತಾ ನ್ನಗ್ನಾನ್ವೇದವಿದೂಷಕಾನ್ ॥ ೬೦ ॥
ಚೋಲಸೇನಾಸಮಾಯುಕ್ತಾನ್ ಪ್ರಪಲಾಯಿತುಮುದ್ಯತಾನ್ ।

ಪ್ರಹರ್ತು ಮಾಜ್ಞಾಂ ಪ್ರದದೌ ಸೇನಾಭ್ಯಃ ಸ್ವಸ್ಯ ಸತ್ವರಂ ॥ ೬೧ ॥

---

೫೭–೫೮. ಆ ಪ್ರದೇಶದಲ್ಲಿ ಆ ಕಾಲಮೊದಲುಗೊಂಡು ಕಲ್ಲಿನ ಆನೆಯು ಆಕೃತಿಯು ಅಲ್ಲಿ ಇರುವುದು. ದೇವದೇವನಾದ ನರಸಿಂಹನೂ ತನ್ನ ಸಾನ್ನಿಧ್ಯವನ್ನು ಅಲ್ಲಿ ಅನುಗ್ರಹಿಸಿದನು. ಪೂಜ್ಯನಾದ ರೋಮಶಮುನಿಯು ಆ ಪ್ರದೇಶದಲ್ಲಿ ತನ್ನ ಹೆಸರಿನಿಂದ ಕುಂಡವನ್ನು ಮಾಡಿ, ಸ್ನಾನಮಾಡಿ, ಉಗ್ರವಾದ ತಪಸ್ಸಿನಿಂದ ಉತ್ತಮವಾದ ಸಿದ್ಧಿಯನ್ನು ಹೊಂದಿರುವನು. ಪ್ರಹ್ಲಾದನೇ ಮೊದಲಾದ ಇತರರು ಅನೇಕರು ಅಲ್ಲಿ ತಪಸ್ಸನ್ನು ಆಚರಿಸಿ ಉತ್ತಮವಾದ ಸಿದ್ಧಿಯನ್ನು ಹೊಂದಿರುವರು.

೫೯–೬೧. ವಿಕ್ರಮಪಾಂಡ್ಯರಾಜನು ಅಭಿಚಾರಿಕ ಗಜವು ನಾಶವಾದದ್ದನ್ನ ನೋಡಿದನು. ಆ ಆನೆಯ ಜೊತೆಯಲ್ಲಿದ್ದುಕೊಂಡು ತನ್ನನ್ನೂ ತನ್ನ ರಾಷ್ಟ್ರವನ್ನೂ ನಾಶಮಾಡುವುದಕ್ಕಾಗಿ ಬಂದಿದ್ದ ಬೌದ್ಧಮಂತ್ರವಾದಿಗಳು ಮತ್ತು ಚೋಳರಾಜನ ಸೇನೆಯವರು ಇವರೆಲ್ಲರೂ ಓಡುವುದಕ್ಕೆ ಸಿದ್ಧರಾದದ್ದನ್ನು ವಿಕ್ರಮಪಾಂಡ್ಯರಾಜನು ನೋಡಿ, ತನ್ನ ಸೇನೆಯವರಿಗೆ, ಅವರನ್ನು ಹೊಡೆಯಲು ಬೇಗ ಅಪ್ಪಣೆಯನ್ನು ಮಾಡಿದನು.

ಸೇನಾಭಿ ಸ್ಸಹಿತಾ ಸ್ತ್ವಾಭಿ ಶ್ಶಿವಭಕ್ತ ಬಲೋತ್ಕಟಾಃ ।
ಸ್ವೈರಂ ಪ್ರಜಘ್ನು ಸ್ಸಹಸಾ ನಗ್ನಾನ್‌ಶಂಕರದೂಷಕಾನ್ ॥ ೬೨ ॥

ಕಪೋಲತಾಡನಾದ್ಯೈಶ್ಚ ಭಗ್ನದಂತಾ ಸ್ಸುಸಂಯುತಾಃ ।
ವೇಗೇನ ಧಾವನಂ ಚಕ್ರುಃ ಪರಿತಃ ಪಕ್ಷಿಣೋ ಯಥಾ ॥ ೬೩ ॥

ರಾಜಾ ವಿಕ್ರಮಪಾಂಡ್ಯೋಽಪಿ ವಿಸ್ಮಯೇನ ಮುದಾ ಯುತಃ ।
ಅಟ್ಟಾಲವೀರಶಂಭುಂ ಚ ಜವಾತ್‌ಸ್ತೋತುಂ ಸಮಾಯಯೌ ॥ ೬೪ ॥

ಶಿವಮುದ್ಭೃತವೇಷಂ ತಂ ವಿಲೋಕ್ಯಾತಿ ಪ್ರಿಯಾನ್ವಿತಃ ।
ಪುನಃ ಪುನಃ ಪ್ರಣಮ್ಯಾಥ ಸ್ತೋತುಮಾರಭತೇ ಮುದಾ ॥ ೬೫ ॥

॥ ವಿಕ್ರಮಪಾಂಡ್ಯ ಉವಾಚ ॥

ಕಲ್ಯಾಣಾಚಲಕೋದಂಡಂ ಕಾಂತದೋರ್ದಂಡಮಂಡಿತಂ ।
ಕಬಲೀಕೃತಸಂಸಾರಂ ಕಲಯೇಽಟ್ಟಾಲಸುಂದರಂ ॥ ೬೬ ॥

---

೬೨–೬೫. ಬಹಳ ಬಲಿಷ್ಠರಾದ ಶಿವಭಕ್ತರಾದ ರಾಜನ ಕಡೆಯವರು ತಮ್ಮ ತಮ್ಮ ಸೇನೆಗಳನ್ನು ಕರೆದುಕೊಂಡು ಶಿವನನ್ನು ದೂಷಣೆಮಾಡುವ ಅವರನ್ನು ತಮ್ಮ ತಮ್ಮ ಇಚ್ಛೆಬಂದಹಾಗೆ ಕೆನ್ನೆಗೆ ಹೊಡೆಯುವುದು, ಹಲ್ಲು ಮುರಿಯುವುದು ಇವೇ ಮೊದಲಾದ ಹಿಂಸೆಗಳನ್ನು ಮಾಡಿದರು. ಇದರಿಂದ ಅವರೆಲ್ಲರೂ ಹಕ್ಕಿಗಳು ಹಾರಿಹೋಗುವಂತೆ ದಿಕ್ಕುದಿಕ್ಕುಗಳಿಗೆ ಓಡಿಹೋದರು. ವಿಕ್ರಮಪಾಂಡ್ಯ ರಾಜನೂ ಮಧುರಾನಗರದ ಜನರೂ ಕೂಡ, ಅಟ್ಟಾಲವೀರನಾದ ಶಿವನನ್ನು ಸ್ತೋತ್ರ ಮಾಡಿದರು. ರಾಜನು ಮಾತ್ರ ಆಶ್ಚರ್ಯಕರವಾದ ಕಿರಾತವೇಷದಿಂದ ಇರುವ ಸುಂದರೇಶ್ವರನನ್ನು ನೋಡಿ ಬಹಳ ಸಂತೋಷವುಳ್ಳವನಾಗಿ ಅವನಿಗೆ ಪದೇ ಪದೇ ನಮಸ್ಕಾರಮಾಡುತ್ತಾ ಸಂತೋಷದಿಂದ ಸ್ತೋತ್ರಮಾಡಲುದ್ಯುಕ್ತನಾದನು.

೬೬. ವಿಕ್ರಮಪಾಂಡ್ಯರಾಜನು ಹೇಳಿದನು:– "ಮೇರು ಪರ್ವತವನ್ನು ಧನುಸ್ಸನ್ನಾಗಿ ಹಿಡಿದುಕೊಂಡು ಇರುವ ಸುಂದರವಾದ ಭುಜಗಳಿಂದ ಕೂಡಿ (ಸಂಸಾರ) ಜನಗಳಿಗೆ ಮುಕ್ತಿಯನ್ನು ಕೊಡುವ ಅಟ್ಟಾಲಸುಂದರೇಶ್ವರನನ್ನು ಧ್ಯಾನಮಾಡುತ್ತೇನೆ.

ಕಾಲಕೂಟಪ್ರಭಾಜಾಲಕಲುಷೀಕೃತಕಂಧರಂ ।
ಕಲಾಧರಕಲಾಮೌಳಿಂ ಕಲಯೇಽಟ್ಟಾಲಸುಂದರಂ ॥ ೬೭ ॥

ಕಾಲಕಾಲಂ ಕಲಾತೀತಂ ಕಲಾವಂತಂ ಚ ನಿಷ್ಕಲಂ ।
ಕಮಲಾಪತಿಸಂಸ್ತುತ್ಯಂ ಕಲಯೇಽಟ್ಟಾಲಸುಂದರಂ ॥ ೬೮ ॥

ಕಾಂತಾರ್ಧಕಮನೀಯಾಂಗಂ ಕರುಣಾಮೃತಸಾಗರಂ ।
ಕಲಿಕಲ್ಮಷದೋಷಘ್ನಂ ಕಲಯೇಽಟ್ಟಾಲಸುಂದರಂ ॥ ೬೯ ॥

ಕದಂಬಕಾನನಾಧೀಶಂ ಕಾಂಕ್ಷಿತಾರ್ಥಸುರದ್ರುಮಂ ।
ಕಾಮಶಾಸನಮೀಶಾನಂ ಕಲಯೇಽಟ್ಟಾಲಸುಂದರಂ ॥ ೭೦ ॥

ಸೃಷ್ಟಾನಿ ಮಾಯಯಾ ಯೇನ ಬ್ರಹ್ಮಾಂಡಾನಿ ಬಹೂನಿ ಚ ।
ರಕ್ಷಿತಾನಿ ಹತಾನ್ಯಂತೇ ಕಲಯೇಽಟ್ಟಾಲಸುಂದರಂ ॥ ೭೧ ॥

೬೭. ಕಾಲಕೂಟವೆಂಬ ವಿಷದ ಕಾಂತಿಯ ಸಮೂಹದಿಂದ ಕಪ್ಪಾದ ಕುತ್ತಿಗೆಯುಳ್ಳವನಾಗಿ ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವ ಅಟ್ಟಾಲಸುಂದರೇಶ್ವರನನ್ನು ಧ್ಯಾನಮಾಡುತ್ತೇನೆ.

೬೮. ಯಮನಿಗೆ ಯಮನಾಗಿ,ಕಲೆಗಳನ್ನು ಮೀರಿರುವನಾಗಿ (ಕಾಂತಿ) ಚತುಷ್ಷಷ್ಟಿಕಲೆಗಳಿಂದ ಕೂಡಿದವನಾಗಿ ನಿಷ್ಕಲರೂಪದಿಂದ ಇರುತ್ತಾ ವಿಷ್ಣುವಿನಿಂದಲೂ ಸ್ತುತಿಮಾಡಲ್ಪಟ್ಟ ಅಟ್ಟಾಲಸುಂದರೇಶ್ವರನನ್ನು ಧ್ಯಾನಮಾಡುವೆನು.

೬೯. ಮನೋಹರವಾದ ಸ್ತ್ರೀಯನ್ನು ತನ್ನ ಶರೀರದ ಅರ್ಧಭಾಗದಲ್ಲಿ ಹೊಂದಿ ಇರುತ್ತಾ,ಅಪಾರವಾದ ದಯೆಯಿಂದ ಕೂಡಿದವನಾಗಿ, ಕಲಿಪುರುಷನ ಸಂಬಂಧವಾದ ದೋಷಗಳನ್ನು ನಾಶಪಡಿಸುವ ಅಟ್ಟಾಲಸುಂದರೇಶ್ವರನನ್ನು ಧ್ಯಾನಮಾಡುವೆನು.

೭೦. ಕದಂಬಕಾನನಕ್ಕೆ ಅಧಿಪತಿಯಾಗಿ ಭಕ್ತರ ಇಷ್ಟಾರ್ಥಗಳನ್ನೆಲ್ಲವನ್ನೂ ಅನುಗ್ರಹಿಸುತ್ತಿರುವ, ಮನ್ಮಥನನ್ನು ನಿಗ್ರಹಮಾಡಿರುವ,ಅಟ್ಟಾಲಸುಂದರೇಶ್ವರನನ್ನು ಧ್ಯಾನಮಾಡುವೆನು.

೭೧. ಮಾಯೆಯಿಂದ ಬ್ರಹ್ಮಾಂಡವನ್ನು ಸೃಷ್ಟಿಮಾಡಿ, ರಕ್ಷಿಸಿ, ಅವುಗಳನ್ನು ನಾಶಮಾಡುತ್ತಾ ಲೀಲೆಯಿಂದ ಇರುವ ಸುಂದರೇಶ್ವರನನ್ನು ಧ್ಯಾನಮಾಡುವೆನು.

ಸ್ವಭಕ್ತಜನಸಂತಾಪಪಾಪಾಪದ್ಧ್ವಂಗತತ್ಪರಂ ।
ಕಾರಣಂ ಸರ್ವಜಗತಾಂ ಕಲಯೇಽಟ್ಟಾಲಸುಂದರಂ ॥ ೭೨ ॥

ಕುಲಶೇಖರವಂಶೋತ್ಥಭೂಪಾನಾಂ ಕುಲದೈವತಂ ।
ಪರಿಪೂರ್ಣಂ ಚಿದಾನಂದಂ ಕಲಯೇಽಟ್ಟಾಲಸುಂದರಂ ॥ ೭೩ ॥

ಅಟ್ಟಾಲವೀರ ಶ್ರೀಶಂಭೋಃ ರಷ್ಟಕಂ ಪರಮಿಷ್ಟದಂ ।
ಪಠತಾಂ ಶೃಣ್ವತಾಂ ಸದ್ಯ ಸ್ತನೋತು ಪರಮಾಂ ಶ್ರಿಯಂ ॥ ೭೪ ॥

ಇತಿ ವಿಕ್ರಮಭೂಪಾಲೇ ಸ್ತಾವಕೇ ಸತಿ ಭಕ್ತಿತಃ ।
ತಸ್ಮೈ ದತ್ವಾಖಿಲಾನ್ಕಾಮಾ ನಂತರ್ಧಾತುಂ ಸಮುದ್ಯತಃ ॥ ೭೫ ॥

---

೭೨. ತನ್ನ ಭಕ್ತರ ಸಂಕಟವೆಂಬ ವಿಪತ್ತನ್ನು ನಾಶಪಡಿಸುವುದರಲ್ಲಿ ಆಸಕ್ತನಾಗಿ ಜಗತ್ತಿಗೆಲ್ಲಕ್ಕೂ ಕಾರಣನಾಗಿರುವ ಅಟ್ಟಾಲ ಸುಂದರೇಶ್ವರನನ್ನು ಧ್ಯಾನಮಾಡುತ್ತೇನೆ.

೭೩. ಕುಲಶೇಖರನೆಂಬ ರಾಜನ ವಂಶದಲ್ಲಿ ಹುಟ್ಟಿದ ರಾಜರಿಗೆ ಕುಲದೇವನಾಗಿ, ಎಲ್ಲಾ ವಿಧವಾದ ಮಹಿಮೆಗಳಿಂದ ಕೂಡಿದವನಾಗಿ, ಜ್ಞಾನಾಂದರೂಪನಾದ ಅಟ್ಟಾಲ ಸುಂದರೇಶ್ವರನನ್ನು ಧ್ಯಾನಮಾಡುತ್ತೇನೆ.

೭೪. ಅಟ್ಟಾಲ ವೀರನೆನಿಸಿಕೊಂಡಿರುವ ಶಿವನ ಸ್ತೋತ್ರವಾದ ಈ ಎಂಟು ಶ್ಲೋಕಗಳನ್ನು ಭಕ್ತಿಯಿಂದ ಹೇಳುವವರಿಗೆ ಪರಮೇಶ್ವರನು ಅವರ ಇಷ್ಟಗಳೆಲ್ಲವನ್ನೂ ಅನುಗ್ರಹಿಸಲಿ. ಕೇಳುವವರಿಗೂ ಬೇಕಾದ ಐಶ್ವರ್ಯವನ್ನು ಪರಮೇಶ್ವರನು ಉಂಟುಮಾಡಲಿ.

೭೫. ವಿಕ್ರಮ ಪಾಂಡ್ಯರಾಜನು ಭಕ್ತಿಯಿಂದ ಈ ಪ್ರಕಾರವಾಗಿ ಸ್ತೋತ್ರಮಾಡುತ್ತಿರುವುದನ್ನು ಕೇಳಿ ಅವನಿಗೆ ಬೇಕಾದ ವರಗಳನ್ನು ಕೊಟ್ಟು ಅಂತರ್ಧಾನಹೊಂದಲು ಹಾಲಾಸ್ಯೇಶ್ವರನು ನಿಶ್ಚಯ ಮಾಡಿದನು.

ಅಥ ವಿಕ್ರಮಭೂಪಾಲಸ್ತಸ್ಯ ಪಾದಾಂಬುಜದ್ವಯಂ ।
ಪರಿಗೃಹ್ಯ ಚ ಪಾಣಿಭ್ಯಾಂ ಪ್ರಾರ್ಥಯತ್ಯೇವ ಮಾದರಾತ್ ॥ ೭೬ ॥

ಅಟ್ಟಾಲವೀರ ಭಗವನ್ನಟ್ಟಾಲಾಖ್ಯೇತ್ರ ಮಂಟಪೇ ।
ಇಷ್ಟಾರ್ಥಸಿದ್ಧ್ಯೈ ಲೋಕಾನಾಂ ತಿಷ್ಠ ತಿಷ್ಠ ನಿರಂತರಂ ॥ ೭೭ ॥

ತಸ್ಯ ವಾಕ್ಯಂ ಸಮಾಕರ್ಣ್ಯ ಸರ್ವಾನುಗ್ರಹ ಸುಕ್ಷಮಃ ।
ಅಟ್ಟಾಲವಾಸ ಮನಿಶಂ ಕರೋತ್ಯಟಾಲಸುಂದರಃ ॥ ೭೮ ॥

ರಾಜಾ ವಿಕ್ರಮಭೂಪಾಲ ಸ್ತತ್ಕಾರುಣ್ಯ ಕಟಾಕ್ಷತಃ ।
ರಾಜಶೇಖರಪಾಂಡ್ಯಾಖ್ಯಂ ಪುತ್ರಂ ಲಬ್ಧ್ವಾ ಹೌಜಸಂ ॥ ೭೯ ॥

ಸುತೇನ ತೇನ ಸಹಿತ ಶ್ಚಿರಂ ಭೂಮಿ ಮಪಾಲಯತ್ ।
ಅಟ್ಟಾಲವೀರಂ ವರದಂ ಜನಾನಾಂ ಧ್ಯಾಯತಾಂ ಕ್ಷಣಾತ್ ॥ ೮೦ ॥

ಸಂಪತ್ಪರಂಪರಾ ಯಾತಿ ನಶ್ಯತ್ಯಾಪತ್ಪರಂಪರಾ ।
ಶ್ರೀಹಾಲಾಸ್ಯಪತೇಶ್ಶಂಭೋರ್ಲೀಲೇಯಂ ಪಠಿತಾ ಶ್ರುತಾ ॥ ೮೧ ॥

---

೭೬ ಆಗ ವಿಕ್ರಮಪಾಂಡ್ಯರಾಜನು ಆತನ ಕಮಲದಂತಿರುವ ಎರಡು ಪಾದಗಳನ್ನೂ ತನ್ನ ಕೈಯಿಂದ ಹಿಡಿದುಕೊಂಡು "ಎಲೈ ವೀರನಾದ ಸತ್ತ್ವಪೂಜ್ಯನಾದ ಅಟ್ಟಾಲ ಸುಂದರೇಶ್ವರನೇ, ನೀನು ಲೋಕಗಳ ಮತ್ತು ಜನರ ಅನುಗ್ರಹಕ್ಕಾಗಿ ಈ ಪ್ರದೇಶದಲ್ಲಿ ಯಾವಾಗಲೂ ಇರಬೇಕು." ಎಂದು ಆದರದಿಂದ ಕೇಳಿಕೊಂಡನು. ಸುಂದರೇಶ್ವರನು ಆ ರಾಜನ ಮಾತಿಗೆ ಒಪ್ಪಿಕೊಂಡು ಎಲ್ಲರಿಗೂ ಅನುಗ್ರಹವನ್ನು ಮಾಡುತ್ತಾ ಅಲ್ಲಿಯೇ ನೆಲಸಿದನು.

೭೯-೮೧. ವಿಕ್ರಮ ಪಾಂಡ್ಯರಾಜನು ಸುಂದರೇಶ್ವರನ ಕಟಾಕ್ಷದಿಂದ ರಾಜಶೇಖರ ಪಾಂಡ್ಯನೆಂಬ ಹಿರಿದಾದ ಮಗನನ್ನು ಹೊಂದಿ, ಅವನೊಡನೆ ರಾಜ್ಯವನ್ನು ಬಹಳ ಕಾಲದವರೆಗೂ ರಕ್ಷಿಸಿದನು. ಅಟ್ಟಾಲ ಸುಂದರೇಶ್ವರನನ್ನು ಧ್ಯಾನಮಾಡುವ ಜನರ ವಿಪತ್ತುಗಳು ಒಂದು ಕ್ಷಣದಲ್ಲಿ ನಾಶವಾಗಿ ಅವರಿಗೆ ಎಲ್ಲಾ ವಿಧವಾದ ಐಶ್ವರ್ಯಗಳೂ ಉಂಟಾಗುವುವು. ಹಾಲಾಸ್ಯ ನಾಥನಾದ ಪರಮೇಶ್ವರನ ಈ ಲೀಲೆಯನ್ನು ಹೇಳಿರುವೆನು. ಇದನ್ನು ಕೇಳಿದವರಿಗೂ ಓದಿದವರಿಗೂ ವಿಪತ್ತುಗಳೆಲ್ಲವೂ ನಾಶವಾಗಿ ಸಂಪತ್ತುಗಳು ಉಂಟಾಗುವುವು.

ಸರ್ವಸಂಪತ್ಪ್ರದಾ ಸದ್ಯಸ್ಸರ್ವಾಪದ್ಭಂಜಿನೀ ಸದಾ ।
ಇತಿ ದ್ವಾವಿಂಶತೀಂ ಲೀಲಾಂ ಯಶ್ಶೃಣೋತಿ ಸ ಭಕ್ತಿತಃ ।
ಇಹ ಭುಕ್ತ್ವಾ ಮಹಾಭೋಗಾನಂತೇ ಸಾಯುಜ್ಯಮೇಷ್ಯತಿ ॥ ೮೨ ॥

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ನಗ್ನಹಸ್ತಿಹನನಂ ನಾಮ
ಅಷ್ಟಾವಿಂಶೋಽಧ್ಯಾಯಃ

---

೮೨. ಪರಮೇಶ್ವರನು ಆಚರಿಸಿದ ಇಪ್ಪತ್ತೆರಡನೆಯ ಈ ಲೀಲೆಯನ್ನು ಭಕ್ತಿಯಿಂದ ಕೇಳುವವರು ಈ ಲೋಕದಲ್ಲಿ ಬಹಳ ಭೋಗವನ್ನು ಅನುಭವಿಸಿ ಕೊನೆಯಲ್ಲಿ ಶಿವನ ಸಾಯುಜ್ಯವನ್ನು ಹೊಂದುವರು.

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆ
ಯಲ್ಲಿ ನಗ್ನಹಸ್ತಿಹನನವೆಂದು ಹೆಸರುಳ್ಳ ಇಪ್ಪತ್ತೆಂಟನೆಯ
ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ
## ಏಕೋನತ್ರಿಂಶೋಽಧ್ಯಾಯಃ



|| ಅಗಸ್ತ್ಯ ಉವಾಚ ||

ಯಯಾ ಭೂಸುರಕನ್ಯಾಯಾಃ ಆರ್ತಿಂ ಹರತಿ ಲೀಲಯಾ ।
ತಾಂ ಲೀಲಾಂ ಸುಂದರೇಶಸ್ಯ ವಕ್ಷ್ಯಾಮಿ ಮುನಿಪುಂಗವಾಃ || ೧ ||

ಮಧುರಾಯಾಂ ದ್ವಿಜಃ ಕಶ್ಚಿದಭೂದಾಚಾರತತ್ಪರಃ ।
ವಿರೂಪಾಕ್ಷ ಇತಿ ಖ್ಯಾತ ಸ್ಸರ್ವವಿದ್ಯಾವಿಶಾರದಃ || ೨ ||

ಸುವ್ರತಾ ನಾಮ ತಸ್ಯಾಸೀತ್ಪತ್ನೀ ಪಂಕಜಲೋಚನಾ ।
ಸತತಂ ಭರ್ತೃಶುಶ್ರೂಷಾಂ ಕರೋತಿ ಪ್ರಿಯವಾದಿನೀ || ೩ ||

ತಯಾ ಸಹ ವಿರೂಪಾಕ್ಷಃ ಪುತ್ರಾಭಾವಾದ್ವ್ರತಾನಿ ಚ ।
ಶಾಂಭವಾನಿ ವಿಶಿಷ್ಟಾನಿ ವಿಧಿನಾ ಚಾಕರೋನ್ಮುದಾ || ೪ ||

---

### ಇಪ್ಪತ್ತೊಂಬತ್ತನೆಯ ಅಧ್ಯಾಯವು

೧-೪. ಅಗಸ್ತ್ಯಋಷಿಯು ಹೇಳಿದನು:— ಸುಂದರೇಶ್ವರನು ಬ್ರಾಹ್ಮಣಪುತ್ರಿಗೆ ಉಂಟಾಗಿದ್ದ ಸಂಕಟವನ್ನು ಪರಿಹರಿಸಿದ ಲೀಲೆಯನ್ನು ನಾನು ಹೇಳುವೆನು, ಅದನ್ನು ಕೇಳಿರಿ. ಮಧುರಾನಗರದಲ್ಲಿ ವಿರೂಪಾಕ್ಷನೆಂದು ಹೆಸರುಳ್ಳ ಒಬ್ಬ ಆಚಾರವಂತನಾದ ಬ್ರಾಹ್ಮಣನು ಇದ್ದನು, ಅವನ ಹೆಂಡತಿಯು ಹಿತವಾದ ಮಾತನಾಡುತ್ತಾ ಯಾವಾಗಲೂ ತನ್ನ ಪತಿಯ ಸೇವೆಯನ್ನು ಮಾಡುತ್ತಿದ್ದಳು. ತನಗೆ ಮಕ್ಕಳಿಲ್ಲದ ಕಾರಣ ಆ ಬ್ರಾಹ್ಮಣನು ತನ್ನ ಪತ್ನಿಯೊಡನೆ ಶಿವನ ಸಂಬಂಧವಾದ ವ್ರತಗಳನ್ನು ಸಂತೋಷದಿಂದ, ಶಾಸ್ತ್ರಕ್ಕನುಸಾರವಾಗಿ ಆಚರಿಸುತ್ತಿದ್ದನು.

ಸಂಸ್ನಾಯ ಹೇಮಪದ್ಮಿನ್ಯಾಂ ಸ ತಯಾ ಪ್ರತಿವಾಸರಂ ।
ನತ್ವಾ ದೇವೀಂ ಸುಮೀನಾಕ್ಷೀಂ ಹಾಲಾಸ್ಯೇಶಂ ಚ ಭಕ್ತಿತಃ ॥ ೫ ॥

ಗೌರೀರೂಪಂ ಹೃದಿ ಧ್ಯಾತ್ವಾ ತದ್ಬೀಜಂ ಮನಸಾ ಜಪನ್ ।
ಸಪ್ತಮಾತೃಸಮೀಪಸ್ಥ ಸ್ತಪ ಶ್ಚರತಿ ದುಷ್ಕರಂ ॥ ೬ ॥

ಸುಮೀನಾಕ್ಷೀಪತಿಃ ಶಂಭು ಸ್ತಯೋ ರ್ಭಕ್ತ್ಯಾ ಸುವಿಸ್ಮಿತಃ ।
ಕರ್ತುಂ ವರಪ್ರದಾನಂ ಚ ಸಮುದ್ಯುಕ್ತಃ ಕೃಪಾನಿಧಿಃ ॥ ೭ ॥

ಜನ್ಮಾಂತರಕೃತಾಂಹೋಭಿಃ ಪುತ್ರಸಂಪತ್ತಿಹೀನಯೋಃ ।
ತಯೋ ಸ್ಸದ್ಗುಣಸಂಯುಕ್ತಾಂ ಪುತ್ರೀಮೇವ ಪ್ರಯಚ್ಛತಿ ॥ ೮ ॥

ತಲ್ಲಬ್ಧ್ವಾ ಕನ್ಯಕಾರತ್ನಂ ಸರ್ವಲಕ್ಷಣಸಂಯುತಂ ।
ಸಂತೋಷಸಾಗರೇ ಮಗ್ನಾವಭೂತಾ ಮಧಿಕಪ್ರಿಯೌ ॥ ೯ ॥

೫–೮. ಅವನು ಪ್ರತಿದಿನವೂ ಹೇಮಪದ್ಮಿನೀ ತೀರ್ಥದಲ್ಲಿ ಸ್ನಾನಮಾಡಿಕೊಂಡು, ಮೀನಾಕ್ಷೀದೇವಿಯನ್ನೂ ಹಾಲಾಸ್ಯೇಶ್ವರನನ್ನೂ ಭಕ್ತಿಯಿಂದ ನಮಸ್ಕರಿಸಿ ಗೌರೀದೇವಿಯ ಆಕೃತಿಯನ್ನು ಮನಸ್ಸಿನಿಂದ ಧ್ಯಾನಮಾಡುತ್ತಾ, ಹಾಲಾಸ್ಯೇಶ್ವರನ ದೇವಾಲಯದಲ್ಲಿರುವ ಸಪ್ತ ಮಾತೃಕೆಯರ ಹತ್ತಿರದಲ್ಲಿ ಕುಳಿತುಕೊಂಡು, ಗೌರೀ ದೇವಿಯ ಮಂತ್ರವನ್ನು ಜಪಮಾಡುತ್ತಾ ಬಹಳ ಕಷ್ಟತರವಾದ ತಪಸ್ಸನ್ನು ಮಾಡುತ್ತಿದ್ದನು. ದೇವಿಯೊಡನೆ ಇರುವ ದೇವನು ಅವರ ಭಕ್ತಿಯನ್ನೂ ತಪಸ್ಸನ್ನೂ ನೋಡಿ, ಆಶ್ಚರ್ಯಪಟ್ಟು ದಯೆಯುಳ್ಳ ಮನಸ್ಸಿನಿಂದ ಅವರಿಗೆ ವರವನ್ನು ಕೊಡಲು ಸಿದ್ಧನಾದನು. ಆದರೆ ಅವರ ಜನ್ಮಾಂತರದ ಪಾಪಶೇಷದಿಂದ ಪುತ್ರರನ್ನು ಅನುಗ್ರಹ ಮಾಡಲು ಅವಕಾಶವಿಲ್ಲದ ಕಾರಣ, ಅವರಿಗೆ ಒಬ್ಬ ಪುತ್ರಿಯು ಹುಟ್ಟುವಂತೆ ಹಾಲಾಸ್ಯೇಶ್ವರನು ಅನುಗ್ರಹ ಮಾಡಿದನು.

೯–೧೦. ಆದರಿಂದ ಅವರಿಗೆ ಒಬ್ಬ ಮಗಳು ಹುಟ್ಟಿದಳು. ಆ ಬಾಲೆಯು ಬಹಳ ಸುಂದರಿಯಾಗಿದ್ದಳು. ಅವಳನ್ನು ನೋಡಿ ಅವರು, ಬಹಳ ಸಂತೋಷವಾಗಿದ್ದರು. ಆ ಹುಡುಗಿಯ ತಂದೆಯು ಅವಳಿಗೆ ಗೌರಿ ಎಂದು ಹೆಸರನ್ನು ಇಟ್ಟನು.

ಕನ್ಯಕಾಯಾ ನಾಮಧೇಯಂ ಪಿತ್ರಾ ಗೌರೀತಿ ಕಲ್ಪಿತಂ ।
ವರ್ಧತೇ ಚ ಕ್ರಮಾತ್ಕನ್ಯಾ ಯಥಾ ಚಂದ್ರಕಲಾ ತಥಾ ॥ ೧೦ ॥

॥ ಗೌರ್ಯುವಾಚ ॥

ಪಂಚಮೇ ವತ್ಸರೇ ಪ್ರಾಪ್ತೇ ಗೌರೀ ಸಾ ಪರಿಶುದ್ಧಧೀಃ ।
ವಿರೂಪಾಕ್ಷಂ ಸಮಾಧಿಸ್ಥಂ ದೇವತಾಚಾರ್ಯಸನ್ನಿಭಂ ॥ ೧೧ ॥

ಪಿತರಂ ಪ್ರೀತಮನಸಂ ಮಂತ್ರಸಿದ್ಧಿಸಮನ್ವಿತಂ ।
ಪ್ರಣಮ್ಯ ಪ್ರಾರ್ಥಯಾಮಾಸ ಶಕ್ತಿಪಾತಸಮನ್ವಿತಾ ॥ ೧೨ ॥

ತಾತೋಪದಿಶ ಮೇ ಧರ್ಮಂ ಭವತಾ ಪರಿಶೀಲಿತಂ ।
ಯೇನ ಸಂಸಾರದುಃಖಾನಿ ವಿನಶ್ಯಂತ್ಯಖಿಲಾನಿ ಚ ॥ ೧೩ ॥

ಇತಿ ಕನ್ಯಾವಚಃ ಶ್ರುತ್ವಾ ವಿರೂಪಾಕ್ಷೋತಿ ವಿಸ್ಮಿತಃ ।
ಪ್ರಶ್ನಲಿಂಗಾನುಮೇಯೇನ ಶಕ್ತಿಪಾತೇನ ಯೋಗ್ಯತಾಂ ॥ ೧೪ ॥

---

ಗೌರಿಯು ಚಂದ್ರನ ಕಳೆಯು ದಿನೇ ದಿನೇ ಹೆಚ್ಚುವಂತೆ ವೃದ್ಧಿಯನ್ನು ಹೊಂದುತ್ತಿದ್ದಳು. ಅವಳಿಗೆ ಐದು ವರ್ಷ ವಯಸ್ಸು ಆಗುತ್ತಾ ಬಂತು. ಇವಳ ತಂದೆಗೆ ಮಂತ್ರಸಿದ್ಧಿಯು ಇದ್ದಿತು. ಪ್ರಶ್ನೆಯನ್ನು ಕೇಳಿ ತಿಳಿಯಲು ಇವಳಿಗೆ ತಕ್ಕಮಟ್ಟಿನ ದೇವಿಯ ಅನುಗ್ರಹವು ಇದ್ದಿತು. ಆದ್ದರಿಂದ ಪರಿಶುದ್ಧವಾದ ಬುದ್ಧಿಯುಳ್ಳ ಈ ಗೌರಿಯು ಗುರುವಿನಂತೆಯೂ, ದೇವರಂತೆಯೂ ಇರುವ ತನ್ನ ತಂದೆಗೆ ನಮಸ್ಕಾರ ಮಾಡಿ, "ಎಲೈ ತಂದೆಯೇ, ಜನ್ಮ, ಮರಣ ರೂಪವಾದ ಸಂಸಾರದುಃಖವನ್ನು ಕಳೆದುಕೊಳ್ಳಲು ಆಚರಿಸಬೇಕಾಗಿರುವ ಧರ್ಮವು ನಿನ್ನ ಅನುಭವ ಗೋಚರವಾಗಿರುವುದರಿಂದ ನನಗೆ ಅದನ್ನು ಉಪದೇಶ ಮಾಡು" ಎಂದು ಪ್ರಶ್ನೆ ಮಾಡಿದಳು.

೧೪-೧೫. ಆಗ ವಿರೂಪಾಕ್ಷನು ಆ ಹುಡುಗಿಯು ಹೇಳಿದ ಮಾತನ್ನು ಕೇಳಿ ಸಂತೋಷಪಟ್ಟನು. ಆ ಪ್ರಶ್ನೆಯನ್ನು ಕೇಳುವುದಕ್ಕೆ ಆ ಹುಡುಗಿಗೆ ದೇವಿಯ ಅನುಗ್ರಹವುಂಟಾಗಿರುವುದನ್ನು ತಿಳಿದುಕೊಂಡನು. ಅನಂತರದಲ್ಲಿ ಅವನು ಬಹಳ ಸಂತೋಷವುಳ್ಳವನಾಗಿ, ವಿಪತ್ತನ್ನು ಪರಿಹರಿಸಿ, ಪಾಪಗಳನ್ನು ನಾಶಮಾಡಿ, ನಾಲ್ಕು

ಪುತ್ರ್ಯೈ ಬುದ್ಧ್ವಾತ್ಯಂತಹೃಷ್ಟ ಶ್ಚತುರ್ವರ್ಗಫಲಪ್ರದಂ ।
ಮಹಾಪಾಪಹರಂ ಸದ್ಯ ಸ್ಸರ್ವಾಪದ್ಭಂಜನಕ್ಷಮಂ ॥ ೧೫ ॥
ಸರ್ವಸಿದ್ಧಿಕರಂ ಸತ್ಯಂ ಧರ್ಮಂ ವಕ್ತುಂ ಪ್ರಚಕ್ರಮೇ ।

॥ ವಿರೂಪಾಕ್ಷ ಉವಾಚ ॥

ಅಯಿ ಪುಣ್ಯಾಲಯೇ ಪುತ್ರಿ ಸ ಧರ್ಮಃ ಪ್ರೋಚ್ಯತೇ ಮಯಾ ॥ ೧೬ ॥

ಮಹಾಮಾಯಾ ಜಗದ್ಧಾತ್ರೀ ಸಚ್ಚಿದಾನಂದರೂಪಿಣೀ ।
ಸರ್ವವಿದ್ಯಾಲಯಾ ಶಂಭೋ ರಾಹೋಪುರುಷಿಕಾ ಪರಾ ॥ ೧೭ ॥

ಗೌರೀ ನಾಮ್ನಾ ತಸ್ಯ ವಾಮೇ ಸದಾಸ್ತೇ ನುಗ್ರಹಾಯ ಚ ।
ತಸ್ಯಾ ಬೀಜಂ ಜಗದ್ಬೀಜಂ ಬೀಜಂ ತದ್ಭೋಗಮೋಕ್ಷಯೋಃ ॥ ೧೮ ॥

ಲಕ್ಷ್ಮೀ ವಾಣ್ಯಾದಿದೇವೀಭಿ ರ್ವಿಷ್ಣುಬ್ರಹ್ಮಾದಿದೈವತೈಃ ।
ಸಿದ್ಧಗಂಧರ್ವಯಕ್ಷಾದ್ಯೈ ಸ್ಸಮಸ್ತೈ ಸ್ಸಜ್ಜನೈರಪಿ ॥ ೧೯ ॥

---

ವಿಧವಾದ ಪುರುಷಾರ್ಥಗಳನ್ನೂ ಕೊಡುವ, ಎಲ್ಲಾ ವಿಧವಾದ ಸಿದ್ಧಿಯನ್ನುಂಟು ಮಾಡುವ, ಸತ್ಯವಾದ ಧರ್ಮವನ್ನು ಆ ಹುಡುಗಿಗೆ ಉಪದೇಶಮಾಡಲು ಉಪಕ್ರಮಿಸಿದನು.

೧೬-೨೦. ವಿರೂಪಾಕ್ಷನು ಹೇಳಿದನು:—"ಎಲೈ ಪುಣ್ಯವಂತಳಾದ ಪುತ್ರಿಯೆ ಸರಿಯಾದ ಧರ್ಮವನ್ನು ನಾನು ಹೇಳುವೆನು. ಸಚ್ಚಿದಾನಂದ ರೂಪದಿಂದ ಇರುವ ಜಗನ್ಮಾತೆಯಾದ ದೇವಿಯು, ಪರಮೇಶ್ವರನ ಮಾಯಾ, ಜ್ಞಾನಶಕ್ತಿಯೆನಿಸಿಕೊಂಡು, ಗೌರೀ ಎಂಬ ಹೆಸರಿನಿಂದ, ಆ ದೇವನ ಎಡಭಾಗದಲ್ಲಿ, ಜಗತ್ತುಗಳೆಲ್ಲವನ್ನೂ ಅನುಗ್ರಹಿಸುತ್ತಾ ಇರುವಳು. ಆ ದೇವಿಯ ಬೀಜಮಂತ್ರವು ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯಗಳಿಗೆ ಕಾರಣವಾಗಿರುವುದು. ಅದು ಭೋಗ ಮತ್ತು ಮೋಕ್ಷಗಳನ್ನು ಕೊಡುವುದಾಗಿ ಇರುವುದು. ಆ ಬೀಜ ಮಂತ್ರವನ್ನು ಲಕ್ಷ್ಮೀ, ಸರಸ್ವತೀ ಮೊದಲಾದ ದೇವಿಯರೂ, ವಿಷ್ಣು, ಬ್ರಹ್ಮ ಮೊದಲಾದ ದೇವತೆಗಳೂ,

ಸದಾರಾಧಿತ ಮಾರ್ಯೋಣಾಂ ಹೃದಂಭೋಜೇಷ್ವವಸ್ಥಿತಂ ।
ಸಚ್ಚಿದಾನಂದರೂಪಂ ಯತ್ಪರಂ ಬ್ರಹ್ಮ ತದೇವ ಹಿ　　॥ ೨೦ ॥

ಗೌರೀಬೀಜಮಿತಿ ಪ್ರೋಕ್ತಂ ಶೃಣು ವಕ್ಷ್ಯೇ ತದುದ್ಧೃತಿಂ ।
ಸತ್ಸ್ವರೂಪಶಿವಾಕಾರೋ ಹಕಾರೋ ಧರ್ಮದಃ ಪರಃ　　॥ ೨೧ ॥

ಚಿದಾಕಾರಶಿವಾಕಾರೋ ರೇಫಃ ಸರ್ವಾರ್ಥದಾಯಕಃ ।
ಆನಂದ ಮುಭಯೋ ರೈಕ್ಯಾದೀಕಾರಃ ಸರ್ವಕಾಮದಃ　　॥ ೨೨ ॥

ಬಿಂದುನಾದೌ ತದಂತಸ್ಥೌ ಭವೇತಾಂ ಮೋಕ್ಷದಾವುಭೌ ।
ಚತುರ್ವರ್ಗಫಲಾನಾಂ ತು ಸಿಧ್ಯರ್ಥಂ ಜಗತಾ ಮಿದಂ　　॥ ೨೩ ॥

ಗೌರೀಬೀಜ ಮಿತಿ ಪ್ರೋಕ್ತಂ ಸರ್ವಸಂಪತ್ಕರಂ ಪರಂ ।
ಋಷಿಸ್ತು ದಕ್ಷಿಣಾಮೂರ್ತಿ ಶ್ಛಂದೋ ಗಾಯತ್ರಿ ರುಚ್ಯತೇ　　॥ ೨೪ ॥

---

ಯಕ್ಷ, ಗಂಧರ್ವ, ಇವರೇ ಮೊದಲಾದವರೂ, ಇತರ ಸತ್ಪುರುಷರೆಲ್ಲರೂ ಮನಸ್ಸಿನಲ್ಲಿ ಯಾವಾಗಲೂ ಧ್ಯಾನಮಾಡುತ್ತಿರುವರು. ಇದನ್ನು ಸಚ್ಚಿದಾನಂದ ರೂಪನಾಗಿರುವ ಪರಬ್ರಹ್ಮನೆಂದು ಹೇಳುವರು.

೨೧–೨೪. ಈ ಗೌರೀಬೀಜ ಮಂತ್ರೋದ್ಧಾರ ಕ್ರಮವನ್ನು ಹೇಳುವೆನು. (ಸತ್) ಸದ್ರೂಪದಿಂದ ಇರುವ ಶಿವನ ಆಕಾರವುಳ್ಳ ಹಕಾರವು ಧರ್ಮವನ್ನು ಉಂಟು ಮಾಡುವುದು. ಚಿದ್ರೂಪವಾದ ಶಿವಾಕಾರದಿಂದ ಇರುವ ರ ಎಂಬುವ ವರ್ಣವು, ಎಲ್ಲಾ ಪುರುಷಾರ್ಥಗಳನ್ನೂ ಕೊಡುವುದು. ಆನಂದ ರೂಪದಿಂದ ಇರುವ ಇವೆರಡು ಅಕ್ಷರಗಳಿಗೂ ಐಕ್ಯವನ್ನು ಹೇಳುವ ಈ ಕಾರವು ಬೇಕಾದ ಇಷ್ಟಾರ್ಥಗಳೆಲ್ಲವನ್ನೂ ಕೊಡುವುದು. ಬಿಂದುನಾದಗಳೆರಡೂ ಈ ಮೂರು ಅಕ್ಷರಗಳ ಕೊನೆಯಲ್ಲಿ ಇರುತ್ತಾ ಮೋಕ್ಷವನ್ನು ಕೊಡುವುವು. ಪ್ರಪಂಚದಲ್ಲಿ ಚತುರ್ವಿಧ ಪುರುಷಾರ್ಥಗಳನ್ನೂ ಜಗತ್ತಿಗೆ ಅನುಗ್ರಹಿಸುವುದಕ್ಕಾಗಿ, ಎಲ್ಲಾ ವಿಧವಾದ ಸಂಪತ್ತುಗಳನ್ನೂ ಕೊಡುವ ಈ ಗೌರೀಬೀಜಮಂತ್ರವು ಸಿದ್ಧವಾಗಿರುವುದು. ಈ ಮಂತ್ರಕ್ಕೆ ದಕ್ಷಿಣಾಮೂರ್ತಿ ಋಷಿಯು. ಗಾಯಿತ್ರೀ ಛಂದಸ್ಸು, ಎಂದು ತಿಳಿಯಬೇಕು.

ದೇವತಾ ಮುಪತೀ ಗೌರೀ ಸಚ್ಚಿದಾನಂದರೂಪಿಣೀ ।
ಹ್ರಾಂ ಹ್ರೀ ಮಿತ್ಯಾದಿಭಿ ರ್ಬೀಜೈಃ ಷಡಂಗಂ ಪರಿಕಲ್ಪಯೇತ್ ॥ ೨೫ ॥

ಏಕಾಕ್ಷರಮಿದಂ ಬೀಜ ಮಥ ತಧ್ಯಾನ ಮುಚ್ಯತೇ ।
ಮಹಾಕಾಶಸ್ಯಾಪಿ ಹೇತೋ ರ್ಹೃದಾಕಾಶಸ್ಯ ಮಧ್ಯಮೇ ॥ ೨೬ ॥

ಸುಧಾಸಾಗರಸಂವೀತರತ್ನದ್ವೀಪೇ ಸಕಲ್ಪಕೇ ।
ಮಾಣಿಕ್ಯಮಂಟಪೇ ಭದ್ರಪೀಠೇ ತೋರಣರಾಜಿತೇ ॥ ೨೭ ॥

ಪದ್ಮಪೀಠೋಪರಿಷ್ಟಾತ್ತು ನಿಷಣ್ಣಸ್ಯಾಂಬಿಕಾಪತೇಃ ।
ಪಾಶಾಂಕುಶಾಭಯವರಪಾಣಿಪದ್ಮವಿರಾಜಿತಾಂ ॥ ೨೮ ॥

ಸದಾ ಕಾರುಣ್ಯಸೌಂದರ್ಯಸಾಗರಸ್ಯ ಜಗತ್ಪ್ರಭೋಃ ।
ಕಾಂಚನಾಭಸ್ಯ ಕಾಮಾರೇ ರಂಕೇ ದೇವೀಂ ನಿವಾಸಿನೀಂ ॥ ೨೯ ॥

---

೨೫–೨೮ ಬಹಳ ಮಹಿಮೆಯುಳ್ಳ, ಸಚ್ಚಿದಾನಂದ ರೂಪದಿಂದ ಇರುವ ಗೌರೀದೇವಿಯು ಈ ಬೀಜಮಂತ್ರದಿಂದ ಧ್ಯಾನವಿಷಯವಾದ, ದೇವತೆಯಾಗಿರುವಳು. ಹ್ರಾಂ, ಹ್ರೀಂ ಎಂಬ ಇವೇ ಮೊದಲಾದ ಬೀಜಾಕ್ಷರಗಳಿಂದ ಅಂಗನ್ಯಾಸಗಳನ್ನು ಮಾಡಬೇಕು. ಈ ಮಂತ್ರವೂ ಒಂದು ಬೀಜಾಕ್ಷರವಾಗಿರುವುದು ಇನ್ನು ಮುಂದೆ ಧ್ಯಾನಮಾಡುವ ಕ್ರಮವನ್ನು ಹೇಳುತ್ತೇನೆ. ಮಹಾಕಾಶಕ್ಕೂ ಕಾರಣವಾದ, ಹೃದಯಾಕಾಶದ ಮಧ್ಯದಲ್ಲಿ, ಅಮೃತಸಮುದ್ರವನ್ನೂ, ಅದರ ಮಧ್ಯದಲ್ಲಿ ಕಲ್ಪವೃಕ್ಷಗಳಿಂದ ಕೂಡಿದ ರತ್ನದ್ವೀಪ, ಆ ದ್ವೀಪದಲ್ಲಿ ಮಾಣಿಕ್ಯಮಂಟಪ, ಆ ಮಂಟಪದ ಮಧ್ಯದಲ್ಲಿ ತೋರಣದಿಂದ ಬೆಳಗುತ್ತಿರುವ ಭದ್ರಪೀಠದಲ್ಲಿರುವ ಪದ್ಮಪೀಠದಲ್ಲಿ ಪರಮೇಶ್ವರನನ್ನು ಧ್ಯಾನಮಾಡಬೇಕು. ಆ ಪರಮೇಶ್ವರನು ಯಾವಾಗಲೂ ಹದಿನಾರು ವರ್ಷದ ಯೌವನವೂ, ಅದಕ್ಕೆ ತಕ್ಕ ಸೌಂದರ್ಯವೂ ಉಳ್ಳವನಾಗಿ ಚಿನ್ನದ ಕಾಂತಿಯುಳ್ಳವನಾಗಿರುವನು. ಆ ದೇವದೇವನು ಪಾಶ, ಅಂಕುಶ, ಅಭಯಹಸ್ತ, ವರದ ಹಸ್ತಗಳನ್ನು ಧರಿಸಿರುವನು.

೨೯-೩೫. ಆ ದೇವನ (ಉತ್ಸಂಗದಲ್ಲಿ) ತೊಡೆಯಮೇಲೆ ಕುಳಿತುಕೊಂಡಿರುವ ಗೌರೀದೇವಿಯು ಬಾಲಭಾವದಿಂದ ಇರುವ ಕೋಟಿ ಸೂರ್ಯರ ಕಾಂತಿಯನ್ನು ಧರಿಸಿ

ತರುಣಾರುಣಕೋಟ್ಯಾಭಾಂ ಕರುಣಾಮೃತಸಾಗರಾಂ ।
ತ್ರಿಣೇತ್ರಾಂ ದ್ವಿಭುಜಾಂ ಗೌರೀಂ ಪೀನೋರುಜಘನಸ್ತನಾಂ ॥ ೩೦ ॥

ಭುಜಾಭ್ಯಾಂ ದಕ್ಷವಾಮಾಭ್ಯಾಂ ದಧತೀಮರುಣಾಂಬುಜಂ ।
ಹೈಮಕುಂಭಂ ಸುಧಾಸಿಕ್ತಂ ಚಿಂತಾಮಣಿಸುಪೂಜಿತಂ ॥ ೩೧ ॥

ಕುಮಾರೌ ದಕ್ಷವಾಮಸ್ಥೌ ಗಜಾನನಷಡಾನನೌ ।
ಆಲೋಕ್ಯಾತ್ಯಂತಮುದಿತಾ ಮರುಣಾಂಬರಧಾರಿಣೀಂ ॥ ೩೨ ॥

ಗೌರೀಂ ಶಂಭೋರ್ಮೂರ್ತಿಮತೀಂ ಕರುಣಾಮಿತಿ ಚಿಂತಯ ।
ಧ್ಯಾತ್ವಾನೇನ ಪ್ರಕಾರೇಣ ಜಪ ತ್ವಂ ಸರ್ವ ಸಿದ್ಧಯೇ ॥ ೩೩ ॥

ಲಕ್ಷಮಾತ್ರೇಣ ಸಾಲೋಕ್ಯಂ ಸಾಮೀಪ್ಯಂ ಸ್ಯಾದ್ವಿಲಕ್ಷತಃ ।
ತ್ರಿಲಕ್ಷತಸ್ತು ಸಾರೂಪ್ಯಂ ಚತುರ್ಲಕ್ಷಜಪಾತ್ಸತೇ ॥ ೩೪ ॥

---

ಅಪಾರವಾದ ದಯೆಯಿಂದ ಕೂಡಿ, ಮೂರು ಕಣ್ಣುಗಳಿಂದಲೂ, ಎರಡು ಭುಜಗಳಿಂದಲೂ ಪ್ರಕಾಶಿಸುತ್ತಿರುವಳು. ಬಲಗಡೆಯ ಮತ್ತು ಎಡಗಡೆಯ ಹಸ್ತಗಳಿಂದ ಕೆಂಪು ತಾವರೆಯ ಹೂವು, ಚಿಂತಾಮಣಿ ರತ್ನದಿಂದ ಕೂಡಿದ ಚಿನ್ನದ ಅಮೃತಕಲಶ, ಇವುಗಳನ್ನು ಹಿಡಿದಿರುವಳು. ಕೆಂಪು ವಸ್ತ್ರವನ್ನು ಉಟ್ಟುಕೊಂಡು ತನ್ನ ಎಡ ಬಲದಲ್ಲಿರುವ ಗಜಾನನ ಮತ್ತು ಷಣ್ಮುಖರನ್ನು ನೋಡುತ್ತಾ ಸಂತೋಷದಿಂದ ಇರುವಳು. ಪರಮೇಶ್ವರನ ದಯೆಯು ಈ ಆಕಾರವನ್ನು ಹೊಂದಿ ಇರುವುದೆಂದು ಧ್ಯಾನಮಾಡತಕ್ಕದ್ದು. ಈ ಕ್ರಮದಿಂದ ಧ್ಯಾನಮಾಡುತ್ತಾ ಒಂದು ಲಕ್ಷ ಜಪವನ್ನು ನೀನು ಮಾಡಿದರೆ ಎಲ್ಲಾವಿಧವಾದ ಸಿದ್ಧಿಯುಂಟಾಗುವುದು. ಮತ್ತು ಸಾಲೋಕ್ಯ ಮೋಕ್ಷವು ಆಗುವುದು. ಈ ದೇವಿಯು ಎರಡುಲಕ್ಷ ಜಪ ಮಾಡಿದವರಿಗೆ ಸಾಮೀಪ್ಯವನ್ನೂ, ಮೂರು ಲಕ್ಷ ಜಪವನ್ನು ಮಾಡಿದವರಿಗೆ ಸಾರೂಪ್ಯವನ್ನೂ, ನಾಲ್ಕುಲಕ್ಷ ಜಪಮಾಡಿದವರಿಗೆ ಸಾಯುಜ್ಯವೆಂಬ ಮೋಕ್ಷವನ್ನೂ ಅನುಗ್ರಹಿಸುವಳು. ಗುರುವು ಈ ಬೀಜಮಂತ್ರವನ್ನು ಉಪದೇಶಮಾಡಿದಷ್ಟು ಮಾತ್ರದಿಂದಲೇ ಇವು ಎಲ್ಲಾ ವಿಧವಾದ ಸಿದ್ಧಿಯನ್ನೂ ಉಂಟುಮಾಡುವುದು.

ಸಾಯುಜ್ಯಾಖ್ಯಂ ಚ ಕೈವಲ್ಯಂ ಪ್ರಯಚ್ಛತಿ ಪರಾಂಬಿಕಾ ।
ಗುರೂಪದಿಷ್ಟಮಾತ್ರಂ ತದ್ಬೀಜಂ ಸರ್ವಾರ್ಥಸಿದ್ಧಿದಂ ॥ ೩೫ ॥

ತದ್ಬೀಜೇನೋಪಚಾರೈಶ್ಚ ಧ್ಯಾನಾದ್ಯೈಸ್ತಾಂ ಪ್ರಪೂಜಯ ।
ಜಪಾದ್ದಶಾಂಶಕ್ರಮತಃ ಸ್ವಾಹಾಂತೇನ ಚ ತರ್ಪಣಂ ॥ ೩೬ ॥

ಹೋಮಂ ಬ್ರಾಹ್ಮಣಭುಕ್ತಿಂ ಚ ಕುರು ಮಂತ್ರಸ್ಯ ಸಿದ್ಧಯೇ ।
ಇತಿ ಪುತ್ರ್ಯೈ ವಿರೂಪಾಕ್ಷಃ ಉಪದಿಶ್ಯ ಮಹಾಮನುಂ ॥ ೩೭ ॥

ಪುನಃ ಸಮಾಧಿಸಂಯುಕ್ತಸ್ತಾಭೂತ್ಪಾಷಾಣನಿಶ್ಚಲಃ ।
ತಥಾ ತಸ್ಯ ಸುತಾ ಗೌರೀ ಚಿತ್ತಶುದ್ಧಿಸಮನ್ವಿತಾ ॥ ೩೮ ॥

ಗೌರೀಬೀಜಂ ಮಹಾಮಂತ್ರಂ ಸಾಧಯಾಮಾಸ ಸರ್ವಥಾ ।
ಅಥಾಷ್ಟವರ್ಷದೇಶೀಯಾಂ ಕನ್ಯಾಮಾಲೋಕ್ಯ ಸ ದ್ವಿಜಃ ॥ ೩೯ ॥

---

೩೫–೪೦. ಈ ಬೀಜ ಮಂತ್ರದಿಂದಲೇ ಧ್ಯಾನವೇ ಮೊದಲಾದ ಷೋಡಶೋಪಚಾರಪೂಜೆಗಳನ್ನು ಮಾಡತಕ್ಕದ್ದು. ಆದ್ದರಿಂದ ನೀನು ಈ ಪ್ರಕಾರದಿಂದಲೇ ದೇವಿಯನ್ನು ಪೂಜಿಸು. ಈ ಮಂತ್ರವನ್ನು ಜಪಮಾಡಿದ ಸಂಖ್ಯೆಯ ಹತ್ತನೇ ಒಂದು ಭಾಗದಷ್ಟು ಸಂಖ್ಯೆಯುಳ್ಳ ತರ್ಪಣವನ್ನು ಬೀಜಮಂತ್ರಕ್ಕೆ ಸ್ವಾಹಾ ಪದವನ್ನು ಸೇರಿಸಿ ಆಚರಿಸಬೇಕು. ಹೋಮವನ್ನೂ, ಬ್ರಾಹ್ಮಣರಿಗೆ ಅನ್ನದಾನವನ್ನೂ ಮಂತ್ರ ಸಿದ್ಧಿಯಾಗುವುದಕ್ಕಾಗಿ ಮಾಡಬೇಕು. ವಿರೂಪಾಕ್ಷನು ತನ್ನ ಮಗಳಿಗೆ ಗೌರೀಮಂತ್ರದ ಉಪಾಸನಾ ಕ್ರಮವನ್ನು ಹೀಗೆ ಹೇಳಿದನು. ಅನಂತರದಲ್ಲಿ ಅವನು ಧ್ಯಾನಾರೂಢನಾಗಿ ಕಲ್ಲಿನಂತೆ ಸುಮ್ಮನಿದ್ದನು. ಅವನ ಮಗಳಾದ ಗೌರಿಯು ಚಿತ್ತ ಶುದ್ಧಿಯುಳ್ಳವಳಾಗಿ ತಾನು ಉಪದೇಶವನ್ನು ಹೊಂದಿದ ಗೌರೀಮಹಾಮಂತ್ರವನ್ನು ಜಪಮಾಡುತ್ತಾ ಯಾವಾಗಲೂ ಧ್ಯಾನಮಾಡುತ್ತಿದ್ದಳು. ಹೀಗೆ ಇರುವಲ್ಲಿ ಅವಳಿಗೆ ಎಂಟು ವರ್ಷ ವಯಸ್ಸಾಯಿತು. ಅವಳ ತಂದೆಯು ಇವಳನ್ನು ಯಾರಿಗೆ ಕೊಟ್ಟು ಮದುವೆ ಮಾಡಲಿ, ಎಂದು ಯೋಚಿಸುತ್ತಿದ್ದನು. ಅವನು ಯೋಚಿಸುತ್ತಿರುವ

ಕಸ್ಮೈ ದೇಯೋಯಮಜ್ಞಾತ್ವಾ ಬಹುಚಿಂತಾಸಮನ್ವಿತಃ ।
ಯಃ ಕಶ್ಚಿದಾಗತಸ್ತತ್ರ ಬ್ರಹ್ಮಚಾರೀ ಯದೃಚ್ಛಯಾ ॥ ೪೦ ॥

ತಸ್ಮೈ ದಾತುಂ ನಿಶ್ಚಿನೋತಿ ಕನ್ಯಾಂ ಸುಂದರರೂಪಿಣೀ ।
ತತಃ ಕದಾಚಿತ್ ಭಿಕ್ಷಾರ್ಥಂ ಬ್ರಹ್ಮಚಾರೀ ಚ ಸುಸ್ವರೈಃ ॥ ೪೧ ॥

ರಮ್ಯಮುಚ್ಚಾರಣಂ ಕುರ್ವನ್ನಾಮ್ನಾಯಾನ್ ತದ್ಗೃಹಂ ಗತಃ ।
ದ್ವಿಜಸ್ತು ತಂ ನಿರೀಕ್ಷ್ಯಾಥ ರೂಪಲಾವಣ್ಯಮೋಹಿತಃ ॥ ೪೨ ॥

ಅಪೃಷ್ಟ್ವಾ ಕುಲಗೋತ್ರಾದೀನ್ ಕನ್ಯಕಾಂ ಸೋದಕಾಂ ದದೌ ।
ತಸ್ಯ ಜಾಯಾ ಬಾಂಧವಾಶ್ಚ ಕ್ರೋಧಯುಕ್ತಾಸ್ತು ಸಂಗತಾಃ ॥ ೪೩ ॥

ಭರ್ತ್ಸಯಂತಿ ವಿರೂಪಾಕ್ಷಂ ತಾಡ್ಯಾಂಗುಲ್ಯಾಕಪೋಲಕಂ ।
ಅಜ್ಞಾಯಾ ಸ್ಯಾನ್ವವಾಯಾದೀನ್ ಕಿಮಸ್ಮೈ ಕನ್ಯಕಾ ಮುದಾಃ ॥ ೪೪ ॥

---

ಕಾಲಕ್ಕೆ ಸರಿಯಾಗಿ ಒಬ್ಬ ಬ್ರಹ್ಮಚಾರಿಯು ಅವನ ಹತ್ತಿರಕ್ಕೆ ಬಂದನು. ಸುಂದರನಾಗಿರುವ ಅವನಿಗೆ, ಮಗಳನ್ನು ದಾನಮಾಡಬೇಕೆಂದು ವಿರೂಪಾಕ್ಷನು ನಿಶ್ಚಯ ಮಾಡಿದನು.

೪೧–೪೩. ಕೆಲವು ದಿನಗಳು ಕಳೆದನಂತರ ಇನ್ನೊಬ್ಬ ಬ್ರಹ್ಮಚಾರಿಯು ಬಹಳ ಚೆನ್ನಾಗಿ ವೇದಮಂತ್ರಗಳನ್ನು ಹೇಳುತ್ತಾ ಈ ವಿರೂಪಾಕ್ಷನ ಮನೆಗೆ ಭಿಕ್ಷೆಗಾಗಿ ಬಂದನು. ಅವನನ್ನು ನೋಡಿ ಆ ಬ್ರಾಹ್ಮಣನು, ಅವನು ರೂಪ ಲಾವಣ್ಯಗಳಿಂದ ಕೂಡಿರುವ ಕಾರಣ ಅವನಲ್ಲಿ ಮೋಹಗೊಂಡು ಅವನ ಕುಲ, ಗೋತ್ರಗಳು ಯಾವುದನ್ನೂ ವಿಚಾರಮಾಡದೆ ಅವನಿಗೆ ತನ್ನ ಮಗಳಾದ ಗೌರಿಯನ್ನು ಧಾರೆ ಎರೆದು ಕೊಟ್ಟನು. ಇದನ್ನು ನೋಡಿ ವಿರೂಪಾಕ್ಷನ ಹೆಂಡತಿಯೂ ಮತ್ತು ಬಂಧುಗಳೂ ಒಟ್ಟಿಗೆ ಸೇರಿಕೊಂಡು ಬಹಳ ಕೋಪವುಳ್ಳವರಾಗಿ ವಿರೂಪಾಕ್ಷನಿಗೆ ಕೆನ್ನೆಗೆ ಹೊಡೆದು ಬೈದರು.

೪೪–೪೬, "ನೀನು ವರನ ಕುಲ ಗೋತ್ರಗಳನ್ನು ವಿಚಾರಮಾಡದೆ ಇವನಿಗೆ ಯಾತಕ್ಕೆ ಮಗಳನ್ನು ದಾನಮಾಡಿದೆ. ಗೃಹಸ್ಥರ ಮಧ್ಯದಲ್ಲಿ

ಗೃಹಸ್ಥಾನಾಂ ತು ಮಧ್ಯೇ ತ್ವಂ ಮೂಢೋಽಸೀತಿ ಪುನಃ ಪುನಃ ।
ರೂಪಲಾವಣ್ಯಭಾಗ್ಯಾದ್ವಾ ಸುಗೋತ್ರಾದ್ವಾ ಸುವಿದ್ಯಯಾ ॥ ೪೫ ॥

ಸುಂದರೇಶಧಿಯಾ ವಾಥ ಭ್ರಾಂತ್ಯಾ ವಾ ಕಿಮುದಾ ಸ್ಸುತಾಂ ।
ಇತ್ಯುಕ್ತ್ವಾ ಪೃಷ್ಟವಂತಸ್ತೇ ವಂಶಾದೀ ನ್ಬ್ರಹ್ಮಚಾರಿಣಃ ॥ ೪೬ ॥

ಗೋತ್ರಂ ಸೂತ್ರಂ ಚ ನಕ್ಷತ್ರಮೂರ್ಧ್ವಪುಂಡ್ರಕ್ರಮೇಣ ಸಃ ।
ಸ್ವಕೀಯಂ ಬ್ರಹ್ಮಚಾರೀ ಚ ವದತ್ಯತ್ಯಂತವಿಸ್ಮಿತಃ ॥ ೪೭ ॥

ತೇ ನಿರೂಪ್ಯಾವಿರುದ್ಧತ್ವಂ ಮುದಿತಾ ಬಾಂಧವಾ ಸ್ತದಾ ।
ಕಿಂಚಿತ್ಸ್ವೇದಂ ಚ ಸಂಪ್ರಾಪು ರೂರ್ಧ್ವಪುಂಡ್ರಸ್ಯ ಧಾರಣಾತ್ ॥ ೪೮ ॥

ಸನ್ನಿಪಾತೇ ಗುಣಾನಾಂ ತು ದೋಷ ಏಕ ಸ್ತಿರೋದಧೇ ।
ತೇ ಸರ್ವ ಇತಿ ನಿಶ್ಚಿತ್ಯ ವ್ಯಧು ರ್ವೈವಾಹಿಕೀಂ ಕ್ರಿಯಾಂ ॥ ೪೯ ॥

---

ನೀನು ಬಹಳ ದಡ್ಡನಾಗಿ ಇದ್ದೀಯೆ. ರೂಪಲಾವಣ್ಯ, ಉತ್ತಮವಾದ ಗೋತ್ರ, ಸರಿಯಾದ ವಿದ್ಯಾ, ಇವುಗಳ ಕೃಪೆಯಿಂದಲೋ, ಅಥವಾ ಸುಂದರೇಶ್ವರ ಎಂಬ ಭ್ರಾಂತಿಯಿಂದಲೋ, ಅಥವಾ ಆ ಹುಡುಗನ ಅದೃಷ್ಟಕ್ಕೆ ಭ್ರಾಂತನಾಗಿಯೋ, ನೀನು ಅವನಿಗೆ ಕನ್ಯಾದಾನವನ್ನು ಮಾಡಿರುವೆಯಾ ಏನು ಹೇಳು" ಎಂದು ಅವರು ವಿರೂಪಾಕ್ಷನನ್ನು ಬೆದರಿಸಿದರು. ಅನಂತರದಲ್ಲಿ ಅವರೆಲ್ಲರೂ ಆ ಮದುವಣಿಗನ ವಂಶವೇ ಮೊದಲಾದುವುಗಳನ್ನು ವಿಚಾರಿಸಿದರು.

೪೭–೫೨. ಆ ಮದುವಣಿಗನು ಆಶ್ಚರ್ಯದಿಂದ ತನ್ನ ಗೋತ್ರ, ಸೂತ್ರ, ನಕ್ಷತ್ರ ಊರ್ಧ್ವಪುಂಡ್ರವನ್ನು ಹಾಕುವುದಕ್ಕೆ ಕಾರಣ, ಇವುಗಳನ್ನು ಕ್ರಮವಾಗಿ ಎಲ್ಲವನ್ನೂ ಹೇಳಿದನು. ಅವರು ಎಲ್ಲವನ್ನೂ ಕೇಳಿ ಎಲ್ಲವೂ ಸರಿಯಾಗಿರುವುದು" ಎಂದು ಸಂತೋಷಪಟ್ಟರು. ಆದರೆ ಅವನು ಊರ್ಧ್ವಪುಂಡ್ರ (ನೇರ ಮುಖವಾಗಿ ನಾಮ ಹಾಕುವುದು) ವನ್ನು ಧರಿಸಿರುವ ವಿಷಯದಲ್ಲಿ ಖಿನ್ನರಾದರು. ಆದರೆ ಅವನಿಗೆ ಇರುವ ಗುಣಗಳ ಸಮುದಾಯದಲ್ಲಿ ಅದು ದೋಷವಾಗಿ ಕಾಣಿಸಲಿಲ್ಲ. ಅನಂತರದಲ್ಲಿ ಅವರೆಲ್ಲರೂ ಸೇರಿ ವಿವಾಹವನ್ನು ಕ್ರಮವಾಗಿ ನೆರವೇರಿಸಿದರು. ವಿರೂಪಾಕ್ಷನು

ಶ್ರೀಮತ್ತದ್ಯೌತಕಂ ಭೂರಿ ಧನಂ ಪುತ್ರ್ಯೈ ದದೌ ದ್ವಿಜಃ ।
ತ ದ್ಧನಂ ಚ ಸಮಾದಾಯ ಸಂಪ್ರೀತ ಸ್ಸದ್ವಿಜಾತ್ಮಜಃ ॥ ೫೦ ॥

ಪಿತ್ರೋ ಸ್ಸಮೀಪಮಗಮ ದ್ಬಹುಬಂಧುಸಮೇತಯೋಃ ।
ಪುತ್ರಂ ದೇಶಾಂತರಗತಂ ಕೃತೋದ್ವಾಹಂ ಸಮಾಗತಂ ॥ ೫೧ ॥

ದೃಷ್ಟ್ವಾ ಮುಮುದಿರೇ ಸರ್ವೇ ಪಿತ್ರಾದ್ಯಾ ಬಾಂಧವಾ ಭೃಶಂ
ಶಿವಭಕ್ತಸುತೇ ತ್ಯುಕ್ತ್ವಾ ಶಶ್ವ್ರಾ ನ್ನೈವಾದೃತಾ ಸ್ನುಷಾ ॥ ೫೨ ॥

ನೈವಾಭೂತ್ ವಾಙ್ಮನಃ ಕಾಯೈ ಸ್ಸಂಗೋ ಸ್ಯಾಂ ಬ್ರಹ್ಮಚಾರಿಣಃ ।
ಕ್ಷಾರ್ಥಂ ತದ್ಗೃಹಂ ಪ್ರಾಪ್ತಾ ವೈಷ್ಣವಾ ಏವ ನೇತರೇ ॥ ೫೩ ॥

ಶಿವಭಕ್ತಾಯ ವಿಪ್ರಾಯ ಕದಾ ಭಿಕ್ಷಾಂ ದದಾಮ್ಯಹಂ ।
ಇತಿ ಸಂಚಿಂತ್ಯ ವಸತೀ ಸ್ನುಷಾ ಗೌರ್ಯಾ ಅನುಗ್ರಹಾತ್ ॥ ೫೪ ॥

---

ಮಗಳಿಗೆ ಬಹಳ ದ್ರವ್ಯವನ್ನು ಕೊಟ್ಟನು. ಅದೆಲ್ಲವನ್ನೂ ತೆಗೆದುಕೊಂಡು ಅವನು ಬಹಳ ಬಂಧುಗಳೊಡನೆ ಇರುವ ತನ್ನ ತಾಯಿ ತಂದೆಗಳ ಹತ್ತಿರಕ್ಕೆ ಹೋದನು. ದೇಶಾಂತರಕ್ಕೆ ಹೋಗಿದ್ದ ಮಗನು ವಿವಾಹವನ್ನು ಮಾಡಿಕೊಂಡು ಬಂದಿರುವುದನ್ನು ನೋಡಿ ಅವರು ಸಂತೋಷಪಟ್ಟರು. ಆದರೆ ಅತ್ತೆಯು ಮಾತ್ರ ಸೊಸೆಯು ಶಿವಭಕ್ತರ ಮಗಳು ಎಂದು ಆದರಿಸಲಿಲ್ಲ.

೫೩–೫೭. ವಿವಾಹವನ್ನು ಮಾಡಿಕೊಂಡ ಆ ಹುಡುಗನ ಸಹವಾಸವು ಈ ಗೌರಿಗೆ ವಾಕ್ಕು, ಮನಸ್ಸು, ಶರೀರ, ಇವುಗಳಲ್ಲಿ ಯಾವ ರೀತಿಯಿಂದಲೂ ಆಗಲಿಲ್ಲ. ಅವರ ಮನೆಗೆ ವೈಷ್ಣವರೇ ಭಿಕ್ಷಕ್ಕಾಗಿ ಬರುತ್ತಿದರು. ಆ ಮನೆಗೆ ಶಿವಭಕ್ತರಾದವರು ಬಂದಲ್ಲಿ ಅವರಿಗೆ ನಾನು ಯಾವಾಗ ಭಿಕ್ಷೆಯನ್ನು ಹಾಕುವೆನು, ಎಂದು ಗೌರೀದೇವಿಯನ್ನು ಧ್ಯಾನಮಾಡುತ್ತಿದ್ದ ಸೊಸೆಯಾದ ಗೌರಿಯು ಪ್ರತಿದಿನವೂ ಯೋಚಿಸುತ್ತಾ ವಾಸಮಾಡುತ್ತಿದ್ದಳು. ಹೀಗೆ ಇರುವಾಗ ಅವಳ ಅತ್ತೆ ಮಾವ ಮೊದಲಾದವರೆಲ್ಲರೂ ಯಾವುದೋ ಒಂದು ವಿವಾಹಕ್ಕಾಗಿ ಬೇರೆಯ ಗ್ರಾಮಕ್ಕೆ ಪ್ರಯಾಣ

ಜಿಹ್ವಾಗ್ರೇ ವರ್ತತೇ ಯಸ್ಯಾ ಗೌರೀಬೀಜಂ ನಿರಂತರಂ ।
ಸಪುತ್ರೌ ಬಾಂಧವೌ ಶ್ವಶ್ರೂಶ್ವಶುರೌ ಗ್ರಾಮ ಮಂತಿಕಂ ॥ ೫೭ ॥

ಕಲ್ಯಾಣಾರ್ಥಂ ಗತೌ ತ್ಯಕ್ತ್ವಾ ಶಿವಭಕ್ತಾತ್ಮಜಾಂ ವಧೂಂ ।
ಅತ್ರಾಂತರೇ ಸುಂದರೇಶೋ ದ್ವಿಜವೇಷಧರೋಽಂತಿಕಂ ॥ ೫೬ ॥

ಸ್ನುಷಾಯಾಃ ಪ್ರಾಪ್ಯ ಕಲ್ಯಾಣಿ ಮುಷ್ಟಿಂ ದೇಹೀತಿ ಚೋಕ್ತವಾನ್ ।
ಉದ್ಧೂಲನಂ ತ್ರಿಪುಂಡ್ರಂ ಚ ಧಾರಿಣಂ ಶುಭ್ರವಾಸಸಂ ॥ ೫೭ ॥

ಅಶೀತಿವೃದ್ಧಮತುಲಮುಜ್ವಲಬ್ರಹ್ಮತೇಜಸಂ ।
ಆಲೋಕ್ಯ ಸಹಸಾ ನತ್ವಾ ಪ್ರೀತ್ಯಾ ಪ್ರತ್ಯುತ್ತರಂ ದದೌ ॥ ೫೮ ॥

ಸ್ವಾಮಿರ್ನಿಶ್ವಶ್ರ್ವಾರ್ಗತಾ ಗ್ರಾಮಂ ಪಿಧಾಯ ದ್ವಾರಕಂ ದೃಢಂ ।
ಮಂದಿರೇಽಸ್ಮಿನ್ತಂಡುಲಾದ್ಯಂ ಬಹಿಷ್ಕನ್ನೈವ ವಿದ್ಯತೇ ॥ ೫೯ ॥

---

ಮಾಡಿದರು. ಅವರು ಈ ಗೌರಿಯನ್ನು ಮಾತ್ರ ಸಂಗಡ ಕರೆದುಕೊಂಡು ಹೋಗ ಲಿಲ್ಲ. ಇದಕ್ಕೆ ಇವಳು ಶಿವಭಕ್ತರ ಮಗಳೆಂಬುದೇ ಕಾರಣವಾಗಿತ್ತು. ಈ ಸಮ ಯಕ್ಕೆ ಸರಿಯಾಗಿ ಸುಂದರೇಶ್ವರನು ಬ್ರಾಹ್ಮಣನ ಆಕಾರದಿಂದ ಆ ಮನೆಗೆ ಬಂದು ಎಲೈ ಮಂಗಳಕರಳೇ ನನಗೆ ಭಿಕ್ಷವನ್ನು ಕೊಡು " ಎಂದು ಬೇಡಿದನು.

೫೮–೫೯. ಅವನು ಎಂಭತ್ತು ವರ್ಷದ ಮುದುಕನಾಗಿದ್ದನು. ಬಹಳ ಕಾಂತಿಯುಳ್ಳವನಾಗಿ ಭಸ್ಮೋದ್ಧೂಳನೆಯನ್ನು ಮಾಡಿಕೊಂಡು ಶುಭ್ರವಾದ ವಸ್ತ್ರ ವನ್ನು ಧರಿಸಿದ್ದನು. ಬ್ರಹ್ಮ ತೇಜಸ್ಸು ಅವನಲ್ಲಿ ಬಹಳ ಚೆನ್ನಾಗಿ ಪ್ರಕಾಶಿಸುತ್ತಿತ್ತು ಆಗ ಗೌರಿಯು ಅವನನ್ನು ನೋಡಿದಳು. ಅವನಿಗೆ ಬೇಗ ನಮಸ್ಕಾರ ಮಾಡಿದಳು. " ಎಲೈ ಸ್ವಾಮಿಯೆ, ನನ್ನ ಅತ್ತೆಯು ಎಲ್ಲಕ್ಕೂ ಬೀಗವನ್ನು ಗಟ್ಟಿಯಾಗಿ ಹಾಕಿ ಭದ್ರಪಡಿಸಿಕೊಂಡು ಗ್ರಾಮಾಂತರಕ್ಕೆ ಹೋಗಿರುವಳು. ಆದ್ದರಿಂದ ಮನೆಯಲ್ಲಿ ಯಾವುದೂ ನನಗೆ ಸಿಕ್ಕುವುದಿಲ್ಲ. ಎಲೈ ಪ್ರಭುವೇ, ಹೊರಗಡೆ ಯಾವ ಪದಾರ್ಥವೂ ಭಿಕ್ಷವನ್ನು ಹಾಕುವಷ್ಟು ಇಲ್ಲವಾದ್ದರಿಂದ ನೀನು ಮುಂದಕ್ಕೆ ಹೋಗು" ಎಂದು ಉತ್ತರವನ್ನು ಹೇಳಿದಳು.

ಮನ್ನಾಥ ಕಾರಯಿಷ್ಯಾಮಿ ಕಿಂ ಕಾರ್ಯಂ ಪ್ರೇಷಯ ಪ್ರಭೋ ।
ಏವಮುಕ್ತೇ ದ್ವಿಜಸುತಾಂ ಪ್ರಾಹ ಬ್ರಾಹ್ಮಣಪುಂಗವಃ　　　　॥ ೬೦ ॥

ಆಸೀಚ್ಚ ವಿವೃತದ್ವಾರಂ ತ್ವಂ ಪ್ರಾಪ್ಯಾ ವರಕಂ ಮುದಾ ।
ತಂಡುಲಂ ಮುದ್ಗಭಿನ್ನಾದ್ಯಂ ಸಮಾದಾಯ ಪಚಾಶು ಚ　　　　॥ ೬೧ ॥

ತಥಾ ಕರಿಷ್ಯ ಇತ್ಯುಕ್ತ್ವಾ ಜವಾದ್ದ್ವಾರಪಥಂ ಗತಾ ।
ತಂ ದೃಷ್ಟ್ವೋದ್ಘಾಟಿತಂ ದ್ವಾರಂ ಭೃಶಂ ಪ್ರೀತಿಸಮನ್ವಿತಾ　　　　॥ ೬೨ ॥

ತಂಡುಲಂ ಮುದ್ಗಭಿನ್ನಂ ಚ ದುಗ್ಧಂ ದಧಿ ಚ ಶರ್ಕರಾ ।
ಆಜ್ಯಂ ಫಲಾನಿ ಪಕ್ವಾನಿ ಸಮಾದಾಯಾಪಚತ್ಕ್ಷಣಾತ್　　　　॥ ೬೩ ॥

ರಮ್ಯೇ ಚ ಕದಲೀಪತ್ರೇ ನಿಧಾಯಾನ್ನಂ ಸುಸಂಸ್ಕೃತಂ ।
ಭೋಜಯಾಮಾಸ ತಂ ವೃದ್ಧಂ ಕ್ಷೀರಾಜ್ಯದಧಿಸಂಯುತಂ　　　　॥ ೬೪ ॥

ಭೋಜನಾನಂತರಂ ವಿಪ್ರಃ ಷೋಡಶಾಬ್ದಾಕೃತಿ ರ್ಬಭೌ ।
ಚಿತ್ರ ಮೇತತ್ಸಮಾಲೋಕ್ಯ ಕನ್ಯಕಾ ಕಂಪಿತಾ ಸ್ಥಿತಾ　　　　॥ ೬೫ ॥

---

೬೦–೬೫. ಆಗ ಆ ಬ್ರಾಹ್ಮಣನು "ಉಗ್ರಾಣದ ಬಾಗಿಲು ತೆರೆದಿರುವುದು ನೀನು ನೋಡು, ಅದರಲ್ಲಿ ಇರುವ ಅಕ್ಕಿ, ಹೆಸರುಬೇಳೆ, ಮೊದಲಾದವುಗಳನ್ನು ತೆಗೆದುಕೊಂಡು ಬೇಗನೆ ಅಡಿಗೆಯನ್ನು ಮಾಡು" ಎಂದು ಗೌರಿಗೆ ಹೇಳಿದನು. ಅವನ ಮಾತನ್ನು ಕೇಳಿ ಆ ಗೌರಿಯು ಹಾಗೆಯೇ ಮಾಡುತ್ತೇನೆ, ಎಂದು ಹೇಳಿ ಬೇಗನೆ ಉಗ್ರಾಣದ ಮನೆಯ ಬಾಗಿಲಿಗೆ ಹೋದಳು. ಬಾಗಿಲಿನ ಬೀಗವು ತೆಗೆದು ಕೊಂಡು ಇದ್ದದ್ದರಿಂದ ಅಕ್ಕಿ, ಹಾಲು, ಸಕ್ಕರೆ, ತುಪ್ಪ ಹೆಸರುಕಾಳು, ಇವೇ ಮೊದಲಾದ ಪದಾರ್ಥಗಳನ್ನು ತೆಗೆದುಕೊಂಡು ಆ ಕ್ಷಣದಲ್ಲಿ ಅಡಿಗೆಯನ್ನು ಮಾಡಿ ಆ ಬ್ರಾಹ್ಮಣನ ಇಚ್ಛಾನುಸಾರವಾಗಿ ಉತ್ತಮವಾದ ಅನ್ನವನ್ನು ಬಾಳೆಯ ಎಲೆಯಲ್ಲಿ ಊಟಕ್ಕೆ ಬಡಿಸಿದಳು. ಆ ಬ್ರಾಹ್ಮಣನು ಊಟವಾದಮೇಲೆ ಹದಿನಾರು ವರ್ಷದ ಹುಡುಗನಾದನು. ಈ ಆಶ್ಚರ್ಯವನ್ನು ನೋಡಿ ಅವಳು ನಡುಗುತ್ತಾ ನಿಂತಳು.

ಅಸ್ಮಿನ್ನವಸರೇ ಶ್ವಶ್ರೂ ದ್ವಾರದೇಶ ಮುಪಾಗತಾ ।
ಕವಾಟೋದ್ಘಾಟನಂ ಸದ್ಯಃ ಕುರು ಕುರ್ವಿತಿ ಸಾಽವದತ್ ॥ ೬೬ ॥

ಶ್ವಶ್ರೂವಾಕ್ಯಂ ಸಮಾಕರ್ಣ್ಯ ಯುವಾನಂ ತಂ ವಿಲೋಕ್ಯ ಚ ।
ಭೀತ್ಯಾ ನಿಶ್ಚಲತಾಂ ಪ್ರಾಪ ಚಿತ್ರಕೇವ ದ್ವಿಜಾತ್ಮಜಾ ॥ ೬೭ ॥

ಬಲಾತ್ಕಾರೇಣ ಸಾ ಶ್ವಶ್ರೂರರ್ಗಲಂ ಪಾದಘಾತತಃ ।
ಭಗ್ನೀಕೃತ್ಯ ಕವಾಟಂ ಚ ವಿವೃತಂ ಸಹಸಾ ವ್ಯಧಾತ್ ॥ ೬೮ ॥

ತದಾ ತ್ಯಕ್ತ್ವಾ ಯೌವನಂ ಚ ಶೈಶವಂ ಪರಿಗೃಹ್ಯ ಚ ।
ಸ್ವಲ್ಪತಲ್ಪಗತೋ ಭೂತ್ವಾ ಮನೋಹರವಪುರ್ಧರಃ ॥ ೬೯ ॥

ನಿಧಾಯ ಪಾಣಿಯುಗಲಾತ್ ಪಾದಾಂಗುಷ್ಠಂ ನಿಜಾನನೇ ।
ದ್ವಿಜಾತ್ಮಜಾಮುಖಂ ವೀಕ್ಷ್ಯ ಮಂದಸ್ಮಿತ ಮಥಾ ಕರೋತ್ ॥ ೭೦ ॥

ಶ್ವಶ್ರೂಃ ಕ್ರುದ್ಧಾ ಪ್ರಚ್ಛತಿ ಸ್ಮ ಕಸ್ಯಾಯಂ ತನಯಃ ಸ್ನುಷೇ ।
ಸಾ ದೇವದತ್ತ ಇತಿ ಚ ದದೌ ಪ್ರತ್ಯುತ್ತರಂ ಮುದಾ ॥ ೭೧ ॥

---

೬೬-೬೮. ಅವನು ಹೀಗೆ ಇರುವ ವೇಳೆಗೆ ಸರಿಯಾಗಿ ವಿವಾಹಕ್ಕಾಗಿ ಗ್ರಾಮಾಂತರಕ್ಕೆ ಹೋಗಿದ್ದ ಅತ್ತೆಯು ಬಂದಳು. ಅವಳು ಬೇಗನೆ ಬಾಗಿಲನ್ನು ತೆಗಿ ಎಂದು ಸೊಸೆಯನ್ನು ಕೂಗಿದಳು. ಅತ್ತೆಯ ಮಾತನ್ನು ಕೇಳುತ್ತಿರುವ ಗೌರಿಗೆ ಗಂಡನಲ್ಲದೆ ಇರುವ ಬೇರೆಯವನು ತನ್ನ ಹತ್ತಿರ ಇರುವುದರಿಂದ ಬಹಳ ಭಯವು ಉಂಟಾಯಿತು. ಅದರಿಂದ ಅವಳಿಗೆ ಏನು ಮಾಡುವುದಕ್ಕೂ ತೋರದೆ ಸುಮ್ಮನೆ ನಿಂತುಬಿಟ್ಟಳು. ಬಾಗಿಲಿನಲ್ಲಿ ಇದ್ದ ಅತ್ತೆಯು ಮಾತ್ರ ಬಾಗಿಲು ತೆಗೆಯದಿರುವುದ ರಿಂದ ಬಲಾತ್ಕಾರವಾಗಿ ಬಾಗಿಲಿಗೆ ಹಾಕಿದ್ದ ಅಗಣಿಯನ್ನು ಕಾಲಿನಿಂದ ಒದ್ದು ಕೊಂಡುಬಾಗಿಲನ್ನು ದೊಡ್ಡದಾಗಿ ತೆರದಳು.

೬೯-೭೧. ಆಗ ಸುಂದರೇಶ್ವರನು ಹದಿನಾರು ವರ್ಷದ ಹುಡುಗನ ಆಕಾರಕ್ಕೆ ಬದಲಾಗಿ ಚಿಕ್ಕದಾದ ಹಾಸಿಗೆಯಲ್ಲಿ ಮಲಗಲು ಯೋಗ್ಯವಾದ ಸಣ್ಣ ಮಗುವಾಗಿ ಕಾಲಿನ ಹೆಬ್ಬೆರಳನ್ನು ಬಾಯಿನಲ್ಲಿ ಇರಿಸಿಕೊಂಡು ಆ ಗೌರಿಯ ಮುಖವನ್ನು ನೋಡಿ

ಶ್ರೀದೇವೀತಿ ವಧೂಃ ಕಾಚಿದಿಮಂ ಪಶ್ಯೇತಿ ಸತ್ವರಂ ।
ಸ್ವಲ್ಪತಲ್ಪೇ ನಿಧಾಯೈವಂ ವ್ರಜತಿಸ್ಮ ಸಭರ್ತೃಕಾ ॥ ೭೨ ॥

ಅನ್ಯದೀಯಂ ಶಿಶುಂ ಕಿಂ ತ್ವಂ ಪಶ್ಯಸೀತಿ ಪ್ರಭರ್ತ್ಸ್ಯ ತಾಂ ।
ತಸ್ಯಾ ಹಸ್ತಗತಂ ಕೃತ್ವಾ ತಂ ಶಿಶುಂ ಸುಮನೋಹರಂ ॥ ೭೩ ॥

ಚಪೇಟೇನ ವಟುಂ ತಸ್ಯ ದೃಢಂ ಬಧ್ವಾತಿವೇಗತಃ ।
ಶಿಶುನಾ ಚ ಸ್ನುಷಾಂ ಶ್ವಶ್ರೂಶ್ಚಿಕ್ಷೇಪಾಂಕಣತೋ ಬಹಿಃ ॥ ೭೪ ॥

ನಾತ್ರಾ ಗಂತವ್ಯ ಮಿತ್ಯುಕ್ತ್ವಾ ಪಿಧಾಯ ದ್ವಾರಕಂ ದೃಢಂ ।
ಗೃಹಮಧ್ಯ ಮನುಪ್ರಾಪ್ಯ ಸುಖೇನಾಸ್ತೇ ತಯಾ ವಿನಾ ॥ ೭೫ ॥

ಸ್ವಹಸ್ತಸ್ಥಶಿಶೋರ್ವಕ್ತ್ರ ಮಾಲೋಕ್ಯಾತ್ಯಂತಸುಂದರಂ ।
ಗೌರೀಬೀಜಂ ಹೃದಿ ಧ್ಯಾತ್ವಾ ತಸ್ಥೌ ವೀಧ್ಯಾಂ ಸುದುಃಖಿತಾ ॥ ೭೬ ॥

---

ನಗುತ್ತಿದ್ದನು. ಅದನ್ನು ನೋಡಿ ಅತ್ತೆಯು ಈ ಮಗುವು ಯಾರದ್ದು ? ಎಂದು ಸೊಸೆಯಾದ ಗೌರಿಯನ್ನು ಪ್ರಶ್ನೆ ಮಾಡಿದಳು. ಕೋಪದಿಂದ ಅತ್ತೆಯು ಕೇಳಿದ ಪ್ರಶ್ನೆಗೆ ಸೊಸೆಯು ಶ್ರೀದೇವಿಯೆಂಬುವಳು ಗಂಡನೊಡನೆ ಇಲ್ಲಿಗೆ ಬಂದಿದ್ದಳು. ಅವಳು ಈ ಮಗುವನ್ನು ನೋಡು ಎಂದು ಈ ಮಗುವನ್ನು ಇಲ್ಲಿ ಮಲಗಿಸಿ ಹೊರಟು ಹೋದಳು. ಆದ್ದರಿಂದ ದೇವನು ಈ ಮಗುವನ್ನು ಕೊಟ್ಟಿರುವನು. ಎಂದು ಉತ್ತರವನ್ನು ಹೇಳಿದಳು.

೭೩-೭೫. ಆಗ ಅತ್ತೆಯು ಇನ್ನೊಬ್ಬರ ಮಗುವನ್ನು ನೀನು ಯಾತಕ್ಕೆ ರಕ್ಷಿಸಬೇಕು. ಎಂದು ಅವಳನ್ನು ಬೆದರಿಸಿ ಸುಂದರವಾದ ಆ ಮಗುವನ್ನು ಅವಳ ಕೈಗೆ ಕೊಟ್ಟು ಆ ಮಗುವಿನೊಡನೆ ಅವಳನ್ನು ಮನೆಯಿಂದ ಹೊರಗಡೆಗೆ ಕಳುಹಿಸಿ ಬಾಗಿಲಿಗೆ ಅಗಣಿಯನ್ನು ಹಾಕಿದಳು. ಅನಂತರ ನೀನು ಈ ಮನೆಗೆ ತಿರಿಗಿ ಬರಕೂಡದು ಎಂದು ಹೇಳಿ ಅತ್ತೆಯು ಮನೆಯ ಬಾಗಿಲನ್ನು ಗಟ್ಟಿಯಾಗಿ ಹಾಕಿಕೊಂಡು ನೆಮ್ಮದಿಯಿಂದ ಇದ್ದಳು.

೭೬-೭೮. ಸೊಸೆಯಾದ ಗೌರಿಯು ತನ್ನ ಕೈಯ್ಯಿನಲ್ಲಿರುವ ಸುಂದರವಾದ ಮಗುವನ್ನು ನೋಡುತ್ತಾ ತನ್ನ ಪರದೇವತೆಯಾದ ಗೌರಿದೇವಿಯನ್ನು ಧ್ಯಾನ

**ಶಿಶು ಶ್ಶಂಕರವೇಷ ಸ್ಸನ್ನಾರುಹ್ಯ ವೃಷವಾಹನಂ ।**
**ಗೌರೀರೂಪಧರಾಂ ಕೃತ್ವಾ ಸಮಾದಾಯ ದ್ವಿಜಾತ್ಮಜಾಂ ॥ ೭೭ ॥**

**ಜನಾನಾಂ ಪಶ್ಯತಾಂ ಮಧ್ಯೇ ದೇವದೇವೋಂಬರಂ ಯಯೌ ।**
**ಆಶ್ಚರ್ಯ ಮೇತದಾ ಶ್ಚರ್ಯಮೇತದಿತ್ಯೇವಭಾಷಿಣಃ ॥ ೭೮ ॥**

**ಸರ್ವೇ ಜನಾ ಸ್ಸಮಾಲೋಕ್ಯ ವಿಸ್ಮಿತಾ ಸ್ತಸ್ಥು ರಂಬರಂ ।**
**ತ್ರಯೋವಿಂಶತಿಲೀಲೇಯಂ ದ್ವಿಜಕನ್ಯಾರ್ತಿಹಾರಿಣೀ ।**
**ಸಕೃಚ್ಛ್ರುತಾ ವಾ ಪಠಿತಾ ಸರ್ವೇಷಾ ಮಾರ್ತಿಹಾರಿಣೀ । ॥ ೭೯ ॥**

ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ
ಹಾಲಾಸ್ಯಮಾಹಾತ್ಮ್ಯೇ ದ್ವಿಜಕನ್ಯಾರ್ತಿಹರಣಂ
ನಾಮೈಕೋನತ್ರಿಂಶೋಽಧ್ಯಾಯಃ

---

ಮಾಡುತ್ತಾ ಬೀದಿಯಲ್ಲಿ ದುಃಖದಿಂದ ನಿಂತಿದ್ದಳು. ಆಗ ಮಗುವಾಗಿದ್ದ ಸುಂದರೇಶ್ವರನು ತನ್ನ ನಿಜರೂಪವನ್ನು ಹೊಂದಿ ಅವಳನ್ನು ತನ್ನ ಪ್ರಾಣಕಾಂತಳಾದ ಗೌರಿಯ ಆಕಾರವನ್ನು ಹೊಂದುವಂತೆ ಅನುಗ್ರಹಿಸಿ, ತನ್ನ ವಾಹನವಾದ ವೃಷಭವನ್ನು ಏರಿಕೊಂಡು ಬೀದಿಯ ಜನರೆಲ್ಲರೂ ನೋಡುತ್ತಿರುವಾಗಲೇ ಆಕಾಶಕ್ಕೆ ಹೊರಟು ಹೋದನು ಜನರೆಲ್ಲರೂ ಇದು ಬಹಳ ಆಶ್ಚರ್ಯವೆಂದು ಹೇಳುತ್ತಾ ಆಕಾಶವನ್ನು ನೋಡುತ್ತಾ ನಿಂತಿದ್ದರು.

೭೯. ಬ್ರಾಹ್ಮಣನ ಮಗಳಿಗೆ ಉಂಟಾಗಿದ್ದ ಸಂಕಟವನ್ನು ಪರಿಹರಿಸಿದ ಸುಂದರೇಶ್ವರನ ಇಪ್ಪತ್ತಮೂರನೆಯ ಲೀಲೆಯು ಒಂದು ಸಾರಿ ಕೇಳಿದವರಿಗೂ, ಪಾರಾಯಣವನ್ನು ಮಾಡಿದವರಿಗೂ, ಎಲ್ಲರಿಗೂ ಸಂಕಟವನ್ನು ಪರಿಹಾರ ಮಾಡತಕ್ಕದ್ದಾಗಿ ಇರುವುದು.

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆಯಲ್ಲಿ
ದ್ವಿಜ ಕನ್ಯಾರ್ತಿಹರಣವೆಂದು ಹೆಸರಿನ ಇಪ್ಪತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ತ್ರಿಂಶೋಽಧ್ಯಾಯಃ

|| ಅಗಸ್ತ್ಯ ಉವಾಚ ||

**ಅಥ ಸುಂದರನಾಥಸ್ಯ ಮಹದ್ವೃತ್ಯಸ್ತತಾಂಡವಂ ।**
**ಕಥಯಾಮಿ ಮುನಿಶ್ರೇಷ್ಠಾ ಶ್ರುತಮಾತ್ರೇಣ ಕಾಮದಂ || ೧ ||**

**ಅಥ ವಿಕ್ರಮಭೂಪಾಲೇ ಶಿವಲೋಕಂ ಗತೇ ಸತಿ ।**
**ರಾಜಶೇಖರಪಾಂಡ್ಯಸ್ತು ಪಿತುರಪ್ಯಧಿಕಾಂ ಶ್ರಿಯಂ || ೨ ||**

**ಲಬ್ಧ್ವಾ ರಾಜ್ಯಂ ಚ ಕೃತವಾನುಪಾಯೈಶ್ಚ ಚತುರ್ವಿಧೈಃ ।**
**ಸರ್ವವಿದ್ಯಾಶ್ಚಾಧಿಕೃತ್ಯ ಚತುಷ್ಷಷ್ಟಿಕಲಾ ಅಪಿ || ೩ ||**

---

### ಮೂವತ್ತನೆಯ ಅಧ್ಯಾಯ

೧-೪. ಅಗಸ್ತ್ಯಋಷಿಯು ಹೇಳಿದನು:—ಸುಂದರೇಶ್ವರನು ನೃತ್ಯಸ್ತವಾದ ಪಾದದಿಂದ ತಾಂಡವ ಮಾಡಿದ ಲೀಲೆಯು ಕೇಳಿದ ಮಾತ್ರದಿಂದ ಇಷ್ಟಸಿದ್ಧಿಯನ್ನು ಕೊಡುವ ಕಾರಣ ಈಗ ಅದನ್ನು ಹೇಳುವೆನು. ವಿಕ್ರಮಪಾಂಡ್ಯರಾಜನು ಶಿವಲೋಕಕ್ಕೆ ಹೋದನಂತರ, ರಾಜಶೇಖರಪಾಂಡ್ಯನು ತನ್ನ ತಂದೆಗಿಂತಲೂ ಹೆಚ್ಚಾದ ಕಾಂತಿಯನ್ನು ಹೊಂದಿ, ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕು ಉಪಾಯಗಳಿಂದಲೂ ರಾಜ್ಯವನ್ನು ಬಹಳ ಚೆನ್ನಾಗಿ ಪಾಲಿಸುತ್ತಿದ್ದನು. ಇವನೂ ಶಿವನಲ್ಲಿ ಬಹಳ ಭಕ್ತಿಯುಳ್ಳವನಾಗಿದ್ದನು. (ಎಲ್ಲಾ ವಿಧವಾದ) ಹದಿನಾಲ್ಕು ವಿದ್ಯೆಗಳಲ್ಲಿಯೂ ಇವನಿಗೆ

ಅತೀವ ಶಿವಭಕ್ತತ್ವಾ ನ್ನೃತ್ತಮೇಕಂ ನ ಚಾಭ್ಯಸತ್ ।
ಶಿವೇನಾಚರಿತಂ ನೃತ್ತಂ ನ ಕಾರ್ಯಮಿತಿ ಭಕ್ತಿಮಾನ್ ॥ ೪ ॥

ರಾಜಶೇಖರಭೂಪಾಲಸ್ಸರ್ವವಿದ್ಯಾವಿಶಾರದಃ ।
ಚತುಃ ಷಷ್ಟಿಕಲಾದಕ್ಷ ಇತಿ ಲೋಕೇ ಪ್ರಥಾಂ ಯಯೌ ॥ ೫ ॥

ತದಾನೀಂ ತತ್ಪ್ರಥಾಂ ಶ್ರುತ್ವಾ ಚೋಲಃ ಕಶ್ಚಿನ್ಮಹೀಪತಿಃ ।
ಕಲಿಕಾಲ ಇತಿ ಖ್ಯಾತೋ ಜಂಬುನಾಥೇತಿಭಕ್ತಿಮಾನ್ ॥ ೬ ॥

ಸರ್ವವಿದ್ಯಾಶ್ಚತುಷಷ್ಟಿಕಲಾ ಅಪಿ ಸಮಭ್ಯಸತ್ ।
ಚತುಃಷಷ್ಟಿಕಲಾದಕ್ಷ ಇತಿ ಚೋಲೋಪಿ ಸಪ್ರಥೇ ॥ ೭ ॥

ಏವಂ ಗತೇ ಚ ಕಾಲೇ ತು ವಿದ್ವಾನ್ಕಶ್ಚಿತ್ಸಮಾಗತಃ ।
ಚೋಳೇಶಾತ್ಪ್ರಾಪ್ಯ ಬಹ್ವರ್ಥಂ ಪಾಂಡ್ಯರಾಜದಿದೃಕ್ಷಯಾ ॥ ೮ ॥

---

ತಿಳುವಳಿಕೆಯು ಇತ್ತು. ಅರವತ್ತು ನಾಲ್ಕು ಕಲೆಗಳಲ್ಲಿಯೂ, ಇವನು ಬುದ್ಧಿವಂತನಾಗಿದ್ದನು. ಶಿವನು ದಿನಂಪ್ರತಿಯಲ್ಲಿಯೂ ಆಚರಿಸುವ ತಾಂಡವವನ್ನು ಮಾತ್ರ ಅಭ್ಯಾಸಮಾಡುವುದಕ್ಕೆ ಇವನಿಂದ ಆಗಲಿಲ್ಲ.

೫. ಶಿವನಲ್ಲಿ ಭಕ್ತಿಯುಳ್ಳವನು, ಶಿವನು ಆಚರಿಸುವ ತಾಂಡವವನ್ನು ನಾನು ಮಾಡಬಾರದು, ಎಂದು ಅದನ್ನು ಇವನು ಅಭ್ಯಾಸ ಮಾಡಲಿಲ್ಲ. ಆದರೆ ಪ್ರಪಂಚದಲ್ಲಿ "ರಾಜಶೇಖರ ರಾಜನು ಎಲ್ಲಾ ವಿದ್ಯೆಗಳಲ್ಲಿಯೂ, ಅರವತ್ತುನಾಲ್ಕು ಕಲೆಗಳಲ್ಲಿಯೂ ನಿಪುಣನಾಗಿದ್ದನು." ಎಂದು ಪ್ರಸಿದ್ಧಿಯು ಹರಡಿತು. ಈ ರಾಜನಿಗೆ ಬಹಳವಾದ ಕೀರ್ತಿಯು ಉಂಟಾಗಿತ್ತು.

೬–೯. ಆಗ ಜಂಬುನಾಥೇಶ್ವರನಲ್ಲಿ ಭಕ್ತಿಯಿಂದ ಇರುವ ಕಲಿಕಾಲನೆಂದು ಹೆಸರುಳ್ಳ ಚೋಳರಾಜನು ಇವನಂತೆಯೇ ಹದಿನಾಲ್ಕು ವಿದ್ಯೆಗಳೂ, ಅರವತ್ತುನಾಲ್ಕು ಕಲೆಗಳೂ ಇವುಗಳಲ್ಲಿ ನಿಪುಣನೆಂದು ಪ್ರಸಿದ್ಧನಾಗಿದ್ದನು. ಹೀಗೆ ಇರುವಾಗ ಒಬ್ಬ

ತುಷ್ಟಾವ ವಿವಿಧೈಃ ಸ್ತೋತ್ರೈ ರ್ವಾಗ್ಭಿಸ್ತಂ ವರವಾಕ್ತತಃ ।
ಅಥೇತಿ ವಚನಂ ಪ್ರಾಹ ವಿದಗ್ಧೋ ವಿದುಷಾಂ ವರಃ ॥ ೯ ॥

ರಾಜಶೇಖರರಾಜೇಶ ರಾಜರಾಜನಿಭ ಶ್ರಿಯಾ ।
ಪಾಂಡ್ಯವಂಶಧ್ವಜಪಟ ಪ್ರಖ್ಯಾತಾಖಿಲಭೂಪತೇ ॥ ೧೦ ॥

ಅಭ್ಯಸ್ತಾ ಶ್ಚೋಲನಾಥೇನ ಸರ್ವಾಃ ವಿದ್ಯಾಃ ಕಲಾ ಅಪಿ ।
ನೃತ್ತಂ ಚ ಸ ವಿಜಾನಾತಿ ಕ್ವಚಿತ್ಕಶ್ಚಿತ್ಪ್ರಗಲ್ಭತೇ ॥ ೧೧ ॥

ಇತಿ ಪ್ರತ್ಯುತ್ತರಂ ದತ್ವಾ ತೂಷ್ಣೀ ಮಾಸ್ತೇ ಭುವಂ ಲಿಖನ್ ।
ನಾಥ ನಾಥ ತಥೈವೇತಿ ಪ್ರಶಶಂಸ ಕವೀಶ್ವರಃ ॥ ೧೨ ॥

ಅನರ್ಘ್ಯೈ ರ್ವಿವಿಧೈ ರ್ವಸ್ತ್ರೈ ರ್ಭೂಷಣೈಶ್ಚ ಧನೈರಪಿ ।
ಸಂಭಾವ್ಯ ಪ್ರೇಷಯಾಮಾಸ ಗೂಢಧೀ ರ್ಮರ್ಮವಾದಿನಂ ॥ ೧೩ ॥

---

ವಿದ್ವಾಂಸನು ಚೋಳರಾಜನಿಂದ ಬಹಳ ದ್ರವ್ಯವನ್ನು ಪಾರಿತೋಷಕವಾಗಿ ಹೊಂದಿ, ರಾಜಶೇಖರರಾಜನ ಸಮೀಪಕ್ಕೆ ಬಂದು ಉತ್ತಮವಾದ ಮಾತುಗಳಿಂದ ರಾಜನನ್ನು ಹೊಗಳಿದನು.

೧೦–೧೩. ಅನಂತರದಲ್ಲಿ ಆ ವಿದ್ವಾಂಸನು, "ಪಾಂಡ್ಯವಂಶದಲ್ಲಿ ಪ್ರಸಿದ್ಧನಾದ ಎಲೈ ರಾಜನೇ, ಚೋಳರಾಜನು ಎಲ್ಲಾ ವಿದ್ಯೆಗಳನ್ನೂ, ಎಲ್ಲಾ ಕಲೆಗಳನ್ನೂ ಅಭ್ಯಾಸ ಮಾಡಿರುವನು. ಯಾವನೋ ಒಬ್ಬನು ಎಲ್ಲಿಯೋ ಒಂದು ಕಡೆಯಲ್ಲಿ ನೃತ್ತಕ್ರಮವನ್ನು ತಿಳಿದು ಇರುವೆನೆಂದು ಹೇಳಿಕೊಳ್ಳುವನು. ಆದರೆ ನೃತ್ತಮಾಡುವ ಕ್ರಮವನ್ನು ಚೋಳರಾಜನು ತಿಳಿದಿರುವನು." ಎಂದು ಹೇಳಿ ಪಾಂಡ್ಯರಾಜನ ಎದುರಿನಲ್ಲಿ ಭೂಮಿಯನ್ನು ಕೆರೆಯುತ್ತಾ ಸುಮ್ಮನೆ ನಿಂತುಕೊಂಡನು. ಕವಿ ಶ್ರೇಷ್ಠನಾದ ಅವನು ಚೋಳರಾಜನನ್ನು ಶ್ಲಾಘನೆ ಮಾಡಿದ್ದನ್ನು ಕೇಳಿ, ಆ ಚೋಳರಾಜನ ಗೂಢವಾದ ರಹಸ್ಯವನ್ನು ತಿಳಿದು ಇರುವ ಅವನಿಗೆ, ಪಾಂಡ್ಯರಾಜನು ಬಹಳ ಮರ್ಯಾದೆಯನ್ನು ಮಾಡಿ, ಬೆಲೆಬಾಳುವ ವಸ್ತ್ರ, ಆಭರಣ, ಮತ್ತು ದ್ರವ್ಯ ಇವುಗಳನ್ನು ಕೊಟ್ಟು ಕಳುಹಿಸಿದನು.

ಅಥ ನರ್ತನವಿದ್ಯಾಯಾಂ ಪಾಂಡ್ಯಭೂಪೋ ಮನೋ ದಧೇ
ಉದಂಚಿತಾಕುಂಚಿತೇನ ವಾಮಪಾದೇನ ಸಂಯುತಂ ॥ ೧೪ ॥

ನೃತ್ತಸ್ಯಾಭ್ಯಾಸ ಮಕರೋದ್ದಿನೈಃ ಕತಿಪಯೈಸ್ತು ಸಃ ।
ಪ್ರತಿಭಾತೀತಿ ಮನಸಿ ವಿಚಾರೋಽಥ ಮಹೀಪತೇಃ ॥ ೧೫ ॥

ಶಿವೇನಾಚರಿತಂ ನೃತ್ತ ಮಾತ್ಮನೋ ನಾರ್ಹಮೇವ ಹಿ ।
ತಥಾಪಿ ಚೋಲಮಾತ್ಸರ್ಯಾ ತ್ತದಭ್ಯಾಸಂ ಕರೋಮ್ಯಹಂ ॥ ೧೬ ॥

ಏಕ ಮಾಕುಂಚ್ಯ ಚರಣಂ ಕ್ಷಿಪ್ತತೋಽನ್ಯೇನ ಭೂತಲೇ ।
ಏಕ ಕ್ಷಣೇ ಮಹಾಕ್ಲೇಶೋ ಜಾತೋಽಭೂನ್ಮಮ ಶಂಕರಃ ॥ ೧೭ ॥

ಅನಾರತಂ ನೃತ್ಯತಿ ಚ ಕಿಯಾನ್ಕ್ಲೇಶೋ ಹಿ ಜಾಯತೇ ।
ಸರ್ವಭಾರಸಹಿಷ್ಣೋಶ್ಚ ತಸ್ಯ ಕ್ಲೇಶೋಽಥವಾ ನ ಹಿ ॥ ೧೮ ॥

ಇತಿ ಚಿಂತಯಮಾನೋಽಂತಃ ಖಿನ್ನ ಏವ ಸ ವರ್ತತೇ ।
ಕದಾಚಿಚ್ಛಿವರಾತ್ರ್ಯಾಂ ತು ಸೇವಾರ್ಥಂ ತ್ವರ್ಧರಾತ್ರಕೇ ॥ ೧೯ ॥

---

೧೪-೧೮. ಅನಂತರದಲ್ಲಿ ಪಾಂಡ್ಯರಾಜನು ನರ್ತನ ಮಾಡುವ ವಿದ್ಯೆಯನ್ನು ಅಭ್ಯಾಸಮಾಡಲು ನಿಶ್ಚಯಮಾಡಿ, ಒಂದು ಕಾಲನ್ನು ನೀಡಿ, ಇನ್ನೊಂದು ಕಾಲನ್ನು ಕೊಂಚ ಮಡಿಸಿಕೊಂಡು ನರ್ತನಮಾಡುವ ಅಭ್ಯಾಸವನ್ನು ಕೆಲವು ದಿನಗಳು ಆಚರಿಸಿದನು. ಆಗ ಆ ರಾಜನು " ಶಿವನು ಆಚರಿಸುವ ನರ್ತನವನ್ನು ನಾನು ಮಾಡುವುದು ಉಚಿತವಲ್ಲ, ಆದರೂ ಚೋಳರಾಜನ ಮಾತ್ಸರ್ಯಕ್ಕಾಗಿ ನಾನು ಅಭ್ಯಾಸ ಮಾಡುತ್ತೇನೆ." ಎಂದು ಮನಸ್ಸಿನಲ್ಲಿ ನಿಶ್ಚಯ ಮಾಡಿದನು. ಮತ್ತು " ಒಂದು ಕಾಲನ್ನು ನೀಡಿಕೊಂಡು ಇನ್ನೊಂದು ಕಾಲಿನಿಂದ ನಿಂತಿರುವ ನನಗೆ ಬಹಳ ಆಯಾಸವಾಗುವಾಗ ಯಾವಾಗಲೂ ಹೀಗೆಯೇ ನರ್ತನ ಮಾಡುತ್ತಿರುವ ಶಿವನಿಗೆ ಎಷ್ಟು ಕ್ಲೇಶವಾಗಬಹುದು. ಅಥವಾ ಪ್ರಪಂಚದ ರಕ್ಷಣೆಯೇ ಮೊದಲಾದ ಎಲ್ಲಾ ಕೆಲಸಗಳನ್ನೂ ಮಾಡುತ್ತಿರುವ ಅವನಿಗೆ ಇದು ಲೀಲೆಯಾಗಿರಬಹುದು," ಎಂದು ಪಾಂಡ್ಯರಾಜನು ಯೋಚಿಸುತ್ತಾ ಮನಸ್ಸಿನಲ್ಲಿ ಖೇದವುಳ್ಳವನಾಗಿದ್ದನು.

೧೯-೨೧. ಹೀಗೆ ಇರುವಾಗ ಶಿವರಾತ್ರಿಯ ದಿನವು ಬಂದಿತು. ಆಗ ಪಾಂಡ್ಯರಾಜನು ಶಿವನನ್ನು ಸೇವಿಸುವುದಕ್ಕಾಗಿ ದೇವಾಲಯಕ್ಕೆ ಹೋಗಿ ಅಲ್ಲಿ ಅರ್ಧರಾತ್ರಿಯ

ರಾಜತೀಂ ಚ ಸಭಾಂ ಪ್ರಾಪ್ಯ ದೇವಂ ದೃಷ್ಟ್ವಾ ನಟೇಶ್ವರಂ ।
ಉಪವಿಶ್ಯ ತದಗ್ರೇ ತು ಶ್ರೀಮತ್ಪಂಚಾಕ್ಷರಂ ಮುದಾ ॥ ೨೦ ॥

ಜಪ್ತ್ವಾ ಚ ವಿವಿಧೈಃ ಸ್ತೋತ್ರೈಃ ಕಾಲಕ್ಷೇಪಂ ಕರೋತಿ ಸಃ ।
ನೃತ್ತಶಿಕ್ಷಾವೇದನಾ ಚ ಸ್ಮೃತಾ ಭೂದ್ಭೂಪತೇ ಸ್ತದಾ ॥ ೨೧ ॥

ಅಥ ಭಕ್ತಿವಿಶೇಷೇಣ ಸಂಯುಕ್ತಃ ಸ ಮಹೀಪತಿಃ ।
ಪ್ರತಿಜ್ಞಾ ಮಕರೋತ್ಸದ್ಯಃ ತಸ್ಯ ದೇವಸ್ಯ ಸನ್ನಿಧೌ ॥ ೨೨ ॥

ಭಗವನ್ ಪರಮಾನಂದ ಮಹಾತಾಂಡವಪಂಡಿತ ।
ಪಂಚಕೃತ್ಯ ಮಹಾಲೀಲಾ ಕರಣಾತಿವಿಚಕ್ಷಣ ॥ ೨೩ ॥

ನಟನಶ್ರಮಶಾಂತ್ಯೈ ಚ ಚಿರಕಾಲಧೃತಂ ಪದಂ ।
ವಿಹಾಯಾ ನ್ಯೇನ ಪಾದೇನ ಕುರು ತಾಂಡವ ಮದ್ಭುತಂ ॥ ೨೪ ॥

---

ಹೊತ್ತಿನಲ್ಲಿ ನಟರಾಜನಾದ ಪರಮೇಶ್ವರನು ಇರುವ ಪ್ರದೇಶವಾದ ರಜತ ಸಭೆಗೆ ಬಂದು, ಕುಳಿತುಕೊಂಡು ಪಂಚಾಕ್ಷರ ಮಂತ್ರವನ್ನು ಜಪಮಾಡುತ್ತಾ, ಶಿವನನ್ನು ಅನೇಕ ವಿಧವಾದ ಸ್ತೋತ್ರಗಳಿಂದ ಸ್ತುತಿಮಾಡುತ್ತಾ ಕಾಲವನ್ನು ಕಳೆಯುತ್ತಿದ್ದನು. ಹೀಗಿರುವಾಗಲೂ, ಆ ರಾಜನಿಗೆ ನರ್ತನವನ್ನು ಕಲಿಯಬೇಕೆಂಬ ತೀವ್ರವಾದ ತನ್ನ ಉದ್ದೇಶವು ಜ್ಞಾಪಕಕ್ಕೆ ಬಂದಿತು. ಆಗ ಆ ರಾಜನು ದೇವ ದೇವನಾದ ನಟೇಶ್ವರನ ಸನ್ನಿಧಿಯಲ್ಲಿ ಪ್ರತಿಜ್ಞೆಯನ್ನು ಮಾಡಿದನು.

೨೨-೨೬. " ಷಡ್ಗುಣೈಶ್ವರ್ಯ ಸಂಪನ್ನನಾದ, ಪರಮಾನಂದ ರೂಪದಿಂದ ಇರುವವನಾದ, ಮಹಾ ತಾಂಡವವನ್ನು ಆಚರಿಸುವುದರಲ್ಲಿ ಪಂಡಿತನಾದ ಪರಮೇಶ್ವರನೇ, ನೀನು ಪ್ರಪಂಚದ ಸೃಷ್ಟಿ, ಸ್ಥಿತಿ, ಲಯ, ಅನುಗ್ರಹ, ತಿರೋಧಾನ, ಎಂಬ ಪಂಚ ಕೃತ್ಯಗಳನ್ನು ಮಾಡುವುದರಲ್ಲಿ ನಿಪುಣನಾಗಿ ಇರುತ್ತೀಯೆ. ನರ್ತನ ಶ್ರಮವು ಕಡಿಮೆಯಾಗುವುದಕ್ಕಾಗಿ ಬಹಳ ಕಾಲದಿಂದಲೂ ನೀಡಿರುವ ಪಾದವನ್ನು ಬಿಟ್ಟು ಬೇರೆಯ ಕಾಲಿನಿಂದ ಎಲ್ಲರಿಗೂ ಆಶ್ಚರ್ಯವಾಗುವ ಹಾಗೆ ನರ್ತನವನ್ನು ಮಾಡಿ ತೋರಿಸು. ವ್ಯತ್ಯಸ್ತ ಪಾದದಿಂದ ನರ್ತನವನ್ನು ನೀನು ಮಾಡದಿದ್ದರೆ, ನಾನು

ನ ಕೃತಂ ಚೇತ್ತ್ವಯಾ ತತ್ತು ವ್ಯತ್ಯಸ್ತ ನಟನಂ ಪರಂ ।
ಶಿರೋ ಮದೀಯಂ ಖಡ್ಗೇನ ಛೇದಯಿಷ್ಯಾ ಮ್ಯಸಂಶಯಃ ॥ ೨೫ ॥

ಇತ್ಯುಕ್ತ್ವಾ ಖಡ್ಗ ಮತುಲಂ ಕೃತ್ವಾ ನಿಷ್ಕೋಶ ಮಗ್ರತಃ ।
ಸಂಸ್ಥಾಪ್ಯ ಸನ್ನಿಧಾ ವಾಸ್ತೇ ಸ್ವಶರೀರೇ ನಿರಾಶಯಃ ॥ ೨೬ ॥

ಪುರೇಶೋ ವ್ಯಾಘ್ರಪಾದಸ್ಯ ಪತಂಜಲಿಮಹಾಮುನೇಃ ।
ದ್ವಾದಶಾಂತಗತಂ ನೃತ್ತಂ ಕುರ್ವಾಣ ಶ್ಶಂಕರ ಸ್ತದಾ ॥ ೨೭ ॥

ಆತ್ಮಭಕ್ತಸ್ಯ ಭೂಪಸ್ಯ ವಿದಿತ್ವಾ ತದ್ದಯಾನಿಧಿಃ ।
ಉದಂಚಿತಾಕುಂಚಿತೇನ ದಕ್ಷಿಣೇನ ಪದಾ ಯುತಃ ॥ ೨೮ ॥

ಅಕರೋ ನ್ನರ್ತನಂ ಸದ್ಯ ಶ್ಚಾತಿರಮ್ಯಂ ಮಹಾದ್ಭುತಂ ।
ತದಾ ವಿಷ್ಣ್ವಾದಯ ಸ್ಸರ್ವೇ ವಿಬುಧಾಶ್ಚ ಸಮಾಗತಾಃ ॥ ೨೯ ॥

---

ನನ್ನ ಶಿರಸ್ಸನ್ನು ಇಲ್ಲಿಯೇ ಕತ್ತರಿಸಿಕೊಳ್ಳುವೆನು. ಈ ವಿಷಯದಲ್ಲಿ ಸಂಶಯವಿಲ್ಲ." ಎಂದು ಪಾಂಡ್ಯ ಭೂಪತಿಯು ಪ್ರತಿಜ್ಞೆಯನ್ನು ಮಾಡಿ, ತನ್ನ ಕತ್ತಿಯನ್ನು ಒರೆಯಿಂದ ಹಿರಿದುಕೊಂಡು ತನ್ನ ಶರೀರದ ಅಭಿಮಾನವನ್ನು ಬಿಟ್ಟು ನಿಂತಿದ್ದನು.

೨೭-೨೯. ಹಾಲಾಸ್ಯ ಕ್ಷೇತ್ರಾಧಿಪನಾದ ಶಿವನು ವ್ಯಾಘ್ರಪಾದಋಷಿಯೊಡನೆ ಇದ್ದ ಪತಂಜಲಿ ಮಹಾಮುನಿಯ ಇಚ್ಛಾನುಸಾರವಾಗಿ ದ್ವಾದಶಾಂತ ಪ್ರದೇಶದಲ್ಲಿ ನರ್ತನವನ್ನು ಮಾಡಿದ್ದನು. ಈಗ ತನ್ನ ಭಕ್ತನಾಗಿರುವ ಪಾಂಡ್ಯರಾಜನ ಇಷ್ಟಕ್ಕನುಸಾರವಾಗಿ ಅಪಾರ ದಯಾಶಾಲಿಯಾದ ಪರಮೇಶ್ವರನು ನರ್ತನ ಮಾಡಲು ಉದ್ದೇಶ ಮಾಡಿ, ಬಲಗಡೆಯ ಕಾಲನ್ನು ನೀಡಿ, ಮಡಿಸಿಕೊಂಡು ನರ್ತನ ಮಾಡಿದನು. ಈ ನರ್ತನವು ನೋಡುವುದಕ್ಕೆ ಬಹಳ ಅಂದವಾಗಿಯೂ, ಮನಸ್ಸಿಗೆ ಸಂತೋಷವನ್ನೂ ಆಶ್ಚರ್ಯವನ್ನೂ ಉಂಟುಮಾಡುವುದಾಗಿಯೂ ಇತ್ತು. ಆಗ ವಿಷ್ಣುವೇ ಮೊದಲಾದ ದೇವತೆಗಳು ಬಂದಿದ್ದರು. ಅಪ್ಸರ ಸ್ತ್ರೀಯರು ನೃತ್ತ, ಗೀತ, ವಾದ್ಯಗಳನ್ನು ಮಾಡುತ್ತಿದ್ದರು.

ನೃತ್ತಂ ಗೀತಂ ಚ ವಾದ್ಯಂ ಚ ಕುರ್ವಂತ್ಯ ಪ್ಸರಸಸ್ತದಾ ।
ರಾಜಶೇಖರಭೂಪಸ್ಯ ಸಖಾಯೋ ನಿಖಿಲಾ ಜನಾಃ ॥ ೩೦ ॥

ಶಿವರಾತ್ರಿವ್ರತಾರ್ಥಂ ಯೇ ಜನಾ ದೇಶಾಂತರಾಗತಾಃ ।
ಪ್ರತ್ಯಕ್ಷತಸ್ತು ತೇ ಸರ್ವೇ ದೃಷ್ಟ್ವಾ ಶಂಭೋಸ್ತದದ್ಭುತಂ ॥ ೩೧ ॥

ಸದ್ಯಃ ಪಾಪಹರಂ ಸದ್ಯಃ ಸರ್ವಸಂಪತ್ಸಮೃದ್ಧಿದಂ ।
ದೃಷ್ಟ್ವಾ ಪರವಶಾಃ ಸಂತ ಸ್ತಾಂಡವಂ ಭಕ್ತಿಯೋಗತಃ ॥ ೩೨ ॥

ಕೇಚಿಜ್ಜನಾ ನಮಸ್ಯಂತಿ ಸ್ತುವಂತಿ ಚ ತಥಾಪರೇ ।
ಕೇಚಿತ್ಪಂಚಾಕ್ಷರಜಪಂ ಕುರ್ವಂತಿ ಪುರತಃ ಸ್ಥಿತಾಃ ॥ ೩೩ ॥

ನರ್ತನಂ ಚ ತಥಾ ಕೇಚಿದ್ಧ್ಯಾಯಂತಿ ಚ ತಥಾ ಪರೇ ।
ಕೇಚಿತ್ಪೂಜಾಂ ಪ್ರಕುರ್ವಂತಿ ಪ್ರಯಚ್ಛಂ ತ್ಯಂಬರಾದಿಕಂ ॥ ೩೪ ॥

ರಾಜಾ ಸ್ವಂತಿಕಮಾಗತ್ಯ ದೃಷ್ಟ್ವಾ ವಿಸ್ಮಿತಮಾನಸಃ ।
ಆತ್ಮಾಧೀಶಂ ಮಹಾದೇವ ಮಾತ್ಮನಃ ಪ್ರಿಯ ಮದ್ಭುತಂ ॥ ೩೫ ॥

---

೩೦-೩೪. ರಾಜಶೇಖರಪಾಂಡ್ಯನೂ, ಅವನ ಸ್ನೇಹಿತರೂ ದೇಶಾಂತರದಿಂದ ಶಿವರಾತ್ರಿಯ ವ್ರತಾಚರಣೆಗಾಗಿ ಬಂದಿದ್ದ ಜನರೂ, ಇವರೆಲ್ಲರೂ ಬಹಳ ಆಶ್ಚರ್ಯಕರವಾದ ಶಿವನ ತಾಂಡವವನ್ನು ನೋಡಿದರು. ಆ ತಾಂಡವವು ದರ್ಶನ ಮಾತ್ರದಿಂದಲೇ ಪಾಪವನ್ನು ಕ್ಷಣದಲ್ಲಿ ನಾಶಗೊಳಿಸಿ, ಎಲ್ಲಾ ವಿಧವಾದ ಐಶ್ವರ್ಯವನ್ನೂ ಕೊಡುವುದು. ಈ ತಾಂಡವವನ್ನು ನೋಡಿದವರಲ್ಲಿ ಕೆಲವರು ಭಕ್ತಿಯಿಂದ ನಮಸ್ಕಾರ ಮಾಡಿದರು. ಕೆಲವರು ಆನಂದಪರವಶರಾದರು. ಕೆಲವರು ಶಿವನನ್ನು ಸ್ತುತಿ ಮಾಡಿದರು. ಇನ್ನು ಕೆಲವರು ತಾಂಡವಮೂರ್ತಿಯ ಎದುರಿನಲ್ಲಿ ನಿಂತುಕೊಂಡು ಪಂಚಾಕ್ಷರ ಮಂತ್ರವನ್ನು ಜಪಮಾಡಿದರು. ಇನ್ನು ಕೆಲವರು ಕುಣಿದರು. ಕೆಲವರು ಧ್ಯಾನಮಾಡುತ್ತಾ ಇದ್ದರು. ಕೆಲವರು ಶಿವನನ್ನು ಪೂಜಿಸಿದರು. ಕೆಲವರು ವಸ್ತ್ರವೇ ಮೊದಲಾದವುಗಳನ್ನು ದಾನಮಾಡಿದರು.

೩೫. ಪಾಂಡ್ಯರಾಜನೂ ಕೂಡ ತಾಂಡವಮೂರ್ತಿಯ ಹತ್ತಿರಕ್ಕೆ ಬಂದು ಆಶ್ಚರ್ಯದಿಂದ ಕೂಡಿದ ಮನಸ್ಸುಳ್ಳವನಾಗಿ, ತನಗೆ ಪ್ರಭುವಾಗಿರುವ, ತನ್ನ ಇಷ್ಟ ದೇವತೆಯಾದ, ಆಶ್ಚರ್ಯಕರನಾಗಿರುವ, ಮಹಾದೇವನನ್ನು ನೋಡಿ, ರೋಮಾಂಚವುಳ್ಳವನಾಗಿ ಬಹಳವಾಗಿ ಸ್ತೋತ್ರಮಾಡಿದನು.

ತುಷ್ಟಾವ ವಿವಿಧೈಃ ಸ್ತೋತ್ರೈಃ ಪುಲಕಾಂಚಿತವಿಗ್ರಹಃ ।

॥ ರಾಜಶೇಖರಪಾಂಡ್ಯ ಉವಾಚ ॥

ಪರಿಪೂರ್ಣಂ ಪರಾನಂದಂ ಸತ್ಯಜ್ಞಾನದ್ವಯಾತ್ಮಕಂ ।
ಭಜಾಮಿ ಸುಂದರೇಶಸ್ಯ ಮಹದ ದ್ಭುತತಾಂಡವಂ ॥ ೩೬ ॥

ಶ್ರೀಮತ್ಪಂಚಾಕ್ಷರಮಯಂ ಪಂಚ ಕೃತ್ಯೈಕಕಾರಣಂ ।
ಭಜಾಮಿ ಸುಂದರೇಶಸ್ಯ ಮಹದದ್ಭುತತಾಂಡವಂ ॥ ೩೭ ॥

ವಿಶ್ವಾಧಿಕಂ ವಿಶ್ವರೂಪಂ ವಿಶ್ವಾತ್ಮಾನಂ ಪರಾತ್ಪರಂ ।
ಭಜಾಮಿ ಸುಂದರೇಶಸ್ಯ ಮಹದದ್ಭುತತಾಂಡವಂ ॥ ೩೮ ॥

ದ್ವಾದಶಾಂತಗತಂ ಸೂಕ್ಷ್ಮಂ ಸೋಮಸೂರ್ಯಾಗ್ನಿಲೋಚನಂ ।
ಭಜಾಮಿ ಸುಂದರೇಶಸ್ಯ ಮಹದದ್ಭುತತಾಂಡವಂ ॥ ೩೯ ॥

---

೩೬. ರಾಜಶೇಖರಪಾಂಡ್ಯರಾಜನು ಹೇಳಿದನು:—" ಪರಿಪೂರ್ಣನಾಗಿ, ಸತ್ಯ ಜ್ಞಾನ ಎಂಬ ಎರಡು ವಿಧವಾದ ರೂಪವನ್ನು ಹೊಂದಿ ಇರುವ, ಉತ್ತಮವಾದ, ಆನಂದಾತ್ಮಕವಾದ, ಸುಂದರೇಶ್ವರನ ಆಶ್ಚರ್ಯಕರವಾದ ತಾಂಡವಮೂರ್ತಿಯನ್ನು ಸೇವಿಸುತ್ತೇನೆ.

೩೭. ಸಂಪದ್ಯುಕ್ತವಾದ ಪಂಚಾಕ್ಷರ ಮಂತ್ರ ಪ್ರತಿಪಾದ್ಯನಾದ, ಪಂಚಕೃತ್ಯ ಗಳಿಗೂ ಕಾರಣನಾದ ಆನಂದ ರೂಪದಿಂದ ಇರುವ ಶಿವನ ಅತ್ಯಾಶ್ಚರ್ಯಕರವಾದ ತಾಂಡವಮೂರ್ತಿಯನ್ನು ಸೇವೆಮಾಡುತ್ತೇನೆ.

೩೮. ಪ್ರಪಂಚಕ್ಕೆಲ್ಲಕ್ಕೂ ಅತಿಶಯವಾಗಿ, ಎಲ್ಲಾ ರೂಪದಿಂದಲೂ ಇರುವ, ಪ್ರಪಂಚಾಕಾರವಾಗಿರುವ ಬಹಳ ಸರ್ವೋತ್ತಮವಾದ ತಾಂಡವೇಶ್ವರನ ಅತ್ಯಾಶ್ಚರ್ಯ ಕರವಾದ ಆಕಾರವನ್ನು ಸೇವೆಮಾಡುತ್ತೇನೆ.

೩೯. ದ್ವಾದಶಾಂತದಲ್ಲಿ ಇರುವ ಬಹಳ ಸೂಕ್ಷ್ಮವಾದ, ಚಂದ್ರ, ಸೂರ್ಯ ಅಗ್ನಿ ಎಂಬ ಕಣ್ಣುಗಳನ್ನು ಹೊಂದಿರುವ ಸುಂದರೇಶ್ವರನ ಅತ್ಯಾಶ್ಚರ್ಯಕರವಾದ ತಾಂಡವಮೂರ್ತಿಯನ್ನು ಸೇವೆಮಾಡುತ್ತಿರುವೆನು.

ಷಟ್ತ್ರಿಂಶತತ್ತ್ವಸೋಪಾನಮಹಾಪ್ರಾಸಾದಮಧ್ಯಗಂ ।
ಭಜಾಮಿ ಸುಂದರೇಶಸ್ಯ ಮಹದದ್ಭುತತಾಂಡವಂ ॥ ೪೦ ॥

ಕಾಲಾತೀತಂ ಕಾಲಕಾಲಂ ಕಲಾಧರಕಲಾಧರಂ ।
ಭಜಾಮಿ ಸುಂದರೇಶಸ್ಯ ಮಹದದ್ಭುತತಾಂಡವಂ ॥ ೪೧ ॥

ಸೂಕ್ಷ್ಮಪಂಚಾಕ್ಷರೀಭೂತಪ್ರಣವಾಕಾರಮಧ್ಯಗಂ ।
ಭಜಾಮಿ ಸುಂದರೇಶಸ್ಯ ಮಹದದ್ಭುತತಾಂಡವಂ ॥ ೪೨

ನಿವೃತ್ಯಾದಿಕಲಾತೀತಂ ನಿತ್ಯಂ ಸಕಲನಿಷ್ಕಲಂ ।
ಭಜಾಮಿ ಸುಂದರೇಶಸ್ಯ ಮಹದದ್ಭುತತಾಂಡವಂ ॥ ೪೩ ॥

ಸರ್ವಸಂಪತ್ಕರಂ ಸದ್ಯಃ ಸರ್ವಾಪದ್ಭಂಜನಕ್ಷಮಂ ।
ಭಜಾಮಿ ಸುಂದರೇಶಸ್ಯ ಮಹದದ್ಭುತತಾಂಡವಂ ॥ ೪೪ ॥

೪೦. ಮೂವತ್ತಾರು ತತ್ತ್ವಗಳೆಂಬ ದೊಡ್ಡ ಸೋಪಾನಗಳನ್ನು ಹೊಂದಿ, ದೊಡ್ಡದಾದ ಪ್ರಾಸಾದದ ಮಧ್ಯದಲ್ಲಿರುವ ಸುಂದರೇಶ್ವರನ ಅತ್ಯಾಶ್ಚರ್ಯಕರವಾದ ತಾಂಡವಮೂರ್ತಿಯನ್ನು ಸೇವಿಸುತ್ತೇನೆ.

೪೧. ಭೂತ, ವರ್ತಮಾನ, ಭವಿಷ್ಯತ್ತೆಂಬ ಕಾಲತ್ರಯವನ್ನು ಮೀರಿ ನಿತ್ಯ ನಾಗಿರುವ, ಯಮನಿಗೂ ಭಯಂಕರನಾದ, ಚಂದ್ರನ ಕಳೆಯನ್ನು ಧರಿಸಿರುವ, ಸುಂದ ರೇಶ್ವರನ ತಾಂಡವಮೂರ್ತಿಯನ್ನು ಸೇವಿಸುವೆನು.

೪೨. ಸೂಕ್ಷ್ಮ ಪಂಚಾಕ್ಷರವೆಂದು ಹೆಸರುಳ್ಳ ಪ್ರಣವ ಮಂತ್ರದ ಮಧ್ಯದಲ್ಲಿ ಇರುವ ಸುಂದರೇಶ್ವರನ ತಾಂಡವಮೂರ್ತಿಯ ಸೇವೆಯನ್ನು ಮಾಡುವೆನು.

೪೩. ನಿವೃತ್ತಿಯೇ ಮೊದಲಾದ ಕಲೆಗಳನ್ನು ಮೀರಿ ಇರುವವನಾದರೂ. ಯಾವಾಗಲೂ ಸಕಲ, ನಿಷ್ಕಲ ರೂಪದಿಂದ ಇರುವ ಸುಂದರೇಶ್ವರನ ತಾಂಡವ ಮೂರ್ತಿಯ ಸೇವೆಯನ್ನು ಮಾಡುತ್ತಿರುವೆನು.

೪೪. ಒಂದು ಕ್ಷಣದಲ್ಲಿ ಎಲ್ಲಾ ವಿಧ ಸಂಪತ್ತುಗಳನ್ನೂ ಕೊಟ್ಟು ಎಲ್ಲಾ ವಿಪತ್ತುಗಳನ್ನೂ ನಾಶಪಡಿಸುವ ಸುಂದರೇಶ್ವರನ ತಾಂಡವಮೂರ್ತಿಯ ಸೇವೆಯನ್ನು ಮಾಡುವೆನು.

ಯೋಗಾಭ್ಯಾಸರತೈಃ ಸದ್ಭಿಃ ಸದಾ ಧ್ಯೇಯಂ ಸುಸಿದ್ಧಿದಂ ।
ಭಜಾಮಿ ಸುಂದರೇಶಸ್ಯ ಮಹದದ್ಭುತತಾಂಡವಂ ॥ ೪೫ ॥

ಭಕ್ತಾಪದ್ಭಂಜನಪರಂ ಭಕ್ತಿಗಮ್ಯಂ ಭವಾಪಹಂ ।
ಭಜಾಮಿ ಸುಂದರೇಶಸ್ಯ ಮಹದದ್ಭುತತಾಂಡವಂ ॥ ೪೬ ॥

ಭೋಗಮೋಕ್ಷಪ್ರದಂ ಪುಂಸಾ ಮಾಗಮಾಂತೈ ರಭಿಷ್ಟುತಂ ।
ಭಜಾಮಿ ಸುಂದರೇಶಸ್ಯ ಮಹದ್ಭುತತಾಂಡವಂ ॥ ೪೭ ॥

ವೀತಾಘಸಂಘೈ ರ್ವಿಬುಧೈ ರ್ವಿಶಿಷ್ಟೈ
ರ್ವಿದ್ಯಾ ವಿಶೇಷಾರ್ಚಿತಪಾದಪದ್ಮಂ ।
ಹಾಲಾಸ್ಯನಾಥಾಯ ನಮೋಽಸ್ತು ತುಭ್ಯಂ
ಶ್ರೀ ಸುಂದರೇಶಾದ್ಭುತತಾಂಡವೇಶ ॥ ೪೮ ॥

---

೪೫. ಯೋಗಾಭ್ಯಾಸ ಮಾಡುವ ಆಸಕ್ತಿಯುಳ್ಳ ಸತ್ಪುರುಷರಿಗೆ ಧ್ಯಾನಕ್ಕೆ ವಿಷಯನಾಗಿ ಸಿದ್ಧಿಯನ್ನು ಅನುಗ್ರಹಿಸುವ ಸುಂದರೇಶ್ವರನ ತಾಂಡವಮೂರ್ತಿಯ ಸೇವೆಯನ್ನು ಮಾಡುವೆನು.

೪೬. ಭಕ್ತರ ವಿಪತ್ತನ್ನು ನಾಶಪಡಿಸಿ, ಭಕ್ತಿಯಿಂದ ಧ್ಯಾನಮಾಡಲು ಯೋಗ್ಯವಾಗಿ ಜನನ ಮರಣ ದುಃಖವನ್ನು ಹಾಳುಮಾಡುವ ಸುಂದರೇಶ್ವರನು ತಾಂಡವವನ್ನು ಮಾಡುವ ಬಹಳ ಆಶ್ಚರ್ಯಕರವಾದ ಆಕಾರವನ್ನು ಸೇವಿಸುತ್ತೇನೆ.

೪೭. ಶಾಸ್ತ್ರಗಳಲ್ಲಿ ನಂಬಿಕೆಯಿಂದ ಇರುವವರಾಗಿ ಸ್ತೋತ್ರಮಾಡುವ ಜನರಿಗೆ ಭುಕ್ತಿ ಮುಕ್ತಿಗಳನ್ನು ಅನುಗ್ರಹಿಸುವ ಸುಂದರೇಶ್ವರನ ಅತ್ಯಾಶ್ಚರ್ಯಕರವಾದ ತಾಂಡವ ಆಕೃತಿಯನ್ನು ಸೇವಿಸುತ್ತೇನೆ.

೪೮. ಪಾಪಸಂಬಂಧವು ಕೊಂಚವೂ ಇಲ್ಲದೆ, ಪುಣ್ಯವಂತರಾಗಿರುವ ಮತ್ತು ಜ್ಞಾನಿಗಳಾದ ದೇವತೆಗಳೇ ಮೊದಲಾದವರು ಪೂಜಿಸುತ್ತಿರುವ, ಕಮಲದಂತಿರುವ ಪಾದಗಳುಳ್ಳವನಾಗಿ ಇರುವ, ಹಾಲಾಸ್ಯೇಶ್ವರನೆ, ಎಲೈ ಸೋಮಸುಂದರೇಶ್ವರನೇ, ಆಶ್ಚರ್ಯಕರವಾದ ತಾಂಡವವನ್ನು ಮಾಡುವ ತಾಂಡವೇಶ್ವರನೇ, ನಿನಗೆ ನಮಸ್ಕಾರವು

ಇತಿ ಸ್ತುತ್ವಾ ಸುಂದರೇಶಂ ಮಹಾತಾಂಡವಮಂಡಿತಂ ।
ಭಕ್ತ್ಯಾ ಪರವಶೋ ಭೂತ್ವಾ ಪ್ರಣಿಪತ್ಯ ಪುನಃ ಪುನಃ ॥ ೪೯ ॥

ಕೃತಾರ್ಥೋಽಸ್ಮಿ ಕೃತಾರ್ಥೋಽಸ್ಮಿ ಕೃತಾರ್ಥೋಽಸ್ಮೀತ್ಯುದೀರ್ಯ ಚ ।
ಉತ್ಥಾಯ ಪ್ರಾರ್ಥಯಾಮಾಸ ರಾಜಶೇಖರ ಈಶ್ವರಂ ॥ ೫೦ ॥

ಅನುಗ್ರಹಾಯ ಜಗತಾಂ ಕಿಂಚಿತ್ಕುಂಚಿತ ಮುನ್ನತಂ ।
ವಾಮಂ ಶ್ರೀಚರಣಂ ಶಂಭೋ ತವ ಸರ್ವತ್ರ ದೃಶ್ಯತೇ ॥ ೫೧ ॥

ನ ತದಾಶ್ಚರ್ಯ ಮೇತತ್ತು ವಿಶಿಷ್ಟಂ ಮಹದದ್ಭುತಂ ॥ ೫೨ ॥

ಅಸ್ಮದ್ವಂಶವಿವೃದ್ಧ್ಯರ್ಥಂ ಲೋಕಾನುಗ್ರಹಹೇತವೇ
ಏವ ಮತ್ಯದ್ಭುತಂ ನೃತ್ತಂ ಕುರು ಕುರ್ವಿತಿ ಶಂಕರ ॥ ೫೩ ॥

ಏವಂ ಚ ಪ್ರಾರ್ಥಿತೇ ಭೂಪೇ ಸದಾ ಸರ್ವೇಷ್ಟಸಿದ್ಧಯೇ ।
ಓಮೋಮಿತಿ ಶಿವಾ ವಾಣೀ ಖಾದಭೂನ್ಮಧುರಾಕ್ಷರಾ ॥ ೫೪ ॥

---

೪೯–೫೩. ಪಾಂಡ್ಯರಾಜನು ಮಹಾತಾಂಡವವನ್ನು ಮಾಡುವುದರಲ್ಲಿ ನಿಪುಣನಾಗಿರುವ ಸುಂದರೇಶ್ವರನನ್ನು ಹೀಗೆ ಸ್ತೋತ್ರಮಾಡಿ, ಭಕ್ತಿಯಿಂದ ಪರವಶನಾಗಿ, ಪದೇ ಪದೇ ನಮಸ್ಕಾರ ಮಾಡಿದನು. ಅನಂತರದಲ್ಲಿ ನಾನು ಕೃತಾರ್ಥನಾಗಿರುವೆನು ಎಂದು ಅನೇಕ ಸಾರಿ ಹೇಳುತ್ತಾ "ಎಲೈ ಸುಂದರೇಶ್ವರನೇ, ಲೋಕದ ಅನುಗ್ರಹಕ್ಕಾಗಿ ನಿನ್ನ ಎಡಗಡೆಯ ಪಾದವು ಕೊಂಚಮಟ್ಟಿಗೆ ಮೇಲಕ್ಕೆ ಎತ್ತಿಕೊಂಡು ಮಡಿಸಿರುವುದು ತಾಂಡವಮಾಡುವ ಎಲ್ಲಾ ವಿಗ್ರಹಗಳಲ್ಲಿಯೂ ಹೀಗೆಯೇ ಇರುವುದು. ಬಹಳ ಆಶ್ಚರ್ಯಕರವಾಗಿ ಈ ಪ್ರಕಾರವಾಗಿ ನೀನು ಇರುವುದು ನಿನ್ನ ಸ್ವಭಾವವಾಗಿರುವುದು; ಆದರಿಂದ ಆಶ್ಚರ್ಯವೇನೂ ಇಲ್ಲವು. ಎಲೈ ಶಂಕರನೆ, ನಮ್ಮ ವಂಶದ ಅಭಿವೃದ್ಧಿಗಾಗಿಯೂ, ಪ್ರಪಂಚದ ಅನುಗ್ರಹಕ್ಕಾಗಿಯೂ ಈ ಪ್ರಕಾರದಿಂದಲೇ ನೀನು ತಾಂಡವವನ್ನು ಮಾಡುತ್ತಾ ಇರಬೇಕು." ಎಂದು ಸುಂದರೇಶ್ವರನನ್ನು ಪ್ರಾರ್ಥನೆಮಾಡಿದನು.

೫೪–೫೭. ಆಗ ರಾಜನ ಪ್ರಾರ್ಥನೆಗೆ ಅನುಸಾರವಾಗಿ ಅವನ ಇಷ್ಟವು ನೆರವೇರುವುದಕ್ಕಾಗಿ "ಓಂ" ಎಂದು ಅಂಗೀಕಾರ ಸೂಚಕವಾದ ಮಧುರವಾದ ಆಕಾಶ

ಶ್ರುತ್ವಾ ವಾಚಂ ತು ಸಂತುಷ್ಟಃ ಪ್ರಣಮ್ಯ ಚ ಪುನಃ ಪುನಃ ।
ಆತ್ಮನೀಶಸ್ಯ ವಾತ್ಸಲ್ಯಂ ಚಿಂತಯನ್ನತಿಭಕ್ತಿಮಾನ್ ॥ ೫೫ ॥

ಛತ್ರಚಾಮರಸಿಹ್ಮಾಖ್ಯಪೀಠಾದ್ಯಂ ಮೌಕ್ತಿಕಂ ದದೌ ।
ವ್ಯತ್ಯಸ್ತನೃತ್ತಕರಣಧ್ವಜಕರ್ತೇತಿ ಸುಂದರಃ ॥ ೫೬ ॥

ತದಾ ಪ್ರಭೃತಿ ಲೋಕೇಷು ಖ್ಯಾತೋ ಹಾಲಾಸ್ಯನಾಯಕಃ ।
ವ್ಯತ್ಯಸ್ತತಾಂಡವಂ ಚಿತ್ತೇ ಸುಂದರಂ ಧ್ಯಾಯತಾಂ ನೃಣಾಂ ॥ ೫೭ ॥

ಸಿಧ್ಯಂತಿ ಸರ್ವಕಾರ್ಯಾಣಿ ನಶ್ಯಂತಿ ದುರಿತಾನಿ ಚ ।
ರಾಜಶೇಖರಪಾಂಡ್ಯೋಽಪಿ ತದಾರಭ್ಯ ದಿನಾನಿಶಂ ॥ ೫೮ ॥

ಸುಂದರಂ ಧ್ಯಾಯತಿ ಸ್ವಾಂತೇ ಮಹದದ್ಭುತತಾಂಡವಂ ।
ನಿರ್ವೃತ್ಯ ಜಾಗರಂ ತತ್ರ ಶಿವರಾತ್ರಿವ್ರತಸ್ಯ ಚ ॥ ೫೯ ॥

---

ವಾಣಿಯು ರಾಜನಿಗೆ ಕೇಳಿಸಿತು. ಬಹಳ ಭಕ್ತಿಯುಳ್ಳ ಆ ರಾಜನು ಸುಂದರೇಶ್ವರನ ವಿಷಯದಲ್ಲಿ ತನಗೆ ಇರುವ ಭಕ್ತಿಯಿಂದ ಅವನನ್ನು ಧ್ಯಾನಮಾಡುತ್ತಾ, ಸಂತೋಷ ದಿಂದ, ಪುನಃ ನಮಸ್ಕಾರ ಮಾಡಿದನು. ಆಮೇಲೆ ಅವನು ಛತ್ರಿ, ಚಾಮರ, ಸಿಂಹಾಸನ, ಬಹಳ ಮುತ್ತಿನ ಆಭರಣಗಳು ಇವುಗಳನ್ನು ಸುಂದರೇಶ್ವರನಿಗೆ ಒಪ್ಪಿಸಿ ದನು. ಆಗಿನಿಂದಲೂ ಹಾಲಾಸ್ಯನಾಥನಾದ ಸುಂದರೇಶ್ವರನಿಗೆ ವ್ಯತ್ಯಸ್ತ ನೃತ್ತಮಾಡು ವುದರಲ್ಲಿ ನಿಪುಣನೆಂದು ಪ್ರಸಿದ್ಧಿಯು ಉಂಟಾಯಿತು.

೫೮–೫೯. ವ್ಯತ್ಯಸ್ತ ತಾಂಡವಮಾಡುವ ಸುಂದರೇಶ್ವರನನ್ನು ಮನಸ್ಸಿನಲ್ಲಿ ಭಕ್ತಿಯಿಂದ ಧ್ಯಾನ ಮಾಡುವವರ ಕಾರ್ಯಗಳೆಲ್ಲವೂ ಸಿದ್ಧಿಯಾಗುವುವು. ಮತ್ತು ಅವರ ಪಾಪಗಳು ನಾಶವಾಗುವವು. ರಾಜಶೇಖರಪಾಂಡ್ಯರಾಜನು ಆಕಾಲ ಮೊದಲು ಗೊಂಡು ಸರ್ವಕಾಲದಲ್ಲಿಯೂ ಅದ್ಭುತ ತಾಂಡವವನ್ನು ಮಾಡುವ ಸುಂದರೇಶ್ವರ ನನ್ನು ತನ್ನ ಮನಸ್ಸಿನಲ್ಲಿ ಧ್ಯಾನಮಾಡುತ್ತಿರುವನು. ಅವನು ಶಿವರಾತ್ರಿವ್ರತದ ಜಾಗರಣೆಯನ್ನು ನೆರವೇರಿಸಿ, ಬೆಳಗಾದ ಕೂಡಲೆ ಮನೆಗೆ ಬಂದನು.

ರಾಜಶೇಖರಭೂಪಾಲಃ ಪ್ರಭಾತೇ ಸ್ವಾಲಯಂ ಯಯೌ ।
ಏವ ಮದ್ಭುತನೃತ್ತಂ ತತ್ಸುಂದರೇಶ ಮಹೇಶಿತುಃ ॥ ೬೦ ॥

ಶ್ರುತ್ವಾ ದೇಶಾಂತರಗತಾ ವಿಪ್ರಾದ್ಯಾಃ ಸಕಲಾ ಜನಾಃ ।
ಸಮಾಗತ್ಯ ಸಮಾಲೋಕ್ಯ ಶಂಭೋ ಸ್ತಾಂಡವ ಮದ್ಭುತಂ ॥ ೬೧ ॥

ಕೃತಾರ್ಥಾ ಅಭವನ್ ಸದ್ಯಃ ಸಕಲಾಭೀಷ್ಟಲಾಭತಃ ।
ಪುತ್ರಃ ಕುಲೋತ್ತುಂಗ ಇತಿ ಜಾತಃ ಕಾಲೇನ ಭೂಪತೇಃ ॥ ೬೨ ॥

ಸದ್ಯ ಸ್ಸರ್ವಗುಣೋಪೇತ ಸ್ಸಾಗರಾದಿವ ಚಂದ್ರಮಾಃ ।
ತೇನ ಪುತ್ರೇಣ ಸ ನೃಪಶ್ಚಿರಂ ಭೂಮಿಮಪಾಲಯತ್ ॥ ೬೩ ॥

ಚತುರ್ವಿಂಶತಿಲೀಲಾ ಚ ಚತುರ್ವರ್ಗಫಲಪ್ರದಾ ।
ಶ್ರುತಮಾತ್ರಾದಘಘ್ನೀ ಚ ಪುಂಸಾಂ ಪುಣ್ಯವಿಶೇಷದಾ ॥ ೬೪ ॥

---

೬೦-೬೩. ಮಹೇಶ್ವರನಾದ ಸುಂದರೇಶ್ವರನ ಈ ಪ್ರಕಾರವಾದ ತಾಂಡವವನ್ನು ದೇಶಾಂತರದಿಂದ ಬಂದಿದ್ದ ಜನಗಳೆಲ್ಲರೂ ನೋಡಿ, ಆ ಕ್ಷಣದಲ್ಲಿ ಅವರ ಇಷ್ಟಗಳೆಲ್ಲವೂ ಸಿದ್ಧವಾದ ಕಾರಣ ಕೃತಕೃತ್ಯರಾದರು. ಕೆಲವು ಕಾಲವು ಕಳೆದನಂತರ ಆ ರಾಜನಿಗೆ ಕುಲೋತ್ತುಂಗನೆಂದು ಹೆಸರುಳ್ಳ ಮಗನು ಹುಟ್ಟಿದನು. ಅವನು ಸಮುದ್ರದಿಂದ ಹುಟ್ಟಿದ ಚಂದ್ರನ ಹಾಗೆ ಎಲ್ಲಾ ಗುಣಗಳಿಂದಲೂ ಕೂಡಿದ್ದನು. ರಾಜಶೇಖರ ಪಾಂಡ್ಯನು ಆ ಮಗನೊಡನೆ ಬಹಳ ಕಾಲದವರೆಗೂ ರಾಜ್ಯವನ್ನು ಪಾಲಿಸುತ್ತಿದ್ದನು.

೬೪. ಹಾಲಾಸ್ಯೇಶ್ವರನಾದ ಸುಂದರೇಶ್ವರನ ಇಪ್ಪತ್ತನಾಲ್ಕನೆಯ ಲೀಲೆಯು ನಾಲ್ಕು ವಿಧವಾದ ಪುರುಷಾರ್ಥಗಳನ್ನು ಕೊಡುವ ಮಹಿಮೆಯುಳ್ಳದ್ದಾಗಿ ಇರುವುದು. ಇದನ್ನು ಕೇಳಿದ ಮಾತ್ರದಿಂದ ಪಾಪಗಳು ನಾಶವಾಗಿ ಪುಣ್ಯವು ದಿನೇ ದಿನೇ ವೃದ್ಧಿಯಾಗುವುದು.

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ವ್ಯತ್ಯಸ್ತನೃತ್ತಕರಣಂ ನಾಮ
ತ್ರಿಂಶೋಽಧ್ಯಾಯಃ

---

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯ
ಯಲ್ಲಿ ವ್ಯತ್ಯಸ್ತ ನೃತ್ತಕರಣವೆಂಬ ಹೆಸರಿನ ಮೂವತ್ತನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಏಕತ್ರಿಂಶೋಽಧ್ಯಾಯಃ



॥ ಋಷಯ ಊಚುಃ ॥

**ಭಕ್ತಾನುಗ್ರಹದಕ್ಷಸ್ಯ ಸುಂದರೇಶಸ್ಯ ವೈಭವಂ ।**
**ಭೂಯೋಽಪಿ ಕಥಯಾ ಸ್ಮಾಕಂ ಕ್ರಮಾ ತ್ಪ್ರಾಪ್ತಂ ಘಟೋದ್ಭವ ॥ ೧ ॥**

॥ ಅಗಸ್ತ್ಯ ಉವಾಚ ॥

**ಲೀಲಯಾಥ ಯಯಾ ವಿಪ್ರಪತ್ನ್ಯಾ ವಧನಿರೂಪಣಂ ।**
**ಅಕರೋತ್ಸುಂದರಾಧೀಶ ಸ್ತಾಂ ಲೀಲಾಂ ಕಥಯಾಮಿ ವಃ ॥ ೨ ॥**

### ಮೂವತ್ತೊಂದನೆಯ ಅಧ್ಯಾಯವು

೧-೨. ಋಷಿಗಳು ಹೇಳಿದರು:- ಎಲೈ ಅಗಸ್ತ್ಯಋಷಿಯೇ ಭಕ್ತರನ್ನು ಅನುಗ್ರಹ ಮಾಡುವುದರಲ್ಲಿ ಸಮರ್ಥನಾದ ಸುಂದರೇಶ್ವರನು ಆಚರಿಸಿದ ಲೀಲೆಗಳಲ್ಲಿ ಇನ್ನು ಮುಂದೆ ಕ್ರಮವನ್ನು ಅನುಸರಿಸಿ ಬಂದ ಲೀಲೆಯನ್ನು ನಮಗೆ ಹೇಳು.

ಅಗಸ್ತ್ಯಋಷಿಯು ಹೇಳಿದನು:—ಸುಂದರೇಶ್ವರನು ಬ್ರಾಹ್ಮಣನ ಪತ್ನಿಯ ವಧೆಯನ್ನು ಮಾಡಿರುವ ಲೀಲೆಯನ್ನು ನಿಮಗೆ ಹೇಳುವೆನು.

ಪ್ರಾಪ್ತೇ ಶಂಭೋಸ್ತು ಸಾಯುಜ್ಯಂ ರಾಜಶೇಖರಭೂಪತೌ ।
ಕುಲೋತ್ತುಂಗಮಹೀಪಾಲೋ ಮಧುರಾನಾಯಕೋಽಭವತ್ ॥ ೩ ॥

ದೇವಬ್ರಾಹ್ಮಣಭಕ್ತಶ್ಚ ಸದಾಸ್ವಾಚಾರತತ್ಪರಃ ।
ಪ್ರಜಾಸ್ಸಂತೋಷಯಾಮಾಸ ಸರ್ವತ್ರಾವಸ್ಥಿತಾ ಮುದಾ ॥ ೪ ॥

ಸುಂದರಾಖ್ಯಸ್ಯ ತದ್ಧ್ಯಾತ್ವಾ ವ್ಯತ್ಯಸ್ತಾನಂದತಾಂಡವಂ ।
ರಾಜಕಾರ್ಯಾಣಿ ಸರ್ವಾಣಿ ಕುಲೋತ್ತುಂಗ ಸ್ಸದಾ ವ್ಯಧಾತ್ ॥ ೫ ॥

ತಸ್ಯಾ ಯುತಂ ಕಲತ್ರಾಣಾ ಮಭೂತ್ಸೌಂದರ್ಯಸಂಯುತಂ ।
ಪ್ರತ್ಯೇಕಂ ಷಟ್ಕುಮಾರಾಸ್ತು ಸಂಜಾತಾ ಸ್ಸಂಪದಾ ಸಹ ॥ ೬ ॥

ಅನಂತಗುಣಪಾಂಡ್ಯಸ್ತು ತೇಷಾಂ ಜ್ಯೇಷ್ಠತಮಃ ಸ್ಮೃತಃ ।
ಅನಂತೈಃ ಸದ್ಗುಣೈ ರ್ಯುಕ್ತಃ ಪಿತುರಾಜ್ಞಾ ಮಲಂಘಯನ್ ॥ ೭ ॥

---

೩–೪. ರಾಜಶೇಖರಪಾಂಡ್ಯರಾಜನು ಶಿವನಲ್ಲಿ ಐಕ್ಯವನ್ನು ಹೊಂದಿದ ನಂತರ ಕುಲೋತ್ತುಂಗರಾಜನು ಮಧುರಾನಗರಕ್ಕೆ ರಾಜನಾದನು. ಅವನು ದೇವರು ಮತ್ತು ಬ್ರಾಹ್ಮಣರು ಇವರ ವಿಷಯದಲ್ಲಿ ಭಕ್ತಿಯುಳ್ಳವನಾಗಿ, ಯಾವಾಗಲೂ ಆಚಾರವಂತನಾಗಿ ಇರುತ್ತಿದ್ದನು. ಪ್ರಜೆಗಳೆಲ್ಲರೂ ಯಾವಾಗಲೂ ಸಂತೋಷದಿಂದ ಇರುವಂತೆ ನಡದುಕೊಳ್ಳುತ್ತಿದ್ದನು.

೫–೮. ಕುಲೋತ್ತುಂಗಪಾಂಡ್ಯರಾಜನು ಸುಂದರೇಶ್ವರನ ರೂಪಾಂತರವಾದ ತಾಂಡವಮೂರ್ತಿಯನ್ನು ಯಾವಾಗಲೂ ಧ್ಯಾನಮಾಡುತ್ತಾ, ರಾಜ್ಯದ ಕೆಲಸಗಳೆಲ್ಲವನ್ನೂ ಮಾಡುತ್ತಿದ್ದನು. ಅವನಿಗೆ ಸೌಂದರ್ಯವತಿಯರಾದ ಹತ್ತು ಸಾವಿರ ಹೆಂಡತಿಯರು ಇದ್ದರು. ಅವರು ಒಬ್ಬೊಬ್ಬರಿಗೂ ಆರು ಜನ ಮಕ್ಕಳಂತೆ ಅರುವತ್ತು

ತೈಃ ಪುತ್ರೈ ಸ್ಸಹಿತಃ ಸಮ್ರಾಟ್ ಷಷ್ಟಿಸಾಹಸ್ರಸಮ್ಮಿತೈಃ ।
ಮುದಾ ಚ ಮಧುರಾಪುರ್ಯಾ ಮಾಸ್ತೇಽಖಿಲಪ್ರರಿಗಹೈಃ ॥ ೮ ॥

ತದಾ ಶ್ರೀ ಮನ್ನವ ಪುರೇಽವಸದ್ಕಶ್ಚಿತ್ ದ್ವಿಜೋತ್ತಮಃ ।
ವನಿತಾಂ ಸ್ವಾಂ ಸಮಾದಾಯ ಬಾಲಕಂ ಚ ಸ್ತನಂಧಯಂ ॥ ೯ ॥

ಹಾಲಾಸ್ಯಪುರಮಧ್ಯಸ್ಥ ಮಾಯಯೌ ಶ್ವಶುರಾಲಯಂ ।
ಮಧ್ಯೇ ಮಾರ್ಗಂ ತೃಷಾರ್ತಸ್ಸ ವಟಮೂಲೇ ಸ್ಥಿತೋಽಭವತ್ ॥ ೧೦ ॥

ಶ್ರಾಂತ್ಯಾ ಮಹತ್ಯಾ ಸಂಯುಕ್ತಾ ಶೇತೇ ತಸ್ಯಕುಟುಂಬಿನೀ ।
ದ್ವಿಜಃ ಪಾನೀಯಮಾದಾತುಂ ಸ ಯಯೌ ತ್ವರಯಾನ್ವಿತಃ ॥ ೧೧ ॥

---

ಸಾವಿರ ಮಕ್ಕಳಿದ್ದರು. ಇದಕ್ಕೆ ತಕ್ಕ ಐಶ್ವರ್ಯವೂ ಆ ರಾಜನಿಗೆ ಇತ್ತು. ಅನಂತ ಗುಣಪಾಂಡ್ಯನೆಂಬುವನು ಇವರೆಲ್ಲರಿಗಿಂತಲೂ ಹಿರಿಯಮಗನಾಗಿದ್ದನು. ಅವನು ಬಹಳ ಉತ್ತಮವಾದ ಗುಣಗಳಿಂದಕೂಡಿ ತಂದೆಯ ಮಾತನ್ನು ಮೀರದೆ ಇರುತ್ತಿದ್ದನು. ಚಕ್ರವರ್ತಿಯಾದ ಕುಲೋತ್ತುಂಗಪಾಂಡ್ಯರಾಜನು ಅರವತ್ತುಸಾವಿರ ಮಕ್ಕಳೊಡನೆ ಸಂತೋಷದಿಂದ ಮಧುರಾನಗರದ ಎಲ್ಲಾ ವಿಧವಾದ ಸೌಕರ್ಯ ಗಳಿಂದಲೂ ರಾಜ್ಯಭಾರಮಾಡುತ್ತಾ ಸುಖದಿಂದ ಇದ್ದನು.

೯-೧೨. ಆಗ ನವಪುರದಲ್ಲಿ ವಾಸವಾಗಿರುವ ಒಬ್ಬ ಬ್ರಾಹ್ಮಣನು ತನ್ನ ಹೆಂಡತಿಯನ್ನೂ, ಎಳೆಯ ಮಗುವನ್ನೂ ಕರೆದುಕೊಂಡು ಹಾಲಾಸ್ಯನಗರದಲ್ಲಿದ್ದ ತನ್ನ ಮಾವನ ಮನೆಗೆ ಬರುವಾಗ ದಾರಿಯಲ್ಲಿ ಒಂದು ಆಲದಮರದ ಬುಡದಲ್ಲಿ ಬಾಯಾರಿಕೆಯಿಂದ ನಿಂತುಕೊಂಡನು. ಅವನ ಹೆಂಡತಿಯು ಬಹಳ ಆಯಾಸದಿಂದ ಅಲ್ಲಿಯೇ ಮಲಗಿಕೊಂಡಳು. ಆ ಬ್ರಾಹ್ಮಣನು ನೀರನ್ನು ತರುವುದಕ್ಕಾಗಿ ಬೇಗನೆ ಹೋದನು. ಆಗ ಒಬ್ಬ ಬೇಡನು ಮೊದಲು ಬಿಟ್ಟಿದ್ದ ಬಾಣವು ಗುರಿಯಾದ ಗಿಣಿಗೆ

ವ್ಯಾಧೇನ ಕೇನಚಿತ್ಕ್ಷಿಪ್ತಶ್ಶರಃ ಪೂರ್ವಂ ಶುಕಂ ಪ್ರತಿ ।
ಪತ್ರೇ ಸಕ್ತೋ ಲಂಬಮಾನೋ ನ್ಯಪತದ್ವಾಯುನಾ ಸ್ತ್ರಿಯಾಂ ॥ ೧೨ ॥

ತತ್ಕ್ಷಣಾ ದ್ವ್ಯಸುರಾಸೀತ್ಸಾ ಬಾಣಪಾತಪ್ರವೇಗತಃ ।
ಪಾನೀಯ ಮಾನೀಯ ಜವಾತ್ ಭರ್ತಾ ಗತ್ಯ ವಿಲೋಕ್ಯ ತಾಂ ॥ ೧೩ ॥

ಭೃಶ ಮಾತಾಡ್ಯ ಪಾಣಿಭ್ಯಾಂ ಮುಹು ರ್ವಕ್ಷಸ್ಸಮುನ್ನತಂ ।
ಅತ್ಯಂತರೋದನಂ ಕುರ್ವಂಸ್ತಸ್ಯಾಸ್ಸೌಂದರ್ಯಸದ್ಗುಣಾನ್ ॥ ೧೪ ॥

ಸ್ಮೃತ್ವಾ ಸ್ಮೃತ್ವಾ ತು ಶೋಕಾಬ್ಧೌ ಮೂರ್ಛಾಮಾಪ ನಿಮಜ್ಜಯಃ ।
ಚಿರಂ ಪರವಶೋ ಭೂತ್ವಾ ಶೇತೇ ಕಾನನಭೂತಲೇ ॥ ೧೫ ॥

ಮುಹೂರ್ತಮಾತ್ರೇಽತಿಕ್ರಾಂತೇ ಸಮುತ್ಥಾಯ ದ್ವಿಜೋತ್ತಮಃ ।
ಕಶ್ಚಿದ್ವ್ಯಾಧ ಮಪಶ್ಯಚ್ಚ ಪಕ್ಷ್ಯನ್ವೇಕ್ಷಣತತ್ಪರಂ ॥ ೧೬ ॥

ಬಲಾದ್ಗೃಹೀತ್ವಾ ತಂ ಕೇಶೇ ದ್ವಿಜ ಏವಮಭರ್ತ್ಸಯತ್ ।
ಪುಲಿಂದಾಧಮ ಮಾರ್ಗಸ್ಥಾಂ ಕಿಮರ್ಥ ಮಹನಃ ಸ್ತ್ರಿಯಂ ॥ ೧೭ ॥

---

ಬೀಳದೆ, ಅದಕ್ಕೆ ಕಟ್ಟಿದ ರಕ್ಕೆಯ ಗಾಳಿಯಿಂದ ಈ ಹೆಂಗಸಿಗೆ ತಗುಲಿತು. ಬಾಣವು ಬಿದ್ದ ಕೂಡಲೆ ಅದರ ವೇಗದಿಂದ ಆ ಹೆಂಗಸು ಮೃತಳಾದಳು. ಅವಳ ಗಂಡನು ಕುಡಿಯುವ ನೀರನ್ನು ತೆಗೆದುಕೊಂಡು ಬಂದು ಅವಳನ್ನು ನೋಡಿದನು.

೧೩-೧೭. ಆಗ ಅವನು ತನ್ನ ಎತ್ತರವಾದ ಎದೆಯನ್ನು ಕೈಯ್ಯಿಂದ ಬಡಿದು ಕೊಂಡು ಗಟ್ಟಿಯಾಗಿ ಅಳುತ್ತಾ ಮೃತಳಾದ ಆ ಸ್ತ್ರೀಯ ಗುಣಗಳನ್ನು ಸ್ಮರಿಸಿಕೊಂಡು ಮೂರ್ಛೆಯನ್ನು ಹೊಂದಿದನು. ಹೀಗೆಯೇ ಅವನು ಆ ಕಾಡಿನಲ್ಲಿ ನೆಲದಮೇಲೆ ಬಿದ್ದಿದ್ದನು. ಕೆಲವುಕಾಲ ಕಳೆದನಂತರ ಅವನು ಮೂರ್ಛೆತಿಳಿದು ಎದ್ದನು. ಆಗ ಅವನು ಹಕ್ಕಿಯನ್ನು ಹುಡುಕುತ್ತಿದ್ದ ಒಬ್ಬ ಬೇಡನನ್ನು ನೋಡಿದನು. ಅವನನ್ನು ಬಲಾತ್ಕಾರದಿಂದ ಹಿಡಿದುಕೊಂಡು ಬ್ರಾಹ್ಮಣನು, "ಎಲೈ ನೀಚನೆ, ದಾರಿಯಲ್ಲಿ ಹೋಗುತ್ತಿರುವ ಹೆಂಗಸನ್ನು ಯಾತಕ್ಕೆ ಕೊಂದು ಇದ್ದೀಯೆ ? ಎಂದು ಬೆದರಿಸಿದನು ಮತ್ತು ಅವನ ಕೆನ್ನೆಗೆ ಪದೇ ಪದೇ ಹೊಡೆದನು.

ಇತ್ಯುಕ್ತ್ವಾ ತಾಡಯದ್ಗಂಡಂ ವ್ಯಾಧಸ್ಯ ಚ ಪುನಃ ಪುನಃ ।
ಅತ್ಯಂತಭೀತಿಸಂಯುಕ್ತ ಸ್ಸ ತು ವಿಸ್ಮಿತಮಾನಸಃ ॥ ೧೮ ॥

ಅಹನಂ ನೈವ ನಾಮಾಹಂ ತವೇಮಾಂ ಭೋ ನಿರೂಪಯ ।
ಇತ್ಯುಕ್ತೋಽಥ ದ್ವಿಜಶ್ಶೀಘ್ರಂ ತಮಾದಾಯ ನೃಪಾಂತಿಕಂ ॥ ೧೯ ॥

ಪ್ರಾಪ್ಯ ಚುಕ್ರೋಶ ಸ ಶಿಶುರತ್ಯುಗ್ರಂ ರುದಿತೋ ಭೃಶಂ ।
ಕಿಮೇತದಿತಿ ಪೃಚ್ಛಂತೋ ಮಂತ್ರಿಣಃ ಕ್ಲೇಶಿತಂ ದ್ವಿಜಂ ॥ ೨೦ ॥

ಸೋಽಪ್ಯಬ್ರವೀದಯಂ ವ್ಯಾಧೋ ಹಿನಸ್ತೀತಿ ಮಮಾಬಲಾಂ ।
ಶ್ರುತ್ವಾ ತೇ ವಿಸ್ಮಿತಾಸ್ಸಂತಃ ಸದ್ಯೋ ಗತ್ವಾ ನೃಪಾಯ ಚ ॥ ೨೧ ॥

ಸರ್ವಂ ವಿಜ್ಞಾಪಯಾಮಾಸುಃ ಬ್ರಾಹ್ಮಣೇನೇರಿತಂ ವಚಃ ।
ಕುಲೋತ್ತುಂಗೋಽಪಿ ಸಹಸಾ ಬಹಿರ್ನಿರ್ಗತ್ಯ ತಂ ದ್ವಿಜಂ ॥ ೨೨ ॥

---

೧೮–೨೧. ಆ ಬೇಡನು ಹೆದರಿದವನಾಗಿ ಆಶ್ಚರ್ಯದಿಂದ "ಎಲೈ ಸ್ವಾಮಿಯೆ, ಈ ಹೆಂಗಸನ್ನು ನಾನು ಹೊಡೆಯಲಿಲ್ಲ. ನೀನು ವಿಚಾರ ಮಾಡಿ ನೋಡು. ಎಂದು ಹೇಳಿದನು. ಆದರೂ ಆ ಬ್ರಾಹ್ಮಣನು ಬೇಡನನ್ನು ಬೇಗನೆ ರಾಜನ ಹತ್ತಿರಕ್ಕೆ ಕರೆದುಕೊಂಡು ಬಂದನು. ಅವನ ಮಗುವು ಬಹಳವಾಗಿ ಅಳುತ್ತಿತ್ತು. ಧೊರೆಯ ಮಂತ್ರಿಗಳು ಕಷ್ಟವನ್ನು ಹೊಂದಿರುವ ಬ್ರಾಹ್ಮಣನನ್ನು ನೋಡಿ " ಇದು ಏನು " ಎಂದು ಬ್ರಾಹ್ಮಣನನ್ನು ಕೇಳಿದರು. ಈ ಬೇಡನು ನನ್ನ ಹೆಂಡತಿಯನ್ನು ಕೊಂದನು ಎಂದು ಬ್ರಾಹ್ಮಣನು ಅವರಿಗೆ ಉತ್ತರವನ್ನು ಹೇಳಿದನು. ಅದನ್ನು ಕೇಳಿ ಅವರಿಗೆ ಆಶ್ಚರ್ಯವು ಉಂಟಾಯಿತು. ಆಗ ಅವರೆಲ್ಲರೂ ಕೂಡಲೆ ಬ್ರಾಹ್ಮಣನು ಹೇಳಿದ ಮಾತೆಲ್ಲವನ್ನೂ ರಾಜನಿಗೆ ತಿಳಿಸಿದರು.

೨೨–೨೪. ಕುಲೋತ್ತುಂಗಪಾಂಡ್ಯರಾಜನು ಬೇಗ ಹೊರಗೆ ಬಂದು ಆ ಬ್ರಾಹ್ಮಣನನ್ನೂ, ಅವನ ಮೃತಳಾದ ಸ್ತ್ರೀಯನ್ನೂ, ಆ ಮಗುವನ್ನೂ ನೋಡಿ, ಸಮಾಧಾನ ಮಾಡಿದನು. ಅನಂತರದಲ್ಲಿ ಆ ಬ್ರಾಹ್ಮಣನನ್ನು ಧೊರೆಯು ಕೇಳಿದ

ದೃಷ್ಟ್ವಾ ನೃಪತಿಕಲತ್ರೇಣ ಸಹಿತಂ ಚ ಸಬಾಲಕಂ ।
ಆಶ್ವಾಸ್ಯಾ ತ್ಯಂತಶೋಕಾರ್ತಂ ಕಿಮೇತದಿ ತಿಪೃಷ್ಟವಾನ್ ॥ ೨೩ ॥

ಸೋಽಬ್ರವೀತ್ ಪೂರ್ವವದ್ವ್ಯಾಧಂ ದರ್ಶಯಿತ್ವೇಶಿ ತತ್ಕೃತಂ ।
ವ್ಯಾಧೋಽಪ್ಯ ನಾಹಂ ಕೃತವಾನಿ ತ್ಯುಕ್ತ್ವೋ ಬ್ರಾಹ್ಮಣೀವಧಂ ॥ ೨೪ ॥

ಸಂಶಯಾವಿಷ್ಟಚಿತ್ತ ಸ್ಸಸ್ಕುಲೋತ್ತುಂಗಮಹೀಪತಿಃ ।
ಅತಿಶೋಕಾರ್ತ ಮಾಶ್ವಾಸ್ಯ ಚಾಟುಭಿ ರ್ವಚನೈರ್ದ್ವಿಜಂ ॥ ೨೫ ॥

ತ್ವಂ ಚ ಬ್ರೂಹಿ ವ್ಯಾಧ ಸತ್ಯಂ ಕೇ ನೇಯಮಬಲಾ ಹತಾ ।
ಭವಂತಂ ನ ಹನಿಷ್ಯಾಮಿ ಪ್ರೀತ ಸ್ತ್ವತ್ಸತ್ಯವಾಕ್ಯತಃ ॥ ೨೬ ॥

ಇತ್ಯುಕ್ತೋಽಪಿ ಪುನರ್ವ್ಯಾಧ ಏವಮಾಹ ನೃಪಂ ಪ್ರತಿ ।
ನೈವಾಪಮಹನಂ ನಾಥ ನಿರೂಪ್ಯಾಜ್ಞಾಂ ಕುರು ಪ್ರಭೋ ॥ ೨೭ ॥

---

ಪ್ರಶ್ನೆಗೆ " ಈ ಬೇಡನು ನನ್ನ ಹೆಂಡತಿಯನ್ನು ಕೊಂದನು " ಎಂದು ಬೇಡನನ್ನು ತೋರಿಸುತ್ತಾ ಆ ಬ್ರಾಹ್ಮಣನು ಉತ್ತರವನ್ನು ಹೇಳಿದನು. ಆಗ ರಾಜನು ವ್ಯಾಧನನ್ನು ಕೇಳಲು ಅವನು, ನಾನು ಬ್ರಾಹ್ಮಣ ಸ್ತ್ರೀಯನ್ನು ಕೊಲ್ಲಲಿಲ್ಲ. ಎಂದು ಉತ್ತರವನ್ನು ಹೇಳಿದನು.

೨೫-೨೮. ಆಗ ರಾಜನಿಗೆ ಸಂಶಯವು ಉಂಟಾಯಿತು. ಅವನು ಬಹಳ ದುಃಖಿವುಳ್ಳ ಬ್ರಾಹ್ಮಣನಿಗೆ ಹಿತವಾದ ಮಾತನ್ನು ಹೇಳಿ ಸಮಾಧಾನ ಮಾಡಿದನು. ಅನಂತರ ಬೇಡರವನನ್ನು ನೋಡಿ " ಎಲೈ ವ್ಯಾಧನೆ, ನೀನು ನಿಜವನ್ನು ಹೇಳು. ಯಾರು ಇವಳನ್ನು ಕೊಂದರು. ನಾನು ನಿಜವಾಗಿಯೂ ಶಿಕ್ಷೆ ಮಾಡುವುದಿಲ್ಲ. ನೀನು ನಿಜವನ್ನು ಹೇಳಿದರೆ ನಿನಗೆ ಅನುಕೂಲಮಾಡಿಕೊಡುವೆನು " ಎಂದು ಹೇಳಿದನು. ರಾಜನು ಇಷ್ಟು ಮಟ್ಟಿಗೆ ಹೇಳಿದಾಗ್ಯೂ ಬೇಡನು " ಎಲೈ ಪ್ರಭುವೆ, ನಾನು ಕೊಲ್ಲಲಿಲ್ಲ. ನೀನು ವಿಮರ್ಶೆಮಾಡಿ ಅಪ್ಪಣೆಯನ್ನು ಮಾಡು " ಎಂದು ನಡುಗುತ್ತಾ ಉತ್ತರವನ್ನು ಹೇಳಿದನು. ಆಗ ರಾಜನು ಬೇಡರವನ ಮಾತನ್ನು

ಇತಿ ವ್ಯಾಧೋಽಬ್ರವೀದ್ಭೀತಂ ಪ್ರಸ್ವಿನ್ನಾವಯವೈ ರ್ಯುತಃ ।
ರಾಜಾ ತದ್ವಚನಂ ಶ್ರುತ್ವಾ ಸಾಂತ್ವಯನ್ ದ್ವಿಜಮಬ್ರವೀತ್ ॥ ೨೮ ॥

ಬ್ರಹ್ಮನ್ನಸಾವೇವ ಮಾಹ ನಿರೂಪ್ಯ ವಿನಿಹನ್ಮಿತಂ ।
ಸದ್ಯೋ ಗತ್ವಾ ದಹ ಪ್ರೇತಂ ವಿಧಿರ್ಹಿ ದುರತಿಕ್ರಮಃ ॥ ೨೯ ॥

ತಥಾ ಕರಿಷ್ಯ ಇತ್ಯುಕ್ತ್ವಾ ಗತೇ ಬ್ರಾಹ್ಮಣಪುಂಗವೇ ।
ಪ್ರಹಾರಂ ಕಾರಯಿತ್ವಾಥ ಮುಷ್ಟಿಭಿಃ ಕಿಂಕರೈಃ ಸ್ವಕೈಃ ॥ ೨೯ ॥

ಬಂಧಯಿತ್ವಾ ಶೃಂಖಲಯಾ ಪಾದೌ ಪಾಣೀ ಚ ತಸ್ಯ ತು ।
ಸಮೂಲಂ ತೂನ್ಮೂಲಯಿಷ್ಯೇ ಕಾರಾಗೇಹಂ ವ್ರಜಾದ್ಯ ವೈ ॥ ೩೦ ॥

ಇತ್ಯುಕ್ತ್ವಾ ಪ್ರೇಷಯಿತ್ವಾ ತಂ ಕ್ರುಧಾ ವ್ಯಾಧಂ ಮಹೀಪತಿಃ ।
ಮಂತ್ರಿಭಿ ಶ್ಚಿಂತಯಾಮಾಸ ವಿದ್ವದ್ಭಿಶ್ಚ ದ್ವಿಜೋತ್ತಮೈಃ ॥ ೩೧ ॥

---

ಕೇಳಿ ಬ್ರಾಹ್ಮಣನಿಗೆ ಬೇಡನ ವಿಷಯವನ್ನು ವಿಚಾರಮಾಡಿ, ಅವನಿಗೆ ಶಿಕ್ಷೆ ಮಾಡುವೆನು, ನೀನು ಈ ಮೃತ ಶರೀರದ ಸಂಸ್ಕಾರವನ್ನು ಮಾಡು. ದೈವಗತಿಯು ಮೀರತಕ್ಕದ್ದಲ್ಲ, ಎಂದು ಹೇಳಿ ಅವನನ್ನು ಕಳುಹಿಸಿದನು.

೨೯–೩೩. ಹಾಗೆಯೇ ಮಾಡುತ್ತೇನೆ ಎಂದು ಬ್ರಾಹ್ಮಣನು ಹೇಳಿ ಹೊರಟುಹೋದನಂತರ ರಾಜನು ತನ್ನ ಸೇವಕರಿಂದ ಬೇಡರವನಿಗೆ ಶಿಕ್ಷೆಯನ್ನು ಮಾಡಿ ಸೆರೆಯ ಮನೆಯಲ್ಲಿಡಿಸಿದನು. ಮತ್ತು ಬೇಡರವನಿಗೆ ನಿನ್ನನ್ನು ಮೂಲ ಸಹಿತವಾಗಿ ನಾಶಮಾಡುವೆನು, ಎಂದು ಹೇಳಿದನು. ಕೋಪದಿಂದ ಬೇಡನನ್ನು ಕಳುಹಿಸಿದನಂತರ ರಾಜನು, ಮಂತ್ರಿಗಳು ಮತ್ತು ತಿಳಿದಿರುವ ಬ್ರಾಹ್ಮಣರು ಇವರನ್ನು

ಕರ್ತವ್ಯಂ ಕಾರ್ಯ ಮಜ್ಞಾಯ ಬಹು ಚಿಂತಾಸಮನ್ವಿತಃ ।
ಹಾಲಾಸ್ಯನಾಥೋ ಭಗವಾನ ಸ್ಮಾಕಂ ಕುಲದೈವತಂ ॥ ೩೨ ॥

ಅದ್ಭುತಂ ತಾಂಡವಮಪಿ ಮತ್ಪಿತ್ರರ್ಥಂ ಪುರಾ ಕರೋತ್ ।
ಇದಾನೀಂ ಮಮ ಕರ್ತವ್ಯಂ ಸರ್ವಜ್ಞೋ ವಕ್ಷ್ಯತಿ ಪ್ರಭುಃ ॥ ೩೩ ॥

ಇತಿ ನಿಶ್ಚಿತ್ಯ ಮನಸಾ ಕುಲೋತ್ತುಂಗಮಹೀಪತಿಃ ।
ಸದ್ಯಃ ಸ್ನಾತ್ವಾ ಮಹಾತೀರ್ಥೇ ಸುಮೀನಾಕ್ಷೀಂ ಪ್ರಣಮ್ಯ ಚ ॥ ೩೪ ॥

ಮೂಲಲಿಂಗಂ ಚ ಸಂಸೇವ್ಯ ಸಭಾಂ ಪ್ರಾಪ್ಯಾಥ ರಾಜತೀಂ ।
ವ್ಯತ್ಯಸ್ತನೃತ್ತಕರಣಧ್ವಜಕರ್ತಾರ ಮೀಶ್ವರಂ ॥ ೩೫ ॥

ನತ್ವಾ ಸಾಷ್ಟಾಂಗಪಂಚಾಂಗತ್ರ್ಯಂಗೈಶ್ಚಾಪಿ ಪುನಃ ಪುನಃ ।
ಸ್ತುತ್ವಾ ಚ ವಿವಿಧೈಃ ಸ್ತೋತ್ರೈ ರ್ಜಪ್ತ್ವಾ ಪ್ರಾಸಾದಮಂತ್ರಕಂ ॥ ೩೬ ॥

ಭಕ್ತ್ಯಾ ವಿಜ್ಞಾಪಯಾಮಾಸ ದೇವದೇವಂ ಕೃಪಾನಿಧಿಂ ।
ನಿರವದ್ಯಂ ಜೀವತೋ ಮೇ ದೇವಾದ್ಯಾಪದ್ಯದಾಗತಂ ॥ ೩೭ ॥

---

ಕರೆಸಿ ಪೂಜ್ಯನಾದ ಹಾಲಾಸ್ಯೇಶ್ವರನು ನನ್ನ ವಂಶದ ಕುಲದೇವನಾಗಿರುವನು. ನನ್ನ ತಂದೆಗಾಗಿ ಅತ್ಯಾಶ್ಚರ್ಯಕರವಾದ ತಾಂಡವವನ್ನು ಮಾಡಿದ ಆ ಪರಮೇಶ್ವರನು, ಸರ್ವಜ್ಞನಾಗಿರುವ ಕಾರಣ ಈಗಲೂ ಕೂಡ ನಾನು ಮಾಡಬೇಕಾದ ಕರ್ತವ್ಯವನ್ನು ನನಗೆ ತಿಳಿಸುವನು, ಎಂದು ಅವರ ಸಂಗಡ ಆಲೋಚಿಸಿದನು.

೩೪–೩೭. ಕುಲೋತ್ತುಂಗಪಾಂಡ್ಯರಾಜನು ಮನಸ್ಸಿನಲ್ಲಿ ಹೀಗೆ ಆಲೋಚಿಸಿ ಮಹಾ ತೀರ್ಥದಲ್ಲಿ ಸ್ನಾನವನ್ನು ಮಾಡಿ ಮೀನಾಕ್ಷಿದೇವಿಗೂ, ಹಾಲಾಸ್ಯೇಶ್ವರನಿಗೂ ನಮಸ್ಕರಿಸಿ ರಜತಸಭೆಯಲ್ಲಿರುವ ತಾಂಡವೇಶ್ವರನಿಗೆ ಸಾಷ್ಟಾಂಗ ಪಂಚಾಂಗ ತ್ರ್ಯಂಗ ಎಂಬ ಮೂರು ವಿಧವಾದ ನಮಸ್ಕಾರವನ್ನು ಮಾಡಿ, ಸ್ತುತಿಯನ್ನು ಹೇಳಿ, ಪ್ರಾಸಾದ ಮಂತ್ರಜಪವನ್ನು ಮಾಡಿ, ದಯಾನಿಧಿಯಾದ ದೇವದೇವನೇ, ಯಾವ ವಿಧವಾದ ಕ್ಲೇಶವೂ ಇಲ್ಲದಂತೆ ಜೀವಿಸುತ್ತಿರುವ ನನಗೆ ದೈವಗತಿಯಿಂದ ಈಗ ವಿಪತ್ತು ಬಂದಿರುವುದು. ಇದನ್ನು ವಿಮರ್ಶೆ ಮಾಡಿ, ಬೇಗನೆ ನನಗೆ ತಿಳಿಸು ಎಂದು ವಿಜ್ಞಾಪನೆ ಮಾಡಿಕೊಂಡನು.

ಏತನ್ನಿರೂಪ್ಯ ಸಹಸಾ ಮಮ ವಕ್ತುಂ ತ್ವಮರ್ಹಸಿ ।
ಇತ್ಯುಕ್ತ್ವಾ ಸಾಂಜಲಿರ್ಭೂತ್ವಾ ಸುಂದರೇಶಸ್ಯ ಸನ್ನಿಧೌ ॥ ೩೮ ॥

ತದಾ ಶರೀರಿಣೀ ವಾಣೀ ಪ್ರಾದುರ್ಭೂತಾ ಶಿಸುಸ್ವನಾ ।
ರಾಜಶೇಖರ ಸತ್ಪುತ್ರಕುಲೋತ್ತುಂಗಾ ರ್ಧರಾತ್ರಕೇ ॥ ೪೦ ॥

ನಗರೀಶೋಧನವ್ಯಾಜಾ ನ್ನಿರ್ಗತ್ಯ ಚ ಪುರಾದ್ಬಹಿಃ ।
ಸಂಚರ ತ್ವಂ ಖಡ್ಗಪಾಣಿ ರ್ಮಧ್ಯಾಹ್ನೇಚ ನ ನಿರ್ಭಯಃ ॥ ೪೧ ॥

ಸಂದಿಗ್ಧಂ ತವ ಯತ್ಕಾರ್ಯಂ ಕರಿಷ್ಯೇ ಗತ ಸಂಶಯಂ ।
ಇತಿ ಶ್ರುತ್ವಾ ಶಂಭುವಾಕ್ಯ ಮಭಿವಂದ್ಯ ಮುಹುರ್ಮುಹುಃ ॥ ೪೨ ॥

ಆತ್ಮೀಯಂ ನಿಲಯಂ ಪ್ರಾಪ್ಯ ಭುಕ್ತ್ವಾ ಸಂತೋಷಸಂಯುತಃ ।
ನಿಶಿ ನಿರ್ಗತ್ಯ ಸಹಸಾ ಪರ್ಯಟನ್ಪರಿತಃ ಪುರೀಂ ॥ ೪೩ ॥

---

೩೮–೪೩. ಕುಲೋತ್ತುಂಗಪಾಂಡ್ಯರಾಜನು ಹೀಗೆ ಹೇಳಿ, ಸುಂದರೇಶ್ವರನ ಸನ್ನಿಧಿಯಲ್ಲಿ ಅಂಜಲಿಯನ್ನು ಕಟ್ಟಿಕೊಂಡು ನಿಂತಿರುವಾಗ " ರಾಜಶೇಖರನ ಸುಪುತ್ರನಾದ ಕುಲೋತ್ತುಂಗರಾಜನೆ, ನೀನು ಅರ್ಧರಾತ್ರಿಯಲ್ಲಿ ನಗರವನ್ನು ಶೋಧನೆ ಮಾಡುವ ನೆವದಿಂದ ಈ ಪಟ್ಟಣದ ಹೊರಗಡೆಯಲ್ಲಿ ಖಡ್ಗಪಾಣಿಯಾಗಿ ಸಂಚಾರ ಮಾಡು, ಮತ್ತು ಮಧ್ಯಾಹ್ನದಲ್ಲಿಯೂ ಯಾವ ಭಯವೂ ಇಲ್ಲದೆ ಸಂಚರಿಸು. ಸಂದೇಹವಾಗಿರುವ ನಿನ್ನ ಕಾರ್ಯವನ್ನು ನಾನು ನೆರವೇರಿಸಿಕೊಡುವೆನು. ಇದರಲ್ಲಿ ಸಂಶಯಪಡಬೇಡ." ಎಂದು ಅಶರೀರವಾಣಿಯು, ಸರಿಯಾದ ಧ್ವನಿಯಿಂದ ಕೇಳಿಸಿತು. ಆಗ ರಾಜನು ಶಿವನ ಆ ವಾಕ್ಯವನ್ನು ಕೇಳಿ, ಬಹಳವಾಗಿ ಶ್ಲಾಘಿಸುತ್ತಾ, ಸಂತೋಷದಿಂದ ತನ್ನ ಮನೆಗೆ ಬಂದು, ರಾತ್ರಿಯ ಹೊತ್ತಿನಲ್ಲಿ ನಗರದ ಸುತ್ತಲೂ ತಿರುಗುತ್ತಾ, ನೀಪವನದ ಆಚೆಗೆ ಇರುವ ವೈಶ್ಯರ ಬೀದಿಯಲ್ಲಿ ಒಬ್ಬಂಟಿಗನಾಗಿ ತಿರುಗಾಡುತ್ತಾ, ಒಂದು ಕಡೆಯಲ್ಲಿ ಕುಳಿತುಕೊಂಡನು.

ಬಹಿರ್ನಿರ್ಗಪವನಸ್ಕ್ಷೇತ್ರಾದುದ್ಭೂತಾಂ ವೈಶ್ಯವೀಥಿಕಾಂ ।
ಸಂಪ್ರಾಪ್ಯ ಸಂಚರನ್ಸ್ಸಮ್ರಾಟ್ ಕ್ವಚಿದೇಕತ್ರ ತಸ್ಥಿವಾನ್ ॥ ೪೪ ॥

ವಿವಾಹೋತ್ಸವಸಂಭೂತಸಂಭ್ರಮಸ್ಯ ಗರೀಯಸಃ ।
ಭವನಸ್ಯ ಪ್ರತಿಗ್ರಾಹವೇದಿಕಾಯಾಂ ಸ್ಥಿತಾ ವುಭೌ ॥ ೪೫ ॥

ಯಮದೂತಾವುಭೌ ತತ್ರ ಭಾಷಮಾಣೌ ಪರಸ್ಪರಂ ।
ಅತ್ಯಂತಕೃಷ್ಣವರ್ಣಾಂಗೌ ತಾಲವದ್ದೀರ್ಘವಿಗ್ರಹೌ ॥ ೪೬ ॥

ದಂಷ್ಟ್ರಾಭೀಮಮುಖೌ ಕ್ರುದ್ಧೌ ಪುರುಷೌ ಸಮಲೋಕಯತ್ ।
ಕಾವೇತಾವಿತಿ ವಿಜ್ಞಾತುಂ ತಿರೋಭೂಯ ಸ್ಥಿತೋ ನೃಪಃ ॥ ೪೭ ॥

ಪುರಾ ಕೃತಾನಿ ಕೃತ್ಯಾನಿ ಬಹೂನ್ಯುಕ್ತ್ವಾ ಪುನಃ ಪುನಃ ।
ಅದ್ಯೈವ ಕನ್ಯಾವೋಢಾರಂ ಗೃಹೀತ್ವಾ ಯಮಮಂದಿರಂ ॥ ೪೮ ॥

---

೪೪-೪೬. ಅಲ್ಲಿ ಒಂದು ದೊಡ್ಡ ವಿವಾಹವು ನಡೆಯುತ್ತಿತ್ತು. ವಿವಾಹವಾಗುವ ಮನೆಯ ಜಗಲಿಯಮೇಲೆ ಇಬ್ಬರು ಯಮದೂತರು ಮಾತನಾಡುತ್ತಾ ಕುಳಿತಿದ್ದರು. ಅವರಿಬ್ಬರೂ ಕಪ್ಪಗೆ ಇರುವವರಾಗಿ ತಾಳೆಯಮರದಂತೆ ಉದ್ದವಾದ ಶರೀರವನ್ನು ಹೊಂದಿ, ಕೋರೆಯ ಹಲ್ಲಿನಿಂದ ಭಯಂಕರವಾದ ಮುಖವುಳ್ಳವರಾಗಿ, ನೋಡುವವರಿಗೆ ಭಯವನ್ನು ಉಂಟುಮಾಡುವವರಾಗಿದ್ದರು. ರಾಜನು ಅವರನ್ನು ನೋಡಿ, ಅವರ ನಿಜಸ್ಥಿತಿಯನ್ನು ತಿಳಿಯುವುದಕ್ಕಾಗಿ ಮರೆಯಾಗಿ ನಿಂತುಕೊಂಡನು.

೪೭-೪೯. ಆಗ ಯಮದೂತರು ಇಬ್ಬರೂ ತಾವು ಈಗಿನವರೆಗೆ ಮಾಡಿದ ಕೆಲಸಗಳನ್ನು ಹೇಳುತ್ತಾ "ಈಗ ನಾವಿಬ್ಬರೂ ಈ ಮದುವೆಯಲ್ಲಿ ಮದವಣಿಗನನ್ನು ಹಿಡಿಮಕೊಂಡು ಯಮನ ವಶಕ್ಕೆ ಕೊಡಬೇಕು." ಎಂದು ಹೇಳಿಕೊಂಡರು. ರಾಜನು ಅವರ ಮಾತನ್ನು ಕೇಳಿ, ತಾಂಡವೇಶ್ವರನನ್ನು ಮನಸ್ಸಿನಲ್ಲಿ ಧ್ಯಾನಮಾಡಿಕೊಂಡು, ದೃಢವಾದ ಮನಸ್ಸುಳ್ಳವನಾಗಿ ಯಾವ ಭಯವೂ ಇಲ್ಲದವನಾಗಿ, ಅವರಿಬ್ಬರ ಹತ್ತಿರಕ್ಕೆ ಬಂದು, "ಮನೋಹರವಾದ ಈ ಮದುವೆಯು ನಡೆಯುತ್ತಿರುವಾಗ ಮದುವೆಯಾಗು

ಆವಾಭ್ಯಾಂ ಸಂಪ್ರದಾತವ್ಯಮಿತ್ಯಾಹತು ರುಭೌ ತದಾ ।
ತಾಂಡವೇಶಂ ಹೃದಿ ಧ್ಯಾತ್ವಾ ಸ್ವೇಷ್ಟದಂ ದೃಢಮಾನಸಃ ॥ ೪೯ ॥

ರಾಜಾ ತದಂತಿಕಂ ಗತ್ವಾ ನಿರ್ಭಯಂ ಪೃಚ್ಛತಿ ಸ್ಮ ತೌ ।
ಮಯಾಶ್ರುತಂ ಯುಷ್ಮದು ಕ್ತ ಮುದ್ವಾಹೇ ಶಿಮನೋಹರೇ ॥ ೫೦ ॥

ಜಾಮಾತುಃ ಪ್ರಾಣಹರಣಂ ಯುವಾಭ್ಯಾಂ ಕ್ರಿಯತೇ ಕಥಂ ।
ತಾವುಭೌ ಯಮದೂತೌ ತಂ ಭೂಪತಿಂ ಪ್ರೇಕ್ಷ್ಯ ವಿಸ್ಮಿತೌ ॥ ೫೧ ॥

ಶೃಣು ರಾಜ ನ್ಮಹಾವೀರ ಹನನೋಪಾಯ ಮದ್ಭುತಂ ।
ಪಾಣೌ ಗೃಹೀತೇ ಕನ್ಯಾಯಾ ಜಾಮಾತ್ರಾ ಮುದಿತಾತ್ಮನಾ ॥ ೫೨ ॥

ಚಂಡೀ ಹಂತ್ರೀ ಹ್ರಸ್ವತೀಕ್ಷ್ಣಶೃಂಗಾಭ್ಯಾಂ ಸಹಿತಾ ಸ್ತಿ ಗೌಃ ।
ಆವಾಂ ವೇಗೇನ ತಾಂ ಗಾಂ ಚ ವಿಸೃಜಾವ ಸ್ಸುಬಂಧಿತಾಂ ॥ ೫೩ ॥

---

ವನನ್ನು ಹಿಡಿದುಕೊಂಡು ಹೋಗುತ್ತೇವೆಂದು ನೀವು ಹೇಳಿದ ಮಾತನ್ನು ನಾನು ಕೇಳಿದೆನು. ಅಳಿಯನ ಪ್ರಾಣವನ್ನು ಹೇಗೆ ಹರಣಮಾಡುತ್ತೀರಿ." ಎಂದು ಅವರಿಬ್ಬರನ್ನೂ ಕೇಳಿದನು. ಅವರಿಬ್ಬರೂ ಆ ರಾಜನ ಮಾತನ್ನು ಕೇಳಿ, ಆಶ್ಚರ್ಯಪಡುತ್ತಾ ಮಾತನಾಡಿದರು.

೫೦-೫೫. "ಮಹಾಧೀರನಾದ ಎಲೈ ರಾಜನೇ, ಕೇಳು. ವಧೆಮಾಡುವ ಉಪಾಯವನ್ನು ಹೇಳುವೆವು. ವರನು ಕನ್ಯೆಯ ಪಾಣಿಗ್ರಹಣವನ್ನು ಮಾಡಿ ಸಂತೋಷದಿಂದಿರುವನು. ಆಗ ನಾವು ಮೊನೆಯಾದ ಕೊಂಬುಗಳುಳ್ಳ ಕಟ್ಟಿಹಾಕಿರುವ ಹಸುವನ್ನು ಬಿಚ್ಚಿಬಿಡುವೆವು. ಅದು ಅವನನ್ನು ತಿವಿದು ಕೊಲ್ಲುವುದು. ನಾವು ಅವನನ್ನು ಹಿಡಿದುಕೊಂಡು ಹೋಗುವೆವು. ಈ ವಿಷಯದಲ್ಲಿ ಸಂಶಯಪಡಬೇಡ. ಮರಣಕಾಲವು ಬಂದಾಗ ಹುಲ್ಲುಕಡ್ಡಿಯೂ ವಜ್ರಾಯುಧಕ್ಕೆ ಸಮನಾಗುವುದು. ಇವತ್ತು ಪ್ರಾತಃಕಾಲದಲ್ಲಿ ಆಲದಮರದ ಬುಡದಲ್ಲಿ ಮಲಗಿದ್ದ ಸುಂದರಳಾದ

ಮುಕ್ತ್ವಾ ಸಾ ಶೀಘ್ರ ಮಾಗತ್ಯ ತಂ ಪ್ರಹೃತ್ಯ ವಧಿಷ್ಯತಿ ।
ತಸ್ಯಾಸೂನ್ ಶೀಘ್ರಮಾದಾಯ ಗಮಿಷ್ಯಾವೋ ನ ಸಂಶಯಃ ॥ ೫೪ ॥

ಮರಣೇ ಚೋದಿತೇ ಕಾಲೇ ತೃಣಂ ವಜ್ರೋಪಮಂ ಭವೇತ್ ।
ಅದ್ಯ ಪ್ರಾತರ್ದ್ವಿಜವಧೂ ರ್ವಟಮೂಲೇ ಮನೋಹರಾ ॥ ೫೫ ॥

ಪುರಾ ವ್ಯಾಧವಿಸೃಷ್ಟೇನ ಪತ್ರಿಣಾ ಪತ್ರಿಲಂಬಿನಾ ।
ಹೃತಾವಾಭ್ಯಾಂ ತು ತದ್ಭರ್ತಾ ಪಾನೀಯಾರ್ಥಂ ತಥಾಗತಃ ॥ ೫೬ ॥

ಇತಿ ತದ್ವಚನಂ ಶ್ರುತ್ವಾ ತಮಾಹೂಯ ದ್ವಿಜಂ ಜವಾತ್ ।
ತಿಷ್ಠಾತ್ರ ತ್ವಂ ತಿರೋಭೂಯ ವಚನಂ ಯಮದೂತಯೋಃ ॥ ೫೭ ॥

ಶೃಣು ಸರ್ವಂ ದ್ವಿಜವರ ನೃಪ ಏವಂ ತಮಬ್ರವೀತ್ ।
ತತ್ರ ಸ್ಥಿತೇ ದ್ವಿಜವರೇ ಸಾವಧಾನೇನ ಚೇತಸಾ ॥ ೫೮ ॥

---

ಬ್ರಾಹ್ಮಣ ಸ್ತ್ರೀಯು, ಮುಂಚಿತವಾಗಿ ಬೇಡರವನು ಬಿಟ್ಟ ಬಾಣದಿಂದ ಮೃತಳಾದಳು. ಅವಳ ಪ್ರಾಣವನ್ನು ನಾವು ಹಿಡಿದುಕೊಂಡು ಹೋದೆವು. ಅವಳ ಗಂಡನು ಆಗ ಕುಡಿಯುವ ನೀರನ್ನು ತರುವುದಕ್ಕಾಗಿ ಹೋಗಿದ್ದನು" ಎಂದು ಅವರಿಬ್ಬರೂ ರಾಜನೊಡನೆ ಹೇಳಿದರು.

೫೬–೬೧. ರಾಜನು ಅವರ ಮಾತನ್ನು ಕೇಳಿ, ತನ್ನ ಹತ್ತಿರಕ್ಕೆ ಬಂದಿದ್ದ ಬ್ರಾಹ್ಮಣನನ್ನು ಬೇಗನೆ ಅವರ ಹತ್ತಿರಕ್ಕೆ ಕರೆದುಕೊಂಡು ಬಂದು "ಎಲೈ ಬ್ರಾಹ್ಮಣನೆ, ನೀನು ಇಲ್ಲಿ ಮರೆಯಾಗಿ, ನಿಂತುಕೊಂಡು ಇವರಿಬ್ಬರ ಮಾತನ್ನು ಕೇಳು" ಎಂದು ಹೇಳಿದನು. ಆಗ ಬ್ರಾಹ್ಮಣನು ಏಕಾಗ್ರಚಿತ್ತನಾಗಿ ಅಲ್ಲಿಯೇ ಮರೆಯಾಗಿ ನಿಂತುಕೊಂಡಿದ್ದನು. ಅವರಿಬ್ಬರೂ ಹಾಲಾಸ್ಯೇಶ್ವರನ ಆಜ್ಞೆಯಿಂದ ಪ್ರೇರಿತರಾಗಿ ತಾವು ನಡೆಸಿದ ಕಾರ್ಯಗಳನ್ನು ಪದೇ ಪದೇ ಹೇಳಿಕೊಳ್ಳುತ್ತಿದ್ದರು. ಅವರಲ್ಲಿ ಒಬ್ಬನು "ಎಲೈ ಸ್ನೇಹಿತನೇ, ಕೇಳು. ನಾನು ಒಂದು ದೊಡ್ಡ ಆನೆಯನ್ನು

ಶ್ರೀಮದ್ಧಾಲಾಸ್ಯನಾಥಸ್ಯ ಶಂಭೋಃ ರಾಜ್ಞಾಪ್ರಚೋದಿತೌ ।
ಆಹತು ರ್ಯಮದೂತೌ ತೌ ಸ್ವಕೃತ್ಯಾನಿ ಪುನಃ ಪುನಃ ॥ ೫೯ ॥

ತಯೋಃ ರ್ಮಾರ್ಗಧ್ಯೇಃ ಕಶ್ಚಿದಾಹ ಸ್ವವಿಕ್ರಮ ಮನುತ್ತಮಂ ।
ಸಖೇಃ ಕಶ್ಚಿನ್ಮಹಾದಂತೀ ನಿರ್ವ್ಯಾಜೇನ ಹತೋಃ ಮಯಾ ॥ ೬೦ ॥

ಸಿಂಹಃ ಕಶ್ಚಿತ್ ನೃಪಃ ಕಶ್ಚಿತ್ ಸಾರ್ವಭೌಮೋಽಪಿ ಸಂಹೃತಃ ।
ಇತಿ ಶ್ರುತ್ವಾ ವಚಃ ಸಖ್ಯು ರನ್ಯಃ ಪ್ರಾಹ ಸ್ವವಿಕ್ರಮಂ ॥ ೬೧ ॥

ಪುರಾ ಸೃಷ್ಟೈವೇಂದುಮತೀ ದ್ವಿಜಪತ್ನೀ ಮಯಾ ಹೃತಾ ।
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಃ ಸಂಕರಜಾತಯಃ ॥ ೬೨ ॥

ಮೃಗ ಪಕ್ಷ್ಯಾದಯಶ್ಚಾನ್ಯೇ ಜಂತವ ಸ್ಸಂಹೃತಾ ಮಯಾ ।
ಅದ್ಯೈವ ಧರ್ಮರಾಜಸ್ಯ ಶಾಸನಾದ್ವಟಮೂಲಗಾ ॥ ೬೩ ॥

---

ಯಾವ ನೆಪವೂ ಇಲ್ಲದಂತೆ ಕೊಂದಿರುವೆನು. ಒಂದು ಸಿಂಹವನ್ನೂ, ಒಬ್ಬ ರಾಜನನ್ನೂ, ಒಬ್ಬ ಚಕ್ರವರ್ತಿಯನ್ನೂ ನಾನು ಕೊಂದಿರುವೆನು ಎಂದು ತನ್ನ ಶ್ರೇಷ್ಠವಾದ ಪರಾಕ್ರಮವನ್ನು ಹೇಳಿಕೊಂಡನು."

೬೨-೬೩. ಆಗ ತನ್ನ ಸ್ನೇಹಿತನ ಮಾತನ್ನು ಕೇಳಿದ ಇನ್ನೊಬ್ಬನು "ಇಂದುಮತಿ, ಎಂಬ ಬ್ರಾಹ್ಮಣನ ಹೆಂಡತಿಯನ್ನು ನಾನು ಕೊಂದಿರುವೆನು. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಸಂಕರಜಾತಿಯವರು, ಮೃಗಗಳು, ಹಕ್ಕಿಗಳು ಇನ್ನೂ ಇತರ ಪ್ರಾಣಿಗಳು, ಇವೆಲ್ಲವನ್ನೂ ನಾನು ಸಂಹಾರಮಾಡಿರುವೆನು. ಈಗ ತಾನೇ ಯಮನ ಅಪ್ಪಣೆಯ ಪ್ರಕಾರ, ಆಲದಮರದ ಬುಡದಲ್ಲಿ ಮಲಗಿದ್ದ ಬ್ರಾಹ್ಮಣಸ್ತ್ರೀಯು, ಬೇಡನು ಬಿಟ್ಟ ಬಾಣದ ವೇಗದಿಂದ ಮರಣವನ್ನು ಹೊಂದಿರುವಳು. ಮರಣಕಾಲವು ಬಂದಾಗ ಅಮೃತವು ವಿಷವಾಗುವುದು. ತುಂಟತನ

ವ್ಯಾಧ ಕ್ಷಿಪ್ತೇನ ಬಾಣೇನ ವಟಪತ್ರಾವಲಂಬಿನಾ ।
ಸಂಹೃತಾ ಬ್ರಾಹ್ಮಣೀವಕ್ಷಃಪಾತಿಶೇನ ನಭಸ್ವತಾ ॥ ೬೪ ॥

ಪ್ರಾಪ್ತೇ ಮರಣಕಾಲೇ ತು ಪೀಯೂಷಂ ಚ ಗರಾಯತೇ ।
ಗವಾದ್ಯ ಚಂಡಯಾ ಹತ್ವಾ ಜಾಮಾತರ ಮಿಹ ದ್ರುತಂ ॥ ೬೫॥

ಆವಾಭ್ಯಾಂ ಹಿ ಪ್ರಯಾತವ್ಯಂ ಕೃತೇ ಕಾಲವಿಲಂಬನೇ ।
ಚಿತ್ರಗುಪ್ತೇನ ಸಹಿತೋ ನಾಥಃ ಕೋಪಂ ಕರಿಷ್ಯತಿ ॥ ೬೬ ॥

ಇತ್ಯುಕ್ತಂ ಯಮದೂತಾಭ್ಯಾಂ ಶ್ರುತ್ವಾ ಪ್ರಾಹ ಮಹೀಪತಿಃ ।
ಬ್ರಹ್ಮಂಸ್ತ್ವಯಾ ಶ್ರುತಂ ವಾಕ್ಯಂ ಯತ್ತಥ್ಯಂ ಯಮದೂತಯೋಃ ॥೬೭॥

ದೃಷ್ಟ್ವಾ ಜಾಮಾತೃವೃತ್ತಾಂತಂ ಯಾಸ್ಯಾವ ಇತಿ ತತ್ರ ಸಃ ।
ದ್ವಿಜೇನ ಸಹಿತ ಸ್ತಸ್ಥೌ ತಯೋರ್ವಾಕ್ಯಂ ಪರೀಕ್ಷಿತುಂ ॥ ೬೮ ॥

ಪುನರ್ವ್ಯಾಹರತು ಸ್ತೌ ದ್ವೌ ಯಮದೂತೌ ಪರಸ್ಪರಂ ।
ಶ್ರೀಮದ್ವಾರಣಾಸೀ ಪುಣ್ಯಾ ಪಂಚಕ್ರೋಶಸುವಿಸ್ತರಾ ॥ ೬೮ ॥

---

ವನ್ನು ಮಾಡುವ ಗೋವಿನಿಂದ ಮದವಣಿಗನನ್ನು ಕೊಲ್ಲಿಸಿ, ನಾವು ಬೇಗ ಹೋಗ ಬೇಕು. ಕಾಲವಿಳಂಬವನ್ನು ಮಾಡಿದರೆ ಚಿತ್ರಗುಪ್ತನೊಡನೆ ಇರುವ ಯಮನು ನಮ್ಮ ಮೇಲೆ ಉಗ್ರವಾದ ಕೋಪವನ್ನು ಮಾಡುವನು" ಎಂದು ತನ್ನ ಪರಾಕ್ರಮ ವನ್ನು ವರ್ಣಿಸಿ ಹೇಳಿದನು.

೬೭-೭೦. ಅವರು ಹೇಳಿಕೊಂಡ ಮಾತನ್ನು ಕೇಳಿ ರಾಜನು "ಎಲೈ ಬ್ರಾಹ್ಮಣನೆ, ನೀನು ನಿಜಸ್ಥಿತಿಯನ್ನು ಕೇಳಿರುವೆ. ಈಗ ಮದುವೆಯಲ್ಲಿ ಅಳಿಯನ ಸ್ಥಿತಿಯನ್ನು ತಿಳಿದುಕೊಂಡು ನಾವು ಹೋಗೋಣ" ಎಂದು ಹೇಳಿ, ಆ ಯಮದೂತರ ವಾಕ್ಯದ ನಿಜಸ್ಥಿತಿಯನ್ನು ತಿಳಿಯುವುದಕ್ಕಾಗಿ ಅಲ್ಲಿಯೇ ಅವರಿಬ್ಬರೂ ನಿಂತಿದ್ದರು. ಆಗ ಅವರಿಬ್ಬರೂ "ಕಾಶೀಕ್ಷೇತ್ರವು ಬಹಳ ಪವಿತ್ರವಾದದ್ದು. ಅದು ಐದು

**ಅಸ್ಮಾಭಿರ್ನಾ ಪ್ರಯಾತವ್ಯಾ ಧರ್ಮರಾಜಸ್ಯ ಶಾಸನಾತ್ ।**
**ಶ್ರೀಮದ್ದಕ್ಷಿಣಕೈಲಾಸಃ ಪಂಚಕ್ರೋಶೇನ ಸಮ್ಮಿತಃ ॥ ೬೯ ॥**

ತತ್ರಾಪಿ ನ ಪ್ರಯಾತವ್ಯಂ ಕಾಲಹಸ್ತೀಶವೈಭವಾತ್ ।
ಪುಂಡರೀಕಪುರೀ ರಮ್ಯಾ ಸಾರ್ಧಯೋಜನಯಾನ್ವಿತಾ ॥ ೭೦ ॥

ಅತ್ಯಂತಪರಿಶುದ್ಧಾ ಸಾ ಪ್ರಯಾತವ್ಯಾ ಮಯಾ ನ ಹಿ ।
ಭೂಲೋಕಶಿವಲೋಕಾಖ್ಯಂ ಕ್ಷೇತ್ರಮುತ್ಯದ್ಭುತಂ ಪರಂ ॥ ೭೧ ॥

ಮೂಲಲಿಂಗಸ್ಯ ನಿಲಯಂ ಯೋಜನದ್ವಯವಿಸ್ತೃತಂ ।
ನ ಗಂತವ್ಯಂ ನ ಗಂತವ್ಯ ಮಸ್ಮಾಭಿಃ ಶಾಸನಾತ್ಪ್ರಭೋಃ ॥ ೭೨ ॥

**ಸರ್ವತ್ರ ಶಿವಲಿಂಗಾನಾಂ ಪರಿತಃ ಕ್ರೋಶಮಾತ್ರಕಂ ।**
**ವಿಹಾಯ ಸಂಚರಿಷ್ಯಾವ ಆವಾಂ ನಾಥಸ್ಯ ಶಾಸನಾತ್ ॥ ೭೩ ॥**

---

ಹರದಾರಿ ವಿಸ್ತಾರವಿರುವುದು. ಅಲ್ಲಿಗೆ ಧರ್ಮರಾಜನ ಅಪ್ಪಣೆಯಂತೆ ನಾವು ಹೋಗ ಕೂಡದು. ದಕ್ಷಿಣಕೈಲಾಸಕ್ಷೇತ್ರವು ಐದು ಹರದಾರಿ ವಿಸ್ತಾರವಾಗಿರುವುದು. ಕಾಳಹಸ್ತೀಶ್ವರನು ಅಲ್ಲಿರುವ ಕಾರಣ ಅವನ ಮಹಿಮೆಯಿಂದ ನಾವು ಅಲ್ಲಿಗೂ ಹೋಗಕೂಡದು.

೭೦-೭೨ ಚಿದಂಬರ ಕ್ಷೇತ್ರವು ಎರಡೂವರೆ ಹರದಾರಿ ವಿಸ್ತೀರ್ಣವಾಗಿ ರುವುದು ಬಹಳ ಪರಿಶುದ್ಧವಾದ ಅಲ್ಲಿಗೂ ನಾವು ಹೋಗಕೂಡದು. ಭೂಲೋಕ ಶಿವಲೋಕವೆಂಬ ಈ ಕ್ಷೇತ್ರವು ಎರಡು ಹರದಾರಿ ವಿಸ್ತೀರ್ಣವುಳ್ಳದ್ದು, ಅಲ್ಲಿರುವ ಮೂಲಲಿಂಗದ ಮಹಿಮೆಯಿಂದ ನಾವು ಅಲ್ಲಿಗೂ ಹೋಗಕೂಡದು.

೭೩-೭೭. ಶಿವಲಿಂಗಗಳು ಇರುವ ಎಲ್ಲಾ ಕಡೆಯಲ್ಲಿಯೂ ಸುತ್ತಲೂ ಒಂದು ಹರದಾರಿಯನ್ನು ಬಿಟ್ಟು, ನಾವು ಸಂಚರಿಸಬೇಕೆಂದು ಯಮನ ಅಪ್ಪಣೆಯು, ನಮಗೆ ಇರುವುದು ಎಂದು ಅವರಿಬ್ಬರೂ ಆಯಾಯ ಕ್ಷೇತ್ರವೈಭವವನ್ನ ಮಾತನಾಡಿದ್ದನ್ನು ಕೇಳಿದ ಕುಲೋತ್ತುಂಗರಾಜನೂ, ಬ್ರಾಹ್ಮಣನೂ ಸಂತೋಷದಿಂದ ತಮ್ಮ ಕೈಯ್ಯನ್ನು ಕಟ್ಟಿಕೊಂಡಿದ್ದರು. ಆ ವೇಳೆಗೆ ಸರಿಯಾಗಿ ಮದುವೆಯ ಮಂಗಳ

ಏವಂ ಯಮಭಟಾಭ್ಯಾಂ ತು ಸಂಪ್ರೋಕ್ತೇ ಕ್ಷೇತ್ರವೈಭವೇ ।
ಕುಲೋತ್ತುಂಗಶ್ಚ ವಿಪ್ರಶ್ಚ ಶ್ರುತ್ವಾ ಸಂತುಷ್ಟಮಾನಸೌ ॥ ೭೪ ॥

ಪಾಣಿನಾ ಪಾಣಿಮಾಬಧ್ಯ ತಿಷ್ಠತುಸ್ತೌ ಪರಸ್ಪರಂ ।
ಅಥ ಭೇರ್ಯಾದಯೋ ನೇದುಃ ಪಾಣಿಗ್ರಹಣಮಂಗಳೇ ॥ ೭೫ ॥

ಘೋಷಂ ಶ್ರುತ್ವೋನ್ಮುಚ್ಯಯಂತ್ರ ಮಾಗತ್ಯ ಶಿರಸಾ ಭೃಶಂ ।
ಜಾಮಾತರಂ ಪ್ರಜಘ್ನೇ ಗೌ ರ್ಮೃತಸುರಾಸೀತ್ತದೈವ ಸಃ ॥ ೭೬ ॥

ಹಾ ಹೇತಿ ಚುಕ್ರುಶುಃ ಸರ್ವೇ ಕಲ್ಯಾಣಾರ್ಥಂ ಸಮಾಗತಾಃ ।
ತಿರೋಭೂತೌ ಯಮಭಟೌ ಬ್ರಾಹ್ಮಣೋ ವಿಸ್ಮಿತೋಽಭವತ್ ॥ ೭೭ ॥

ದ್ವಿಜೇಂದ್ರೇಣ ನರೇಂದ್ರೋಽಪಿ ಸ್ವಾಲಯಂ ಸಹಸಾ ಯಯೌ ।
ನೀತ್ವಾ ರಾತ್ರಿಂ ಪ್ರಭಾತೇ ತು ಮಂತ್ರಿಭ್ಯೋ ಕಥಯತ್ಕ್ರಮಾತ್ ॥ ೭೮ ॥

ನಿಖಿಲಂ ರಾತ್ರಿವೃತ್ತಾಂತಂ ಹಾಲಾಸ್ಯೇಶ್ವರಕಾರಿತಂ ।
ಶ್ರುತ್ವಾ ಸರ್ವೇ ಮಂತ್ರಿಣಶ್ಚ ಕುಲೋತ್ತುಂಗ ಮವೇಕ್ಷ್ಯ ತಂ ॥ ೭೯ ॥

---

ವಾದ್ಯಗಳು ಧ್ವನಿಮಾಡಿದವು. ಆ ಧ್ವನಿಯನ್ನು ಕೇಳಿದ ಹಸುವು ಗಾಬರಿಯಿಂದ ಹಗ್ಗವನ್ನು ಕಿತ್ತುಕೊಂಡು ತನ್ನ ಕೊಂಬಿನಿಂದ ಅಳಿಯನನ್ನು ತಿವಿಯಿತು. ಅದರಿಂದ ಅವನು ಮೃತನಾಗಿ ಬಿದ್ದನು. ಮದುವೆಗೆ ಬಂದಿದ್ದವರೆಲ್ಲರೂ ಹಾಹಾಕಾರ ಮಾಡುತ್ತಾ ಅತ್ತರು. ಯಮದೂತರು ಕಣ್ಣಿಗೆ ಕಾಣದಂತೆ ಹೋದರು. ಬ್ರಾಹ್ಮಣನಿಗೆ ಆಶ್ಚರ್ಯವಾಯಿತು. ಬ್ರಾಹ್ಮಣನೂ, ರಾಜನೂ ತಮ್ಮ ತಮ್ಮ ಮನೆಗೆ ಬಂದರು. ರಾಜನು ತನ್ನ ಮಂತ್ರಿಗಳಿಗೆ ರಾತ್ರಿಯಲ್ಲಿ ನಡೆದ ಆ ವೃತ್ತಾಂತವೆಲ್ಲವನ್ನೂ ಬೆಳಗಾದಮೇಲೆ ಹೇಳಿದನು.

೭೮–೮೨. ಮಂತ್ರಿಗಳೆಲ್ಲರೂ ಹಾಲಾಸ್ಯೇಶ್ವರನು ರಾತ್ರಿಯಲ್ಲಿ ಮಾಡಿಸಿದ ವೃತ್ತಾಂತವೆಲ್ಲವನ್ನೂ ಕೇಳಿ ಕುಲೋತ್ತುಂಗರಾಜನನ್ನು ನೋಡಿ " ಶಿವಭಕ್ತರಿಗೆಲ್ಲರಿಗಿಂತಲೂ ನೀನು ಉತ್ತಮನಾಗಿರುತ್ತೀಯೆ. ನಿನ್ನ ತಂದೆಯ ಸಂತೋಷಕ್ಕಾಗಿ ಶಿವನು ಆಶ್ಚರ್ಯಕರವಾದ ತಾಂಡವವನ್ನು ಮಾಡಿದನು. ಹಾಲಾಸ್ಯೇಶ್ವರನು ಈಗ ನಿನಗೂ ಅನುಗ್ರಹವನ್ನು ಮಾಡುತ್ತಿರುವನು, ಎಂದು ಹೇಳಿದರು. ಮಂತ್ರಿಗಳು ಹೀಗೆ

ಸರ್ವೇಭ್ಯ ಶ್ಶಿವಭಕ್ತೇಭ್ಯ ಸ್ತ್ವಮೇವ ಹಿ ಶಿರೋಮಣಿಃ ।
ತಾಂಡವಂ ಕೃತವಾ೯ ಶಂಭುಸ್ತ್ವತ್ಕೃತೇ ಮ೯ಹದದ್ಭುತಂ　　। ೮೦ ॥

ತವಾ ಪ್ಯನುಗ್ರಹಂ ತ್ವದ್ಯ ಹಾಲಾಸ್ಯೇಶಃ ಕರೋತಿ ಚ ।
ಏವಮುಕ್ತೋ ಮಂತ್ರಿಭಿಸ್ತು ಪುನಃ ಪಾಂಡ್ಯಮಹೀಪತಿಃ　　॥ ೮೧ ॥

ಶಂಭುನಾ ವದ್ಯಮೇತನ್ಮೇ ಕ್ಷಾಲಿತಂ ಸುಂದರೇಣ ಚ ।
ಹಾಲಾಸ್ಯೇಶಾಶ್ರಯಫಲಂ ಪ್ರಾಪ್ತಮಾಸೀತ್ ಮಯಾಧುನಾ　　॥ ೮೨ ॥

ಇತ್ಯುಕ್ತ್ವಾ ಸಚಿವೈಃ ಸಾರ್ಧಂ ಸಂತುಷ್ಟಃ ಪಾಂಡ್ಯಭೂಪತಿಃ ।
ಬಂಧನಾ ನ್ಮೋಚಯಿತ್ವಾ ತಂ ವ್ಯಾಧ ಮಾಹೂಯ ಪಾರ್ಥಿವಃ　　॥ ೮೩ ॥

ಅಜ್ಞಾತ್ವಾ ತವ ಪೀಡಾ ಚ ಕೃತಾಸ್ಮಾಭಿಃ ಕ್ಷಮಸ್ವ ತಾಂ ।
ಇತ್ಯುಕ್ತ್ವಾ ತಂ ಚ ಸಂತೋಷ್ಯ ದತ್ವಾ ಬಹುಧನಾನಿ ಚ　　॥ ೮೪ ॥

ಪ್ರೇಷಯಿತ್ವಾಥ ವಿಪ್ರಾಯ ವಿವಾಹಾರ್ಥಂ ಧನಂ ಬಹು ।
ಪ್ರದತ್ವಾ ಪ್ರೇಷಯಾಮಾಸ ಕುಲೋತ್ತುಂಗಃ ಪ್ರತಾಪವಾನ್　　॥ ೮೫ ॥

---

ಹೇಳಿದ ಮಾತನ್ನು ಕೇಳಿ ಪಾಂಡ್ಯರಾಜನು "ಹಾಲಾಸ್ಯೇಶ್ವರನಿಂದ ನನ್ನ ಪಾಪವು ನಾಶವಾಯಿತು. ನನಗೆ ಉಂಟಾಗಿದ್ದ ಅಪವಾದವು ಹೋಯಿತು. ಹಾಲಾಸ್ಯೇಶ್ವರನ ಆಶ್ರಯದಿಂದ ಫಲವು ಈಗ ನನಗೆ ಉಂಟಾಯಿತು ಎಂದು ಮಂತ್ರಿಗಳ ಸಂಗಡ ಹೇಳಿದನು.

೮೩-೮೫. ಸಂತೋಷದಿಂದ ಇರುವ ಪಾಂಡ್ಯರಾಜನು ಬಂಧನದಲ್ಲಿ ಇರಿಸಿದ್ದ ಬೇಡನನ್ನು ಕರೆಸಿ ಆವನನ್ನು ಬಂಧನದಿಂದ ತಪ್ಪಿಸಿ " ನಾವು ತಿಳಿಯದೆ ನಿನಗೆ ತೊಂದರೆಯನ್ನು ಕೊಟ್ಟಿರುವೆವು. ಅದನ್ನು ನೀನು ಮನ್ನಿಸು " ಎಂದು ಅವನಿಗೆ ಉಪಚಾರವನ್ನು ಹೇಳಿ ಬಹಳ ದ್ರವ್ಯವನ್ನು ಅವನಿಗೆ ಕೊಟ್ಟು ಕಳುಹಿಸಿದನು. ಆಮೇಲೆ ಬ್ರಾಹ್ಮಣನನ್ನು ಬರಮಾಡಿಕೊಂಡು ಅವನು ವಿವಾಹವನ್ನು ಮಾಡಿಕೊಳ್ಳುವುದಕ್ಕಾಗಿ ಅವನಿಗೆ ಬೇಕಾದಷ್ಟು ದ್ರವ್ಯವನ್ನು ಕೊಟ್ಟು ಕಳುಹಿಸಿದನು. ಅವನು ಮದುವೆಯನ್ನು ಮಾಡಿಕೊಂಡು ತನ್ನ ಮಗನೊಡನೆ ಸುಖವಾಗಿದ್ದನು.

ಸೋऽಪಿ ಗತ್ವಾ ಕೃತೋದ್ವಾಹಃ ಸುಖಮಾಸ್ತೇ ಸಪುತ್ರಕಃ ।
ರಾಜಾಪಿ ಪ್ರೀತಹೃದಯಃ ಪ್ರಾಪ್ಯ ರೌಪ್ಯಸಭಾಂತರಂ ॥ ೮೬ ॥

ಶ್ರೀಮತ್ಸುಂದರನಾಥಸ್ಯ ಪ್ರಣಮ್ಯಾ ದ್ಭುತತಾಂಡವಂ ।
ಮುಕುಟಾದೀನಿ ಚಿತ್ರಾಣಿ ಪ್ರದಾಯಾ ಭರಣಾನಿ ಚ ॥ ೮೭ ॥

ಅನುಗ್ರಹಾಯ ಜಗತಾಂ ದಕ್ಷಿಣಸ್ಯೋ ದ್ಧೃತಸ್ಯ ಚ ।
ಶ್ರೀಮತ ಶ್ಶಂಭುಪಾದಸ್ಯ ಮಂಜೀರ ಮಪಿ ಮಂಜುಳಂ ॥ ೮೮ ॥

ಕಟಕಂ ಚ ಧ್ವಜಪಟಂ ನವರತ್ನವಿಚಿತ್ರಿತಂ ।
ಸಮರ್ಪ್ಯ ಭಕ್ತಿಸಂಪನ್ನ ಸ್ಸರ್ವಸಂಪತ್ಸಮನ್ವಿತಃ ॥ ೮೯ ॥

ಸಾರ್ಧಂ ಕಲತ್ರೈಃ ಪುತ್ರೈಶ್ಚ ಸುಭೋಗಾನನುಭೂಯ ಚ ।
ಸುಖೇನ ಮಧುರಾಪುರ್ಯಾಂ ಚಿರಮಾಸ್ತೇ ಮಹೀಪತಿಃ ॥ ೯೦ ॥

ಪಂಚವಿಂಶತಿಲೀಲೇಯಂ ಪಂಚಕೃತ್ಯವಿನೋದಿನಃ ।
ಪಠಿತಾ ವಾ ಶ್ರುತಾ ಪುಂಸಾಂ ಪಂಚತ್ವಭಯನಾಶಿನೀ ॥ ೯೧ ॥

---

೮೬–೮೯. ಸಂತೋಷದಿಂದ ಇರುವ ಕುಲೋತ್ತುಂಗರಾಜನು ತಾಂಡವೇಶ್ವರನು ನೆಲಸಿರುವ ರಜತಸಭೆಯ ಸಮೀಪಕ್ಕೆ ಬಂದು ಸುಂದರೇಶ್ವರನಿಗೆ ನಮಸ್ಕರಿಸಿ ಕಿರೀಟವೇ ಮೊದಲಾದ ಬಹಳ ಆಭರಣಗಳನ್ನು ಒಪ್ಪಿಸಿದನಂತರ ಲೋಕಾನುಗ್ರಹಕ್ಕಾಗಿ ಬಲದ ಕಾಲನ್ನು ಮೇಲಕ್ಕೆತ್ತಿ ಇರುವ ತಾಂಡವೇಶ್ವರನ ಪಾದಕ್ಕೆ ಮನೋಹರವಾಗಿ ಧ್ವನಿಮಾಡುವಂತೆ ಮಂಜೀರವೆಂಬ ಆಭರಣವನ್ನು ಮಾಡಿಸಿ ಕೊಟ್ಟನು. ಕಡಗ, ನವರತ್ನ ಖಚಿತವಾದ ಧ್ವಜಪಟಗಳನ್ನು ಭಕ್ತಿಯಿಂದ ಒಪ್ಪಿಸಿದನು.

೯೦–೯೧. ಕುಲೋತ್ತುಂಗರಾಜನು ಎಲ್ಲಾ ವಿಧವಾದ ಸಂಪತ್ತುಗಳಿಂದ ಕೂಡಿದವನಾಗಿ ಪತ್ನೀ ಪುತ್ರರೊಡನೆ ಬಹಳ ಸುಖವನ್ನು ಅನುಭವಿಸುತ್ತಾ ಮಧುರಾ ನಗರದಲ್ಲಿ ಸುಖದಿಂದ ಇದ್ದನು. * ಪಂಚಕೃತ್ಯಗಳಿಂದ ಆಟವಾಡುತ್ತಿರುವ ಪರಮೇಶ್ವರನ ಇಪ್ಪತ್ತೈದನೆಯ ಈ ಲೀಲೆಯು ಕೇಳಿದವರಿಗೂ ಓದಿದವರಿಗೂ ಜನನ ಮರಣ ದುಃಖವನ್ನು ನಾಶಗೊಳಿಸುವುದು.

---

* ಪಂಚಕೃತ್ಯ=ಸೃಷ್ಟಿ, ಸ್ಥಿತಿ, ಲಯ, ಅನುಗ್ರಹ, ತಿರೋಧಾನ.

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ವಿಪ್ರವನಿತಾವಧನಿರೂಪಣಂ ನಾಮ
ಏಕತ್ರಿಂಶೋಽಧ್ಯಾಯಃ

---

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ
ವಿಪ್ರವನಿತಾವಧ ನಿರೂಪಣವೆಂಬ ಹೆಸರುಳ್ಳ ಮೂವತ್ತೊಂದನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ದ್ವಾತ್ರಿಂಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಕಸ್ಯಚಿತ್ ದ್ವಿಜವರ್ಯಸ್ಯ ಪಿತೃಘ್ನಸ್ಯಾಪಿ ಪಾಪಿನಃ ।
ಯಥಾಘಮೀಶೋ ಹರತಿ ತಾಂ ಲೀಲಾಂ ಕಥಯಾಮಿ ವಃ ॥ ೧ ॥

ಅವಂತೀತ್ಯಸ್ತಿ ನಗರೀ ಸರ್ವಸೌಭಾಗ್ಯಸಂಯುತಾ ।
ತಸ್ಯಾಮಾಸ್ತೇ ದ್ವಿಜಃ ಶ್ರೀಮಾನ್ ಕಾಮಿನ್ಯಾ ಕಮನೀಯಯಾ ॥ ೨ ॥

ಬಾಲ್ಯೇ ವಯಸಿ ತತ್ಪತ್ನೀ ಕಂಚಿತ್ಸುತಮಜೀಜನತ್ ।
ಕಾಲೇನ ಯೌವನಂ ಪ್ರಾಪ್ಯ ಕಾಮೇನ ಸ ತು ಮೋಹಿತಃ ॥ ೩ ॥

---

### ಮೂವತ್ತೆರಡನೆಯ ಅಧ್ಯಾಯವು

೧–೫. ಅಗಸ್ತ್ಯಋಷಿಯು ಹೇಳಿದನು:— ಪಾಪಿಯಾದ ಬ್ರಾಹ್ಮಣನು ತನ್ನ ತಂದೆಯನ್ನು ಕೊಂದುಹಾಕಿದ ಪಿತೃಹತ್ಯಾದೋಷವನ್ನು ಸುಂದರೇಶ್ವರನು ನಾಶ ಪಡಿಸಿದ ಲೀಲೆಯನ್ನು ಹೇಳುವೆನು, ಕೇಳಿರಿ. ಸಮಸ್ತ ಶ್ರೇಯಸ್ಸಿಗೂ ಆಶ್ರಯವಾದ ಅವಂತೀನಗರದಲ್ಲಿ ಸುಂದರಿಯಾದ ಸ್ತ್ರೀಯನ್ನು ಬಾಲ್ಯದಲ್ಲಿಯೇ ಮದುವೆಯಾದ ಒಬ್ಬ ದ್ವಿಜನಿಗೆ ಹುಟ್ಟಿದ ಮಗನು ಬಲಾತ್ಕಾರದಿಂದ ತನ್ನ ಜನನೀ ಸಂಭೋಗವನ್ನು

ಕರೋತಿ ಜನನೀಸಂಗಂ ಬಲಾತ್ಕಾರೇಣ ಸರ್ವಥಾ ।
ಪಿತ್ರೇನಾ ಮವಮಾನಂ ಚ ಮತಿಮಾನ್ನ ಪ್ರಕಾಶಯೇತ್ ॥ ೪ ॥

ಇತಿ ನೀತಿವಚೋ ಜ್ಞಾತ್ವಾ ತೂಷ್ಣೀಂ ತಿಷ್ಠತಿ ತತ್ಪಿತಾ ।
ಮಾತ್ರಾ ರಹಸ್ಥಿತೇ ಪುತ್ರೇ ಪಿತಾ ಪಶ್ಯತ್ಕದಾಚನ ॥ ೫ ॥

ಪುತ್ರೋಽಪಿ ಪಿತರಂ ದೃಷ್ಟ್ವಾ ಕೋಪಾವೇಶೇನ ಸಂಯುತಃ ।
ನಿವಾರಿತೋಽಪಿ ಮಾತ್ರಾ ಚ ಮಾಸ್ತು ಮಾಸ್ತ್ವಿತಿ ದುರ್ಮತಿಃ ॥ ೬ ॥

ಶಿರಶ್ಛಿಛೇದ ವೇಗೇನ ಖನಿತ್ರೇಣ ಪಿತುರ್ಭೃಶಂ ।
ಮಾತುರ್ವದನಮಾಲೋಕ್ಯ ಪುನಃ ಪ್ರಾಹ ದ್ವಿಜಾತ್ಮಜಃ ॥ ೭ ॥

ಕಾಮಾರ್ತಾನಾಂ ಕುತೋ ಧರ್ಮಃ ಕುತಃ ಸ್ನೇಹಃ ಕುತಃ ಕೃಪಾ ।
ಕುತಃ ಪಿತಾ ಕುತೋ ಮಾತಾ ಕರ್ತವ್ಯಾ ಚ ಕ್ರಿಯಾ ಕುತಃ ॥ ೮ ॥

ಇತ್ಯುಕ್ತ್ವಾ ಹ್ಯರ್ಧರಾತ್ರೇ ತು ದಗ್ಧ್ವಾ ಪ್ರೇತಂ ಭಿಯಾ ತತಃ
ಗೃಹಸ್ಥಮರ್ಥ ಜಾತಂ ಚ ಗೃಹೀತ್ವಾ ಜನನೀಮಪಿ ॥ ೯ ॥

---

ಮಾಡುತ್ತಿದ್ದನು. ಅವನ ತಂದೆಯು ಇದನ್ನು ತಿಳಿದರೂ "ಪತ್ನಿಯು ಕೆಟ್ಟ ನಡತೆಯನ್ನು ಪ್ರಕಾಶಮಾಡಕೂಡದೆಂದು" ನೀತಿಗೆ ಅನುಸಾರವಾಗಿ ಸುಮ್ಮನಿದ್ದನು.

೬-೮. ಹೀಗೆಯೇ ಇರುವಾಗ ಒಂದು ದಿನ ಮಗನು ತಾಯಿಯೊಡನೆ ಭೋಗಪಡುತ್ತಿದ್ದುದನ್ನು ತಂದೆಯು ನೋಡಿದನು. ಮಗನು ತಂದೆಯನ್ನು ನೋಡಿ ಬಹಳ ಕೋಪದಿಂದ ಕೂಡಿದವನಾಗಿ ತಾಯಿಯು ಬೇಡ ಬೇಡವೆಂದು ತಡೆದರೂ ಕೆಟ್ಟಬುದ್ಧಿಯವನಾದ ಅವನು ಗುದ್ದಲಿಯಿಂದ ತನ್ನ ತಂದೆಯ ತಲೆಯನ್ನು ಕತ್ತರಿಸಿ, ದನು. ಅನಂತರ ತಾಯಿಯ ಸಂಗಡ "ಕಾಮಾರ್ತರಿಗೆ ಧರ್ಮ, ಸ್ನೇಹ, ದಯಾ ಇವುಗಳು ಯಾವುದೂ ಇಲ್ಲ. ತಂದೆ, ತಾಯಿ ಎಂಬ ವ್ಯವಸ್ಥೆಯೂ ಇರುವುದಿಲ್ಲ. ಆದ್ದರಿಂದ ಈಗ ತಂದೆಗೆ ಮುಂದಿನ ಕರ್ಮವನ್ನು ಮಾಡಬೇಕಾಗಿಲ್ಲ" ಎಂದು ಹೇಳಿದನು.

೯-೧೩. ಅನಂತರವಲ್ಲಿ ಅವನು ಅರ್ಧರಾತ್ರಿಯಲ್ಲಿಯೇ ಇತರರು ನೋಡಿಯಾರು ಎಂಬ ಭಯದಿಂದ, ಆ ಹೆಣವನ್ನು ಸುಟ್ಟು ಮನೆಯಲ್ಲಿದ್ದ ದ್ರವ್ಯವೆಲ್ಲವನ್ನೂ ತೆಗೆದುಕೊಂಡು ದೂರದೇಶಕ್ಕೆ ಪ್ರಯಾಣ ಹೊರಟನು. ದಾರಿಯಲ್ಲಿ ಕಳ್ಳರ

ಆದಾಯ ಸ ಯಯೌ ರಾತ್ರ್ಯಾಂ ದೇಶಾಂತರ ಮಗೋಚರಂ ।
ಲುಬ್ಧಕಾಸ್ತಂ ಪ್ರಹೃತ್ಯಾಶು ವಿತ್ತಮಾದಾಯ ನಿಸ್ತ್ರುಷಂ ॥ ೧೦ ॥

ರಮ್ಯಾಕೃತಿಂ ಮಾತರಂ ಚ ಗೃಹೀತ್ವಾ ಪ್ರಪಲಾಯಿತಾಃ ।
ಅನ್ಯಥಾ ಚಿಂತಿತಂ ತೇನ ದೈವೇನ ಕೃತ ಮನ್ಯಥಾ ॥ ೧೧ ॥

ಕೌಪೀನಶೇಷಸ್ತು ತದಾ ಯಾಚಮಾನಃ ಪಥಿ ಸ್ಥಿತಃ ।
ದಿನಾನಿ ಕತಿಚಿನ್ನೀತ್ವಾ ಮಲಿನಾಂಬರಕೇಶವಾನ್ ॥ ೧೨ ॥

ಮಾತ್ರಾ ಧನೇಷು ಯಾತೇಷು ಪಶ್ಯ೯ ವಿಧಿಗತಿಂ ಧಿಯಾ ।
ತೀರ್ಥಾನಿ ಪ್ರಯಯೌ ಸ್ನಾತುಂ ಗಂಗಾದೀನ್ಯಘಶಾಂತಯೇ ॥ ೧೩ ॥

ಪ್ರಯಾತುಃ ಪಾಪಿನಃ ಪಶ್ಚಾದ್ಬ್ರಹತ್ಯಾನುಧಾವತಿ ।
ಪೃಷ್ಠೇಕೋ ವಾ ಸಮಾಯಾತಿ ಇತಿ ಜಾತಭಯೋ ಧ್ರುವಂ ॥ ೧೪ ॥

ಪಶ್ಯಮಾನೇ ದ್ವಿಜಸುತೇ ನಾನ್ಯತ್ಕಿಂಚಿನ್ನ ದೃಶ್ಯತೇ
ತಸ್ಮಿ೯ ತೀರ್ಥಾಂತಿಕಂ ಪ್ರಾಪ್ತೇ ಛಾಯಾ ತಮನುಕರ್ಷತಿ ॥ ೧೫ ॥

---

ಇವನನ್ನು ಹೊಡೆದು ಇವನ ಹತ್ತಿರದಲ್ಲಿದ್ದ ದುಡ್ಡೆಲ್ಲವನ್ನೂ ಕಿತ್ತುಕೊಂಡು ಸುಂದರಿಯಾಗಿದ್ದ ಇವನ ತಾಯಿಯನ್ನು ಎತ್ತಿಕೊಂಡು ಓಡಿಹೋದರು. ಆಗ ಇವನು ( ಒಂದು ಕೌಪೀನ ) ಹರಕು ಬಟ್ಟೆಯನ್ನು ಕಟ್ಟಿಕೊಂಡು ದಾರಿಯಲ್ಲಿ ನಿಂತು ಭಿಕ್ಷೆ ಬೇಡುತ್ತಾ ಕೆಲವು ದಿನಗಳು ಮಲಿನ ವೇಷದಿಂದ ಇದ್ದನು. ಅವನು ತಾನು ಯೋಚನೆ ಮಾಡಿದ್ದಕ್ಕೆ ವಿರುದ್ಧವಾಗಿ ದೈವಗತಿಯು ಉಂಟಾಯಿತು. ತಾಯಿಯೂ ಹೋದಳು. ಧನವೂ ಹೋಯಿತು. ಆದ್ದರಿಂದ ದೈವಗತಿಯನ್ನು ಅನುಸರಿಸಿ ತನ್ನ ಪಾಪವನ್ನು ಕಳೆದುಕೊಳ್ಳುವುದಕ್ಕಾಗಿ ಗಂಗಾದಿ ತೀರ್ಥಯಾತ್ರೆ ಮಾಡಲು ಹೊರಟನು.

೧೪–೧೬. ಪಾಪಮಾಡಿರುವ ಇವನು ತೀರ್ಥಯಾತ್ರೆಯ ಪ್ರಯಾಣ ಮಾಡುವಾಗ ಇವನ ಹಿಂಭಾಗದಲ್ಲಿ ಬ್ರಹ್ಮಹತ್ಯೆಯು ಬರುತ್ತಿತ್ತು. ಇವನು ಹೆದರಿಕೆಯಿಂದ ತನ್ನ ಹಿಂದೆ ಯಾರಾದರೂ ಬರುತ್ತಾರೆಂದು ತಿರುಗಿ ನೋಡಿದಾಗ ಏನೂ ಕಾಣುತ್ತಿರಲಿಲ್ಲ. ಅವನು ತೀರ್ಥದ ಹತ್ತಿರ ಸ್ನಾನಮಾಡುವುದಕ್ಕೆ ಬಂದಾಗ ಒಂದು ನೆರಳಿನಂತಿರುವ ಮನುಷ್ಯನ ಆಕೃತಿಯು ಇವನನ್ನು ಹಿಂದಕ್ಕೆ ಎಳೆಯುತ್ತಿತ್ತು.

**ಅಥಾಸಾವಕೃತಸ್ನಾನೋ ಭ್ರಾಮ್ಯತ್ಯೇವಂ ಮಹೀತಲೇ ।**
**ಪಿತೃಘ್ನಂ ಮಾತೃಜಾರಂ ಚ ತಂ ದೇವಃ ಪಾಪಿನಂ ದ್ವಿಜಂ ॥ ೧೬ ॥**

**ಕೃಪಯಾ ರಕ್ಷಿತುಂ ಚಿತ್ತೇ ವಿಚಾರಯತಿ ದುರ್ಮತಿಃ ।**
**ದ್ವಿಜ ಸ್ತದಾನೀಂ ಸಹಸಾ ಮಧುರಾಂ ಭಾಗ್ಯತೋಽಭ್ಯಗಾತ್ ॥ ೧೭ ॥**

**ದೇವೀ ದೇವೌ ಚ ತದ್ಭಾಗ್ಯಾಚ್ಛೃಂಗಾರರಸತತ್ಪರೌ ।**
**ಶಬರೀಶಬರೌ ಭೂತ್ವಾ ಗೋಪುರದ್ವಾರಿ ತಿಷ್ಠತಃ ॥ ೧೮ ॥**

**ಮದನಸ್ಯ ಬಲೀ ಯ್ಯಸ್ತ್ವಂ ಪ್ರಶಶಂಸ ದುರಾತ್ಮನಃ ।**
**ಮದನಾರ್ತಃ ಸ್ವದಾರೇಷು ನಿರತಶ್ಚೇನ್ನ ದೋಷಭಾಕ್ ॥ ೧೯ ॥**

**ಅನ್ಯದಾರೇಷು ರಕ್ತಶ್ಚೇತ್ಪತಿಷ್ಯತಿ ನ ಸಂಶಯಃ ।**
**ಸಂಸಾರಮೂಲಂ ಕಾಮೋ ಹಿ ಚಾವಯೋರಪಿ ಸ ಪ್ರಿಯಃ ॥ ೨೦ ॥**

---

ಇದರಿಂದ ಇವನು ಎಲ್ಲಿಯೂ ಸ್ನಾನವನ್ನು ಮಾಡದೆ ಭೂಮಿಯಲ್ಲಿ ಎಲ್ಲಾ ಕಡೆಯಲ್ಲಿಯೂ ಸುಮ್ಮನೆ ಅಲೆಯುತ್ತಿದ್ದನು. ದೇವದೇವನಾದ ಮಹೇಶ್ವರನು ಕೆಟ್ಟ ಕೆಲಸವನ್ನು ಮಾಡಿರುವ ಪಾಪಿಯಾದ ಈ ಬ್ರಾಹ್ಮಣನನ್ನು ದಯೆಯಿಂದ ರಕ್ಷಿಸಬೇಕೆಂದು ಮನಸ್ಸಿನಲ್ಲಿ ಯೋಚಿಸುತ್ತಿದ್ದನು.

೧೭–೧೮. ಕೆಟ್ಟ ಬುದ್ಧಿಯ ಈ ಬ್ರಾಹ್ಮಣನು ತನ್ನ ಅದೃಷ್ಟದಿಂದ ಮಧುರಾನಗರಕ್ಕೆ ಆಗ ಬಂದನು. ಇವನ ಅದೃಷ್ಟಕ್ಕನುಸಾರವಾಗಿ ಆಗ ದೇವಿಯೂ ದೇವನೂ ಶಬರೀ ಶಬರ ವೇಷದಲ್ಲಿ ಇವನು ಬರುವ ಹೊತ್ತಿಗೆ ಸರಿಯಾಗಿ ದೇವಾಲಯದ ಗೋಪುರದ ಬಾಗಿಲಲ್ಲಿ ಶೃಂಗಾರ ಚೇಷ್ಟೆಯನ್ನು ಮಾಡುತ್ತಾ ನಿಂತಿದ್ದರು.

೧೯–೨೧. ಆಗ ಪರಮೇಶ್ವರನು ದುಷ್ಟನಾದ ಮನ್ಮಥನ ಸಾಮರ್ಥ್ಯವನ್ನು ಶ್ಲಾಘಿಸಿದನು. "ಕಾಮನಿಂದ ತೊಂದರೆಪಡುವವನು ತನ್ನ ಪತ್ನಿಯಲ್ಲಿ ಆಸಕ್ತನಾಗಿದ್ದರೆ, ಅವನಿಗೆ ಯಾವ ವಿಧವಾದ ದೋಷವೂ ಇಲ್ಲ. ಇತರರ ಪತ್ನಿಯಲ್ಲಿ ಆಸಕ್ತನಾದರೆ ಅವನು ಪಾಪಿಯಾಗುವನು. ಜನ್ಮವು ಉಂಟಾಗಲು ಕಾಮನೇ ಕಾರಣನಾಗಿರುವನು. ಅವನು ನಮ್ಮಿಬ್ಬರಿಗೂ ಪ್ರಿಯನಾಗಿರುವನು. ಹೀಗೆ ಇರುವ ಕಾಮನ ವಿಷಯದಲ್ಲಿ ಧಿಕ್ಕಾರವಿರಲಿ" ಎಂದು ಅವರಿಬ್ಬರೂ ಮಾತನಾಡಿಕೊಂಡರು.

ವರ್ತಮಾನಂ ಸ್ಮರಂ ಧಿಕ್ ಧಿಕ್ ಏನಮಿತ್ಯಾಹತುಶ್ಚ ತೌ ।
ಅತ್ರಾಂತರೇ ಸ ಭಾಗ್ಯೇನ ತಯೋರ್ದೃಷ್ಟಿಪಥಂ ಗತಃ ॥ ೨೧ ॥

ತಂ ದೃಷ್ಟ್ವಾ ಜ್ಞಾತವೃತ್ತಾಂತೌ ದಿಗ್ಧಿಗಿತ್ಯೇವಮೂಚತುಃ ।
ಅನಾಥತ್ವಾ ದಥಾಜ್ಞತ್ವಾ ದಭಾಗ್ಯತ್ವಾಚ್ಚ ಸುಂದರಃ ॥ ೨೨ ॥

ಕೃಪಯಾ ಪರಯಾ ನುನ್ನಸ್ತಸ್ಮಾದೇವ ಮುವೋಚತ ।
ಪಾರ್ಪಿ ತ್ವತ್ಕೃತಪಾಪಸ್ಯ ಪ್ರಾಯಶ್ಚಿತ್ತಂ ನ ವಿದ್ಯತೇ ॥ ೨೩ ॥

ಅಸ್ಮದ್ದೃಷ್ಟಿಪಥಂ ಪ್ರಾಪ್ತ ಸ್ತಸ್ಮಾತ್ತೇ ಕಥಯಾಮ್ಯಹಂ ।
ರಿಕ್ತೋ ಭರ್ವಾ ಸತ್ಯಮೇವ ತಸ್ಮಾದ್ದಾನಂ ನ ಕಥ್ಯತೇ ॥ ೨೪ ॥

ದಿನೇ ದಿನೇ ತ್ವಂ ಸದ್ದೂರ್ವಾಃ ಪಾನೀಯಂ ವಿತರಾಶು ಗೋಃ ।
ಅಂಗಪ್ರದಕ್ಷಿಣಂ ನಿತ್ಯಂ ಕುರು ಶಂಭೋಸ್ತು ಭಕ್ತಿತಃ ॥ ೨೫ ॥

ತದ್ಭಕ್ತಾನಾಂ ಚ ಶುಶ್ರೂಷಾಂ ವಿಶೇಷೇಣ ಸಮಾಚರ ।
ತಸ್ಯಾಭಿಷೇಕತೀರ್ಥೇನ ಸ್ನಾಹಿ ನಿತ್ಯಂ ತ್ರಿವಾರಕಂ ॥ ೨೬ ॥

---

ಈ ಸಮಯಕ್ಕೆ ಸರಿಯಾಗಿ ಪಾಪಿಯಾದ ಆ ಬ್ರಾಹ್ಮಣನು ಅವರ ದೃಗ್ಗೋಚರನಾದನು. ಅವನನ್ನು ನೋಡಿದಕೂಡಲೆ ಅವನ ವೃತ್ತಾಂತವೆಲ್ಲವೂ ಅವರಿಗೆ ತಿಳಿದುಬಂದದ್ದರಿಂದಅವನ ವಿಷಯದಲ್ಲಿ ಧಿಕ್ಕಾರವನ್ನು ಇಬ್ಬರೂ ಹೇಳಿದರು.

೨೨-೨೬. ಆದರೆ ಆ ಬ್ರಾಹ್ಮಣನಿಗೆ ದಿಕ್ಕಿಲ್ಲದಿರುವುದರಿಂದಲೂ, ತಿಳುವಳಿಕೆ ಇಲ್ಲದಿದ್ದರಿಂದಲೂ, ಅದೃಷ್ಟಹೀನನಾಗಿದ್ದುದರಿಂದಲೂ ಇವನು ಪಾಪಿಯಾಗಿರುವನು ಎಂದು ಸುಂದರೇಶ್ವರನು ದಯೆಯುಳ್ಳವನಾಗಿ "ಎಲೈ ಬ್ರಾಹ್ಮಣನೆ, ಪಾಪಿಷ್ಠನೆ, ನೀನು ಮಾಡಿರುವ ಕೆಲಸಕ್ಕೆ ಪ್ರಾಯಶ್ಚಿತ್ತವಿಲ್ಲವು. ನಮ್ಮ ದೃಷ್ಟಿಗೆ ನೀನು ಗೋಚರನಾದ್ದರಿಂದ ನಿನಗೆ ಹೇಳುವೆನು. ನೀನು ನಿಜವಾಗಿಯೂ ದರಿದ್ರನಾಗಿರುತ್ತೀಯೆ. ಆದ್ದರಿಂದ ದಾನಮಾಡುವಂತೆ ಹೇಳುವುದಿಲ್ಲ. ನೀನು ಪ್ರತಿದಿನವೂ ಗೋವುಗಳಿಗೆ ಉತ್ತಮವಾದ ಹುಲ್ಲನ್ನೂ, ನೀರನ್ನೂ ಕೊಡುತ್ತಿರು. ಪ್ರತಿದಿನವೂ ಭಕ್ತಿಯಿಂದ ಶಿವನಿಗೆ ನಮಸ್ಕಾರವನ್ನು ಮಾಡು. ಶಿವಭಕ್ತರ (ಶುಶ್ರೂಷೆ) ಸೇವೆಯನ್ನು ಪ್ರತಿದಿನವೂ ಮಾಡುತ್ತಿರು. ಶಿವಭಕ್ತರು ಸ್ನಾನಮಾಡಿದ ತೀರ್ಥದಲ್ಲಿ ಪ್ರತಿದಿನವೂ ಮೂರು

ಭಿಕ್ಷಾನ್ನೇನೈಕವಾರಂ ಚ ಜೀವ ತ್ವಂ ವಿಜಿತೇಂದ್ರಿಯಃ ।
ಏವಂ ಮಾಸತ್ರಯಂ ಕೃತ್ವಾ ವಿಪಾಪೋ ಮನ್ಯಸೇ ಜನೈಃ　　॥ ೨೭ ॥

ಇತ್ಯುಕ್ತೇ ಸುಂದರೇಶಾನೇ ಸಮಸ್ತಜನವತ್ಸಲೇ ।
ಲಸಚ್ಛಫರನೇತ್ರಾ ಸಾ ಕೃಪಾಂ ದೃಷ್ಟ್ವಾ ಮಹೇಶಿತುಃ　　॥ ೨೮ ॥

ಲೌಕಿಕೈರ್ವೈದಿಕೈಸ್ತೋತ್ರೈಃ ಸ್ತುತ್ವಾವಾಶ್ಚರ್ಯಸಂಯುತಾ ।
ಅಥ ದೇವಃ ಸಮಾಲೋಕ್ಯ ದೇವೀಮೇವ ಮವೋಚತ　　॥ ೨೯ ॥

ವಿದ್ಯಾವತೋ ಧರ್ಮಯುಜಶ್ಚಾರಿತ್ರಾಢ್ಯಸ್ಯ ರಕ್ಷಣೇ ।
ಪ್ರಯಾಸ ಸ್ಸರ್ವಥಾ ಕಾರ್ಯೋ ನೈತದಾಶ್ಚರ್ಯ ಮಾವಯೋಃ　　॥ ೩೦ ॥

ಮೂಢಸ್ಯ ಧರ್ಮಹೀನಸ್ಯ ಹ್ಯನಾಚಾರಸ್ಯ ರಕ್ಷಣಂ ।
ಆಶ್ಚರ್ಯ ಮೇತದಸ್ಮಾಭಿಃ ಕೃಪಾಮಸ್ಮಿನ್ಯಥಾ ಮಮ　　॥ ೩೧ ॥

---

ವೇಳೆಯಲ್ಲಿ ಸ್ನಾನಮಾಡು. ಭಿಕ್ಷಾನ್ನದಿಂದ ಒಂದು ಹೊತ್ತು ಊಟಮಾಡುತ್ತಾ ಇರು. ಹೀಗೆ ನೀನು ಮೂರು ತಿಂಗಳು ಇಂದ್ರಿಯಗಳನ್ನು ನಿಗ್ರಹಮಾಡಿಕೊಂಡು ಇದ್ದರೆ, ಜನರೆಲ್ಲರೂ ನಿನ್ನ ಪಾತಕವು ಹೋಯಿತು ಎಂದು ಹೇಳುವರು" ಎಂದು ಸುಂದರೇಶ್ವರನು ಆ ಬ್ರಾಹ್ಮಣನಿಗೆ ಹೇಳಿದನು.

೨೮-೩೨. ಎಲ್ಲಾ ಪ್ರಾಣಿಗಳಲ್ಲಿಯೂ ದಯೆಯುಳ್ಳ ಪರಮೇಶ್ವರನು ಹೀಗೆ ಹೇಳುತ್ತಿರುವುದನ್ನು ಕೇಳಿ, ಮೀನಾಕ್ಷೀದೇವಿಯು ಲೌಕಿಕವಾದ ಮತ್ತು ವೈದಿಕವಾದ ಸ್ತೋತ್ರಗಳಿಂದ ಅವನನ್ನು ಆಶ್ಚರ್ಯದಿಂದ ಸ್ತೋತ್ರ ಮಾಡಿದಳು. ಆಗ "ವಿದ್ಯಾವಂತರಾಗಿ ಇರುವವರು, ಧರ್ಮಿಷ್ಠರು, ಸರಿಯಾದ ನಡತೆಯುಳ್ಳವರು ಇವರನ್ನು ರಕ್ಷಿಸುವುದರಲ್ಲಿ ಶ್ರಮವನ್ನು ವಹಿಸುವುದು ಆಶ್ಚರ್ಯವಲ್ಲ. ಆಚಾರವಿಲ್ಲದವನಾಗಿ, ಕೆಟ್ಟ ಕೆಲಸವನ್ನು ಮಾಡುತ್ತಾ ತಿಳುವಳಿಕೆ ಇಲ್ಲದೆ, ಧರ್ಮವೂ ಇಲ್ಲದವನನ್ನು ರಕ್ಷಿಸುವುದು ಆಶ್ಚರ್ಯಕರವಾದ ಕೆಲಸವು. ನಾನು ಇವನಲ್ಲಿ ದಯೆಯಿಟ್ಟು ರಕ್ಷಿಸಿದಂತೆ ರಕ್ಷಿಸುವುದು ಆಶ್ಚರ್ಯವು" ಇದೇ ಮೊದಲಾದ ಮಾತುಗಳನ್ನಾಡುತ್ತಾ

ಏವಮಾದೀನಿ ವಾಕ್ಯಾನಿ ಕಥಯಿತ್ವಾ ಮಿಥ ಶ್ಶಿವೌ ।
ತಿರೋಭೂತೌ ಸೋಽಪ್ಯಕರೋತ್ಪ್ರಾಯಶ್ಚಿತ್ತಂ ಶಿವೋದಿತಂ ॥ ೩೨ ॥

ಮಾನ್ಯೋಽಭೂತ್ಸುಖಂ ಪಶ್ಚಾದ್ವಿಮುಕ್ತೋ ಬ್ರಹ್ಮಹತ್ಯಯಾ ।
ಇತಿ ಷಡ್ವಿಂಶತೀ ಲೀಲಾ ಮಯಾ ಪ್ರೋಕ್ತಾ ಶುಭಪ್ರದಾ ॥ ೩೩ ॥

ಶ್ರವಣಾ ತ್ಸರ್ವಪಾಪಘ್ನೀ ಸರ್ವ ಸಂಪತ್ಪ್ರದಾಯಿನೀ ॥ ೩೪ ॥

ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಹಾತ್ಮ್ಯೇ ಬ್ರಹ್ಮಘ್ನದೋಷಹನನಂ ನಾಮ
ದ್ವಾತ್ರಿಂಶೋಽಧ್ಯಾಯಃ

---

ಮೀನಾಕ್ಷೀ ಸುಂದರೇಶ್ವರರಿಬ್ಬರೂ ಅದೃಶ್ಯರಾದರು. ಆ ಬ್ರಾಹ್ಮಣನು ಶಿವನು ಹೇಳಿದ ಹಾಗೆ ಪ್ರಾಯಶ್ಚಿತ್ತವನ್ನು ಆಚರಿಸಿದನು.

೩೩. ಅವನು ಅದರಿಂದ ಗೌರವವನ್ನು ಹೊಂದಿ ಸುಖವನ್ನು ಹೊಂದಿದನು ಕೇಳಿದವರಿಗೆ ಶ್ರೇಯಸ್ಸನ್ನುಂಟುಮಾಡುವ, ಎಲ್ಲಾ ಪಾಪವನ್ನೂ ಹಾಳುಮಾಡುವ ಎಲ್ಲಾ ಐಶ್ವರ್ಯವನ್ನೂ ಕೊಡುವ ಇಪ್ಪತ್ತಾರನೆಯ ಲೀಲೆಯನ್ನು ಹೇಳಿರುವೆನು.

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆಯಲ್ಲಿ
ಬ್ರಹ್ಮಘ್ನದೋಷ ಹನನವೆಂಬ ಹೆಸರಿನ ಮೂವತ್ತೆರಡನೆಯ
ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಹಾಲಾಸ್ಯ ಮಾಹಾತ್ಮ್ಯಂ



## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ತ್ರಯಸ್ತ್ರಿಂಶೋಽಧ್ಯಾಯಃ

|| ಅಗಸ್ತ್ಯ ಉವಾಚ ||

ಅಂಕಂ ಜಿತ್ವಾ ಚಂಡಿಕೇಶೋ ಲೀಲಾಂ ಯಾಮಕರೋತ್ಪ್ರಭುಃ
ತಾಂ ಲೀಲಾಂ ಸಂಪ್ರವಕ್ಷ್ಯಾಮಿ ಸುಮುಸ್ತಾಪತ್ಪ್ರಭಂಜನೀಂ || ೧ ||

ಪುರಾಸ್ತಿ ಮಧುರಾಪುರ್ಯಾಂ ಕಶ್ಚಿದಾಯುಧಶಿಕ್ಷಕಃ ।
ಶಿಕ್ಷಯಿತ್ವಾ ಯಾಮಮಾತ್ರಂ ಭಟಾನ್ಪ್ರತಿದಿನಂ ಸ ವೈ || ೨ ||

ಪ್ರದಕ್ಷಿಣನಮಸ್ಕಾರಸ್ತೋತ್ರೈ ಸ್ತೋಷಯತೀಶ್ವರಂ ।
ತಸ್ಮಾತ್ತು ಬಹವೋ ಯೋಧಾ ಶ್ಶಿಕ್ಷಾಂ ಪ್ರಾಪ್ಯ ಮುದಾನ್ವಿತಾಃ || ೩ ||

---

### ಮೂವತ್ತಮೂನೆರಯ ಅಧ್ಯಾಯವು

೧-೪. ಅಗಸ್ತ್ಯಋಷಿಯು ಹೇಳಿದನು:--ಪರಮೇಶ್ವರನು ವಿವಾದದಲ್ಲಿ ಮಾಡಿಕೊಂಡಿದ್ದ ಪಣವನ್ನು ಗೆದ್ದು ವಿಪತ್ತನ್ನು ನಾಶಮಾಡಿದ ಲೀಲೆಯನ್ನು ಹೇಳುವೆನು. ಮಧುರಾನಗರದಲ್ಲಿ ಆಯುಧ ವಿದ್ಯೆಯನ್ನು ಹೇಳಿಕೊಡುವವನು ಒಬ್ಬನು ಇದ್ದನು. ಅವನು ಪ್ರತಿದಿನವೂ ಯುದ್ಧ ಮಾಡುವವರಿಗೆ ಒಂದೊಂದು ಯಾಮ ಮಾತ್ರ ಆಯುಧಗಳನ್ನು ಉಪಯೋಗಿಸುವ ವಿದ್ಯೆಯನ್ನು ಕಲಿಸಿಕೊಡುತ್ತಿದ್ದನು. ಇದರಂತೆಯೇ ಪ್ರತಿದಿನವೂ ದೇವಾಲಯಕ್ಕೆ ಬಂದು ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಶಿವನನ್ನು ಸಂತೋಷಪಡಿಸುತ್ತಿದ್ದನು. ಅವನಿಂದ ವಿದ್ಯೆಯನ್ನು

ದಕ್ಷಿಣಾಂ ಚ ಯಥಾಶಕ್ತಿ ದತ್ವಾ ವೃತ್ತಿಂ ಚ ಲೇಭಿರೇ ।
ಕಶ್ಚಿಚ್ಛಿಷ್ಯಃ ಪಾಪಬುದ್ಧಿಃ ಸಿದ್ಧಾಖ್ಯಶ್ಚಾನುಸೃತ್ಯ ತಂ ॥ ೪ ॥

ಅಸಿ ಧೇನುಮುಖಾ ವಿದ್ಯಾಃ ಸಾಕಲ್ಯೇನ ಗೃಹೀತವಾನ್ ।
ಅಸೌ ಋಜುತ್ವಾದಾಚಾರ್ಯಃ ಶ್ಶಿಕ್ಷಯಾಮಾಸ ತಂ ಪುನಃ ॥ ೫ ॥

ಸ ತದಾ ಪೂರ್ಣವಿದ್ಯತ್ವಾ ನ್ನಿರಪೇಕ್ಷತಯಾ ನ್ವಿತಃ ।
ಶಾಲಾಂ ಶ್ರಮಾಯ ಕೃತ್ವಾಥ ಶಿಕ್ಷಯದ್ಬಹೂಲಾ ನ್ಬಟೂನ್ ॥ ೬ ॥

ಪುರಾಮುಷ್ಯ ಹಿ ಸ ಚ್ಛಾತ್ರಾ ಭಟಾಃ ಕ್ರೋಧಾತ್ಸಮೇತ್ಯ ಚ ।
ಆಚಾರ್ಯಂ ಚೋದಯಾಮಾಸು ರೇವಮುಕ್ತ್ವಾ ಪುನಃ ಪುನಃ ॥ ೭ ॥

ಪ್ರತಿ ಶ್ರಮಕುಟೀಂ ಕೃತ್ವಾ ಯುಷ್ಮಚ್ಛಾಲಾಸಮಾಗತಾನ್ ।
ಸ ಸಿದ್ಧಾಖ್ಯೋ ಬಹೂನ್ಶಿಷ್ಯಾನ್ ಯುಷ್ಮದೀಯಾನ್ ಸಮಾಗ್ರಹೀತ್ ॥ ೮ ॥

---

ಕಲಿತವರು ಅನೇಕರು ಸಂತೋಷದಿಂದ ಇದ್ದರು. ಅವರು ಅವನಿಗೆ ತಮ್ಮ ಶಕ್ತಿಗನು ಸಾರವಾಗಿ ದ್ರವ್ಯವನ್ನು ಕೊಟ್ಟು ತಾವೂ ಜೀವನ ಮಾಡುತ್ತಿದ್ದರು. ಹೀಗೆ ಇರುವಾಗ ಸಿದ್ಧನೆಂದು ಹೆಸರುಳ್ಳವನು ಒಬ್ಬನು ಅವನ ಹತ್ತಿರಕ್ಕೆ ಬಂದನು.

೫-೮. ಸಿದ್ಧನು ಕೆಟ್ಟ ಬುದ್ಧಿಯುಳ್ಳವನು. ಇವನು ಅಸಿಧೇನುವೇ ಮೊದಲಾದ ಎಲ್ಲಾ ವಿದ್ಯೆಗಳನ್ನೂ ಕಲಿತುಕೊಂಡನು. ಗುರುವು ಸರಳವಾದ ಬುದ್ಧಿಯುಳ್ಳವನಾಗಿ ಸಿದ್ಧನಿಗೆ ವಿದ್ಯೆಗಳೆಲ್ಲವನ್ನೂ ಪದೇ ಪದೇ ಹೇಳಿ ಕಲಿಸಿಕೊಟ್ಟನು. ಇದರಿಂದ ಸಿದ್ಧನಿಗೆ ವಿದ್ಯೆಯೆಲ್ಲವೂ ಚೆನ್ನಾಗಿ ಬಂತು. ಆಗ ಅವನು ಇತರರ ಅಪೇಕ್ಷೆ ಇಲ್ಲದೆ ತಾನೇ ಒಂದು ವಿದ್ಯಾಶಾಲೆಯನ್ನು ಮಾಡಿಕೊಂಡು, ಬಹಳ ಜನರಿಗೆ ವಿದ್ಯಾಭ್ಯಾಸ ಮಾಡಿಸುತ್ತಿದ್ದನು. ಇವನ ಸಹಪಾಠಿಗಳು ಕೋಪದಿಂದ ಗುರುವಿನ ಹತ್ತಿರಕ್ಕೆ ಬಂದು "ಸಿದ್ಧನು ಬೇರೆಯ ವಿದ್ಯಾಶಾಲೆಯನ್ನು ಮಾಡಿಕೊಂಡು ನಿಮ್ಮ ಹತ್ತಿರಕ್ಕೆ ಬರುವ ಶಿಷ್ಯರಲ್ಲಿ ಬಹಳ ಜನರಿಗೆ ವಿದ್ಯೆಯನ್ನು ಕಲಿಸಿಕೊಡುತ್ತಿರುವನು." ಎಂದು ಪದೇ ಪದೇ ಹೇಳಿದರು.

ಶ್ರುತ್ವಾ ತು ನಿರ್ವಿಕಾರಸ್ಸ ಗುಣಿತ್ವಾದ್ವರ್ತತೇ ಸ್ಮ ಸಃ ।
ಛದ್ಮನಾ ಸ ಭಟೋ ನಿತ್ಯಮಾಚಾರ್ಯ ಗೃಹಮೇತ್ಯ ವೈ ॥ ೯ ॥

ಆಚಾರ್ಯಗೃಹಿಣೀಂ ಪ್ರಾಪ್ಯ ಬ್ರೂಹಿ ಮೇಽವಸರೋಽಸ್ತಿ ವಾ ।
ಕಿಂ ನವೇತಿ ಪ್ರಾರ್ಥಯತಿ ಮನ್ಮಥಾಧೀನಮಾನಸಃ ॥ ೧೦ ॥

ಅಸ್ಯಾಶಯಮಬುಧ್ವಾ ಸಾ ನಜಾನಾಮೀತಿ ಭಾಷತೇ ।
ಯಾತೇಷ್ವೇವಂ ಕತಿಪಯದಿನೇಷು ಸ ಭಟಾಧಮಃ ॥ ೧೧ ॥

ವೈಜನ್ಯಮವಲೋಕ್ಯಾಥ ಕದಾಚಿತ್ತಾಂ ಸಮಗ್ರಹೀತ್ ।
ಧಿಕ್ಕೃತ್ಯಾ ನಾದರಾತ್ ಸಾಧ್ವೀ ತಂ ಪ್ರಹಸ್ಯಾಲಯಂ ಗತಾ ॥ ೧೨ ॥

ವಂಚನಾ ಮವಮಾನಂ ಚ ಮತಿಮಾನ್ನ ಪ್ರಕಾಶಯೇತ್ ।
ಇತಿ ನಿಶ್ಚಿತ್ಯ ಚಿತ್ತೇ ತು ಭರ್ತ್ರಾ ಸಹ ನ ಸಾ ಬ್ರವೀತ್ ॥ ೧೩ ॥

---

೯–೧೨. ಗುರುವು ಇವರ ಮಾತನ್ನು ಕೇಳಿ ಗುಣವಂತನಾದ ಕಾರಣ ಮನಸ್ಸಿನಲ್ಲಿ ಯಾವ ವಿಕಾರವೂ ಇಲ್ಲದವನಾಗಿ ಸುಮ್ಮನಿದ್ದನು. ಸಿದ್ಧನು ಪ್ರತಿದಿನವೂ ಏನಾದರೂ ಒಂದು ನೆಪದಿಂದ ತನ್ನ ಗುರುವಿನ ಮನೆಗೆ ಬಂದು, ಗುರುವಿನ ಹೆಂಡತಿಯನ್ನು ನೋಡಿ " ನಿನಗೆ ಅವಕಾಶವು ಇದೆಯೋ, ಇಲ್ಲವೆ " ಎಂದು ವಿಚಾರಿಸುತ್ತಿದ್ದನು. ಇವನಿಗೆ ಮನಸ್ಸು ಕಾಮವಿಕಾರಾಧೀನವಾಗಿತ್ತು. ಅವಳು ಇವನ ಅಭಿಪ್ರಾಯವನ್ನು ತಿಳಿಯದೆ " ನನಗೆ ಯಾವುದೂ ಗೊತ್ತಿಲ್ಲ " ಎಂದು ಉತ್ತರವನ್ನು ಹೇಳುತ್ತಿದ್ದಳು. ಹೀಗೆಯೇ ಕೆಲವು ದಿನಗಳು ಕಳೆದವು. ಅವನು ಒಂದುದಿನ ಮನೆಯಲ್ಲಿ ಇತರರು ಯಾರೂ ಇಲ್ಲದಿರುವ ಸಮಯಕ್ಕೆ ಬಂದು ಬಲಾತ್ಕಾರದಿಂದ ಅವಳನ್ನು ಹಿಡಿದುಕೊಂಡನು. ಅವಳು ಪತಿವ್ರತೆಯಾದ ಕಾರಣ ಇವನನ್ನು ಧಿಕ್ಕರಿಸಿ, ತಿರಸ್ಕಾರ ಮಾಡಿ ನಗುತ್ತಾ ಮನೆಯೊಳಕ್ಕೆ ಹೊರಟುಹೋದಳು.

೧೩–೧೭. ಆಗ ಅವಳು " ಬುದ್ಧಿವಂತನು ಮೋಸವನ್ನೂ ಅವಮಾನವನ್ನೂ ಪ್ರಕಟಮಾಡಬಾರದು " ಎಂಬ ನೀತಿಯಂತೆ, ತನ್ನ ಗಂಡನ ಸಂಗಡ ಈ ವಿಷಯವನ್ನು ಹೇಳಲಿಲ್ಲ. ಆದರೆ ಭಕ್ತರ ಹಿತವನ್ನು ಮಾಡುವ ಹಾಲಾಸ್ಯೇಶ್ವರನು ಸಿದ್ಧನ ಗುರುವಿನ ಆಕಾರದಿಂದ ಅವನ ಹತ್ತಿರಕ್ಕೆ ಬಂದು, " ನೀನು ಹುಡುಗನಾಗಿದ್ದೀಯೆ.

ಹಾಲಾಸ್ಯನಾಯಕೋ ದೇವೋ ಭಕ್ತಾನಾಂ ಹಿತಕೃತ್ಸದಾ ।
ಭಟಂ ಸಿದ್ಧಾಖ್ಯಮಭ್ಯೇತ್ಯ ಪ್ರಾಹಾ ಚಾರ್ಯಶರೀರಧೃತ್ ॥ ೧೪ ॥

ತ್ವಂ ಯುವಾಹಂ ಚ ವೃದ್ಧೋದ್ಯ ತಥಾಪ್ಯಾ ಸಮುದ್ಯತೌ ।
ಆಕಮೇಕಂ ಕರಿಷ್ಯಾವ ಶ್ಚಂಡಿಕಾ ಪರಮೇಶ್ವರೀ ॥ ೧೫ ॥

ತವ ವಾ ಮಮ ವಾ ಸದ್ಯಃ ಕಾರ್ಯಸಿದ್ಧಿಂ ಕರಿಷ್ಯತಿ ।
ತಿಷ್ಠಾತ್ರ ವನಿತಾ ಚೇತ್ತ್ವಂ ಪುಮಾಂಶ್ಚೇದುತ್ಥಿತೋ ಭವ ॥ ೧೬ ॥

ತಚ್ಛ್ರುತ್ವಾ ಕುಪಿತೋ ಭೂತ್ವಾ ಫಲಕಾಖಡ್ಗಸಂಯುತಃ ।
ವೃದ್ಧಂ ಸದ್ಯಃ ಪ್ರಹರ್ತುಂ ತಮುದ್ಯುಕ್ತೋಽಭೂತ್ ಸಪಾಪಧೀಃ ॥ ೧೭ ॥

ಆಚಾರ್ಯವೇಷಧಾರೀ ಚ ಭಕ್ತವತ್ಸಲ ಈಶ್ವರಃ ।
ಫಲಕಾಖಡ್ಗಪಾಣಿಶ್ಚ ಶಿಷ್ಯೈರನ್ಯೈ ರ್ಜನೈರ್ವೃತಃ ॥ ೧೮ ॥

ವಿಶಾಲಂ ದೇಶಮಾಸಾದ್ಯ ವಿಧಿನಾ ಪೂಜ್ಯ ಚಂಡಿಕಾಂ ।
ಅತ್ಯೀಯ ಮತಿಚಿತ್ರಂ ಚ ದರ್ಶಯಿತ್ವಾ ಸ್ವ ವಿಕ್ರಮಂ ॥ ೧೯ ॥

---

ಈಗ ನಾನು ಮುದುಕನಾಗಿದ್ದೇನೆ. ಆದಾಗ್ಯೂ ಈಗ ನಾವಿಬ್ಬರೂ ಒಂದು ಪಣವನ್ನು ಮಾಡಿಕೊಂಡು ಯುದ್ಧವನ್ನು ಮಾಡೋಣ. ಪರಮೇಶ್ವರಿಯಾದ ಚಂಡಿಕಾ ದೇವಿಯು ನಿನಗಾಗಲಿ, ನನಗಾಗಲಿ, ಕಾರ್ಯಸಿದ್ಧಿಯನ್ನು ಬೇಗ ಉಂಟುಮಾಡು ವಳು. ನೀನು ಹೆಂಗಸಾಗಿದ್ದರೆ ಸುಮ್ಮನಿರು. ಗಂಡಸಾಗಿದ್ದರೆ ಮೇಲಕ್ಕೆ ಎದ್ದು ಬಾ" ಎಂದು ಹೇಳಿದನು. ಆಗ ಸಿದ್ಧನು ಅವನ ಮಾತನ್ನು ಕೇಳಿ, ಕೋಪದಿಂದ ಕತ್ತಿ, ಗುರಾಣಿಗಳನ್ನು ತೆಗೆದುಕೊಂಡು, ಕೆಟ್ಟ ಬುದ್ಧಿಯುಳ್ಳವನಾದ ಕಾರಣ ಆ ಮುದುಕ ನನ್ನು ಆಗಲೇ ಹೊಡೆಯುವುದಕ್ಕೆ ಸಿದ್ಧನಾದನು.

೧೮–೧೯. ಈ ಸಿದ್ಧನ ಗುರುವಿನ ಆಕಾರವನ್ನು ಧರಿಸಿರುವ ಭಕ್ತವತ್ಸಲನಾದ ಹಾಲಾಸ್ಯೇಶ್ವರನು ಖಡ್ಗ, ಗುರಾಣಿಗಳನ್ನು ಹಿಡಿದುಕೊಂಡು, ಶಿಷ್ಯರೊಡನೆ ವಿಸ್ತಾರ ವಾದ ಪ್ರದೇಶಕ್ಕೆ ಬಂದು ಚಂಡಿಕಾದೇವಿಯನ್ನು ಶಾಸ್ತ್ರಕ್ರಮದಿಂದ ಪೂಜಿಸಿ ತನ್ನ ಬಹಳ ಆಶ್ಚರ್ಯಕರವಾದ ಪರಾಕ್ರಮವನ್ನು ತೋರಿಸುತ್ತಾ ಸಿದ್ಧನು ಬರುವವರೆಗೂ ಕಾಲವನ್ನು ಕಳೆಯುತ್ತಿದ್ದನು.

ಸಿದ್ಧಾಗಮನಪರ್ಯಂತಂ ಕಾಲಕ್ಷೇಪಂ ಕರೋತಿ ಚ ।
ಸದ್ಯಃ ಸಂಸ್ನಾಯ ಭುಕ್ತ್ವಾ ಚ ಸಿದ್ಧೋಲಂಕೃತವೇಷವಾನ್ ॥ ೨೦ ॥

ಗೃಹೀತ್ವಾ ಫಲಕಂ ಖಡ್ಗಂ ಜವಾತ್ಪ್ರಾಪ್ತ ಸ್ತದಂತಿಕಂ ।
ಹಂತು ಮೇಕಪ್ರಹಾರೇಣ ಶಕ್ತ ಸ್ಸುಂದರನಾಯಕಃ ॥ ೨೧ ॥

ಲೋಕತುಷ್ಟಿಂ ಪ್ರಕುರ್ವಾಣಃ ಸವ್ಯಾಸವ್ಯಕ್ರಮೇಣ ತು ।
ಭ್ರಮಣಂ ಬಹುಧಾ ಕೃತ್ವಾ ಪುನರ್ಹಂತುಂ ಸಮುದ್ಯತಃ ॥ ೨೨ ॥

ಆಚಾರ್ಯಪತ್ನೀಸ್ವೀಕಾರಂ ಚಿಕೀರ್ಷೋಃ ವಪುಸಸ್ಸ್ಥಲಂ ।
ಪ್ರಹೃತ್ಯ ಪೂರ್ವಂ ತಸ್ಯಾಸ್ತು ಪಾಣಿಸ್ಪರ್ಶನಲೋಲುಪಂ ॥ ೨೩ ॥

ಛಿತ್ವಾ ಪಾಣಿಂ ಚ ಜಿಹ್ವಾಂ ಚ ಸಿದ್ಧಸ್ಯಾ ಸತ್ಪ್ರಲಾಪಿನಃ ।
ಮಾನೋನ್ನತಂ ಶಿರಸ್ತಸ್ಯ ಚಿಚ್ಛೇದ ಕರವಾಲತಃ ॥ ೨೪ ॥

---

೨೦–೨೪. ಸಿದ್ಧನು ಕೂಡಲೆ ಸ್ನಾನವನ್ನು ಮಾಡಿ (ಆಹಾರವನ್ನು ತಿಂದು) ಊಟಮಾಡಿಕೊಂಡು ಅಲಂಕಾರ ಮಾಡಿಕೊಂಡು ಕತ್ತಿ ಗುರಾಣಿಗಳನ್ನು ಧರಿಸಿ ಬೇಗನೆ ಆವನ ಹತ್ತಿರಕ್ಕೆ ಬಂದನು. ಸುಂದರೇಶ್ವರನು ಒಂದು ಏಟಿನಿಂದಲೇ ಅವನನ್ನು ಕೊಲ್ಲುವ ಸಾಮರ್ಥ್ಯವುಳ್ಳವನಾದ್ದರೂ ಜನಗಳಿಗೆ ಸಂತೋಷವನ್ನು ಉಂಟುಮಾಡುವ ಉದ್ದೇಶದಿಂದ ಎಡ ಬಲ ಭಾಗಗಳ ಕ್ರಮದಿಂದ ಸುತ್ತುತ್ತಾ ಅವನನ್ನು ಹೊಡೆಯಲು ಉದ್ಯುಕ್ತನಾದನು. ಅವನು ಗುರು ಪತ್ನಿಯನ್ನು ಸ್ವೀಕರಿಸ ಬೇಕೆಂದು ಅಭಿಪ್ರಾಯವುಳ್ಳವನನ್ನು ನಿಗ್ರಹಮಾಡಲು ಅವನ ಶರೀರದಲ್ಲಿ ಹೊಡೆಯ ಬೇಕಾದ ಸ್ಥಳಕ್ಕೆ ಗುರಿಯಿಟ್ಟು, ಅವಳನ್ನು ಸ್ಪರ್ಶಮಾಡುವ ಆ ಸಿದ್ಧನ ಹಸ್ತವನ್ನು ಹೊಡೆದು, ಕೆಟ್ಟಮಾತನಾಡುವ ಅವನ ನಾಲಿಗೆಯನ್ನೂ ಅವನ ಹಸ್ತವನ್ನೂ ಕತ್ತರಿಸಿ ಹಾಕಿದನು. ಅನಂತರದಲ್ಲಿ ಅಹಂಕಾರದಿಂದ ಮೆರೆಯುತ್ತಿರುವ ಅವನ ತಲೆಯನ್ನು ಕತ್ತಿಯಿಂದ ಕತ್ತರಿಸಿದನು.

ಪ್ರಶಶಂಸು ರ್ಜನಾಃ ಸರ್ವೇ ತಮಾಚಾರ್ಯಂ ಲಘುಕ್ರಿಯಂ ।
ತದಾನೀಂ ಪಶ್ಯತಾಮೇವ ಸರ್ವೇಷಾಂ ಸ ತಿರೋದಧೇ ॥ ೨೫ ॥

ವಿಸ್ಮಿತಾ ಸ್ತೇ ಭಟಾಃ ಸರ್ವೇ ಪ್ರಾಪ್ಯಾಚಾರ್ಯಸ್ಯ ಮಂದಿರಂ ।
ಕ್ವಾಚಾರ್ಯ ಇತಿ ಪಪ್ರಚ್ಛು ರ್ವನಿತಾಂ ರತ್ನಶಾಲಿನೀಂ ॥ ೨೬ ॥

ಅಧುನಾ ಸುಂದರಂ ನಂತು ಮಗಚ್ಛದಿತಿ ಸಾಬ್ರವೀತ್ ।
ಕಿಮೇತದಿತಿ ಸರ್ವೇ ತೇ ಚಾನ್ಯೋನ್ಯ ಮತಿವಿಸ್ಮಿತಾಃ ॥ ೨೭ ॥

ತತ್ರ ಸಂಭೂಯ ತಿಷ್ಠಂತಿ ಹ್ಯಾಚಾರ್ಯಭವನಾಂಕಣೇ ।
ನತ್ವಾ ಸುಂದರನಾಥಂ ತಮಾಚಾರ್ಯೋ ಗೇಹ ಮಾಯಯೌ ॥ ೨೮ ॥

ದೃಷ್ಟ್ವಾ ಜನಾ ಸ ಕಿಂ ಯೂಯ ಮಾಗತಾ ಇತ್ಯಪೃಚ್ಛತ ।
ಯುಷ್ಮದ್ವೇಷಧರಃ ಕಶ್ಚಿತ್ತ್ವಂ ಯುಷ್ಮತ್ಪರಿಪಂಥಿನಂ ॥ ೨೯ ॥

ಹತ್ವಾ ಸಿದ್ಧಂ ತಿರೋಭೂತ ಇತಿ ಸರ್ವೇ ತಮಬ್ರುವನ್ ।
ತಚ್ಛ್ರುತ್ವಾ ಕಾರಣಾಜ್ಞಾನಾ ತ್ತೂಷ್ಣೀ ಮಾಸ್ತೇ ನಿರುತ್ತರಂ ॥ ೩೦ ॥

---

೨೫-೨೮. ಈ ಯುದ್ಧವನ್ನು ನೋಡುವುದಕ್ಕೆ ಬಂದಿದ್ದ ಜನರೆಲ್ಲರೂ ಗುರುವಾದ ಅವನ ಲಘುಹಸ್ತವನ್ನು ( ಕೈ ಚಳಕವನ್ನು ) ನೋಡಿ ಅವನನ್ನು ಶ್ಲಾಘಿಸಿದರು. ಅವನು ಎಲ್ಲರೂ ನೋಡುತ್ತಿರುವಾಗಲೇ ಅದೃಶ್ಯನಾದನು. ಇದನ್ನು ನೋಡಿ ಅವರೆಲ್ಲರೂ ಆಶ್ಚರ್ಯಪಟ್ಟರು. ಅನಂತರ ಅವರೆಲ್ಲರೂ ಗುರುವಿನ ಮನೆಗೆ ಬಂದು ಆಚಾರ್ಯನು ಎಲ್ಲಿ ? ಎಂದು ಪ್ರಶ್ನೆ ಮಾಡಿದರು. ಅವನ ಹೆಂಡತಿಯು ಸುಂದರೇಶ್ವರನಿಗೆ ನಮಸ್ಕಾರವನ್ನು ಮಾಡುವುದಕ್ಕೆ ದೇವಾಲಯಕ್ಕೆ ಅವನು ಹೋಗಿರುವನು, ಎಂದು ಹೇಳಿದಳು. ಅವಳಮಾತನ್ನು ಕೇಳಿ ಅವರೆಲ್ಲರೂ ಆಶ್ಚರ್ಯಪಟ್ಟರು. ಎಲ್ಲರೂ ಆ ಗುರುವಿನ ಮನೆಯ ಪಡಸಾಲೆಯಲ್ಲಿಯೇ ಇರುವಾಗ ಸುಂದರೇಶ್ವರನಿಗೆ ನಮಸ್ಕಾರಮಾಡಿ ಇವರ ಗುರುವು ಮನೆಗೆ ಬಂದನು.

೨೯-೩೨. ಅವನು " ನೀವು ಯಾತಕ್ಕಾಗಿ ಬಂದಿದ್ದೀರಿ " ಎಂದು ಅವರನ್ನು ಕೇಳಿದನು. ಆಗ ಅವರು " ನಿಮ್ಮ ಆಕಾರವನ್ನು ಧರಿಸಿದ ಒಬ್ಬನು ನಿಮ್ಮ ಶತ್ರುವಾದ ಸಿದ್ಧನನ್ನು ಕೊಂದು ಅದೃಶ್ಯನಾದನು. " ಎಂದು ಗುರುವಿನ ಸಂಗಡ ಹೇಳಿದರು.

ದುರ್ವೃತ್ತೇನ ಚ ಸಿದ್ಧೇನ ಕೃತಂ ಕರ್ಮಾತಿನಿಂದಿತಂ ।
ವಿವಿಚ್ಯಾ ಕಥಯತ್ಪತ್ನೀ ವಲ್ಲಭೋಽಪಹ್ವರೇ ತದಾ ॥ ೩೧ ॥

ತಚ್ಛ್ರುತ್ವಾಥ ವಿನಿರ್ಗತ್ಯ ಗೇಹಾ ತ್ಸುಂದರನಾಯಕಂ ।
ಸಂಪ್ರಾಪ್ಯ ಭಕ್ತಿಭಾವೇನ ಪ್ರಣಿಪತ್ಯ ಪುನಃ ಪುನಃ ॥ ೩೨ ॥

ಇತಿ ಸಂಪ್ರಾರ್ಥಯಾಮಾಸ ಸಾಂಜಲಿ ಸ್ಸನ್ನಿಧೌ ಸ್ಥಿತಃ ।
ಸುಂದರೇಶ ಮಹಾದೇವ ಭಗವನ್ಭಕ್ತವತ್ಸಲ ॥ ೩೩ ॥

ತ್ವತ್ಪಾದಪಂಕಜೇ ಭಕ್ತಿಂ ದತ್ವಾ ಮಾಂ ರಕ್ಷ ಸರ್ವದಾ ।
ಭುಕ್ತಿಮುಕ್ತಿಕರೀಂ ಸದ್ಯಃ ಸಮಸ್ತದುರಿತಾಪಹಾಂ ॥ ೩೪ ॥

---

ಅದನ್ನು ಕೇಳಿ ಅವನು ಯುದ್ಧವಾಗುವುದಕ್ಕೂ, ಸಿದ್ಧನನ್ನು ಕೊಲ್ಲುವುದಕ್ಕೂ ಕಾರಣವು ಗೊತ್ತಿಲ್ಲದ ಕಾರಣ ಯಾವ ಉತ್ತರವನ್ನೂ ಹೇಳದೆ ಸುಮ್ಮನೆ ಇದ್ದನು. ಆಗ ಅವನ ಹೆಂಡತಿಯು ದುರಾಚಾರಿಯಾದ ಸಿದ್ಧನ ಕೆಟ್ಟ ಕೆಲಸವನ್ನು ಗುಟ್ಟಾಗಿ ವಿಸ್ತಾರವಾಗಿ ಅವನಿಗೆ ಹೇಳಿದಳು. ಅವನು ಅವಳ ಮಾತನ್ನು ಕೇಳಿ ಸುಂದರೇಶ್ವರನ ದೇವಾಲಯಕ್ಕೆ ಬಂದು ಭಕ್ತಿಯಿಂದ ಅನೇಕ ಸಾರಿ ನಮಸ್ಕರಿಸಿ, ಸುಂದರೇಶನ ಹತ್ತಿರದಲ್ಲಿ ನಿಂತುಕೊಂಡು ಬಗಸೆಯನ್ನು ಕಟ್ಟಿಕೊಂಡು ಪ್ರಾರ್ಥಿಸಿದನು.

೩೩–೩೪. "ಎಲೈ ಸುಂದರೇಶ್ವರನೇ, ಮಹಾದೇವನೇ, ಭಕ್ತರಲ್ಲಿ ಪ್ರೀತಿಯಿಂದ ಇರುವ ನೀನು, ನಿನ್ನ ಪಾದವನ್ನು ಸೇವಿಸುವುದರಲ್ಲಿ ನನಗೆ ಸ್ಥಿರವಾದ ಭಕ್ತಿಯನ್ನು ಕೊಟ್ಟು ನನ್ನನ್ನು ಕಾಪಾಡು. ಭುಕ್ತಿ ಮತ್ತು ಮುಕ್ತಿ ಇವುಗಳನ್ನು ಉಂಟುಮಾಡುವ, ಪಾಪಗಳೆಲ್ಲವನ್ನೂ ನಾಶಪಡಿಸುವ, ಶತ್ರುಗಳೆಲ್ಲವನ್ನೂ ನಾಶಮಾಡುವ ಸ್ಥಿರವಾದ ಭಕ್ತಿಯನ್ನು ನನಗೆ ಕೊಟ್ಟು ನನ್ನನ್ನು ರಕ್ಷಿಸು. ಅಜ್ಞಾನವನ್ನು ನಾಶಮಾಡಿ, ಸರಿಯಾದ ಜ್ಞಾನವನ್ನು ಉಂಟುಮಾಡುವ ನಿನ್ನ ಕಮಲದಂತಿರುವ ಪಾದಸೇವೆಯನ್ನು ಮಾಡಲು ಸ್ಥಿರವಾದ ಭಕ್ತಿಯನ್ನು ಕೊಟ್ಟು ನನ್ನನ್ನು ರಕ್ಷಿಸು.

ಸರ್ವ ಶತ್ರುಕ್ಷಯಕರೀಂ ಭಕ್ತಿಂ ದತ್ವೇಶ ಪಾಹಿ ಮಾಂ
ಅಜ್ಞಾನವಿನಿಹಂತ್ರೀಂ ಚ ಸದಾ ಸುಜ್ಞಾನದಾಯಿನೀಂ ॥ ೩೫ ॥

ಭಕ್ತಿಂ ಪ್ರದಾಯ ಮಾಂ ರಕ್ಷ ಭಗವನ್ಪಾದಪಂಕಜೇ ।
ಸಾಲೋಕ್ಯಾದಿಪದಪ್ರಾಪ್ತಿಮೂಲಭೂತಾಂ ಸುಪುಣ್ಯದಾಂ ॥ ೩೬ ॥

ಮಹಾಪಾತಕಸಂಘಘ್ನೀಂ ಭಕ್ತಿಂ ದತ್ವಾ ಚ ಪಾಲಯ ।
ಧರ್ಮಮರ್ಥಂ ಚ ಕಾಮಂ ಚ ಮೋಕ್ಷಂ ಯಾ ಸಂಪ್ರಯಚ್ಛತಿ ॥ ೩೭ ॥

ದತ್ವಾ ತಾಮತುಲಾಂ ಭಕ್ತಿಂ ಪಾಹಿ ಮಾಂ ಕರುಣಾನಿಧೇ ।
ಇತಿ ವಿಜ್ಞಾಪ್ಯ ದೇವಸ್ಯ ಸುಂದರೇಶಸ್ಯ ಸನ್ನಿಧೌ ॥ ೩೮ ॥

ಅಸ್ತ್ರಾಚಾರ್ಯಃ ಪುನಃ ಪ್ರಾಹ ಕೃಪಾಂ ಶಂಭೋರ್ವಿಚಾರ್ಯ ಚ ।
ತ್ವಯ್ಯಸ್ಮಾಕಂ ಮಿತಾಭಕ್ತಿ ರಮಿತಾ ತೇ ಕೃಪಾ ಮಯಿ ॥ ೩೯ ॥

ಫಲ್ಗುತ್ವಂ ಚ ಪ್ರಭುತ್ವಂ ಚ ಬುದ್ಧೈರ್ನಿರ್ಣೀತಮಾವಯೋಃ ।
ತಸ್ಮಾತ್ತ್ವಂ ಪೂರ್ಣಕೃಪಯಾ ಭಕ್ತಿಲೇಶಾಂಶಸಂಯುತಂ ॥ ೪೦ ॥

---

೩೫–೩೮. ನಿನ್ನ ಪಾದಗಳನ್ನು ಪೂಜಿಸಬೇಕೆಂಬ ಭಕ್ತಿಯುಂಟಾದರೆ ಸಾಲೋಕ್ಯವೇ ಮೊದಲಾದ ಮುಕ್ತಿಯು ಉಂಟಾಗುವುದು. ಬಹಳಮಟ್ಟಿನ ಪುಣ್ಯವು ಉಂಟಾಗುವುದು. ಮಹಾಪಾಪಗಳು ನಾಶವಾಗುವವು. ಧರ್ಮವೇ ಮೊದಲಾದ ನಾಲ್ಕು ವಿಧವಾದ ಪುರುಷಾರ್ಥಗಳೂ ಸಿದ್ಧಿಸುವುವು. ಆದ್ದರಿಂದ ಇಷ್ಟು ಮಹಿಮೆಯುಳ್ಳ ಭಕ್ತಿಯನ್ನು ನನಗೆ ಅನುಗ್ರಹಿಸಿ ನನ್ನನ್ನು ರಕ್ಷಿಸು. ಎಂದು ಅವನು ಸುಂದರೇಶನ ಸನ್ನಿಧಿಯಲ್ಲಿ ಪ್ರಾರ್ಥನೆಯನ್ನು ಮಾಡಿಕೊಂಡನು.

೩೯–೪೩. ಅಸ್ತ್ರವಿದ್ಯೆಯನ್ನು ಹೇಳಿಕೊಡುವ ಗುರುವು ಹೀಗೆ ಸುಂದರೇಶನನ್ನು ಪ್ರಾರ್ಥಿಸಿಕೊಂಡು, ಪುನಃ "ನಿನ್ನಲ್ಲಿ ನನಗೆ ಭಕ್ತಿಯೂ, ನನ್ನ ವಿಷಯದಲ್ಲಿ ಬಹಳ ದಯೆಯೂ ಉಂಟಾಗಲಿ. ನಾನು ನೀಚನಾಗಿರುವೆನು, ನೀನು ಪ್ರಭುವಾಗಿ ಇರುತ್ತೀಯೆ, ಎಂದು ನಿಶ್ಚಿತವಾಗಿರುವುದು. ಆದ್ದರಿಂದ ನೀನು ನನ್ನಲ್ಲಿ ಪೂರ್ಣ

ಪಾಹಿ ಪಾಹಿ ಮಹಾದೇವ ಕದಂಬವನನಾಯಕ ।
ಕರುಣಾಮೃತಪೂರ್ಣಾಂಗ ತ್ವತ್ಕಟಾಕ್ಷಾವಲೋಕನಾತ್ ॥ ೪೧ ॥

ಮದೀಯವಂಶಸಂಭೂತಾನ್ ಸರ್ವದಾ ಪಾಲಯ ಪ್ರಭೋ ।
ಇತಿ ಸಂಪ್ರಾರ್ಥ್ಯ ಸಂಜಪ್ಯ ಶ್ರೀಮತ್ಪಂಚಾಕ್ಷರಂ ಶತಂ ॥ ೪೨ ॥

ಭವನಂ ಗಂತುಮುದ್ಯುಕ್ತೇ ಹ್ಯಸ್ತ್ರವಿದ್ಯಾವಿಚಕ್ಷಣೇ ।
ಕುಲೋತ್ತುಂಗಮಹೀಪಾಲೋ ಸಮಾಗತ್ಯ ತದಂತಿಕಂ ॥ ೪೩ ॥

ಅಧಿರೋಪ್ಯ ಗಜಸ್ಕಂಧಂ ದೇವವತ್ಸರಿಪೂಜ್ಯ ಚ ।
ವಿವಿಧಾನಿ ಚ ರತ್ನಾನಿ ಭೂಷಣಾನ್ಯಂಬರಾಣಿ ಚ ॥ ೪೪ ॥

ಪ್ರದಾಯ ಸಕಲತ್ರಾಯ ಧನಾನಿ ಸುಬಹೂನಿ ಚ ।
ತದ್ವೃತ್ತಾಂತಂ ಜನೈಃ ಶೃತ್ವಾ ರಾಜಾ ಸ್ವಾಲಯ ಮಾಯಯೌ ॥ ೪೫ ॥

ಸ್ವಕೀಯಭವನಂ ಪ್ರಾಪ್ಯ ಚಾಸ್ತ್ರವಿದ್ಯಾವಿಚಕ್ಷಣಃ ।
ಕಲತ್ರೇಣ ಸಮಾಯುಕ್ತ ಶ್ಚಿರಂಜೀವತಿ ಸಂಪದಾ ॥ ೪೬ ॥

---

ವಾದ ದಯೆಯುಳ್ಳ, ನಿನ್ನ ಕಟಾಕ್ಷದಿಂದ ನೋಡಿ, ನನ್ನನ್ನು ರಕ್ಷಿಸು. ನನ್ನ ವಂಶದಲ್ಲಿ ಹುಟ್ಟಿದವರನ್ನೂ ಯಾವಾಗಲೂ ರಕ್ಷಿಸು. ಎಂದು ಸುಂದರೇಶನನ್ನು ಪ್ರಾರ್ಥಿಸಿಕೊಂಡನು " ಅನಂತರದಲ್ಲಿ ಅವನು ಪಂಚಾಕ್ಷರ ಮಂತ್ರವನ್ನು ಒಂದು ನೂರು ಸಾರಿ ಜಪಮಾಡಿ, ಮನೆಗೆ ಹೊರಡಲುದ್ಯುಕ್ತನಾದನು. ಅಷ್ಟುಹೊತ್ತಿಗೆ ಸರಿಯಾಗಿ ಕುಲೋತ್ತುಂಗರಾಜನು ಅವನ ಹತ್ತಿರಕ್ಕೆ ಬಂದನು.

೪೪–೪೫. ಆಗ ರಾಜನು ಜನಗಳಿಂದ ಅವನ ಸಮಾಚಾರವೆಲ್ಲವನ್ನೂ ತಿಳಿದುಕೊಂಡು, ಅವನನ್ನು ಕರೆದುಕೊಂಡು ಹೋಗಿ, ಆನೆಯ ಮೇಲೆ ಕೂರಿಸಿ, ದೇವರನ್ನು ಪೂಜಿಸುವಂತೆ ಪೂಜಿಸಿ, ಅವನಿಗೆ ಬಹಳವಾಗಿ ರತ್ನ, ವಸ್ತ್ರ, ಆಭರಣಗಳನ್ನು ಕೊಟ್ಟು ಬಹಳ ದ್ರವ್ಯವನ್ನು ಪಾರಿತೋಷಿಕವಾಗಿ ಕೊಟ್ಟು ತನ್ನ ಮನೆಗೆ ಬಂದನು.

೪೬–೪೭. ಅಸ್ತ್ರಾಚಾರ್ಯನಾದ ಅವನು ತನ್ನ ಮನೆಗೆ ಬಂದು, ತನ್ನ ಪತ್ನಿಯೊಡನೆ ಐಶ್ವರ್ಯವನ್ನು ಅನುಭವಿಸುತ್ತಾ ಬಹಳ ಕಾಲದವರೆಗೂ ಸುಖವಾಗಿದ್ದನು.

ಸಪ್ತವಿಂಶತಿಲೀಲೇಯಂ ಸರ್ವಸೌಭಾಗ್ಯದಾಯಿನೀ ।
ಸಕೃಚ್ಛ್ರವಣಮಾತ್ರೇಣ ಭಕ್ತಾಪತ್ಪರಿಭಂಜನೀ ॥ ೪೭ ॥

ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಅಂಕವಿಜಯೋ ನಾಮ
ತ್ರಯಸ್ತ್ರಿಂಶೋಽಧ್ಯಾಯಃ

---

ಎಲ್ಲಾ ವಿಧವಾದ ಸುಖಗಳನ್ನೂ ಒಂದು ಸಾರಿ ಕೇಳಿದ ಮಾತ್ರದಿಂದಲೇ ಕೊಡುವ ಇಪ್ಪತ್ತೇಳನೆಯ ಲೀಲೆಯನ್ನು ಹೇಳಿರುವೆನು.

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆಯಲ್ಲಿ
ಅಂಕವಿಜಯವೆಂದು ಹೆಸರುಳ್ಳ ಮೂವತ್ತಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಚತುಸ್ತ್ರಿಂಶೋಽಧ್ಯಾಯಃ



॥ ಅಗಸ್ತ್ಯ ಉವಾಚ ॥

ಸರ್ಪಸ್ಯ ಹನನಂ ಶಂಭುರಕರೋಲ್ಲೀಲಯಾ ಯಯಾ ।
ತಾಂ ಲೀಲಾಂ ಸಂಪ್ರವಕ್ಷ್ಯಾಮಿ ಪರ್ವತಾಕಾರಸಂಸ್ಥಿತೇಃ ॥ ೧ ॥

ಕುಲೋತ್ತುಂಗಮಹೀಪಾಲೇ ಸಾಯುಜ್ಯಂ ಶಾಂಭವಂ ಗತೇ ।
ಅನಂತಗುಣಪಾಂಡ್ಯಸ್ತು ರಾಜ್ಯಂ ನೀತ್ಯಾ ಹ್ಯಪಾಲಯತ್ ॥ ೨ ॥

ತಸ್ಮಿಂಸ್ತು ಕರುಣಾಪೂರ್ಣೇ ಕಮಲಾಕ್ಕೃತ ಕೇತನೇ ।
ಜಗದಾಹ್ಲಾದಜನಕೇ ಶಿವಭಕ್ತ್ಯಾ ಬೃಹತ್ತರೇ ॥ ೩ ॥

---

### ಮೂವತ್ತನಾಲ್ಕನೆಯ ಅಧ್ಯಾಯವು

೧-೪. ಅಗಸ್ತ್ಯರುಷಿಯು ಹೇಳಿದನು:—ಸುಂದರೇಶ್ವರನು ಬೆಟ್ಟದಂತಿರುವ ಸರ್ಪವನ್ನು ಸಂಹರಿಸಿದ ಲೀಲೆಯನ್ನು ಹೇಳುವೆನು. ಕುಲೋತ್ತುಂಗರಾಜನು ಶಿವಸಾಯುಜ್ಯವನ್ನು ಹೊಂದಿದಮೇಲೆ, ಅನಂತಗುಣಪಾಂಡ್ಯನು, ನೀತಿಗೆ ಅನುಸಾರವಾಗಿ ರಾಜ್ಯವನ್ನು ರಕ್ಷಿಸುತ್ತಿದ್ದನು. ಪ್ರಜೆಗಳಲ್ಲಿ ಬಹಳ ಪ್ರೀತಿಯುಳ್ಳವನಾಗಿಯೂ,

ಸಾಗರಾಂತಾಂ ಚ ಪೃಥಿವೀಂ ಪಾಂಡ್ಯೇಶೇ ಶಾಸತಿ ಪ್ರಭೌ ।
ನಗ್ನಾಃ ಸಮೇತ್ಯ ಸಹಸಾ ಪರಸ್ಪರ ಮಚಿಂತಯನ್ ॥ ೪ ॥

ವರ್ತತೇ ಜಗತೀಪಾಲ ಶ್ಶಂಭುಭಕ್ತಿಪರಾಯಣಃ ।
ಭಸ್ಮರುದ್ರಾಕ್ಷಸಂಪನ್ನಃ ಶ್ರೀಮತ್ಪಂಚಾಕ್ಷರಪ್ರಿಯಃ ॥ ೫ ॥

ಶಿವಲಿಂಗಾರ್ಚನರತಃ ಶಿವಭಕ್ತಪ್ರಪೂಜಕಃ ।
ತತ್ಸಮಾ ಸ್ತಸ್ಯ ನಗರೀವರ್ತಿನಃ ಸಕಲಾ ಜನಾಃ ॥ ೬ ॥

ನಷ್ಟಾ ನಗ್ನಾ ವಿಸಿದ್ಧಾಂತಾಃ ಕಿಂ ಕರ್ಮ ಇತಿ ತೇ ತದಾ ।
ಅಭಿಚಾರಾಣಿ ನಿಶ್ಚಿತ್ಯ ಕರ್ತುಂ ಪಾಂಡ್ಯೇಶ್ವರಂ ಪ್ರತಿ ॥ ೭ ॥

---

ಬಹಳ ಐಶ್ವರ್ಯವಂತನಾಗಿಯೂ ಇರುವ ಆ ರಾಜನು ಶಿವನಲ್ಲಿ ಭಕ್ತಿಯಿಂದ ಇರುತ್ತಾ ಪ್ರಜೆಗಳನ್ನು ಸಂತೋಷಪಡಿಸುತ್ತಾ ರಾಜ್ಯವನ್ನು ಆಳುತ್ತಿರುವಾಗ ಮಂತ್ರವಾದಿಗಳೆಲ್ಲರೂ ಸೇರಿ ಆಲೋಚಿಸಿದರು.

೫–೮. ಈ ರಾಜನು ಶಿವನಲ್ಲಿ ತುಂಬಾ ಭಕ್ತಿಯುಳ್ಳವನು. ಭಸ್ಮರುದ್ರಾಕ್ಷಿಗಳನ್ನು ಧರಿಸಿ ಶಿವಪಂಚಾಕ್ಷರ ಮಂತ್ರವನ್ನು ಜಪಮಾಡುತ್ತಿರುವನು. ಶಿವಲಿಂಗವನ್ನು ಪೂಜಿಸುವನು. ಶಿವಭಕ್ತರನ್ನು ಆದರದಿಂದ ಗೌರವವನ್ನು ಕೊಟ್ಟು ಮರ್ಯಾದೆ ಮಾಡುವನು. ಇವನ ನಗರದಲ್ಲಿರುವವರೆಲ್ಲರೂ ಇವನಂತೆಯೇ ಇರುವರು. ನಾವು ಕಲಿತುಕೊಂಡಿರುವ ವಿದ್ಯೆಗೆ ಇಲ್ಲಿ ಅವಕಾಶವಿಲ್ಲದೆ, ನಮ್ಮ ವಿದ್ಯೆಯು ನಾಶವಾಗುವ ಸಮಯವು ಬಂದಿರುವುದು. ಆದ್ದರಿಂದ ನಾವು ಈಗ ಏನು ಮಾಡೋಣ? ಅಭಿಚಾರಿಕಕರ್ಮವನ್ನು ಆಚರಿಸಿ ಈ ರಾಜನನ್ನು ನಿಗ್ರಹಮಾಡಬೇಕು" ಎಂದು ಮಂತ್ರವಾದಿಗಳೆಲ್ಲರೂ ನಿಶ್ಚಯಿಸಿಕೊಂಡು, ಎಲ್ಲರೂ ಒಂದು ಪ್ರದೇಶದಲ್ಲಿ ಸೇರಿ, ಬಹಳ ವಿಧವಾಗಿ ಮಂತ್ರವಾದಗಳನ್ನು ಮಾಡಿದರು.

ಅಕುರ್ವನ್ ತ್ರಿವಿಧಾ ಘೋರಾ ಸ್ಮಂತ್ರವಾದಾಂ ಸ್ತು ಮಂತ್ರಿಣಃ ।
ಪ್ರಧಾನಾಃ ಕೇಚಿದೇಕತ್ರ ಹೋಮಕುಂಡಂ ಪ್ರಕಲ್ಪ್ಯ ಚ ॥ ೮ ॥

ಚಕ್ರುರ್ಹೋಮಂ ಸಮೇತಾಸ್ತೇ ಸ್ವೈಃ ಸ್ವೈ ರ್ಮಂತ್ರೈ ರನೇಕಶಃ ।
ಚಿರೇ ಸತಿ ಗತೇ ಕಾಲೇ ರಾಕ್ಷಸಃ ಕುಂಡಮಧ್ಯತಃ ॥ ೯ ॥

ಅಲಾತದ್ವಯದೃಷ್ಟ್ಯಂತರ್ಲೋಚನದ್ವಯಸಂಯುತಃ ।
ವಿಶಂಕಟಾಸ್ಯಕುಹರೋ ದಂಷ್ಟ್ರಾಭ್ಯಾಂ ಚ ಭಯಾವಹಃ ॥ ೧೦ ॥

ದೀರ್ಘಾಕಾರೋ ಜಗತ್ತ್ರಾಸಕಾರಕಃ ಕಠಿನಾಂಸಯುಕ್ ।
ದೀಪ್ತಪಾವಕಸಂಕಾಶ ವೂರ್ಧ್ವೋಚ್ಚಲಿತಮೂರ್ಧಜಃ ॥ ೧೧ ॥

ಭೀಮಕಾಯೋ ಬೃಹತ್ಕುಕ್ಷಿಃ ಕ್ರುದ್ಧಾಶೀವಿಷವೀಕ್ಷಣಃ ।
ತಸ್ಮಾದಗ್ನೇಃ ಸಮುತ್ಥಾಯ ನಗ್ನಾನ್ಪ್ರತಿವಚೋಽಬ್ರವೀತ್ ॥ ೧೨ ॥

---

ಅವರಲ್ಲಿ ಮುಖ್ಯರಾದ ಕೆಲವರು ಒಂದು ಕಡೆಯಲ್ಲಿ ಹೋಮಕುಂಡವನ್ನು ಮಾಡಿಕೊಂಡು, ತಮ್ಮ ತಮ್ಮ ಮಂತ್ರಗಳನ್ನು ಹೇಳಿ ಹೋಮವನ್ನು ಮಾಡಿದರು. ಕೆಲವು ದಿನಗಳನಂತರ ಹೋಮಕುಂಡದ ಮಧ್ಯದಿಂದ ಒಬ್ಬ ರಾಕ್ಷಸನು ಮೇಲಕ್ಕೆದ್ದು ಬಂದನು.

೯–೧೩. ಅವನಿಗೆ ಕೆಂಡಗಳಂತೆ ಇರುವ ಎರಡು ಕಣ್ಣುಗಳಿದ್ದವು. ಅವನು ಬಾಯನ್ನು ದೊಡ್ಡದಾಗಿ ತೆರದಿರುತ್ತಿದ್ದನು. ಕೋರೆಯ ಹಲ್ಲಿನಿಂದ ಭಯವನ್ನುಂಟುಮಾಡುತ್ತಿದ್ದನು. ಬಹಳ ಗಟ್ಟಿಯಾದ ಹೆಗಲುಳ್ಳವನಾಗಿ, ದೊಡ್ಡ ಕೈಕಾಲು ಮುಂತಾದ ಆಕೃತಿಯುಳ್ಳವನಾಗಿ ಇದ್ದ ಅವನು, ಪ್ರಾಣಿಗಳಿಗೆ ಹಿಂಸೆಯನ್ನುಂಟು ಮಾಡುವ ಸ್ವಭಾವವುಳ್ಳವನಾಗಿ ಇದ್ದನು. ಉರಿಯುತ್ತಿರುವ ಬೆಂಕಿಯ ಹಾಗೆ ಇರುವ ಅವನ ತಲೆಯ ಕೂದಲುಗಳು ಅವನಿಗೆ ಇದ್ದವು. ಅವನು ಭಯಂಕರವಾದ ಆಕಾರದಿಂದ, ದೊಡ್ಡ ಹೊಟ್ಟೆಯುಳ್ಳವನಾಗಿ ಕೋಪದಿಂದ ಇರುವ ಹಾವಿನಂತೆ, ಎಲ್ಲರನ್ನೂ ನೋಡುತ್ತಿದ್ದನು. ಹೀಗಿರುವ ಅವನು, ಹೋಮ

ಮಹತ್ಕುಕ್ಷ್ಯನಲಜ್ವಾಲಾಮಾಲಾ ದಹತಿ ಮೇ ತನುಂ ।
ಕಿಂ ಬ್ರೂತ ಕಿಂ ಕರಿಷ್ಯಾಮಿ ಕಿಮಾಹೂತೋ ಮಯಾ ನ್ವೈ ॥ ೧೩ ॥

ಇತಿ ತದ್ವಚನಂ ಶ್ರುತ್ವಾ ನಗ್ನಾಃ ಪ್ರೀತಿಪುರಸ್ಸರಾಃ ।
ಶೈಲರೂಪಫಣೀಂದ್ರ ಸ್ಸ ನ್ಮಧುರಾಂ ಪ್ರಾಪ್ಯ ರಾಕ್ಷಸ ॥ ೧೪ ॥

ಪಾಂಡ್ಯರಾಟ್ ಶಿವಭಕ್ತ ಸ್ಸನ್ನುದ್ಯುಕ್ತೋ ಸ್ಮಾನ್ಪ್ರಬಾಧಿತುಂ ।
ತಂ ನೃಪಂ ತಸ್ಯ ನಗರೀವಾಸಿನಃ ಸಕಲಾನ್ಜನಾನ್ ॥ ೧೫ ॥

ಸಹಸಾ ವಿಷವೇಗೇನ ಸಂಹರೇತಿ ತಮಬ್ರುವನ್ ।
ಸೋಽಪಿ ತದ್ವೇಷಧಾರೀ ಸನ್ ಮಹಾಕಾಯೋಽನಲಾರ್ಚಿಮಾನ್ ॥ ೧೬ ॥

ಸ್ಫುಟಾಂ ವಿವೃತ್ಯ ಜಿಹ್ವೇ ದ್ವೇ ಚಲಯಂಶ್ಚಂದ್ರಸನ್ನಿಭೇ ।
ಫೂತ್ಕಾರಂ ಭೀಷಣಂ ಕುರ್ವನ್ನಾಯಯೌ ಮಧುರಾಪುರೀಂ ॥ ೧೭ ॥

---

ಕುಂಡದಿಂದ ಎದ್ದ ಕೂಡಲೆ ಮಂತ್ರವಾದಿಗಳನ್ನು "ನನಗೆ ಬಹಳ ಹಸಿವಾಗುತ್ತಿದೆ. ನೀವು ನನ್ನನ್ನು ಏತಕ್ಕೆ ಕರೆದಿರುವಿರಿ. ಈಗ ನಾನು ಏನುಮಾಡಬೇಕು" ಎಂದು ಕೇಳಿದನು.

೧೪-೧೭. ಮಂತ್ರವಾದಿಗಳು ಅವನ ಮಾತನ್ನು ಕೇಳಿ ಬಹಳ ಸಂತೋಷ ದಿಂದ "ನೀನು ಬೆಟ್ಟದ ಹಾಗೆ ಇರುವ ಹಾವಿನ ರೂಪವನ್ನು ಧರಿಸಿ, ಮಧುರಾನಗರಕ್ಕೆ ಹೋಗಿ, ನಮಗೆ ತೊಂದರೆ ಕೊಡುತ್ತಿರುವ ಶಿವಭಕ್ತನಾದ ಪಾಂಡ್ಯರಾಜನನ್ನೂ, ಆ ನಗರದಲ್ಲಿರುವ ಇತರ ಜನರನ್ನೂ ನಿನ್ನ ವಿಷದ ವೇಗದಿಂದ ನಾಶಪಡಿಸು" ಎಂದು ಹೇಳಿದರು. ಆಗ ಅವನು ಅವರ ಇಷ್ಟದಂತೆ ಆಕಾರವನ್ನು ಧರಿಸಿಕೊಂಡು, ದೊಡ್ಡ ಶರೀರವುಳ್ಳವನಾಗಿ, ಬೆಂಕಿಯ ಉರಿಯುಳ್ಳವನಾಗಿ, ಚಂದ್ರನಂತಿರುವ ಎರಡು ನಾಲಗೆ ಗಳನ್ನು ಪದೇ ಪದೇ ಹೊರಗಡೆಗೆ ಚಾಚುತ್ತಾ, ಭಯಂಕರವಾಗಿ ಬುಸುಗುಟ್ಟುತ್ತಾ ಮಧುರಾನಗರಕ್ಕೆ ಬಂದನು.

ತಂ ದೃಷ್ಟ್ವಾ ಭೀತಮನಸೋ ಜನಾ ರಾಜ್ಞೇ ವ್ಯಜಿಜ್ಞಪನ್ ।
ಸ ರಾಜಾ ಸಹಸೋತ್ಥಾಯ ನಿವಾರಯಿತು ಮುದ್ಯತಃ ॥ ೧೮ ॥

ಫಣೀಂದ್ರಂ ಪರ್ವತಾಕಾರಂ ದೃಷ್ಟ್ವಾ ಶಂಕಾಸಮನ್ವಿತಃ ।
ಸುಂದರೇಶಂ ಹೃದಿ ಧ್ಯಾತ್ವಾ ವ್ಯಸೃಜ ದ್ಭಲ್ಲಮುತ್ತಮಂ ॥ ೧೯ ॥

ದಂಶಯಿತ್ವಾ ಭಲ್ಲಕಂ ಸ ಸ್ತಂ ಖಾದಯಿತು ಮುದ್ಯತಃ ।
ಪುನಶ್ಚ ವಿಸೃಜದ್ಭಲ್ಲಾ ನನೇಕಾನ್ಭೂಪತಿಃ ಸ್ಥಿತಃ ॥ ೨೦ ॥

ಭಲ್ಲೀ ನಿಕೃತ್ತಗಾತ್ರಸ್ಸ ನ್ಮುದ್ವವಾಮ ವಿಷಂ ಬಹು ।
ವಿಷವೇಗಃ ಪ್ರವಹತಿ ನದೀವೇಗ ಇವೋಲ್ಬಣಃ ॥ ೨೧ ॥

ತಜ್ಜ್ವಾಲಯಾಭಿಸಂತಪ್ತಾ ಸ್ಸಮಸ್ತಾ ಮೂರ್ಛಯಾನ್ವಿತಾಃ ।
ಹಾ ಹೇತಿ ಸರ್ವೇ ಕ್ರೋಶಂತೋ ನೃಪಾದ್ಯಾಃ ಸುಂದರೇಶ್ವರಂ ॥ ೨೨ ॥

---

೧೮–೨೨. ಮಧುರಾನಗರದ ಜನರು ಆ ಹಾವನ್ನು ನೋಡಿ ಭಯಪಟ್ಟು ರಾಜನಿಗೆ ತಿಳಿಸಿದರು. ರಾಜನು ಬೇಗನೆ ಹೊರಟುಬಂದು, ಅದನ್ನು ನಿವಾರಿಸಲು ದ್ಯುಕ್ತನಾದನು. ಆದರೆ ಬೆಟ್ಟದಹಾಗೆ ಇರುವ ಆ ಹಾವನ್ನು ನೋಡಿದ್ದರಿಂದ ರಾಜನಿಗೂ ಸಂದೇಹವಾಯಿತು. ಆದಾಗ್ಯೂ ಅವನು ತನ್ನ ಇಷ್ಟದೇವನಾದ ಸುಂದರೇಶ್ವರನನ್ನು ಮನಸ್ಸಿನಲ್ಲಿ ಸ್ಮರಿಸುತ್ತಾ, ಹರಿತವಾದ ಭಲ್ಲೆಯಿಂದ ಆ ಹಾವಿಗೆ ಹೊಡೆದನು. ಅದು ಭಲ್ಲೆಯನ್ನು ಕಚ್ಚಿ ತಿನ್ನಲು ಉಪಕ್ರಮಿಸಿತು. ಅದನ್ನು ನೋಡಿ ರಾಜನು ಬೇಗ ಬೇಗ ಬೇರೆ ಭಲ್ಲೆಗಳಿಂದ ಹೊಡೆಯುತ್ತಾ ಬಂದನು. ಅದರಿಂದ ಹಾವಿನ ಶರೀರವು ಕತ್ತರಿಸಿಹೋಯಿತು. ಆದರ ಮುಖದಿಂದ ವಿಷವು ಬಹಳವಾಗಿ ಸುರಿದು ನದಿಯಲ್ಲಿ ನೀರು ಹರಿಯುವಂತೆ, ಹರಿಯಲು ಪ್ರಾರಂಭ ವಾಯಿತು. ಆ ವಿಷದ ವೇಗದಿಂದ ಜನರೆಲ್ಲರೂ ಸಂಕಟದಿಂದ ಮೂರ್ಛೆಯನ್ನು ಹೊಂದಿದರು. ಆಗ ರಾಜನೂ ವಿಷದ ವೇಗಕ್ಕೆ ಸಿಕ್ಕಿದವನಾಗಿ, ಎಲ್ಲರೂ ಆರ್ತನಾದ ಮಾಡುತ್ತಾ ಸುಂದರೇಶ್ವರನ ಹತ್ತಿರಕ್ಕೆ ಓಡಿಬಂದರು. ಅವರು ವಿಷದಿಂದುಂಟಾದ ತೊಂದರೆಯನ್ನು ತಪ್ಪಿಸುವುದಕ್ಕಾಗಿ ಸುಂದರೇಶ್ವರನನ್ನು ಪ್ರಾರ್ಥಿಸಿದರು.

ಸಂಪ್ರಾಪ್ಯ ಪ್ರಾರ್ಥಯಾಮಾಸು ರ್ವಿಷಸಂತಾಪಶಾಂತಯೇ ।
ಸುಂದರೇಶ ಕೃಪಾರಾಶೇ ಹಾಲಾಹಲವಿಷಾಪಹ ॥ ೨೩ ॥

ಪಾಹಿ ನಶ್ಶರಣಾಪನ್ನಾನ್ವಿಷವೇಗವಿಮೋಹಿತಾನ್ ।
ಕಾಲಕಾಲ ಪುರಾರಾತೇ ಕಾಮಾರೇ ಭಕ್ತವತ್ಸಲ ॥ ೨೪ ॥

ಪಾಹಿ ನಶ್ಶರಣಾಪನ್ನಾನ್ವಿಷವೇಗೇನ ಪೀಡಿತಾನ್ ।
ತಟಾತಕಾಪತೇ ಶಂಭೋ ಜಟಾಬದ್ಧಕಲಾಧರ ॥ ೨೫ ॥

ಪಾಹಿ ನಶ್ಶರಣಾಪನ್ನಾನ್ವಿಷಾರ್ತಾನ್ ವಿಬುಧಾನಿವ ।
ಕದಂಬಕಾನನಾಧೀಶ ಕಮಲಾಪತಿಪೂಜಿತ ॥ ೨೬ ॥

ಪಾಹಿ ನಶ್ಶರಣಪನ್ನಾನ್ವಿಷಾಜ್ವಾಲಾವಿಮೂರ್ಛಿತಾನ್ ।
ಕರ್ಪೂರಸುಂದರ ಶಿವ ಕರ್ಪೂರಾತ್ಯಂತಶೀತಲ ॥ ೨೭ ॥

ಕರ್ಪೂರಧವಲಾಕಾರ ಸರ್ವದಾಸ್ಮಾಚ್ಚ ಪಾಹಿ ನಃ ।
ಜೀವನ್ಮುಕ್ತಿಪುರೇಶಾನ ಜೀವನ್ಮುಕ್ತಿಪ್ರದಾಯಕ ॥ ೨೮ ॥

ಜೀವನ್ಮುಕ್ತಿಂ ಗತಾನಸ್ಮಾನ್ಜೀವಯಾ ಸ್ಮಾದ್ವಿಷೋಲ್ಬಣಾತ್ ।
ಭೂಲೋಕಶಿವಲೋಕೇಶ ಭೂಲೋಕಾಮರಪಾದಪ ॥ ೨೯ ॥

---

೨೩-೩೦. "ಎಲೈ ಸುಂದರೇಶ್ವರನೇ, ನೀನು ಪ್ರಪಂಚದ ವಿಷಯದಲ್ಲಿ ದಯೆಯುಳ್ಳವನಾಗಿ ಇರುತ್ತೀಯೆ. ಹಾಲಾಹಲವೆಂಬ ವಿಷದ ತೊಂದರೆಯನ್ನು ತಪ್ಪಿಸಿರುತ್ತೀಯೆ. ನೀನು ಯಮನಿಗೂ ಯಮನಾಗಿರುತ್ತೀಯೆ. ಕರ್ಪೂರದಂತೆ ಬೆಳ್ಳಗಿರುವ ಶರೀರವನ್ನು ಹೊಂದಿರುತ್ತೀಯೆ. ಜೀವನ್ಮುಕ್ತಿಪುರಕ್ಕೆ ಅಧಿಪತಿಯಾಗಿ, ಜೀವನ್ಮುಕ್ತಿಯನ್ನು ಕೊಡುತ್ತಿರುವೆಯಾಗಿ, ನೀನು ಈಗ ಹಾವಿನ ವಿಷದಿಂದ ಬದುಕುವುದಕ್ಕೆ ಅವಕಾಶವಿಲ್ಲದೆ ಮುಕ್ತರಾಗುವ ಸ್ಥಿತಿಯನ್ನು ಹೊಂದಿರುವ ನಮ್ಮನ್ನು ರಕ್ಷಿಸು. ಭೂಲೋಕದಲ್ಲಿರುವ ಶಿವಲೋಕಕ್ಕೆ ಅಧಿಪನಾಗಿರುವ ನೀನು ಭೂಮಿಯಲ್ಲಿ ಕಲ್ಪವೃಕ್ಷದಂತೆ ಇರುತ್ತೀಯೆ. ಭೂಲೋಕವನ್ನು ನಾಶಮಾಡುವ ವಿಷದಿಂದ

ಭೂಲೋಕಹರ್ತುರ್ ಗರಲಾ ದ್ಭೂಲೋಕಂ ಪರಿಪಾಲಯ ।
ಕಲ್ಯಾಣಸುಂದರಪತೇ ಕಲ್ಯಾಣಾದ್ರಿಧನುರ್ಧರ ॥ ೩೦ ॥

ಕಲ್ಯಾಣಂ ಕಲ್ಪಯಾ ಸ್ಮಾಕಂ ಕಲ್ಯಾಣದ ಯಮಾಂತಕ ।
ಕದಂಬವನಮಧ್ಯಸ್ಥ ಚಿದಂಬರವಿಭಾವಸೋ ॥ ೩೧ ॥

ನಿತಂಬಿನೀ ವಾಮಭಾಗ ಚಿರಂತನ ನಮೋಽಸ್ತುತೇ ।
ಏವಂ ಸ್ತುತ್ವಾ ನಮಸ್ಕೃತ್ಯ ಭೂಪಾದ್ಯಾ ಸ್ಸಕಲಾಜನಾಃ ॥ ೩೨ ॥

ಮೂಲಲಿಂಗಂ ಸಮಾಲೋಕ್ಯ ತಸ್ಥುಃ ಸಂಭ್ರಾಂತಚೇತಸಃ ।
ಹಾಲಾಸ್ಯನಾಥೋ ಭಗವಾನ್ ಗಂಗಾಚಂದ್ರಕಲಾಧರಃ ॥ ೩೩ ॥

ರಾಜ್ಞಃ ಪ್ರಜಾನಾ ಮಾರ್ತಿಂ ಚ ಪ್ರವಾಹಂ ಗರಲಸ್ಯ ಚ ।
ವಿಲೋಕ್ಯಾ ವಿರಭೂತ್ಸದ್ಯೋ ಲಿಂಗಾತ್ಸಿದ್ಧಸ್ವರೂಪವಾನ್ ॥ ೩೪ ॥

---

ಭೂಲೋಕವನ್ನು ರಕ್ಷಿಸು. ಮಂಗಳಕರನಾದ ಸುಂದರೇಶ್ವರನೆ, ನೀನು ಮೇರು ಪರ್ವತವನ್ನು ಧನುಸ್ಸಾಗಿ ಮಾಡಿಕೊಂಡಿರುತ್ತೀಯೆ. ಎಲ್ಲರಿಗೂ ಮಂಗಳವನ್ನು ಕೊಡುವವನಾದ, ಯಮನಿಗೆ ವೈರಿಯಾದ ನೀನು, ನಮಗೆ ಕ್ಷೇಮವನ್ನು ಉಂಟುಮಾಡು.

೩೧–೩೪ ಎಲೈ ಸುಂದರೇಶ್ವರನೆ, ನೀನು ಕದಂಬವನದ ಮಧ್ಯದಲ್ಲಿ ಇರುತ್ತೀಯೆ. ಚಿದಾಕಾಶದಲ್ಲಿ ಸೂರ್ಯನಾಗಿ ಪ್ರಕಾಶಿಸುತ್ತಿರುತ್ತೀಯೆ. ಸ್ತ್ರೀಯ ಆಕೃತಿಯನ್ನು ನಿನ್ನ ಎಡಭಾಗದಲ್ಲಿ ಹೊಂದಿರುವ ನೀನು ಪುರಾತನನಾಗಿರುತ್ತೀಯೆ. ನಿನಗೆ ನಮಸ್ಕಾರವು" ಎಂದು ರಾಜನೇ ಮೊದಲಾದವರು ಎಲ್ಲರೂ ಸುಂದರೇಶ್ವರನನ್ನು ಸ್ತುತಿಮಾಡಿ, ನಮಸ್ಕರಿಸಿ, ಹೆದರಿದ ಮನಸ್ಸುಳ್ಳವರಾದ ಕಾರಣ ಮೂಲಲಿಂಗವನ್ನು ನೋಡುತ್ತಾ ಅಲ್ಲಿಯೇ ನಿಂತುಕೊಂಡರು. ಚಂದ್ರನನ್ನೂ, ಗಂಗೆಯನ್ನೂ ಧರಿಸಿರುವ ಪೂಜ್ಯನಾದ ಹಾಲಾಸ್ಯೇಶ್ವರನು ವಿಷದ ವೇಗವನ್ನೂ, ಪ್ರಜೆಗಳ ಮತ್ತು ರಾಜನ ಸಂಕಟವನ್ನೂ ನೋಡಿ, ಆ ಕ್ಷಣದಲ್ಲಿಯೇ ಸಿದ್ಧಪುರುಷನ ಆಕಾರದಿಂದ ಮೂಲ ಲಿಂಗದಿಂದ ಕಾಣಿಸಿಕೊಂಡನು.

ಅಥ ಸರ್ವಾಂತಿಕಂ ಪ್ರಾಪ್ಯ ರಾಜ್ಞಾ ಸಾರ್ಧಂ ಜನೈರಪಿ ।
ಜಟಾಶಶಾಂಕಜ್ಯೋತ್ಸ್ನಾಭಿರ್ವಿಷಜ್ವಾಲಾಂ ವ್ಯಪೋಹ್ಯ ಚ ॥ ೩೫ ॥

ನಿಸ್ಸಂತಾಪಾನ್ ಜನಾನ್ ಕೃತ್ವಾ ಭೂಪಾದ್ಯಾನಖಿಲಾನಪಿ ।
ಕೃಪಾಕಟಾಕ್ಷತೋ ವೀಕ್ಷ್ಯ ಪ್ರಣತಾನಖಿಲಾನ್ನನಾನ್ ॥ ೩೬ ॥

ಅನಂತಗುಣಪಾಂಡ್ಯಂ ಚ ಸಿದ್ಧಶ್ಚಾ ದರ್ಶನಂ ಗತಃ ।
ಭೂಪೇನ ಭಲ್ಲೈರ್ಭಿನ್ನಸ್ಸನ್ವಿಸೃಷ್ಟೈಶ್ಚ ಪುರಾ ಜವಾತ್ ॥ ೩೭ ॥

ಭೋಗೀ ಭೋಗೇನಾತಿದೀರ್ಘೇಣ ನಿರ್ವಿಷತ್ವಾನ್ಮಮಾರ ಚ ।
ಮೃತಃ ಸ ಪರ್ವತಾಕಾರೋ ಹಾಲಾಸ್ಯೇಶಶಿವಾಜ್ಞಯಾ ॥ ೩೮ ॥

ನಾಗಶೈಲ ಇತಿ ಖ್ಯಾತೋ ನಗೋ ಭೂದ್ಭುವನತ್ರಯೇ ।
ತತ್ ಕ್ಷ್ವೇಲಂ ಮಧುರೀಕೃತ್ಯ ಯದಾ ರಕ್ಷತಿ ತಾಂ ಪುರೀಂ ॥ ೩೯ ॥

ಸುಂದರೇಶ ಸ್ತದಾರಭ್ಯ ವಿಶ್ರುತಾ ಮಧುರೇತಿ ಸಾ ।
ಪುರಸೀಮಾಸಮೀಪಸ್ಥಂ ತತ್ಸರ್ಪಸ್ಯಾಭಿಧಾನತಃ ॥ ೪೦ ॥

---

೩೫–೩೭. ಆಗ ಸಿದ್ಧಪುರುಷನ ವೇಷದಿಂದ ಇರುವ ಹಾಲಾಸ್ಯೇಶ್ವರನು, ರಾಜನೂ ಮತ್ತು ಜನಗಳೂ ಇವರೊಡನೆ ಹಾವಿನ ಹತ್ತಿರಕ್ಕೆ ಬಂದು, ತನ್ನ ಜಡೆಯುಲ್ಲಿರುವ ಚಂದ್ರನ ಕಿರಣಗಳಿಂದ ಎಲ್ಲರಿಗೂ ಉಂಟಾಗಿದ್ದ ವಿಷದ ಬಾಧಕವನ್ನು ಪರಿಹರಿಸಿದನು. ಅವರೆಲ್ಲರೂ ಯಾವ ವಿಧವಾದ ಸಂಕಟವೂ ಇಲ್ಲದವರಾಗಿ ಸಿದ್ಧಪುರುಷನಿಗೆ ನಮಸ್ಕರಿಸಿದರು. ಅನಂತಗುಣಪಾಂಡ್ಯನೇ ಮೊದಲಾಗಿ ಅವರೆಲ್ಲರನ್ನೂ ತನ್ನ ದಯೆಯಿಂದ ಕೂಡಿದ ಕಟಾಕ್ಷದಿಂದ ನೋಡಿದ ಸಿದ್ಧಪುರುಷನು ಅದೃಶ್ಯನಾದನು.

೩೮–೪೧. ಆ ಸರ್ಪದ ದೊಡ್ಡ ಶರೀರವು ರಾಜನು ವೇಗದಿಂದ ಹೊಡೆದ ಭಲ್ಲೆಗಳಿಂದ ಚೂರಾಗಿರುವುದರಿಂದಲೂ, ವಿಷವು ಇಲ್ಲದೇ ಇರುವುದರಿಂದಲೂ ಬೆಟ್ಟದಂತೆ ಅಲ್ಲಿ ಬಿದ್ದಿತ್ತು. ಹಾಲಾಸ್ಯೇಶ್ವರನ ಅಪ್ಪಣೆಯಂತೆ ಜನರು ಅದನ್ನು ನಾಗಶೈಲವೆಂದು ಕರೆಯುತ್ತಿದ್ದರು. ವಿಷವನ್ನು ಹಿತವಾಗುವಂತೆ ಮಾಡಿದ ಕಾರಣ ಆ

ಹಾಲಾಸ್ಯಮಿತಿ ತತ್ಕ್ಷೇತ್ರಂ ವರ್ಣಯಂತೀಹ ಕೇಚನ ।
ರಾಜಾಪ್ಯದ್ಭುತ ಮಾಲೋಕ್ಯ ಜನ್ಯೈಃ ಸಿದ್ಧಕೃತಂ ತ್ವಿದಂ ॥ ೪೧ ॥

ಅತ್ಯಂತವಿಸ್ಮಯೋಪೇತಃ ಸಂತೋಷಂ ಪರಮಂ ಯಯೌ ।
ಅಷ್ಟಾವಿಂಶತಿಲೀಲೇಯಂ ಇಷ್ಟಾರ್ಥಪ್ರತಿಪಾದಿನೀ ।
ಶಿಷ್ಟೈರ್ಜನೈಶ್ಚ ಶ್ರೋತವ್ಯಾ ತುಷ್ಟಯೇ ಪುಷ್ಟಯೇ ಸದಾ ॥ ೪೨ ॥

ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ
ಹಾಲಾಸ್ಯಮಹಾತ್ಮ್ಯೇ ಸರ್ಪಹನನಂ ನಾಮ
ಚತುಸ್ತ್ರಿಂಶೋಽಧ್ಯಾಯಃ

---

ನಗರಕ್ಕೆ ಮಧುರಾ ಎಂದು ಹೆಸರು ಬಂದಿತು. ಆ ನಗರದ ಸಮೀಪದಲ್ಲಿರುವ ಪ್ರದೇಶವನ್ನು ಆ ಹಾವಿನ ವಿಷದ ಸಂಬಂಧದಿಂದ ಹಾಲಾಸ್ಯಕ್ಷೇತ್ರವೆಂದು ಕೆಲವರು ಕರೆಯುವರು. ರಾಜನು ಜನರೊಡನೆ ಸಿದ್ಧಪುರುಷನು ಮಾಡಿದ ಆಶ್ಚರ್ಯಕರವಾದ ಕಾರ್ಯದಿಂದ ಬಹಳ ಸಂತೋಷವನ್ನು ಹೊಂದಿದನು.

೪೨. ಕೇಳಿದವರಿಗೆ ಇಷ್ಟಾರ್ಥವನ್ನು ಕೊಡುವ, ಸಂತೋಷ ಮತ್ತು ಅಭಿವೃದ್ಧಿಯನ್ನು ಉಂಟುಮಾಡುವ ಸುಂದರೇಶನ ಇಪ್ಪತ್ತೆಂಟನೆಯ ಲೀಲೆಯನ್ನು ಹೇಳಿರುವೆನು.

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆಯಲ್ಲಿ
ಸರ್ಪಹನನವೆಂದು ಹೆಸರುಳ್ಳ ಮೂವತ್ತನಾಲ್ಕನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥
॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಪಂಚತ್ರಿಂಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

**ಯಯಾ ಸುಂದರನಾಥಶ್ಚ ಪ್ರಸಿದ್ಧಂ ಪಶುಪರ್ವತಂ ।**
**ಅಕರೋದ್ವೃಷಭಾದ್ರಿಂ ಚ ಸಾ ಲೀಲಾ ವರ್ಣ್ಯತೇ ಮಯಾ ॥ ೧ ॥**

**ಫಣೀಂದ್ರೇ ನಿಧನಂ ಪ್ರಾಪ್ತೇ ಶೇಷವದ್ಭೀಷಣಾಕೃತೌ ।**
**ಭೀತಾ ಯಾತಾಶ್ಚ ನಗ್ನಾದ್ಯಾ ಸ್ಸಮೇತ್ಯ ಸಹಸಾ ಪುನಃ ॥ ೨ ॥**

**ಮಂತ್ರಯಾಮಾಸುರಚಿರಾದೇವಮೇವ ಸಮೀರಿತಾಃ ।**
**ಅಸ್ಮಾಕಂ ಮಂತ್ರಸಾಮರ್ಥ್ಯಾದುದ್ಭೂತಶ್ಚ ಭುಜಂಗಮಃ ॥ ೩ ॥**

---

### ಮುವತ್ತೈದನೆಯ ಅಧ್ಯಾಯ

೧–೬. ಅಗಸ್ತ್ಯಋಷಿಯು ಹೇಳಿದನು:— ಸುಂದರೇಶ್ವರನು ಪರ್ವತದ ಆಕಾರದಿಂದ ಇರುವ ಹಸುವಿನ ಶರೀರವನ್ನು ವೃಷಭಾದ್ರಿಯೆಂದು ಕರೆಯುವಂತೆ ಮಾಡಿದ ಲೀಲೆಯನ್ನು ಹೇಳುವೆನು. ಆದಿಶೇಷನ ಹಾಗೆ ಭಯಂಕರವಾದ ಆಕಾರವುಳ್ಳ ಸರ್ಪವು ನಾಶವನ್ನು ಹೊಂದಿದನಂತರ ಮಂತ್ರವಾದಿಗಳು ಹೆದರಿಕೊಂಡು ಓಡಿದರು. ಅವರೆಲ್ಲರೂ ಒಂದು ಕಡೆಯಲ್ಲಿ ಪುನಃ ಸೇರಿಕೊಂಡು “ ನಮ್ಮ ಮಂತ್ರದ ಶಕ್ತಿಯಿಂದ ಉಂಟಾದ ಸರ್ಪವು ಪಾಂಡ್ಯರಾಜನ ಬಾಣದ ಏಟಿನಿಂದ ಬಹಳ ವಿಷವನ್ನು

ಇಷುಪ್ರಹಾರಕುಪಿತಃ ಪಾಂಡ್ಯೇಶಸ್ಯ ಮಹೀಪತೇಃ ।
ಉದ್ವವಾಮ ವಿಷಂ ಭೂರಿ ಸರ್ವಲೋಕಪ್ರಣಾಶನಂ ॥ ೪ ॥

ತದ್ವಿಷಂ ಮಧುರೀಕೃತ್ಯ ಸುಖೇನಾಸ್ತೇ ಮಹೀಪತಿಃ ।
ಚಿರಕಾಲಕೃತಃ ಸರ್ವೈರಸ್ಮಾಭಿ ರ್ಮಂತ್ರವಿತ್ತಮೈಃ ॥ ೫ ॥

ಪ್ರಯತ್ನಃ ಕ್ಷಣಮಾತ್ರೇಣ ವೃಥಾ ಭವತಿ ಕೇನಚಿತ್ ।
ಇತಃ ಪರಂ ವಯಂ ಕುರ್ಮಃ ಕಿಮಿತಿ ಪ್ರವಿಚಾರ್ಯ ಚ ॥ ೬ ॥

ಗಾಮವಧ್ಯಾಂ ಪುನಃ ಸ್ರಷ್ಟುಂ ಕುಂಡಂ ಕೃತ್ವಾ ವಿಧಾನತಃ ।
ಅಭಿಚಾರಾಣಿ ಸರ್ವಾಣಿ ಚಕ್ರುರ್ಹೋಮಪುರಃಸರಂ ॥ ೭ ॥

ತಸ್ಮಾದ ಗ್ನೇಸ್ಸಮುತ್ಪನ್ನೋ ಧೇನುವೇಷಧರೋಽಸುರಃ ।
ನಗ್ನೈಃ ಸಂಪ್ರೇಷಿತೋ ಭೂಯ ಸ್ಸ ಪೌರಂ ಪಾಂಡ್ಯಭೂಪತಿಂ ॥ ೮ ॥

---

ಕಾರಿತು. ಅದರ ವೇಗದಿಂದ ಲೋಕವೆಲ್ಲವೂ ನಾಶವಾಗಬೇಕಾಗಿತ್ತು. ಹೀಗಿದ್ದರೂ ಮಧುರಾನಗರವೆಲ್ಲವೂ ಸುಖವಾಗಿರುವ ಹಾಗೆ ರಾಜನು ವಿಷವನ್ನು ಮಧುರವಾಗಿರುವಂತೆ ಮಾಡಿ ಇರುವನು. ಮಂತ್ರಗಳನ್ನು ಚೆನ್ನಾಗಿ ತಿಳಿದ ನಾವು ಬಹಳ ಕಾಲದಿಂದ ಮಾಡಿದ ಶ್ರಮವು ಒಂದು ಕ್ಷಣದಲ್ಲಿ ವ್ಯರ್ಥವಾಯಿತು. ಇನ್ನು ಮುಂದೆ ನಾವು ಏನು ಮಾಡೋಣ ಎಂದು ತಮ್ಮಲ್ಲಿ ವಿಮರ್ಶೆಮಾಡಿದರು.

೭–೮. ಶಾಸ್ತ್ರದ ನಿಯಮಕ್ಕೆ ಬದ್ಧರಾದವರು ಕೊಲ್ಲಲಾಗದಿರುವ ಹಸುವನ್ನು ನಿರ್ಮಿಸುವುದು, ಎಂದು ಅವರು ನಿಶ್ಚಯಿಸಿ, ಶಾಸ್ತ್ರಾನುಸಾರವಾಗಿ ಹೋಮಕುಂಡವನ್ನು ಮಾಡಿಕೊಂಡು ಆಭಿಚಾರಿಕ ಹೋಮಗಳನ್ನು ಮಾಡಿದರು. ಆಗ ಅಗ್ನಿಕುಂಡದಿಂದ ಹಸುವಿನ ಆಕಾರವನ್ನು ಹೊಂದಿದ ಒಬ್ಬ ರಾಕ್ಷಸನು ಹುಟ್ಟಿದನು. ಅವರು ಆ ಹಸುವನ್ನು ಪಾಂಡ್ಯರಾಜನನ್ನೂ ಮಧುರಾ ನಗರವನ್ನೂ ನಾಶಮಾಡಲು ಕಳುಹಿಸಿದರು.

ಸಂಹರ್ತುಂ ಮಾಯಯಾ ವೇಗಾದ ಚಲಾನಪಿ ಚಾಲಯನ್ ।
ಆಧೂಯಾಧೂಯ ಶೃಂಗಾಗ್ರ ಮತಿತೀಕ್ಷ್ಣ ದೃಢಾಕೃತಿಃ ॥ ೯ ॥

ಅಭ್ರಾಣಿ ಭ್ರಾಮಯನ್ರೋಷಾ ದಾಯಯೌ ಮಧುರಾಂ ಪ್ರತಿ ।
ಖುರಪಾತಾ ತ್ಪರ್ವತಾಂಶ್ಚ ಚೂರ್ಣೀಕೃತ್ಯ ಮಹಾದ್ರುಮಾನ್ ॥ ೧೦ ॥

ಉಚ್ಛ್ವಾಸ ವಾಯುನಾ ತಂ ಚ ಚೂರ್ಣಂ ದೂರೀಕರೋತಿ ಗೌಃ ।
ಶೃಂಗಾಗ್ರಾಭ್ಯಾಂ ಮಹಾಶೈಲಾನುತ್ಪಾಟ್ಯಾತಿಬಲೇನ ಚ ॥ ೧೧ ॥

ಚಿಕ್ಷೇಪ ದೂರತಃ ಸಾಗೌ ಸ್ತತ್ಪಾತೈಃ ಸಂಹೃತಾ ಜನಾಃ ।
ಅಥ ಜಾನಪದಾಃ ಪೌರಾ ಗೋಃಕೃತ್ಯಾ ಮತಿಭೀಷಣಾಂ ॥ ೧೨ ॥

ದೃಷ್ಟ್ವಾ ವಿಜ್ಞಾಪಯಾಮಾಸುಃ ಪಾಂಡ್ಯರಾಜಾಯ ವಿಸ್ಮಿತಾಃ ।
ತಚ್ಛ್ರುತ್ವಾ ನೃಪತಿರ್ಭೀತ ಸ್ಸುಂದರೇಶ್ವರಸನ್ನಿಧಿಂ ॥ ೧೩ ॥

ಪ್ರಾಪ್ಯ ಸ್ತುತ್ವಾ ನಮಸ್ಕೃತ್ಯ ಭಕ್ತ್ಯಾ ಪ್ರಾರ್ಥಯತಿ ಸ್ಮ ತಂ ।
ಕದಂಬಕಾನನಾಧೀಶ ಕರುಣಾಮೃತಸಾಗರ ॥ ೧೪ ॥

---

೯-೧೩. ಆಗ ಆ ಹಸುವು ಪಾಂಡ್ಯರಾಜನನ್ನೂ ಮಧುರಾನಗರವಾಸಿಗಳನ್ನೂ ಸಂಹಾರಮಾಡುವುದಕ್ಕಾಗಿ ವೇಗದಿಂದ ಬರುತ್ತಾ ಬೆಟ್ಟಗಳನ್ನೂ ನಡುಗಿಸುತ್ತಿತ್ತು. ಕೊಂಬನ್ನು ಕೊಡುವುತ್ತಾ ಬಲವಾದ ತನ್ನ ಶರೀರದಿಂದ ಮೋಡಗಳನ್ನು ತಿರುಗಿಸುತ್ತಿತ್ತು. ಗೊರಸಿನ ಏಟಿನಿಂದ ಬೆಟ್ಟಗಳನ್ನು ಹುಡಿಮಾಡಿ ತನ್ನ ಉಸಿರಿನ ವೇಗವಾದ ಗಾಳಿಯಿಂದ ಮುರಿದ ಮರಗಳನ್ನೂ ಬೆಟ್ಟದ ಹುಡಿಗಳನ್ನೂ ಎರಚುತ್ತಿತ್ತು. ಕೊಂಬಿನ ತುದಿಯಿಂದ ದೊಡ್ಡ ಬೆಟ್ಟಗಳನ್ನು ತಿವಿದು ಹೊರಕ್ಕೆ ಎಸೆಯುವುದರಿಂದ ಜನರಿಗೆ ತೊಂದರೆಯಾಗಿ ಅವರು ಮೃತರಾಗುತ್ತಿದ್ದರು. ಇದನ್ನು ನೋಡಿದವರು ಆಶ್ಚರ್ಯಪಡುತ್ತಾ ಆ ಹಸುವು ಮಾಡುತ್ತಿರುವ ಭಯಂಕರವಾದ ಕೆಲಸವನ್ನು ಪಾಂಡ್ಯರಾಜನಿಗೆ ತಿಳಿಸಿದರು. ಅದನ್ನು ಕೇಳಿದ ಕೂಡಲೆ ರಾಜನು ಹೆದರಿದವನಾಗಿ ಸುಂದರೇಶ್ವರನ ಸನ್ನಿಧಿಗೆ ಬಂದನು.

೧೪-೧೮. ರಾಜನು ಭಕ್ತಿಯಿಂದ ನಮಸ್ಕಾರಮಾಡಿ "ಕದಂಬ ಕಾನನಕ್ಕೆ ಅಧಿಪತಿಯಾದ ಬಹಳ ದಯೆಯುಳ್ಳವನಾದ ವೃಷಧ್ವಜನೇ ನೀನು ಶರಣಾಗತರಾದ ಭಕ್ತರ ವ್ಯಸನವನ್ನು ನಾಶಮಾಡುತ್ತಾ ಇರುತ್ತೀಯೆ. ಚಂದ್ರನನ್ನು ಆಭರಣವಾಗಿ

ಶರಣಾಗತಭಕ್ತಾನಾ ಮಾರ್ತಿಹಾರಿ ವೃಷಧ್ವಜ ।
ಸಮಸ್ತಲೋಕೈಕವಿಭೋ ಸರ್ವಜ್ಞ ಶಶಿಭೂಷಣ ॥ ೧೫ ॥

ಜಗತಾಂ ರಕ್ಷಣಾರ್ಥಂ ತ್ವಂ ಕಾಲಕೂಟಂ ಮಹಾವಿಷಂ ।
ಅಂಧಕಾಸುರ ಮತ್ಯುಗ್ರಂ ಕೃತಾಂತಂ ಚ ಪುರತ್ರಯಂ ॥ ೧೬ ॥

ಮಾದೀ ನಖಿಲಾ ದುಷ್ಟಾನ್ಸುರಾ ಸಂಹೃತವಾನ್ಪ್ರಭೋ ।
ಏವಂ ತ್ವಯಾ ಸಂಹಾರತಾ ಜಗತಾಮತಿಭೀತಿದಾ ॥ ೧೭ ॥

ಗೌರೇಕಾ ಪರ್ವತಾಕಾರಾ ಸಮಾಯಾತಿ ಜವೇನ ಚ ।
ತ್ವಮೇಕ ಏತಾಂ ಸಂಹರ್ತುಂ ಸಮರ್ಥೋನ್ಯೋ ನ ಕಶ್ಚನ ॥ ೧೮ ॥

ಯೇನಕೇನಾಪ್ಯುಪಾಯೇನ ತಾಂ ಗಾಂ ಸಂಹರ ಶಂಕರ ।
ಇತಿ ವಿಜ್ಞಾಪಿತೇ ಭೂಪೇ ಸ್ವಭಕ್ತೇ ಭಕ್ತವತ್ಸಲಃ ॥ ೧೯ ॥

ಪಾರ್ವತೀನಾಯಕ ಶ್ಶಂಭುಃ ಕ್ರಿಯಾಂ ಕಾಂಚಿದ್ವ್ಯಧಾಚ್ಛಿವಃ ।
ಪುರಸ್ಥಿತಂ ಕಕುದ್ಮಂತಂ ಪೂಜ್ಯಂ ಪೂಜ್ಯಜನೈಃ ಸದಾ ॥ ೨೦ ॥

---

ಧರಿಸಿ ಎಲ್ಲವನ್ನೂ ತಿಳಿದುಕೊಂಡು ಎಲ್ಲಾ ಲೋಕಗಳಿಗೂ ಮುಖ್ಯನಾದ ಅಧಿಪತಿಯಾಗಿ ಇರುತ್ತೀಯೆ. ಜಗತ್ತಿನ ರಕ್ಷಣೆಗಾಗಿ ಕಾಲಕೂಟವಿಷವನ್ನೂ ಅಂಧಕಾಸುರನನ್ನೂ, ಯಮನನ್ನೂ, (ಪುರತ್ರಯ)ಮೂರುಪುರಗಳನ್ನೂ,ನಿಗ್ರಹಮಾಡಿರುತ್ತೀಯೆ. ಕಾಮನೇ ಮೊದಲಾದ ಎಲ್ಲಾ ದುಷ್ಟರನ್ನೂ ನೀನು ನಿಗ್ರಹ ಮಾಡಿರುತ್ತೀಯೆ. ನೀನು ಹೀಗೆ ದುಷ್ಟನಿಗ್ರಹ ಮಾಡುತ್ತಿದ್ದರೂ ಜಗತ್ತಿಗೆ ತೊಂದರೆಯನ್ನೂ ಭಯವನ್ನೂ ಉಂಟುಮಾಡುವ ಒಂದು ಹಸುವು ಬೆಟ್ಟದ ಹಾಗೆ ಇರುವ ದೊಡ್ಡ ಆಕಾರವನ್ನು ಧರಿಸಿಕೊಂಡು ಬರುತ್ತಾ ಇರುವುದು. ನೀನೊಬ್ಬನೇ ಅದನ್ನು ನಿಗ್ರಹ ಮಾಡುವ ಸಾಮರ್ಥ್ಯವನ್ನು ಹೊಂದಿರುವನು. ಇನ್ನು ಯಾರಿಗೂ ಅಷ್ಟುಮಟ್ಟಿನ ಶಕ್ತಿಯು ಇಲ್ಲವು.

೧೯–೨೧. ಎಲೈ ಶಂಕರನೆ ನೀನು ಯಾವುದಾದರೂ ಒಂದು ಉಪಾಯದಿಂದ ಆ ಧೇನುವನ್ನು ನಾಶಮಾಡಬೇಕು, ಎಂದು ಕೇಳಿಕೊಂಡನು. ಭಕ್ತವತ್ಸಲನಾದ ಸುಂದರೇಶ್ವರನು ತನ್ನ ಭಕ್ತನಾದ ರಾಜನ ವಿಜ್ಞಾಪನೆಯನ್ನು ಲಾಲಿಸಿ ಆಗ ಒಂದು ಕೆಲಸವನ್ನು ಮಾಡಿದನು. ಪೂಜ್ಯರಾದ ಜನರು ಪೂಜಿಸುತ್ತಿರುವ ತನ್ನ ಮುಂದೆ

ಪುರಂದರಾದಿದೇವೌಘೈರರ್ಚಿತಾಂಘ್ರಿಚತುಷ್ಟಯಂ ।
ನಿರ್ವೀರ್ಯಾಂ ತಾಂ ಚ ಗಾಂ ಕರ್ತುಂ ಪ್ರೇಷಯದ್ವೃಷಭಂ ಹರಃ ॥ ೨೦ ॥

ಸೋಽಪಿ ಸುಂದರನಾಥಾಜ್ಞಾಂ ಪಾಲಯನ್ಪರಯಾ ಮುದಾ ।
ಔನ್ನತ್ಯಾ ದತಿಧಾವಲ್ಯಾ ತ್ಕೈಲಾಸಗಿರಿಸನ್ನಿಭಃ ॥ ೨೨ ॥

ಅತ್ಯದ್ಭುತಾತಿಸೌಂದರ್ಯಂ ವೇಷಂ ಧೃತ್ವಾ ಕ್ಷಣೇನ ತು ।
ಲಿಖನ್ನಕ್ಷತ್ರಪದವೀಂ ಕಾಮಾರ್ತ ಇವ ಗರ್ಜಯನ್ ॥ ೨೩ ॥

ಗೋಸ್ತಸ್ಯಾಃ ಪುರತೋ ಗತ್ವಾ ತಸ್ಥೌ ವೃಷಭದೇವತಾ ।
ಸಾ ಗೌಃ ವೃಷಭಮಾಲೋಕ್ಯ ಕಾಮಾರ್ತಾ ತೀವಮೋಹಿತಾ ॥ ೨೪ ॥

ತದಂತಿಕಂ ಸಮಾಗತ್ಯ ತ್ಯಕ್ತ್ವಾ ಕೋಪಂ ಚ ತಿಷ್ಠತಿ ।
ಭೂತನಾಥಕೃತನ್ಯಾಸಪವಿತ್ರೀಕೃತಪೃಷ್ಠಕಂ ॥ ೨೫ ॥

---

ಯಾವಾಗಲೂ ಇರುವ ಇಂದ್ರನೇ ಮೊದಲಾದವರು ಪೂಜಿಸುತ್ತಿರುವ ನಾಲ್ಕು ಪಾದ ಗಳುಳ್ಳ ವೃಷಭವನ್ನು "ಆ ಧೇನುವಿನ ಶಕ್ತಿಯನ್ನು ಕಡಿಮೆ ಮಾಡು" ಎಂದು ಹೇಳಿ ಕಳುಹಿಸಿದನು.

೨೨-೨೪. ಆಗ ಆ ವೃಷಭವು ಸುಂದರೇಶ್ವರನ ಆಜ್ಞೆಯನ್ನು ಬಹಳ ಸಂತೋಷದಿಂದ ವಹಿಸಿತು. ಎತ್ತರದಿಂದಲೂ, ವರ್ಣದಿಂದಲೂ, ಕೈಲಾಸಪರ್ವತದ ಹಾಗೆ ಇರುವ ಆ ಗೂಳಿಯು ಒಂದು ಕ್ಷಣದಲ್ಲಿ ಸುಂದರವಾದ ಆಕಾರವನ್ನು ಧರಿಸಿ ಅಂತರಿಕ್ಷಮಾರ್ಗವನ್ನು ತನ್ನ ಪಾದದಿಂದ ಕೆರೆಯುತ್ತಾ ಕಾಮದಿಂದ ಕೂಡಿರುವಂತೆ ಕೂಗುತ್ತಾ ಆ ಧೇನುವಿನ ಮುಂದುಗಡೆಗೆ ಬಂದು ನಿಂತಿತು. ಆ ಧೇನುವು ಗೂಳಿ ಯನ್ನು ನೋಡಿ ಮೋಹಗೊಂಡು ಕಾಮವಿಕಾರವುಳ್ಳದ್ದಾಗಿ ಕೋಪವನ್ನು ಬಿಟ್ಟು ಸುಮ್ಮನೆ ನಿಂತುಕೊಂಡಿತು.

೨೫. ಅನಂತರದಲ್ಲಿ ಆ ಧೇನುವು ಆ ಗೂಳಿಯನ್ನು ನೋಡಿತು. ಅದು ಪರಮೇಶ್ವರನು ಪಾದವನ್ನು ಇಡುವುದರಿಂದ ಪವಿತ್ರವಾದ ಬೆನ್ನುಳ್ಳದ್ದಾಗಿ ಇತ್ತು. ಕಿರುಗಂಟೆಗಳ ಸರಗಳು ಅದರ ಕುತ್ತಿಗೆಯಲ್ಲಿ ಅಲಂಕಾರವಾಗಿ ಇದ್ದುವು

ಕಿಂಕಿಣೀಜಾಲಮಾಲಾಭಿರಲಂಕೃತಗಲಾಂತರಂ ।
ಕೈಲಾಸಶಿಖರಪ್ರಖ್ಯಂ ಕುಕುದಂ ಕಾಮದಾಯಕಂ ॥ ೨೬ ॥

ನಂದೀಶ ಕರಸನ್ನದ್ಧಸನ್ನಾಹ ಕ್ಷಮರೂಪಿಣಂ ।
ವೃಷರೂಪಮುದಾರಾಂಗಂ ವೀತರಾಗಾದಿಭಿರ್ಸುತಂ ॥ ೨೭ ॥

ವಿಶ್ವಸಂರಕ್ಷಣಪರಂ ವಿಮಲಾಕಾರಶೋಭಿತಂ ।
ಭದ್ರಾಕಾರಂ ತಂ ವಿಲೋಕ್ಯ ಸಾ ಗೌರ್ವೀರ್ಯಂ ವ್ಯಸರ್ಜಯತ್ ॥ ೨೮ ॥

ಸಾ ವೀರ್ಯಪಾತಾತ್ ನಿಶ್ಶಕ್ತಿರ್ನಿಮೀಲನಯನಾ ಪತತ್ ।
ಪಲಾಯಿಷಿತ ನಗ್ನಾಸ್ತೇ ಸಾ ಗೌರಪಿ ಜಹಾವಸೂನ್ ॥ ೨೯ ॥

ಪಶುಪರ್ವತ ಇತ್ಯಾಖ್ಯಾಂ ಧತ್ತೇ ತತ್ರ ಮೃತಾ ಚ ಗೌಃ ।
ಸ್ವಾಪದಾನಪ್ರಸಿಧ್ಯರ್ಥಂ ವೃಷಭಂ ವೃಷಭಾಚಲಂ ॥ ೩೦ ॥

---

೨೬–೨೮. ಕೈಲಾಸಪರ್ವತದ ಶಿಖರಕ್ಕೆ ಸಮನಾದ ಹಿಳಲನ್ನು ಹೊಂದಿ, ಶಿವನ ಪ್ರಯಾಣಕಾಲದಲ್ಲಿ ನಂದೀಶ್ವರನು ಸಿದ್ಧಮಾಡುವ ವೇಷಗಳನ್ನು ತಡೆಯುವ ಸಾಮರ್ಥ್ಯವುಳ್ಳದ್ದಾಗಿ, ಶ್ರೇಷ್ಠವಾದ ಆಕಾರದಿಂದ ಇರುತ್ತಾ, ಜಿತೇಂದ್ರಿಯರಿಂದ ಪೂಜೆಯನ್ನು ಹೊಂದುತ್ತಾ, ಪ್ರಪಂಚವನ್ನು ರಕ್ಷಿಸುವುದರಲ್ಲಿ ಆಸಕ್ತಿಯುಳ್ಳದ್ದಾಗಿ, ನಂದೀಶ್ವರನ ಹಾಗೆ ನಿರ್ಮಲವಾದ ಆಕಾರದಿಂದ ಇರುವ, ಗೂಳಿಯನ್ನು ಆ ಧೇನುವು ನೋಡಿ ಅದರಿಂದ ತನಗೆ ಕಾಮಶಾಂತಿಯು ಉಂಟಾಗುವುದೆಂದು ತಿಳಿದು, ಅದರ ಮಂಗಳಕರವಾದ ಆಕಾರವನ್ನು ನೋಡಿ ತಾನು ತನ್ನ ವೀರ್ಯವನ್ನು ಬಿಟ್ಟಿತು.

೨೯–೩೧. ಅನಂತರದಲ್ಲಿ ಆ ಧೇನುವು ತನ್ನ ವೀರ್ಯವು ಕಮ್ಮಿಯಾದ ಕಾರಣ ಕಣ್ಣುಮುಚ್ಚಿಕೊಂಡು ಭೂಮಿಯಲ್ಲಿ ಬಿದ್ದಿತು. ಇದನ್ನು ನೋಡಿದ ಕೂಡಲೆ ಮಂತ್ರವಾದಿಗಳೆಲ್ಲರೂ ಓಡಿಹೋದರು. ಆಗ ಆ ಹಸುವು ಪ್ರಾಣವನ್ನು ಬಿಟ್ಟಿತು. ಆಗ ಹಾಲಾಸ್ಯೇಶ್ವರನು ತನ್ನ ದಿಗ್ವಿಜಯ ಪ್ರಸಿದ್ಧಿಗಾಗಿ ಹಾಲಾಸ್ಯಕ್ಷೇತ್ರದ

ಅಕರೋತ್ ಸುಂದರಾಧೀಶೋ ಹಾಲಾಸ್ಯೋತ್ತರದೇಶಕೇ ।
ಸ್ವಕೀಯ್ಯಂ ಸ್ಥೂಲರೂಪಂ ತು ತತ್ರ ಸ್ಥಾಪ್ಯ ವೃಷೋ ಮಹಾನ್ ॥ ೩೧ ॥

ಸೂಕ್ಷ್ಮರೂಪೇಣ ಚಾಗತ್ಯ ಪುರ ಆಸ್ತೇ ಸ ಪೂರ್ವವತ್ ।
ಆಸೀನಂ ಸುಂದರಾಕಾರಂ ಸುಂದರೇಶಪುರೋವೃಷಂ ॥ ೩೨ ॥

ಪ್ರಶಸ್ಯ ನತ್ವಾ ಭೂಪಾದ್ಯಾ ಜನಾಃ ಸರ್ವೇ ಯಯು ಸ್ತತಃ ।
ಕಥಯನ್ನ ಪದಾನಂ ಸ್ವಂ ದೇವ್ಯೈ ದೇವೋ ವೃಷಧ್ವಜಃ ॥ ೩೩ ॥

ವೃಷ ಮಾಲೋಕಯ ನ್ನೇವ ಸುಖಮಾಸ್ತೇ ಸ್ವಧಾಮನಿ ।
ಯತ್ಕಾಲೇ ವೃಷಭಾದ್ರಿಶ್ಚ ಸಮುದ್ಭೂತೋSತಿಪಾವನಃ ॥ ೩೪ ॥

ತತ್ಕಾಲೇ ರಘುನಾಥೋSಪಿ ಲಕ್ಷ್ಮಣೇನ ಸಮನ್ವಿತಃ ।
ಸೀತಾಂ ಹನುಮತಾ ಜ್ಞಾತ್ವಾ ಲಂಕಾಪುರನಿವಾಸಿನೀಂ ॥ ೩೫ ॥

ಸುಗ್ರೀವೇಣ ಸ್ವಸೈನ್ಯೇನ ಚಾಯಯೌ ವೃಷಭಾಚಲಂ ।
ರಾಮಂ ದ್ರಷ್ಟುಂ ಚಾಗತೇನ ಮಯಾ ಮಲಯಪರ್ವತಾತ್ ॥ ೩೬ ॥

---

ಉತ್ತರದಲ್ಲಿ ತಾನು ಕಳುಹಿಸಿದ್ದ ವೃಷಭವನ್ನು ವೃಷಭಪರ್ವತವೆಂದು ಹೆಸರಿಟ್ಟನು. ಆ ದೊಡ್ಡ ಗೂಳಿಯು ತನ್ನ ದೊಡ್ಡ ಆಕಾರವನ್ನು ಅಲ್ಲಿ ಬಿಟ್ಟು ಸೂಕ್ಷ್ಮರೂಪದಿಂದ ಹಾಲಾಸ್ಯೇಶ್ವರನ ಮುಂದುಗಡೆಯಲ್ಲಿಯೇ ಮೊದಲಿನಂತೆಯೇ ಸ್ಥಿರವಾಗಿ ನೆಲಸಿತು.

೩೨-೩೬. ಅನಂತರದಲ್ಲಿ ಸುಂದರೇಶ್ವರನ ಮುಂದುಗಡೆಯಲ್ಲಿ ಸುಂದರವಾದ ಆಕಾರದಿಂದ ಇರುವ ವೃಷಭವನ್ನು ಮಧುರಾನಗರವಾಸಿಗಳೂ ರಾಜನೂ ನೋಡಿ ಅದನ್ನ ಹೊಗಳಿ ನಮಸ್ಕರಿಸಿ, ಹೊರಟುಹೋದರು. ಪರಮೇಶ್ವರನು ತಾನು ಜಯವನ್ನು ಸಂಪಾದಿಸಿದ ಕ್ರಮವನ್ನು ದೇವಿಗೆ ಹೇಳಿ ಆ ವೃಷಭವನ್ನು ನೋಡುತ್ತಾ ಸಂತೋಷದಿಂದ ಇದ್ದನು. ಪವಿತ್ರವಾದ ಈ ವೃಷಭಾದ್ರಿಯು ಉಂಟಾದ ಕಾಲದಲ್ಲಿಯೇ ಸೀತೆಯು ಲಂಕಾಪುರದಲ್ಲಿರುವಳೆಂದು ಹನುಮಂತನಿಂದ ತಿಳಿದು, ಶ್ರೀರಾಮನು ಲಕ್ಷ್ಮಣನೊಡನೆಯೂ, ಸುಗ್ರೀವನೊಡನೆಯೂ, ಸೇನಾಸಹಿತನಾಗಿ ವೃಷಭಾಚಲಕ್ಕೆ ಬಂದನು. ನಾನು ಮಲಯಪರ್ವತದಿಂದ ಬಂದವನು ರಾಮನನ್ನು ನೋಡಲು ಹೋಗಿದ್ದೆನು. ಸುಂದರೇಶ್ವರನ ಮಹಿಮೆಯನ್ನು ರಾಮನಿಗೆ ನಾನು ಹೇಳಿದೆನು.

ಪ್ರಭಾವಂ ಸುಂದರೇಶಸ್ಯ ರಾಮೋ ಜ್ಞಾತ್ವಾ ಮಹಾದ್ಭುತಂ ।
ಸುವರ್ಣಪದ್ಮಿನೀಂ ಪ್ರಾಪ್ಯ ಸ್ನಾತ್ವಾ ಭಕ್ತಿಸಮನ್ವಿತಃ ॥ ೩೭ ॥

ಸುಮೀನಾಕ್ಷೀಂ ಮಹಾದೇವೀಂ ಪೂಜ್ಯ ಸ್ತುತ್ವಾ ಪ್ರಣಮ್ಯ ಚ ।
ಸುಂದರೇಶ ಮಹಾಲಿಂಗಮುಪಚಾರೈಃ ಪ್ರಪೂಜ್ಯ ಚ ॥ ೩೮ ॥

ಪ್ರಣಮ್ಯ ಪ್ರಾರ್ಥಯಾಮಾಸ ಸ್ವಮನೋರಥಸಿದ್ಧಯೇ ।
ಶಂಭೋ ಶಂಕರ ಸರ್ವಜ್ಞ ಸರ್ವಕಲ್ಯಾಣಕಾರಣ ॥ ೩೯ ॥

ಕರುಣಾಕರ ಕಾಮಾರೇ ಕಾಮಿತಾರ್ಥಪ್ರದಾಯಕ ।
ಕಾಲಕೂಟಲಸತ್ಕಂಠ ಕದಂಬವನನಾಯಕ ॥ ೪೦ ॥

ಭೂಲೋಕಶಿವಲೋಕೇಶ ಪುರಂದರ ವಿಮಾನಗ ।
ಸಂತಿ ಪುಣ್ಯಾನ್ಯನೇಕಾನಿ ತವ ಕ್ಷೇತ್ರಾಣಿ ಭೂತಲೇ ॥ ೪೧ ॥

---

೩೭–೪೦. ಆಗ ರಾಮನು (ಹಾಲಾಸ್ಯಕ್ಷೇತ್ರಕ್ಕೆ ಬಂದು) ಸುವರ್ಣ ಪದ್ಮಿನೀ ತೀರ್ಥದಲ್ಲಿ ಸ್ನಾನವನ್ನು ಮಾಡಿ ಭಕ್ತಿಯಿಂದ ಮೀನಾಕ್ಷೀದೇವಿ ಸುಂದರೇಶ್ವರರನ್ನು ಉಪಚಾರಗಳಿಂದ ಪೂಜಿಸಿ, ನಮಸ್ಕರಿಸಿದನು. ಅನಂತರದಲ್ಲಿ ರಾಮನು " ಶಂಭುವೇ, ಶಂಕರನೇ, ಸರ್ವಜ್ಞನಾದ ಶಿವನೇ, ಎಲ್ಲರಿಗೂ ಕ್ಷೇಮವನ್ನುಂಟುಮಾಡುವ ಪ್ರಭುವೇ, ದಯಾಶಾಲಿಯೇ, ಕಾಮನಿಗೆ ವೈರಿಯಾದವನೆ, ಇಷ್ಟ ಸಿದ್ಧಿಯನ್ನು ಅನುಗ್ರಹಿಸುವ ಕದಂಬವನಾಧಿಪನೆ, ನೀಲಕಂಠನೆ, ಭೂಲೋಕ, ಶಿವಲೋಕಾಧಿಪನೇ, ಇಂದ್ರನ ವಿಮಾನದ ಮಧ್ಯದಲ್ಲಿ ನೆಲಸಿರುವ ಪರಮೇಶ್ವರನೆ, ಬಹಳ ಕ್ಷೇತ್ರಗಳು ಭೂಮಿಯಲ್ಲಿ ಇರುವವು. ಅವುಗಳೆಲ್ಲವೂ ಪುಣ್ಯಕರಗಳಾಗಿದ್ದರೂ, ಹಾಲಾಸ್ಯಕ್ಷೇತ್ರವು ಎಲ್ಲಕ್ಕಿಂತಲೂ, ಬಹಳ ಆಶ್ಚರ್ಯಕರವಾಗಿಯೂ, ಬಹಳ ಪುಣ್ಯಪ್ರದವಾಗಿಯೂ ಇರುವುದು.

೪೧–೪೫. ಇದು ಲೋಕಗಳನ್ನು ಅನುಗ್ರಹಿಸುವುದಕ್ಕಾಗಿ ನೀನು ಮಾಡಿರುವ ದೊಡ್ಡ ದೊಡ್ಡ ಬೆಟ್ಟದಂತೆ ಸುತ್ತಲೂ ಇರುವ ಕಾರ್ಯಗಳಿಂದ ತುಂಬಿರುವುದು. ಅಲ್ಲದೆ ನೀನು ಯಾವಾಗಲೂ ಈ ಕ್ಷೇತ್ರದಲ್ಲಿ ಪ್ರತ್ಯಕ್ಷವಾಗಿ ಇರುವುದರಿಂದ ಈ

ಹಾಲಾಸ್ಯಾಖ್ಯಮಿದಂ ಕ್ಷೇತ್ರಮತ್ಯಂತಂ ಮಹದದ್ಭುತಂ ।
ಅನುಗ್ರಹಾರ್ಥಂ ಜಗತಾಂ ತ್ವತ್ಕೃತೈರಪದಾನಕೈಃ ॥ ೪೨ ॥

ಪರಿತಃ ಪರ್ವತಾಕಾರೈಃ ಸ್ತ್ವತ್ಪ್ರತ್ಯಕ್ಷವಿಶೇಷತಃ ।
ಹರ್ತುಃ ಸರ್ವಾಣಿ ದುಃಖಾನಿ ದಾತುಃ ಸರ್ವಾಶ್ಚ ಸಂಪದಃ ॥ ೪೩ ॥

ತ್ವಲ್ಲಿಂಗಸ್ಯ ಸಮಂ ನಾಸ್ತಿ ಜನಾನಾಂ ದೃಷ್ಟಮಾತ್ರತಃ ।
ಮಹಾಪಾತ್ಕಾಘಸಂಹರ್ತುರ್ಮಹಾತೀರ್ಥಸ್ಯ ಸರ್ವದಾ ॥ ೪೪ ॥

ಸರ್ವಸಿದ್ಧಿಂ ಸಂಪದ್ರಾತುಸ್ತುಲ್ಯಂ ತೀರ್ಥಂ ನ ವಿದ್ಯತೇ ।
ಕ್ವಚಿತ್ಕ್ಷೇತ್ರಸ್ಯ ಮಹಾತ್ಮ್ಯಂ ಕ್ವಚಿಲ್ಲಿಂಗಸ್ಯ ವೈಭವಂ ॥ ೪೫ ॥

ಕ್ವಚಿತ್ತೀರ್ಥಸ್ಯ ವೈಶಿಷ್ಟ್ಯಂ ಹಾಲಾಸ್ಯೇ ವಿದ್ಯತೇ ತ್ರಯಂ ।
ತಸ್ಮಾದತ್ರ ಮಹಾಸಿದ್ಧಿಃ ಸರ್ವೇಷಾಮಸ್ತಿ ಜನ್ಮಿನಾಂ ॥ ೪೬ ॥

ಅಸ್ಮಾಕಮಪಿ ಕಾರ್ಯಾಣಾಂ ಸಿದ್ಧಿಃ ಸ್ಯಾದತ್ರ ನಿಶ್ಚಯಃ ।
ಹಾಲಾಸ್ಯೇಶ್ವರ ದೇವೇಶ ಮತ್ಕಾರ್ಯಮತಿದುಷ್ಕರಂ ॥ ೪೭ ॥

---

ಕ್ಷೇತ್ರದ ಮಹಿಮೆಯು ಬಹಳ ಹೆಚ್ಚಾಗಿ ಇರುವುದು. ಜನಗಳ ವಿಪತ್ತುಗಳನ್ನು ನಾಶಪಡಿಸುವುದರಲ್ಲಿಯೂ, ಎಲ್ಲಾ ವಿಧವಾದ ಸಂಪತ್ತುಗಳನ್ನು ಕೊಡುವುದರಲ್ಲಿಯೂ ಈ ಹಾಲಾಸ್ಯೇಶ್ವರಲಿಂಗಕ್ಕೆ ಸಮನಾದದ್ದು ಯಾವುದೂ ಇಲ್ಲವು. ದರ್ಶನಮಾತ್ರದಿಂದಲೇ ಜನರಿಗೆ ಮಹಾಪಾಪಗಳ ರಾಶಿಯನ್ನು ನಾಶಮಾಡಿ, ಎಲ್ಲಾ ವಿಧವಾದ ಸಿದ್ಧಿಯನ್ನೂ ಕೊಡುವ ಈ ತೀರ್ಥಕ್ಕೆ ಸಮನಾದ ತೀರ್ಥವು ಎಲ್ಲಿಯೂ ಇಲ್ಲವು. ಕೆಲವು ಕಡೆಯಲ್ಲಿ ಕ್ಷೇತ್ರದಲ್ಲಿ ಮಹಿಮೆಯು ಇರುವುದು. ಕೆಲವು ಕಡೆಯಲ್ಲಿ ಶಿವಲಿಂಗದ ಮಹಿಮೆಯು ಅಧಿಕವಾಗಿರುವುದು.

೪೬–೫೨. ಕೆಲವು ಕಡೆಯಲ್ಲಿ ತೀರ್ಥದಲ್ಲಿ ಮಹಿಮೆಯು ತುಂಬಾ ಇರುವುದು. ಹಾಲಾಸ್ಯಕ್ಷೇತ್ರದಲ್ಲಿ ಈ ಮೂರೂ ಇರುವುವು. ಆದ್ದರಿಂದಲೇ ಈ ಕ್ಷೇತ್ರದಲ್ಲಿ ಎಲ್ಲಾ ಪ್ರಾಣಿಗಳಿಗೂ ಬಹಳವಾದ ಸಿದ್ಧಿಯು ಉಂಟಾಗುತ್ತಿರುವುದು. ಈ ಪ್ರದೇಶದಲ್ಲಿ ನನ್ನ ಕಾರ್ಯವೂ ಸಿದ್ಧವಾಗುವುದೆಂದು ನಂಬಿಕೆಯು ಇರುವುದು. ಎಲೈ ಹಾಲಾಸ್ಯೇಶ್ವರನೇ

ತತ್ಸಿದ್ಧಿಶ್ಚ ಯಥಾ ಸದ್ಯೋ ಭವಿಷ್ಯತಿ ತಥಾ ಕುರು ।
ಇತ್ಯುಕ್ತ್ವಾ ಸಾಂಜಲೀ ರಾಮ ಸ್ತಸ್ಥೌ ಲಿಂಗಂ ವಿಲೋಕ್ಯ ಚ ॥ ೪೮ ॥

ತದಾ ತು ಮಧುರಾ ವಾಣೀ ಸಮುದ್ಭೂತಾ ಮಹೇಶಿತುಃ ।
ಮಹಾವೀರ ಮಹಾಸತ್ವ ರಾಜಪುಂಗವ ರಾಘವ ॥ ೪೯ ॥

ಮಲ್ಲಿಂಗಾಗ್ನೇಯದೇಶಂ ತ್ವಂ ಗತ್ವಾ ಸೇನಾ ಸಮನ್ವಿತಃ ।
ಸಾಗರೇ ಸೇತುಬಂಧಂ ಚ ಕೃತ್ವಾ ಲಂಕಾಂ ಪ್ರವಿಶ್ಯ ಚ ॥ ೫೦ ॥

ಸಂಹೃತ್ಯ ಸರ್ವಾನಸುರಾ ಸ್ಕುಂಭಕರ್ಣಂ ಚ ರಾವಣಂ ।
ಪರಿಗೃಹ್ಯ ಕಲತ್ರಂ ಚ ಪಾತಿವ್ರತ್ಯ ಪರಾಯಣಾಂ ॥ ೫೧ ॥

ಅಯೋಧ್ಯಾ ನಗರೀಂ ಗತ್ವಾ ಸಂಪದಾ ಯಕ್ಷರಾಣ್ನಿಭಃ ।
ಚಿರಂ ಪೃಥ್ವೀಂ ಪಾಲಯಿತ್ವಾ ಪುನರ್ವೈಕುಂಠಮಾವಿಶ ॥ ೫೨ ॥

ಏವಂ ಶಂಭೋರ್ವಚಃ ಶ್ರುತ್ವಾ ಬಧ್ವಾ ಚೇಲಾಂಚಲೇನ ಚ ।
ಗತ್ವಾ ತಂ ದೇಶಮಾಗ್ನೇಯಂ ಸಸುಗ್ರೀವಶ್ಚ ಸಾನುಜಃ ॥ ೫೩ ॥

---

ದೇವದೇವನೇ, ನನ್ನ ಕಾರ್ಯವು ಬಹಳ ಕಷ್ಟತಮವಾಗಿರುವುದು. ನನಗೆ ಕಾರ್ಯ ಸಿದ್ಧಿಯು ಉಂಟಾಗುವಂತೆ ಅನುಗ್ರಹವನ್ನು ಮಾಡು." ಎಂದು ತನ್ನ ಕಾರ್ಯಸಿದ್ಧಿಗಾಗಿ ಪ್ರಾರ್ಥನೆಯನ್ನು ಮಾಡುತ್ತಾ ರಾಮನು ನಿಂತಿದ್ದನು. ಆಗ ಮಧುರವಾದ ಮಾತುಗಳನ್ನು ಮಹೇಶ್ವರನು ಹೇಳಿದನು.

"ಎಲೈ ಮಹಾವೀರನೆ, ಬಹಳ ಶಕ್ತಿಯುಳ್ಳ ರಾಜಶ್ರೇಷ್ಠನಾದ ರಾಮನೆ, ನೀನು ಈ ಶಿವಲಿಂಗದ ಆಗ್ನೇಯ ಭಾಗಕ್ಕೆ ಸೇನಾಸಹಿತನಾಗಿ ಹೋಗಿ, ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿ, ಲಂಕಾನಗರವನ್ನು ಪ್ರವೇಶಿಸಿ, ರಾವಣ, ಕುಂಭಕರ್ಣ, ಮತ್ತು ಇತರರಾದ ಎಲ್ಲಾ ರಾಕ್ಷಸರನ್ನೂ ನಾಶಮಾಡು. ಪತಿವ್ರತೆಯಾದ ಸೀತಾದೇವಿಯನ್ನು ಸ್ವೀಕರಿಸಿ, ಅಯೋಧ್ಯಾನಗರಕ್ಕೆ ಸೇರಿ ಕುಬೇರನಂತೆ ಐಶ್ವರ್ಯಶಾಲಿಯಾಗಿ, ಬಹಳಕಾಲದವರಿಗೂ ರಾಜ್ಯಪರಿಪಾಲನೆಯನ್ನು ಮಾಡಿದನಂತರ ವೈಕುಂಠವನ್ನು ಹೊಂದು."

೫೩-೫೭. ಶ್ರೀರಾಮನು ಶಿವನು ಅನುಗ್ರಹಿಸಿದ ಈ ಮಾತನ್ನು ಕೇಳಿ, ಬಟ್ಟೆಯನ್ನು ಗಂಟುಹಾಕಿಕೊಂಡು, ಶಿವನು ಹೇಳಿದ ಪ್ರಕಾರ ಆಗ್ನೇಯ ಪ್ರದೇಶಕ್ಕೆ

ಪರ್ವತೈಃ ಸಿಕತಾಭಿಶ್ಚ ಸೇತುಂ ಬಧ್ವಾ ಮಹಾರ್ಣವೇ ।
ಸಾನುಗಂ ಸಾನುಜಂ ಹತ್ವಾ ರಾವಣಂ ವರದರ್ಪಿತಂ ॥ ೫೪ ॥

ವಿಭೀಷಣಾಯ ದತ್ವಾಥ ಸರ್ವಾಂ ತಾಂ ರಾವಣಶ್ರಿಯಂ ।
ಶಿವಲಿಂಗಂ ಪ್ರತಿಷ್ಠಾಪ್ಯ ರಾಮನಾಥಾಭಿದಾನತಃ ॥ ೫೫ ॥

ಪರಿತ್ಯಕ್ತಾಘಸಂಘಶ್ಚ ಸುಂದರೇಶಂ ಪ್ರಣಮ್ಯ ಚ ।
ಪ್ರಾಪ್ಯ ಸರ್ವಾಃ ಸಂಪದಶ್ಚ ಸ್ವಪುರಂ ಚ ಪ್ರವಿಶ್ಯ ಚ ॥ ೫೬ ॥

ಚಿರಂ ಭುಕ್ತ್ವಾ ಮಹಾಭೋಗಾನ್ ವೈಕುಂಠಂ ಪ್ರಾಪ ರಾಘವಃ ।
ಏವಂ ತತ್ಕಾಲವೃತ್ತಾಂತಃ ಪ್ರಸಂಗಾತ್ಕಥಿತೋ ಮಯಾ ॥ ೫೭ ॥

ಶ್ರುತಮಾತ್ರಾ ದಘಹರೋ ರಾಮಾಯಣಕಥಾರಸಃ ।
ಇತಿವಃ ಕಥಿತಾ ಲೀಲಾ ಚೈಕೋನತ್ರಿಂಶಿಕಾ ಮಯಾ ।
ಸದ್ಯಃ ಸರ್ವಾಘಸಂಹರ್ತ್ರೀ ಶ್ರೋತೄಣಾಂ ಶಾಂತಿಪುಷ್ಟಿದಾ ॥ ೫೮ ॥

---

ಹೋಗಿ, ಸುಗ್ರೀವ ಮತ್ತು ಲಕ್ಷ್ಮಣರೊಡನೆ ಇರುವವನಾಗಿ ಬೆಟ್ಟಗಳು ಮತ್ತು ಮರಳು ಇವುಗಳಿಂದ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ, ವರದಿಂದ ಅಹಂಕಾರವುಳ್ಳ ರಾವಣನನ್ನೂ, ಅವನ ತಮ್ಮನಾದ ಕುಂಭಕರ್ಣನನ್ನೂ, ರಾವಣನ ಪರಿವಾರವೆಲ್ಲವನ್ನೂ ನಾಶಪಡಿಸಿದನು. ಅನಂತರದಲ್ಲಿ ರಾವಣನ ಐಶ್ವರ್ಯವೆಲ್ಲವನ್ನೂ ವಿಭೀಷಣನಿಗೆ ಕೊಟ್ಟು, ರಾಮನಾಥನೆಂದು ಹೆಸರುಳ್ಳ ಶಿವಲಿಂಗವನ್ನು ಪ್ರತಿಷ್ಠೆಮಾಡಿದನು. ಅದರಿಂದ ಪಾಪಗಳನ್ನು ಕಳೆದುಕೊಂಡು ಸುಂದರೇಶನಿಗೆ ನಮಸ್ಕರಿಸಿ, ಎಲ್ಲಾ ವಿಧವಾದ ಐಶ್ವರ್ಯವನ್ನೂ ಹೊಂದಿ, ತನ್ನ ನಗರವನ್ನು ಸೇರಿದನು.

೫೭-೫೮. ಅಯೋಧ್ಯಾನಗರದಲ್ಲಿ ಶ್ರೀರಾಮನು ಬಹಳಕಾಲದವರಿಗೂ, ಬಹಳ ಸುಖವನ್ನು ಅನುಭವಿಸಿದನಂತರ ವೈಕುಂಠವನ್ನು ಹೊಂದಿದನು. ಕೇಳಿದ ಕೂಡಲೆ ಪಾಪಗಳನ್ನು ನಾಶಮಾಡುವ ರಾಮಾಯಣ ಕಥೆಯನ್ನು ಈ ಸಂದರ್ಭಕ್ಕನುಸಾರವಾಗಿ ಬಂದಿದ್ದರಿಂದ ಹೇಳಿರುವೆನು. ಇಪ್ಪತ್ತೊಂಬತ್ತನೆಯ ಲೀಲೆಯು ಕೇಳಿದ ಕೂಡಲೆ ಎಲ್ಲಾ ಪಾಪಗಳನ್ನೂ ನಾಶಮಾಡಿ, ಉಪಶಾಂತಿ ಮತ್ತು ಅಭಿವೃದ್ಧಿಯನ್ನು ಉಂಟುಮಾಡುವುದು. ಇದನ್ನು ನಾನು ಹೇಳಿರುವೆನು.

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಸೌರಭೇಯೀನಿಪಾತನಂ ನಾಮ
ಪಂಚತ್ರಿಂಶೋಽಧ್ಯಾಯಃ

---

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆಯಲ್ಲಿ
ಸೌರಭೇಯೀನಿಪಾತನವೆಂದು ಹೆಸರುಳ್ಳ ಮೂವತ್ತೈದನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ

# ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಷಟ್‌ತ್ರಿಂಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

**ದರ್ಶನಂ ಚ ಮಹತ್ಯಾಶ್ಚ ಸೇನಾಯಾ ಅಕರೋಚ್ಛಿವಃ ।**
**ಯಯಾ ಚ ಲೀಲಯಾ ತಾಂ ಚ ಮುನಯಃ ಕಥಯಾಮಿ ವಃ ॥ ೧**

**ಅನಂತಗುಣಪಾಂಡ್ಯಾಂತೇ ತತ್ಪುತ್ರಃ ಕುಲಭೂಷಣಃ ।**
**ರಾಜ್ಯಂ ಚಕಾರ ನೀತ್ಯಾ ಚ ಶಿವಭಕ್ತ್ಯಾಪ್ಯ ತುಲ್ಯಯಾ ॥ ೨**

**ತಸ್ಯ ಸೇನಾಪತಿಶ್ಚಾಸೀಚ್ಛೂರಃ ಕಶ್ಚಿದ್ಭಟಾಗ್ರಣೀಃ ।**
**ಸುಂದರೇಶಧ್ಯಾನರತಃ ಸುಂದರೇಶ್ವರಸೇವಕಃ ॥ ೩**

**ನಾಮ್ನಾ ಸುಂದರಸಾಮಂತ ಇತಿ ಲೋಕೇ ಪ್ರಥಾಂ ಯಯೌ ।**
**ತತ್ಕಾಲೇ ಚೇದಿರಾಜಾಖ್ಯಃ ಕಿರಾತಾನಾಂ ನಿಯಾಮಕಃ ॥ ೪**

---

## ಮುವತ್ತಾರನೆಯ ಅಧ್ಯಾಯ

೧-೪. ಅಗಸ್ತ್ಯಋಷಿಯು ಹೇಳಿದನು:- ಶಿವನು ಅಪಾರವಾದ ಸೇನೆಯನ್ನು ತೋರಿಸಿದ ಲೀಲೆಯನ್ನು ನಿಮಗೆ ಹೇಳುವೆನು. ಮುನಿಗಳೆಲ್ಲರೂ ಕೇಳಿರಿ. ಅನಂತ ಗುಣಪಾಂಡ್ಯರಾಜನ ಅನಂತರದಲ್ಲಿ ಅವನ ಮಗನಾದ ಕುಲಭೂಷಣಪಾಂಡ್ಯರಾಜನು ಬಹಳವಾದ ಶಿವಭಕ್ತಿಯುಳ್ಳವನಾಗಿ ನೀತಿಯಿಂದ ರಾಜ್ಯವನ್ನು ಪಾಲಿಸುತ್ತಿದ್ದನು. ಅವನ ಹತ್ತಿರದಲ್ಲಿ ಒಬ್ಬ ಶೂರನಾದ ಸೇನಾಪತಿಯು ಇದ್ದನು. ಅವನು ಸುಂದರೇಶ್ವರನಲ್ಲಿ ಭಕ್ತನಾಗಿ ಯಾವಾಗಲೂ ಸುಂದರೇಶ್ವರನನ್ನು ಧ್ಯಾನಮಾಡುತ್ತಾ ಇರುವನು. ಅವನಿಗೆ ಸುಂದರಸಾಮಂತನೆಂಬ ಹೆಸರು ಎಲ್ಲಾ ಕಡೆಯಲ್ಲಿಯೂ ಪ್ರಸಿದ್ಧವಾಗಿರುವುದು.

ಕಶ್ಚಿದ್ವನ್ಯಪತಿ ರ್ಯೋದ್ಧುಂ ಪಾಂಡ್ಯೇನೋದ್ಯೋಗ ಮಾತನೋತ್ ।
ತಚ್ಛ್ರುತ್ವಾ ಪಾಂಡ್ಯಭೂಪಾಲಃ ಸೇನಾನಾಂ ಸಂಚಿಕೀರ್ಷಯಾ ॥ ೫ ॥

ತಂ ಭಟೋತ್ತಮ ಮಾಹೂಯ ರಹಸ್ಯೇವ ಮುವೋಚತ ।
ಕ್ಷ್ಮಾಭಾರ್ಥ ಮಸ್ಮದ್ದೇಶಸ್ಯ ಸಮಾಯಾತಿ ಸಮುನ್ನತಃ ॥ ೬ ॥

ಚೇದಿರಾಜೋಽತಿಬಲವಾನ್ ಬಲೈಃ ಸಾರ್ಧಮಿತಿ ಶ್ರುತಂ ।
ತದರ್ಥಂ ಭೂಯಸೀಂ ಸೇನಾಂ ನಾನಾಜಾತಿಸಮನ್ವಿತಾಂ ॥ ೭ ॥

ಬಂಧಯಾ ಸ್ಮಜ್ಜಯಾರ್ಥಂ ಚ ವಿಕ್ರಮಾತಿಶಯಾನ್ವಿತಾಂ ।
ಅಪೇಕ್ಷಿತಂ ದ್ರವ್ಯಜಾತಂ ಕೋಶಾಗಾರಾದ್ಗೃಹಾಣ ಚ ॥ ೮ ॥

ಇತ್ಯುಕ್ತ್ವಾ ಧನಮಾದಾಯ ದತ್ವಾ ಭಟವರಾಯ ಚ ।
ಪ್ರೇಷಯಾಮಾಸ ತಂ ಸದ್ಯಃ ಕುಲಭೂಷಣಭೂಪತಿಃ ॥ ೯ ॥

ಕರಿಷ್ಯೇಽಹಂ ತಥೇತ್ಯುಕ್ತ್ವಾ ಪ್ರಣಮ್ಯ ದ್ರಾಗ್ವಿ ನಿರ್ಯಯೌ ।
ತಸ್ಯ ದ್ರಾಗ್ಗಮನಂ ದೃಷ್ಟ್ವಾ ಮುಮುದೇ ಭೂಪತಿ ಸ್ತದಾ ॥ ೧೦ ॥

---

೫-೧೦. ಹೀಗೆ ಇರುವಲ್ಲಿ ಕಿರಾತರಿಗೆ ರಾಜನಾದ ಚೇದಿರಾಜನೆಂಬುವನು ಪಾಂಡ್ಯರಾಜನಕೂಡ ಯುದ್ಧಮಾಡಲು ತಕ್ಕ ಪ್ರಯತ್ನಮಾಡಿದನು. ಪಾಂಡ್ಯರಾಜನು ಅವನು ಮಾಡುತ್ತಿರುವ ಪ್ರಯತ್ನಗಳನ್ನು ಕೇಳಿ ತಾನೂ ಸೇನೆಗಳನ್ನೂ ಶೇಖರ ಮಾಡುವುದಕ್ಕಾಗಿ ಸೇನಾಪತಿಯಾದ ಸುಂದರಸಾಮಂತನನ್ನು ಕರೆದು ರಹಸ್ಯವಾಗಿ " ಬಲಿಷ್ಠನಾದ ಚೇದಿರಾಜನು ಸೇನೆಯೊಡನೆ ನಮ್ಮ ದೇಶವನ್ನು ಹಾಳುಮಾಡುವುದಕ್ಕಾಗಿ ಇಲ್ಲಿಗೆ ಬರುವನು, ಎಂದು ವರ್ತಮಾನವನ್ನು ಕೇಳಿರುವೆನು. ನಾವು ಜಯಶೀಲರಾಗುವುದಕ್ಕಾಗಿ ಅನೇಕ ಜಾತಿಯ ಜನರಿಂದ ಕೂಡಿದ ದೊಡ್ಡ ಸೇನೆಯನ್ನು ಸಿದ್ಧಪಡಿಸು. ಬಹಳ ಶೂರರಾದ ಸೈನಿಕರನ್ನು (ಜಯವಾಗುವುದಕ್ಕಾಗಿ) ಹೊರಗಡೆ ಹೋಗದಂತೆ ಮಾಡು. ವೆಚ್ಚಕ್ಕಾಗಿ ಬೇಕಾಗುವ ದ್ರವ್ಯವನ್ನು ಭಂಡಾರದಿಂದ ನೀನು ಬೇಕಾದಷ್ಟು ತೆಗೆದುಕೊಂಡು ಉಪಯೋಗಿಸು " ಎಂದು ಹೇಳಿ ಅವನಿಗೆ ದ್ರವ್ಯವನ್ನು ಕೊಟ್ಟು ಕಳುಹಿಸಿದನು. ಕುಲಭೂಷಣಪಾಂಡ್ಯರಾಜನು ಕೊಟ್ಟ ದ್ರವ್ಯವನ್ನು ತೆಗೆದುಕೊಂಡು ಸುಂದರಸಾಮಂತನು " ಹಾಗೆಯೇ ಮಾಡುತ್ತೇನೆ" ಎಂದು ಹೇಳಿ ಮನೆಗೆ ಹೋದನು. ಅವನು ವೇಗವಾಗಿ ಹೋಗುವ ಕ್ರಮವನ್ನು ನೋಡಿ ರಾಜನು ಸಂತೋಷಪಟ್ಟನು.

ಸದ್ಯೋ ಭಟಾಗ್ರಣೀಃ ಪ್ರಾಪ್ಯ ಕೋಶಾಗಾರಂ ಮಹೀಭುಜಃ ।
ಯಾವತ್ಸ್ಥಿತಂ ಧನಂ ತತ್ರ ತಾವತ್ಸರ್ವಂ ಪ್ರಗೃಹ್ಯ ಚ ॥ ೧೧ ॥

ಸಂವಾಹ್ಯ ಕಿಂಕರೈಃ ಸದ್ಯಃ ಸೇನಾಸ್ವೀಕರಣಾಯ ಚ ।
ಗಮಿಷ್ಯಾಮೀತಿ ಸಚಿವೈಃ ಸಹೋಕ್ತ್ವಾ ತೈ ಸ್ಸಮಾಹಿತಃ ॥ ೧೨ ॥

ಸಹಾಯೈಃ ಸಂಪ್ರವಿಶ್ಯಾಥ ಸುಂದರೇಶ್ವರಮಂದಿರಂ ।
ನಮಸ್ಕೃತ್ಯ ಪ್ರಾರ್ಥಯತಿ ಹಾಲಾಸ್ಯೇಶ್ವರ ಮೀಶ್ವರಂ ॥ ೧೩ ॥

ಸ್ವಾಮಿ ನ್ಸರ್ವ ಜಗನ್ನಾಥ ಮನ್ನಾಯಕ ಮಹೇಶ್ವರ ।
ನಮ ಸ್ತುಭ್ಯಂ ಸುಂದರೇಶ ತ್ವಮೇವ ಶರಣಂ ಮಮ ॥ ೧೪ ॥

ತ್ವದ್ಭಕ್ತೇಭ್ಯಶ್ಚ ತುಭ್ಯಂ ಚ ದತ್ವಾ ಸರ್ವಧನಾನಿ ಚ ।
ರಾಜ್ಞಃ ಶತ್ರುವಧಂ ಸದ್ಯಃ ಕರ್ತು ಮುದ್ಯುಕ್ತವಾನ ಹಂ ॥ ೧೫ ॥

---

೧೧–೧೩. ಅನಂತರದಲ್ಲಿ ಸೇನಾಪತಿಯಾದ ಸುಂದರಸಾಮಂತನು ಥೊರೆಯ ಭಂಡಾರಕ್ಕೆ ಹೋಗಿ ಅಲ್ಲಿರುವ ದ್ರವ್ಯವೆಲ್ಲವನ್ನೂ ಸೇವಕರಿಂದ ಹೊರಿಸಿಕೊಂಡು ಹೋದನು. ಆಗ "ಸೇನೆಯನ್ನು ಹೆಚ್ಚಿಸುವುದಕ್ಕಾಗಿ ಈ ದ್ರವ್ಯವನ್ನು ತೆಗೆದುಕೊಂಡು ಹೋಗುವೆನು" ಎಂದು ಮಂತ್ರಿಗಳೊಡನೆ ಹೇಳಿದ್ದರಿಂದ ಮಂತ್ರಿಗಳು ಅವನಿಗೆ ಗೌರವವನ್ನು ಕೊಟ್ಟು ಸಹಾಯಮಾಡಿದರು. ದ್ರವ್ಯವನ್ನು ಭದ್ರವಾಗಿ ಇರಿಸಿ, ಸುಂದರೇಶ್ವರನ ದೇವಾಲಯಕ್ಕೆ ಅವನು ಹೋಗಿ ಹಾಲಾಸ್ಯೇಶ್ವರನಿಗೆ ಪ್ರಾರ್ಥನೆ ಮಾಡಿದನು.

೧೪–೧೮. "ಎಲ್ಲಾ ಲೋಕಗಳಿಗೂ ಅಧಿಪನಾದ ಎಲೈ ಪ್ರಭುವೇ, ನಿನಗೆ ನಮಸ್ಕಾರವು. ಎಲೈ ಮಹೇಶ್ವರನೆ, ನೀನೇ ನನಗೆ ರಕ್ಷಕನಾಗಿ ಇರುತ್ತೀಯೆ. ನಿನ್ನ ಭಕ್ತರಿಗೂ ನಿನಗೂ ಈ ದ್ರವ್ಯವೆಲ್ಲವನ್ನೂ ಅರ್ಪಿಸುವೆನು. ರಾಜನ ಶತ್ರು ಸಂಹಾರ ವನ್ನು ಬೇಗಮಾಡಲು ಉದ್ಯುಕ್ತನಾಗಿ ಇರುವೆನು. ಎಲೈ ಶಂಕರನೆ ನೀನು ಅನೇಕ

ತ್ವಂ ಚ ಸೇನಾಂ ಬಹುವಿಧಾಂ ದರ್ಶಯಿತ್ವಾ ಮಹೀಪತೇಃ ।
ಕುರುಷ್ವಾರಿವಧಾದೀನಿ ತತ್ಕಾರ್ಯಾಣಿ ಚ ಶಂಕರ ॥ ೧೬ ॥

ಇತಿ ವಿಜ್ಞಾಪ್ಯ ಸೌಮ್ಯೇಶಂ ನಮಸ್ಕೃತ್ಯ ಪುನಃ ಪುನಃ ।
ಕಾರಯಿತ್ವಾ ಮಹಾಪೂಜಾಂ ಶಂಭೋರ್ವಿಭವವಿಸ್ತರೈಃ ॥ ೧೭ ॥

ಸ್ವಾಲಯಂ ಸಂಪ್ರವಿಶ್ಯಾಥ ಶಿವಭಕ್ತಾನಭೋಜಯತ್ ।
ಸ್ವಯಂ ಚ ಭುಕ್ತವಾನ್ಪಶ್ಚಾತ್ತಚ್ಛೇಷಮತಿ ಪಾವನಂ ॥ ೧೮ ॥

ಅಥ ಸುಂದರಸಾಮಂತಃ ಸಮಾದಾಯ ಧನಂ ಬಹು ।
ರಹಸ್ಥಲೇ ಸಮಾಹೂಯ ಶಿವಭಕ್ತಾನ್ದ್ವಿಜೋತ್ತಮಾನ್ ॥ ೧೯ ॥

ಯಜ್ಞಾರ್ಥಂ ಚ ವಿವಾಹಾರ್ಥಂ ಮೌಂಜೀಬಂಧನಕರ್ಮಣೇ ।
ದಾರಿದ್ರ್ಯೋನ್ಮೂಲನಾರ್ಥಂ ಚ ದದೌ ತೇಭ್ಯೋ ಧನಂ ಬಹು ॥ ೨೦ ॥

---

ವಿಧವಾದ ಸೇನೆಯನ್ನು ರಾಜನಿಗೆ ತೋರಿಸಿ, ಶತ್ರು ವಧೆಯೇ ಮೊದಲಾದ ಕಾರ್ಯಗಳನ್ನು ನೀನು ನಡೆಸಬೇಕು" ಎಂದು ಹಾಲಾಸ್ಯೇಶ್ವರನ ಸನ್ನಿಧಿಯಲ್ಲಿ ವಿಜ್ಞಾಪನೆಯನ್ನು ಮಾಡಿಕೊಂಡು ಬಹಳ ವೈಭವದಿಂದ ಮಹಾಪೂಜೆಯನ್ನು ಹಾಲಾಸ್ಯೇಶ್ವರನಿಗೆ ಮಾಡಿಸಿ, ಮನೆಗೆ ಬಂದು ಶಿವಭಕ್ತರಿಗೆ ಭೋಜನವನ್ನು ಮಾಡಿಸಿದನು. ಅನಂತರ ಉಳಿದ ಪರಿಶುದ್ಧವಾದ ಅನ್ನವೇ ಮೊದಲಾದದ್ದನ್ನು ಸುಂದರಸಾಮಂತನು ಊಟ ಮಾಡಿದನು.

೧೯-೨೩. ಅನಂತರದಲ್ಲಿ ಸುಂದರಸಾಮಂತನು ಬಹಳ ಹಣವನ್ನು ತೆಗೆದುಕೊಂಡು ಹೋಗಿ ಗುಟ್ಟಾಗಿರುವ ಪ್ರದೇಶದಲ್ಲಿ ಶಿವಭಕ್ತರಾದ ಬ್ರಾಹ್ಮಣರಿಗೆ ಯಜ್ಞ ಮಾಡುವುದು, ಮದುವೆ, ಉಪನಯನ ಇವುಗಳಿಗೂ, ಬಡತನವುಳ್ಳವರಿಗೂ ದಾನ ಮಾಡುತ್ತಿದ್ದನು. ಶಿವಭಕ್ತರಿಗೆ ಯಾವಾಗಲೂ ತಪ್ಪದೆ ಅನ್ನವನ್ನು ದಾನಮಾಡಿದನು

ಶಂಭೋ ರ್ಭಕ್ತಾನ್ಪ್ರತಿದಿನ ಮಭೋಜಯ ದನಾರತಂ ।
ಪಯೋದಧಿಘೃತಕ್ಷೌದ್ರಶರ್ಕರಾಪೂಪಷಡ್ರಸೈಃ ॥ ೨೧ ॥

ಪ್ರಾಸಾದೇ ಗೋಪುರೇ ಸಾಲೇ ಪರಿವಾರಾಲಯಾದಿಷು ।
ಯದ್ಯತ್ರ ಜೀರ್ಣಂ ತದಭೂತ್ತೇ ನ ತತ್ರ ನವೀಕೃತಂ ॥ ೨೨ ॥

ಶತಾಂಘ್ರಿಮಂಟಪಮಪಿ ಸಹಸ್ರಸ್ತಂಭಮಂಟಪಂ ।
ಅಕಾರಯದ್ರಥಮಪಿ ಸರ್ವಲಕ್ಷಣಲಕ್ಷಿತಂ ॥ ೨೩ ॥

ಶತಂ ಸಹಸ್ರಮಯುತಂ ಅಧಿಕಂ ವಾ ದಿನೇ ದಿನೇ ।
ವ್ಯಯೀಕರೋತಿ ಧರ್ಮಾರ್ಥೇ ರಾಜ್ಞೋ ವಸು ಭಟಾಗ್ರಣೀಃ ॥ ೨೪ ॥

ಭಟಾಃ ಕೇಚಿತ್ಪ್ರೇಷಿತಾಶ್ಚ ತೇನ ದೇಶಾಂತರೇಷು ಚ ।
ಸೇನಾಸ್ವೀಕರಣಾರ್ಥಾಯ ಮಿಥ್ಯಯಾ ಮಂತ್ರಿಣಾಂ ಪುರಃ ॥ ೨೫ ॥

ತತ್ಕಾಪಟ್ಯಂ ನ ಜಾನಂತಿ ಮಂತ್ರಿಣಶ್ಚ ಮಹೀಭುಜಾ ।
ಏವಂ ಹಾಲಾಸ್ಯನಾಥಸ್ಯ ತದ್ಭಕ್ತಿಪ್ರವಣಾತ್ಮನಾಂ ॥ ೨೬ ॥

---

ಮೊಸರು, ತುಪ್ಪ, ಹಾಲು, ಜೇನು, ಸಕ್ಕರೆ, ಭಕ್ಷ್ಯ ಭೋಜ್ಯಗಳು ಇವುಗಳಿಂದ ಶಿವಭಕ್ತರನ್ನು ತೃಪ್ತಿಪಡಿಸಿದನು. ದೇವಸ್ಥಾನ, ಗೋಪುರ, ಪಡಸಾಲೆ,ದೇವಾಲಯದ ಸುತ್ತಲೂ ಇರುವ ಪರಿವಾರ ದೇವತೆಗಳ ಗುಡಿಗಳು ಇವುಗಳಲ್ಲಿ ಜೀರ್ಣವಾದ ಭಾಗ ಗಳೆಲ್ಲವನ್ನೂ ಹೊಸದಾಗಿ ಮಾಡಿಸಿದನು. ನೂರು ಕಂಬದ ಮಂಟಪ, ಸಾವಿರ ಕಾಲಿನ ಮಂಟಪ, ಇವೆಲ್ಲವನ್ನೂ ಸರಿಮಾಡಿಸಿದನು.

೨೪-೨೯. ಅವನು ಪ್ರತಿದಿನವೂ, ನೂರು, ಸಾವಿರ, ಹತ್ತುಸಾವಿರ, ಈ ಪ್ರಕಾರದಿಂದ ರಾಜನ ಧನವನ್ನು ಧರ್ಮಕ್ಕಾಗಿ ಖರ್ಚುಮಾಡುತ್ತಿದ್ದನು. ಸುಂದರ ಸಾಮಂತನು ಮಂತ್ರಿಗಳ ಎದುರಿಗೆ ಕೆಲವು ಜನರನ್ನು ಕರೆದು “ ನೀವು ಬೇರೆ ಬೇರೆ ಕಡೆಗೆ ಹೋಗಿ ಸೇನೆಗಾಗಿ ಜನರನ್ನು ಸೇರಿಸಿ” ಎಂದು ಅಪ್ಪಣೆ ಮಾಡಿದ್ದನು. ರಾಜನೂ ಮಂತ್ರಿಗಳೂ ಇವನ ಮೋಸದ ಕೆಲಸವನ್ನು ತಿಳಿದಿರಲಿಲ್ಲ. ಹಾಲಾಸ್ಯೇಶ್ವರನಲ್ಲಿ ಭಕ್ತಿಯುಳ್ಳವನಾದ ಸುಂದರಸಾಮಂತನು ದ್ರವ್ಯದಿಂದ ಸಂತೋಷವನ್ನು ಅನುಭವಿಸು

ಭಕ್ತ್ಯಾ ಸುಂದರಸಾಮಂತಸ್ಸಂತೋಷ ಮಗಮ ದ್ಧನೈಃ ।
ಗತೇಷು ಷಟ್ಸು ಮಾಸೇಷು ತಮಾಹೂಯ ಮಹೀಪತಿಃ ॥ ೨೭ ॥

ಕಿಯಂತ ಇತಿ ಪಪ್ರಚ್ಛ ಸಂಗ್ರಹೀತಾ ಭಟಾಸ್ತ್ವಯಾ ।
ಸುಂದರೇಶಂ ಹೃದಿ ಧ್ಯಾಯರ್ನಸೋಪ್ಯೇವಂ ಸುದೃಢೋ ಬ್ರವೀತ್ ॥ ೨೮ ॥

ಸಂಗ್ರಹೀತಾ ಮಯಾ ಸೇನಾ ಪರಾಕ್ರಮಸಮನ್ವಿತಾ ।
ಮತ್ಕಾರ್ಯಂ ಸುಂದರಾಧೀಶ ಸ್ಸರ್ವಂ ಸಂಪಾದಯಿಷ್ಯತಿ ॥ ೨೯ ॥

ಇತಿ ಶ್ರುತ್ವಾ ತಸ್ಯ ವಾಚ ಮುಬ್ರವೀ ತ್ಕುಲಭೂಷಣಃ ।
ಹಾಲಾಸ್ಯನಾಥೋ ಭಗವಾನ್ಸ ರ್ತತೇ ಭಕ್ತವತ್ಸಲಃ ॥ ೩೦ ॥

ಜಾನಾಮ್ಯೇವ ನ ಸಂದೇಹ ಸ್ತವೇಷ್ಟಂ ಪೂರಯಿಷ್ಯತಿ ।
ಶ್ವಸ್ತ್ವಯಾ ಸಂಗ್ರಹೀತಾಂ ಚ ಸೇನಾಂ ದರ್ಶಯಸೇ ನೃಪಂ ॥ ೩೧ ॥

---

ತ್ತಿದ್ದನು. ಹೀಗೆಯೇ ಆರು ತಿಂಗಳು ಕಳೆದನಂತರ ರಾಜನು ಸುಂದರಸಾಮಂತನನ್ನು ಕರೆದು "ನೀನು ಎಷ್ಟು ಸೇನೆಯನ್ನು ಸೇರಿಸಿರುತ್ತೀಯೆ" ಎಂದು ಪ್ರಶ್ನೆ ಮಾಡಿದನು. ಆಗ ಅವನು ಸುಂದರೇಶ್ವರನನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತಾ ನಾನು ಬಹಳ ಪರಾಕ್ರಮವುಳ್ಳ ಬಹಳ ಸೇನೆಯನ್ನು ಶೇಖರಿಸಿರುತ್ತೇನೆ. ಸುಂದರೇಶ್ವರನೇ ನನ್ನ ಕಾರ್ಯವನ್ನು ನೆರವೇರಿಸುತ್ತಾನೆ" ಎಂದು ರಾಜನಿಗೆ ಉತ್ತರವನ್ನು ಹೇಳಿದನು.

೩೦–೩೪. ಕುಲಭೂಷಣಪಾಂಡ್ಯರಾಜನು ಅವನ ಮಾತನ್ನು ಕೇಳಿ "ಹಾಲಾಸ್ಯೇಶ್ವರನು ಭಕ್ತರಲ್ಲಿ ಬಹಳ ಪ್ರೀತಿಯುಳ್ಳವನಾಗಿ ಇರುವನು. ನಿನ್ನ ಇಷ್ಟವನ್ನು ದೇವದೇವನಾದ ಸೋಮಸುಂದರೇಶ್ವನು ನಡೆಸುವುದರಲ್ಲಿ ಸಂಶಯವಿಲ್ಲವೆಂಬುದನ್ನು ನಾನು ತಿಳಿದು ಇರುತ್ತೇನೆ. ನೀನು ಸೇರಿಸಿರುವ ಸೇನೆಯೆಲ್ಲವನ್ನೂ ನಾಳೆಯದಿನ ತೋರಿಸಬೇಕು." ಎಂದು ಸುಂದರಸಾಮಂತನಿಗೆ ಹೇಳಿದನು. ಅವನು ರಾಜನ ಮಾತನ್ನು ಕೇಳಿ, "ಹಾಗೆಯೇ ಆಗಲಿ" ಎಂದು ಹೇಳಿ, ಯಾವ ವಿಕಾರವೂ ಇಲ್ಲದವನಾಗಿ ಹೊರಟುಹೋದನು. ಅನಂತರದಲ್ಲಿ ಸುಂದರಸಾಮಂತನು ಮಹಾತೀರ್ಥವಲ್ಲಿ ಸ್ನಾನಮಾಡಿ, ಭಸ್ಮಧಾರಣೆಯನ್ನು ಮಾಡಿಕೊಂಡು, ಸುಂದರೇಶ್ವರನ ಹತ್ತಿರಕ್ಕೆ

ತಥಾಸ್ತ್ವಿತ್ಯಭಿಧಾಯ್ಯೈವನಿರ್ವಿಕಾರೋಽಪಿ ನಿರ್ಯಯೌ ।
ಮಹಾತೀರ್ಥೇ ಸಮಾಚಮ್ಯ ಕೃತಭಸ್ಮತ್ರಿಪುಂಡ್ರಕಃ ॥ ೩೨ ॥

ಸ್ವನಾಥಂ ಸುಂದರಾಧೀಶಂ ನತ್ವಾ ಸ್ತುತ್ವೈವ ಮಬ್ರವೀತ್ ।
ತ್ವದ್ಭಕ್ತಾನಾಂ ಪೂಜಯಾ ಚ ತ್ವಚ್ಛ್ರೀಚರಣಪೂಜಯಾ ॥ ೩೩ ॥

ರಾಜ್ಞೋ ವಸು ಚ ಸಂಪೂರ್ಣಂ ನಿಶ್ಶೇಷ ಮಗಮದ್ವ್ಯಯಂ ।
ನೃಪೋಕ್ತಸೇನಾಂ ಸ್ವೀಕರ್ತುಂ ನ ಕಿಂಚಿದ್ವಿದ್ಯತೇ ವಸು ॥ ೩೪ ॥

ಇತಃ ಪರಂ ಕಿಂ ಕರ್ತವ್ಯಮಿತಿ ಪ್ರೋಕ್ತೇ ಭಟೋತ್ತಮೇ ।
ಶಂಭೋಃ ಖಾದ ಭವದ್ವಾಣೀ ಸುವ್ಯಕ್ತಾ ಸುಸ್ವನಾ ತದಾ ॥ ೩೫ ॥

ಧೀರಸುಂದರಸಾಮಂತ ಭಕ್ತರತ್ನಮಹೋದಧೇ ।
ಧೀರೋ ಭವ ಪ್ರಭಾತೇಽಹಂ ನಾನಾಭೂಷಣಭೂಷಿತಾನ್ ॥ ೩೬ ॥

---

ಬಂದು ನಮಸ್ಕಾರ ಮಾಡಿ, ಸ್ತುತಿಮಾಡಿದನಂತರ "ಎಲೈ ಸುಂದರೇಶ್ವರನೆ, ನಿನ್ನ ಪಾದಸೇವೆಯಲ್ಲಿಯೂ, ನಿನ್ನ ಭಕ್ತರ ಸೇವೆಯಲ್ಲಿಯೂ ರಾಜನು ಕೊಟ್ಟಿದ್ದ ದುಡ್ಡೆಲ್ಲವೂ ಮುಗಿದಿರುವುದು. ರಾಜನ ಅಪ್ಪಣೆಯಂತೆ ಸೇನೆಯನ್ನು ಸೇರಿಸಲು ನನ್ನಲ್ಲಿ ದ್ರವ್ಯವು ಇಲ್ಲ. ಇನ್ನು ಮುಂದೆ ಏನು ಮಾಡಲಿ" ಎಂದು ಕೇಳಿದನು.

೩೫–೩೯. ಆಗ "ಬುದ್ಧಿವಂತನಾದ ಸುಂದರಸಾಮಂತನೆ, ಭಕ್ತಾಗ್ರಣಿಯೇ, ನೀನು ಹೆದರಬೇಡ. ಧೈರ್ಯವಾಗಿರು. ನಾನು ನಾಳೆಯ ಬೆಳಿಗ್ಗೆ, ಅನೇಕಾಭರಣ ಗಳಿಂದ ಕೂಡಿರುವ, ಬೇರೆ ಬೇರೆಯ ಆಯುಧಗಳನ್ನು ಧರಿಸಿರುವ, ಆಶ್ಚರ್ಯಕರ ವಾದ ಆಕಾರವುಳ್ಳ, ಬಹಳ ಮಂದಿ ಸೇನೆಯ ಜನಗಳನ್ನು ಕುಲಭೂಷಣರಾಜನಿಗೆ ತೋರಿಸುವೆನು. ರಾಜನ ಕಡೆಯವರು ಆ ಸೇನೆಯನ್ನು ನೋಡುವರು. ರಾಜನೂ ನಿನ್ನ ವಿಷಯದಲ್ಲಿ ಸಂತೋಷದಿಂದ ಸೇನೆಯಲ್ಲಿ ನಿನಗೆ ಎಲ್ಲರಿಗಿಂತಲೂ ಹೆಚ್ಚಾದ ದೊಡ್ಡ ಅಧಿಕಾರವನ್ನು ಕೊಟ್ಟು, ವಸ್ತ್ರಾಭರಣಗಳನ್ನು ಬಹುಮಾನವಾಗಿ ಕೊಡು ವೆನು." ಎಂದು ಶಿವನು ಹೇಳಿದ ಆಕಾಶವಾಣಿಯು ಸಾಮಂತನಿಗೆ ಕೇಳಿತು. ಸುಂದರ

ನಾನಾವಿಧಾಯುಧಧರಾ ನನಂತಾ ನದ್ಭುತಾಕೃತೀನ್ ।
ಸುಭಟಾನ್ದರ್ಶಯಿಷ್ಯಾಮಿ ಕುಲಭೂಷಣಭೂಪತೇಃ ॥ ೩೭ ॥

ಸದ್ಭಟಾಸ್ತಾನ್ವಿ ಲೋಕ್ಯಾಥ ನೃಪಃ ಪ್ರೀತಶ್ಚ ವಿಸ್ಮಿತಃ ।
ತುಭ್ಯಂ ಸರ್ವಾರ್ಧಿಪತ್ಯಂ ಚ ದಾಸ್ಯ ತ್ಯಂಬರಭೂಷಣೈಃ ॥ ೩೮ ॥

ಇತಿ ಶಂಭೋರ್ವಚಃ ಶೃತ್ವಾ ನತ್ವಾ ಸ್ತುತ್ವಾ ಭಟಾಗ್ರಣೀಃ ।
ಸುಪ್ರೀತಃ ಸ್ವಾಲಯಂ ಪ್ರಾಪ್ಯ ಪತ್ನ್ಯೈ ವೃತ್ತಾಂತಮಬ್ರವೀತ್ ॥ ೩೯ ॥

ಪತ್ನೀ ಚಾಂತರ್ಭಯಂ ತ್ಯಕ್ತ್ವಾ ಜಗಾದೈವಂ ಸುಧೀರಧೀಃ ।
ಧೈರ್ಯಮಾಲಂಬ್ಯ ತಿಷ್ಠ ತ್ವಂ ಧರ್ಮೋ ರಕ್ಷತಿ ಧರ್ಮಿಣಂ ॥ ೪೦ ॥

ಸಾಹಾಯ್ಯಂ ಸುಂದರೇಶಸ್ತು ಕರಿಷ್ಯತಿ ನ ಸಂಶಯಃ ।
ಇತಿ ಪತ್ನೀವಚಃ ಶ್ರುತ್ವಾ ಪ್ರೀತಿಧೈರ್ಯಸಮನ್ವಿತಃ ॥ ೪೧ ॥

ಭುಕ್ತ್ವಾ ಭಕ್ತಜನೈಃ ಸಾರ್ಧ ಮಾಸ್ತೇ ಶಂಭೋಃ ಗಿರಂ ಸ್ಮರನ್ ।
ಪರೇದ್ಯು ರುದಯಾತ್ಪೂರ್ವಂ ಸಾಂಬಂ ಹಾಲಾಸ್ಯಸುಂದರಂ ॥ ೪೨ ॥

---

ಸಾಮಂತನು ಆ ಆಕಾಶವಾಣಿಯನ್ನು ಕೇಳಿ, ಸುಂದರೇಶ್ವರನಿಗೆ ಸ್ತುತಿ ನಮಸ್ಕಾರಗಳನ್ನು ಭಕ್ತಿಯಿಂದ ಮಾಡಿದನಂತರ ಮನೆಗೆ ಬಂದು ಸಂತೋಷದಿಂದ ತನ್ನ ಹೆಂಡತಿಗೆ ಈ ವರ್ತಮಾನವೆಲ್ಲವನ್ನೂ ಹೇಳಿದನು.

೪೦–೪೩. ಸುಂದರ ಸಾಮಂತನ ಹೆಂಡತಿಯು ಮನಸ್ಸಿನಲ್ಲಿ ಧೈರ್ಯವುಳ್ಳವಳಾಗಿ "ನೀನು ಧೈರ್ಯವಾಗಿರು. ಧರ್ಮವಂತನನ್ನು ಧರ್ಮವು ಕಾಪಾಡುವುದು. ಸುಂದರೇಶ್ವರನು ನಿನಗೆ ಸಹಾಯ ಮಾಡುವನು. ಇದರಲ್ಲಿ ಸಂದೇಹವಿಲ್ಲ" ಎಂದು ಹೇಳಿದಳು. ಈ ಮಾತನ್ನು ಕೇಳಿದ ಸುಂದರ ಸಾಮಂತನು ಧೈರ್ಯ ಸಂತೋಷಗಳುಳ್ಳವನಾಗಿ, ಶಿವಭಕ್ತರೊಡನೆ ಊಟ ಉಪಚಾರಗಳನ್ನು ಮಾಡಿಕೊಂಡು ಶಿವನು ಹೇಳಿರುವ ಮಾತನ್ನು ಸ್ಮರಿಸುತ್ತಾ ಧೈರ್ಯದಿಂದ ಇದ್ದನು. ಮಾರನೆಯ ದಿವಸ

ಪ್ರಣಮ್ಯ ಪ್ರಾರ್ಥಯಿತ್ವೇಷ್ಟಂ ಸುಪ್ರೀತಃ ಸಮಲಂಕೃತಃ ।
ಭಟೈಃ ಕತಿಪಯೈ ರ್ಯುಕ್ತೋ ಧೀರೋ ಗೇಹಾದ್ವಿ ನಿರ್ಯಯೌ ॥ ೪೩ ॥

ಮಹಾರ್ಥದಂ ಮಹಾಲಿಂಗಂ ಮನಸಾ ಪರಿಶೀಲಯನ್ ।
ಮಂದಂ ಮಂದಂ ಮಹೀಪಸ್ಯ ಪ್ರತಸ್ಥೇ ಮಂದಿರಂ ಪ್ರತಿ ॥ ೪೪ ॥

ಮಧ್ಯೇ ಮಾರ್ಗಂ ಚ ಮಹತೀಂ ಚಿಂತಾಂ ಪ್ರಾಪ್ಯ ಸ್ಥಿತೇ ಸತಿ ।
ತಸ್ಮಿನ್ಸುಂದರಸಾಮಂತೇ ಕಿಮತ್ಯಗ್ರೇ ಭವಿಷ್ಯತಿ ॥ ೪೫ ॥

ಕಾರುಣ್ಯ ಮೂರ್ತಿ ರ್ಭಗವಾನ್ ಕದಂಬವನನಾಯಕಃ ॥
ನಂದೀಶಪ್ರಮುಖಾನ್ ಸರ್ವಾನ್ ಕುಂಡೋದರಮುಖಾನಪಿ ॥ ೪೬ ॥

ಪ್ರಮಥಾನ್ ಭೂತಸಂಘಾಂಶ್ಚ ಪುನ ರ್ಬಹು ವಿಧಾನ್ ಗಣಾನ್ ।
ಭಕ್ತಕಾರ್ಯಸುಸಿದ್ಧ್ಯರ್ಥಂ ಪ್ರಾಹಿಣೋ ದ್ಭಕ್ತವತ್ಸಲಃ ॥ ೪೭ ॥

---

ಬೆಳಗಾದಕೂಡಲೆ ಸುಂದರ ಸಾಮಂತನು ಮೀನಾಕ್ಷೀಸಹಿತನಾದ ಸುಂದರೇಶ್ವರನಿಗೆ ನಮಸ್ಕಾರಮಾಡಿ, ತನ್ನ ಇಷ್ಟವನ್ನು ತಿಳಿಸಿದನಂತರ ಸಂತೋಷದಿಂದ ವಸ್ತ್ರಾಭರಣಗಳಿಂದ ಅಲಂಕೃತನಾಗಿ, ಕೆಲವು ಜನರೊಡನೆ ಮನೆಯಿಂದ ಧೈರ್ಯವಾಗಿ ಹೊರಗೆ ಹೊರಟನು.

೪೪–೪೫. ಅವನು ಬಹಳಮಟ್ಟಿಗೆ ಕಾರ್ಯವನ್ನು ಸಾಧಿಸಿಕೊಡುವ ಮಹಾಲಿಂಗರೂಪದಿಂದ ಇರುವ ಸುಂದರೇಶ್ವರನನ್ನು ಮನಸ್ಸಿನಿಂದ ಧ್ಯಾನಮಾಡುತ್ತಾ, ರಾಜನ ಅರಮನೆಯ ಹತ್ತಿರಕ್ಕೆ ಮೆಲ್ಲಮೆಲ್ಲಗೆ ಬರುತ್ತಾ ದಾರಿಯಲ್ಲಿ “ ಮುಂದೆ ಏನು ಆದೀತೋ ” ಎಂದು ಬಹಳ ಯೋಚನೆ ಮಾಡುತ್ತಾ ಇದ್ದನು.

೪೬–೪೭. ಆಗ ಭಕ್ತವತ್ಸಲನಾದ ಸುಂದರೇಶ್ವರನು ಬಹಳ ದಯೆಯುಳ್ಳವನಾಗಿ ನಂದೀಶ್ವರ, ಕುಂಡೋದರ, ಇವರೇ ಮುಂತಾದ ಗಣಾಧಿಪರನ್ನೂ, ಪ್ರಮಥರನ್ನೂ, ಭೂತಗಳ ಗುಂಪನ್ನೂ, ಅನೇಕ ವಿಧವಾದ ಗುಣಗಳನ್ನೂ, ತನ್ನ ಭಕ್ತನ ಕಾರ್ಯಸಿದ್ಧಿಗಾಗಿ ಕಳುಹಿಸಿದನು. ಅವರೆಲ್ಲರೂ ಸೈನಿಕರ ವೇಷವನ್ನು ಧರಿಸಿ

ತೇ ಸರ್ವೇ ಮುದಿತಾಃ ಸಂತಃ ಸದ್ಭಟಾಕಾರತಾಂ ಗತಾಃ ।
ಕಲೇಬರಾಣ್ಯಲಂಕೃತ್ಯ ಸುಗಂಧಾಭರಣಾಂಬರೈಃ ॥ ೪೮ ॥

ನಿಶಿತಾಯುಧಹಸ್ತಾಶ್ಚ ಸಂಹತಾಶ್ಚ ಸಮಾಯಯುಃ ।
ಕಾಹಲಾ ಪಟಹಾ ಭೇರ್ಯೋ ಜಿಘ್ಯೃಕ್ಷುಸ್ತುಮುಲಂ ಪುರಃ ॥ ೪೯ ॥

ಧ್ವಜಾಶ್ಚಾಮರಸಂಯುಕ್ತಾ ನಾನಾಚಿಹ್ನಸಮನ್ವಿತಾಃ ।
ಅನಂತರಂ ಪ್ರಾದುರಾ ಸನ್ಪುರೋ ಗತಗಣೈರ್ವೃತಃ ॥ ೫೦ ॥

ಕೇಚಿಚ್ಚ ದಂಡಹಸ್ತಾಶ್ಚ ಕುಂತಹಸ್ತಾ ಸ್ತಥಾ ಪರೇ ।
ಶರಚಾಪಲಸದ್ಧಸ್ತಾಃ ಖಡ್ಗಚರ್ಮಧರಾಃ ಪರೇ ॥ ೫೧ ॥

ಅಪರೇ ಪ್ರಾಸಹಸ್ತಾಶ್ಚ ಕೇಚಿನ್ಮುದ್ಗರಪಾಣಯಃ ।
ಭ್ರಮಚ್ಚಕ್ರಲಸದ್ಧಸ್ತಾಃ ಅಸಿಧೇನುಶಯಾಃ ಪರೇ ॥ ೫೨ ॥

ಗಣಾ ಬಹುವಿಧಾ ಏವಂ ವಿವಿಧಾಯುಧಪಾಣಯಃ ।
ಕುರ್ವಂತೋ ಧಾವನಂ ವಕ್ರಂ ಸಮಾಯಾತಾಸ್ಸಹಸ್ರಶಃ ॥ ೫೩ ॥

---

ಸಂತೋಷದಿಂದ ಸುಗಂಧವನ್ನೂ, ವಸ್ತ್ರಾಭರಣಗಳನ್ನೂ ಧರಿಸಿ ಆಯುಧಗಳನ್ನು ಹಿಡಿದುಕೊಂಡು, ಒಟ್ಟಾಗಿ ಬಂದರು. ಅವರು ಬರುವಾಗ ಮುಂದುಗಡೆಯಲ್ಲಿ ಕಹಳೆ, ತಮಟೆ, ಭೇರಿ ಇವುಗಳ ಧ್ವನಿಯು ಬಹಳವಾಗಿ ಆಗುತ್ತಿತ್ತು.

೫೦–೫೩. ಅನಂತರದಲ್ಲಿ ಕೆಲವರು ಧ್ವಜಪಟಗಳೇ, ಮೊದಲಾದ ಅನೇಕ ಚಿಹ್ನೆಗಳನ್ನು ಧರಿಸಿದ್ದರು. ಇವರ ಹಿಂಭಾಗದಲ್ಲಿ ಗುಂಪು ಗುಂಪಾಗಿ ಎಲ್ಲರೂ ಬರುತ್ತಿದ್ದರು. ಕೆಲವರು ದೊಣ್ಣೆಗಳನ್ನೂ ಕೆಲವರು ಕುಂತಾಯುಧವನ್ನೂ ಕೆಲವರು ಧನಸ್ಸು, ಬಾಣಗಳನ್ನೂ, ಕೆಲವರು ಕತ್ತಿ. ಗುರಾಣಿಗಳನ್ನೂ, ಕೆಲವರು ಪ್ರಾಸಾಯುಧವನ್ನೂ, ಕೆಲವರು ಮುದ್ಗರಾಯುಧವನ್ನೂ ಹಿಡಿದು ಇದ್ದರು. ಇನ್ನು ಕೆಲವರು ಚಕ್ರಾಯುಧವನ್ನು ಹಿಡಿದುಕೊಂಡು ತಿರುಗಿಸುತ್ತಿದ್ದರು. ಮತ್ತೆ ಕೆಲವರು ಕತ್ತಿಯನ್ನು ಒರೆಯಿಂದ ಹಿರಿದು ಖಡ್ಗವಿದ್ಯೆಯ ನಿಪುಣತೆಯನ್ನು ತೋರಿಸುತ್ತಾ ಇದ್ದರು. ಹೀಗೆಯೇ ಬಹು ವಿಧವಾಗಿರುವ ಗಣಗಳು ಬೇರೆ ಬೇರೆ ಆಯುಧಗಳನ್ನು ಹಿಡಿದುಕೊಂಡು ವಕ್ರಗತಿಯಿಂದ ಬೇಗಬೇಗನೆ ಬಂದು ಸೇರಿದರು.

ನಂದಿಭೃಂಗಿಮಹಾಕಾಲಪ್ರಮುಖಾ ಗಣನಾಯಕಾಃ ।
ಅನೇಕೈ ಸ್ತುರಗಾರೂಢೈಃ ಪರಿತಃ ಪರಿಸೇವಿತಾಃ ॥ ೫೪ ॥

ಅಲಂಕೃತಾನು ತ್ತಮಾಶ್ವಾನ ಧಿರುಹ್ಯ ಸಮಾಯಯುಃ ।
ಭಟಾಗ್ರಣೀಸ್ತು ತಾ೯ ದೃಷ್ಟ್ವಾ ವಿಸ್ಮಿತ ಸ್ತುಷ್ಟ ಮಾನಸಃ ॥ ೫೫ ॥

ವೇಗೇನ ರಾಜಸದನಂ ಪ್ರಾಪ ಪ್ರಾಪ್ತಮನೋರಥಃ ।
ಮೇದಿನೀ ನಿಚಿತಾ ಸೈನ್ಯೈಸ್ಸುಪಕ್ವೈಕಲಮೈ ರಿವ ॥ ೫೬ ॥

ರಾಜಾಪಿ ಘೋಷಂ ಶ್ರುತ್ವಾಥ ನಿರ್ಗತ್ಯಾಂತಃಪುರಾತ್ದ್ರುತಂ ।
ಭದ್ರಾಸನಂ ಚಾಧ್ಯುವಾಸ ಬಹಿರಾಸ್ಥಾನಮಂಟಪೇ ॥ ೫೭ ॥

ಸಚಿವಾಸ್ತಸ್ಯ ನಿಕಟೇ ತಸ್ಥುಃ ಸೇನಾದಿದೃಕ್ಷವಃ ।
ತದಾ ಸುಂದರಸಾಮಂತಃ ಸ್ವರ್ಣವೇತ್ರಲಸತ್ಕರಃ ॥ ೫೮ ॥

---

೫೪–೫೭. ನಂದಿ, ಭೃಂಗಿ, ಮಹಾಕಾಳ, ಇವರೇ ಮೊದಲಾದ ಸೇನಾಪತಿಗಳ ಸುತ್ತಲೂ ಬಹಳ ಮಂದಿ ಪ್ರಮಥರು ಕುದುರೆಯಮೇಲೆ ಕುಳಿತುಕೊಂಡು ಬರುತ್ತಿದ್ದರು. ಅಲಂಕಾರ ಮಾಡಿರುವ ಕುದುರೆಯನ್ನು ಏರಿಕೊಂಡು ಬರುತ್ತಿರುವ ಈ ಸೇನೆಯನ್ನು ಸುಂದರ ಸಾಮಂತನು ನೋಡಿ, ಆಶ್ಚರ್ಯದಿಂದಲೂ ಸಂತೋಷದಿಂದಲೂ ಕೂಡಿದವನಾಗಿ ಬೇಗನೆ ಕುಲಭೂಷಣ ಪಾಂಡ್ಯರಾಜನ ಅರಮನೆಯ ಹತ್ತಿರಕ್ಕೆ ಬಂದನು. ಚೆನ್ನಾಗಿ ಬೆಳೆದು ಭೂಮಿಯನ್ನು ಮುಚ್ಚಿಕೊಂಡು ಇರುವ ಭತ್ತದ ಪೈರುಗಳಂತೆ, ಭೂಮಿಯೆಲ್ಲವನ್ನೂ ಆವರಿಸಿಕೊಂಡು ಬರುತ್ತಿರುವ ಸೇನೆಯ ಆರ್ಭಟ ಧ್ವನಿಯನ್ನು ಕೇಳಿ, ರಾಜನು ಅಂತಃಪುರದಿಂದ ಬೇಗ ಹೊರಗಡೆಗೆ ಬಂದು, ಹೊರಗಡೆಯಲ್ಲಿ ಸಭಾಂಕಣದಲ್ಲಿ ಭದ್ರಾಸನವನ್ನು ಹಾಕಿಸಿಕೊಂಡು ಅದರಲ್ಲಿ ಕುಳಿತುಕೊಂಡನು.

೫೮–೫೯. ಅವನ ಮಂತ್ರಿಗಳು ಸೇನೆಯನ್ನು ನೋಡುವ ಇಚ್ಛೆಯಿಂದ ಅವನ ಹತ್ತಿರದಲ್ಲಿ ಕುಳಿತುಕೊಂಡಿದ್ದರು. ಆಗ ಸುಂದರ ಸಾಮಂತನು ಚಿನ್ನದ

ಸೇನಾಮಧ್ಯಗತೋ ಭೂತ್ವಾ ಸಂಭ್ರಮಾತಿಶಯಾನ್ವಿತಃ ।
ಅತ್ರ ತಿಷ್ಠಾತ್ರ ತಿಷ್ಠೇತಿ ಮಂದಮಾತಾಡ್ಯ ವೇತ್ರತಃ ॥ ೫೯ ॥

ಪಙ್ಕ್ತಿಕ್ರಮೇಣ ವಿವಿಧಾನ್ ಗಣಾನಾಸ್ಥಾಪಯತ್ ಕ್ರಮಾತ್ ।
ಭೋ ಭೋ ಸುಂದರಸಾಮಂತ ಭವಾನ್ಶೂರತಮಃ ಖಲು ॥ ೬೦ ॥

ಬಹ್ವೀಂ ನಾನಾವಿಧಾಂ ಸೇನಾಂ ಪೃಥಗ್ದರ್ಶಯ ಮೇಧುನಾ ।
ಇತಿ ರಾಜವಚಃ ಶ್ರುತ್ವಾ ಧ್ಯಾಯನ್ಸುಂದರನಾಯಕಂ ॥ ೬೧ ॥

ಕ್ರಮೇಣ ದರ್ಶಯಾಮಾಸ ಸೇನಾಮಾಶ್ಚರ್ಯದಾಯಿನೀಂ ।
ಪಶ್ಯ ಪಶ್ಯ ಮಹಾರಾಜ ಕುಲಭೂಷಣಭೂಷತೇ ॥ ೬೨ ॥

ಏತೇ ಕಲಿಂಗದೇಶೀಯಾಃ ಆಂಧ್ರಾಃ ಕರ್ಣಾಟಕಾ ಇಮೇ ।
ಅಸ್ಮದ್ದೇಶೋದ್ಭವಾ ಏತೇ ಮಹಾಬಲಪರಾಕ್ರಮಾಃ ॥ ೬೩ ॥

ಕಾಂಚೀದೇಶೋದ್ಭವಾ ಏತೇ ಬಲಶೌರ್ಯಸಮನ್ವಿತಾಃ ।
ಮಹಾರಾಷ್ಟ್ರೋದ್ಭವಾ ಏತೇ ಮಹಾವಿಕ್ರಮಸಂಯುತಾಃ ॥ ೬೪ ॥

---

ಬೆತ್ತವನ್ನು ಹಿಡಿದುಕೊಂಡು ಸೇನೆಯ ಮಧ್ಯದಲ್ಲಿ ಇರುತ್ತಾ, ಸೇನೆಯನ್ನು ಅಲ್ಲಲ್ಲಿ ವಿಂಗಡಿಸಿ ಸಾಲುಸಾಲಾಗಿ ಬೆತ್ತದಿಂದ ತೋರಿಸಿ, ನಿಲ್ಲಿಸುತ್ತಿದ್ದನು.

೬೦-೬೪. ಆಗ ರಾಜನು "ಎಲೈ ಸುಂದರ ಸಾಮಂತನೇ, ನೀನು ಬಹಳ ಶೂರನಾಗಿರುತ್ತೀಯೆ. ಬಹಳ ವಿಧವಾಗಿರುವ ಈ ಸೇನೆಯು ಅಸಂಖ್ಯಾತವಾಗಿರುವುದು. ಅವುಗಳನ್ನು ಬೇರೆ ಬೇರೆಯಾಗಿ ನನಗೆ ತೋರಿಸಿ, ಆ ಸೇನೆಯ ವಿವರಣೆಯನ್ನು ಹೇಳು" ಎಂದು ಹೇಳಿದನು. ಸುಂದರ ಸಾಮಂತನು ರಾಜನ ಮಾತನ್ನು ಕೇಳಿ, ಸುಂದರೇಶ್ವರನನ್ನು ಧ್ಯಾನಮಾಡುತ್ತಾ, ಆಶ್ಚರ್ಯವನ್ನು ಉಂಟುಮಾಡುತ್ತಿರುವ ಆ ಸೇನೆಯನ್ನು ಕ್ರಮವಾಗಿ ರಾಜನಿಗೆ ತೋರಿಸುತ್ತಿದ್ದನು. "ಎಲೈ ಕುಲಭೂಷಣ ಮಹಾರಾಜನೆ, ನೋಡು. ಇವರು ಕಳಿಂಗದೇಶದವರು, ಇವರು ಆಂಧ್ರದೇಶದವರು, ಇವರು ಕರ್ಣಾಟಕ ದೇಶದವರು, ಹೆಚ್ಚಾದ ಶಕ್ತಿ ಪರಾಕ್ರಮಗಳುಳ್ಳ ಇವರು ನಮ್ಮ ದೇಶದವರು. ಬಲ ಮತ್ತು ಶೌರ್ಯದಿಂದ ಕೂಡಿರುವ ಇವರು ಕಾಂಚೀ ದೇಶದವರು. ಬಹಳ ಪರಾಕ್ರಮದಿಂದ ಇರುವ ಇವರು ಮಹಾರಾಷ್ಟ್ರ ದೇಶದವರು.

**ಏತೇ ಮಗಧಸಂಭೂತಾ ಮಾಲವಾಸ್ತುಷ್ಕಸಂಭವಾಃ ।**
**ವಂಕಾಲಸಂಭವಾ ಏತೇ ವ್ಯಾಧಾ ಏತೇ ಭಯಂಕರಾಃ ॥ ೬೫ ॥**

**ಅತಿದೀರ್ಘಾಃ ಅತಿಸ್ಥೂಲಾಃ ಅತಿಶೌರ್ಯಬಲಾನ್ವಿತಾಃ ।**
**ಏತೇ ಕಾಶ್ಮೀರದೇಶಸ್ಥಾಃ ಧನಲೋಭಾ ದಿಹಾಗತಾಃ ॥ ೬೬ ॥**

**ವಿಂಧ್ಯಪರ್ವತಮಧ್ಯಸ್ಥಾಶ್ಶಬರಾ ಆತು ರಾಬಲ್ಯೈಃ ।**
**ಸಮಾಹೂತಾ ಇಮೇ ಸರ್ವೇ ಮಯಾರ್ಪಿತ ಧನೇನ ಚ ॥ ೬೭ ॥**

**ಏವಂ ಕ್ರಮೇಣ ವಿವಿಧಾಂ ಸೇನಾಂ ಸ್ವೇದಸಮನ್ವಿತಾಂ ।**
**ಅದರ್ಶಯತ್ಸ ಸೇನಾನೀ ರತ್ಯದ್ಭುತಮನೋಹರಾಂ ॥ ೬೮ ॥**

**ರಾಜಾ ಚ ಸಚಿವಾಃ ಸರ್ವೇ ದೃಷ್ಟ್ವಾ ತಾಂ ವಿಸ್ಮಯಂ ಯಯುಃ ।**
**ಸ ಚ ಸುಂದರಸಾಮಂತಃ ಸಂಪ್ರಾಪ್ಯಾತ್ಯಂತವಿಸ್ಮಯಂ ॥ ೬೯ ॥**

---

೬೫-೬೮. ಇವರು ಮಗಧ ದೇಶದವರು. ಮಾಲವದೇಶದ ತುರುಕರ ಸೇನೆಯವರು ಇವರು. ಭಯಂಕರರಾಗಿರುವ ಈ ಬೇಡರು ಬಂಗಾಳ ದೇಶದವರು, ಬಹಳ ಉದ್ದವಾದ ಮತ್ತು ಸ್ಥೂಲವಾದ ಶರೀರವುಳ್ಳವರಾಗಿ ಬಹಳ ಪರಾಕ್ರಮ ಮತ್ತು ಶಕ್ತಿಯುಳ್ಳ ಇವರು ಕಾಶ್ಮೀರ ದೇಶದವರು. ಇವರು ಹಣದ ಆಸೆಯಿಂದ ಇಲ್ಲಿಗೆ ಬಂದು ಇರುವರು. ವಿಂಧ್ಯಪರ್ವತದ ಮಧ್ಯದಲ್ಲಿರುವ ಬಹಳ ಶೂರರಾದ ಬೇಡರೆಲ್ಲರೂ ನಾನು ಕೊಟ್ಟಿರುವ ದುಡ್ಡಿನಿಂದ ಇಲ್ಲಿಗೆ ಬಂದಿರುವರು." ಎಂದು ಪ್ರತ್ಯೇಕವಾಗಿ ತೋರಿಸುತ್ತಾ ಸುಂದರ ಸಾಮಂತನು ಕ್ರಮವಾಗಿ ಆಶ್ಚರ್ಯಕರವಾಗಿಯೂ, ನೋಡುವುದಕ್ಕೆ ಚೆನ್ನಾಗಿಯೂ ಇರುವ ಸೇನೆಯೆಲ್ಲವನ್ನೂ ರಾಜನಿಗೆ ತೋರಿಸಿದನು.

೬೯-೭೩. ರಾಜನೂ ಮತ್ತು ಮಂತ್ರಿಗಳೂ ಆ ಸೇನೆಯಲ್ಲವನ್ನೂ ನೋಡಿ, ಆಶ್ಚರ್ಯಪಟ್ಟರು. ಆಗ (ಸೇನೆಯೆಲ್ಲವನ್ನೂ ರಾಜನಿಗೆ ತೋರಿಸುತ್ತಿರುವಾಗ) ಆ ಸೇನೆಯ ಮಧ್ಯದಲ್ಲಿ ನಂದೀಶನೇ ಮೊದಲಾದ ಗಣನಾಯಕರ ಮಧ್ಯದಲ್ಲಿ ಛತ್ರಿ, ಚಾಮರಗಳಿಂದ ಕೂಡಿರುವ ಒಂದು ಕುದುರೆಯಮೇಲೆ ಒಬ್ಬ ಸವಾರನ ವೇಷದಿಂದ

ಆತ್ಮಾಶ್ವಸಾದಿವೇಷಸ್ಸ್ವರ್ಣ ಕಲಯನ್ ಕುಂತಮುದ್ಧೃತಂ ।
ನಂದೀಶಪ್ರಮುಖೈಸ್ಸರ್ವೈಃ ಸಂವೃತ ಸ್ಸೋಮಸುಂದರಃ ॥ ೭೦ ॥

ಸಚ್ಛತ್ರ ಸ್ತುರಗಾರೂಢಃ ಸುಂದರೇಶಃ ಕ್ವಚಿತ್ಸ್ಥಿತಃ ।
ತಂ ವಿಲೋಕ್ಯಾತಿಸೌಂದರ್ಯ ಸಂಯುತಂ ಸೋಮಸುಂದರಂ ॥ ೭೧ ॥

ಕೋಽಯಂ ಸುಂದರಸಾಮಂತೇ ಪೃಚ್ಛತ್ ಕುಲಭೂಷಣಃ ।
ಮನ್ನಾಥ ಶೃಣು ವಿಜ್ಞಪ್ತಿಂ ಮದೀಯಾಂ ಮಂತ್ರಿಭಿಸ್ಸಹ ॥ ೭೨ ॥

ನ ಜಾನೇತ್ವೀದೃಶೀಂ ಸೇನಾಮೇವಂ ಚ ಮಧುರಾಕೃತಿಂ ।
ಇತಿ ತದ್ವಚನಂ ಶ್ರುತ್ವಾ ಪಾಂಡ್ಯೇಶಶ್ಚಾತಿವಿಸ್ಮಿತಃ ॥ ೭೩ ॥

ಕೋ ವಾ ಜಾನಾತಿ ತತ್ತ್ವೇನ ಸೇನಾಂ ಬಹುವಿಧಾಮಿಮಾಂ ।
ಇತ್ಯುಕ್ತ್ವಾ ಸಾದಿವರ್ಯಾಂಶ್ಚ ಸಮಾಹೂಯ ಗಣೇಶ್ವರೈಃ ॥ ೭೪ ॥

---

ಕುಂತಾಯುಧವನ್ನು ಹಿಡಿದುಕೊಂಡು ಸುಂದರೇಶ್ವರನು ಬಹಳ ಸುಂದರನಾಗಿ ಇರುವುದನ್ನು ನೋಡಿದ ಸುಂದರ ಸಾಮಂತನಿಗೆ ಆಶ್ಚರ್ಯವಾಯಿತು. ರಾಜನು "ಎಲೈ ಸುಂದರ ಸಾಮಂತನೆ, ಮಧ್ಯದಲ್ಲಿ ಛತ್ರಿಯುಳ್ಳ ಕುದುರೆಯನ್ನು ಏರಿರುವವನು ಯಾರು" ಎಂದು ಕೇಳಿದನು. "ಎಲೈ ರಾಜನೆ, ನನ್ನ ವಿಜ್ಞಾಪನೆಯನ್ನು ಲಾಲಿಸು. ಈ ಪ್ರಕಾರದ ಶಿಸ್ತಿನಿಂದ ಇರುವ ಸೇನೆಯನ್ನೂ, ಇಷ್ಟು ಸುಂದರವಾದ ಆಕಾರವುಳ್ಳವನನ್ನೂ ನನಗೆ ತಿಳಿದು ಹೇಳಲು ಸಾಮರ್ಥ್ಯವಿಲ್ಲ" ಎಂದು ಸುಂದರ ಸಾಮಂತನು ಮಂತ್ರಿಗಳೊಡನೆ ಇರುವ ರಾಜನಿಗೆ ಹೇಳಿದನು. ಅದನ್ನು ಕೇಳಿ ರಾಜನು ಆಶ್ಚರ್ಯಪಟ್ಟನು.

೭೪. ಅನಂತರದಲ್ಲಿ ಕುಲಭೂಷಣರಾಜನು "ಬಹಳವಾಗಿರುವ ಈ ಸೇನೆಯಲ್ಲಿ ಎಲ್ಲರ ನಿಜಸ್ಥಿತಿಯನ್ನೂ ತಿಳಿಯುವುದಕ್ಕೆ ಯಾರಿಂದಲೂ ಆಗುವುದಿಲ್ಲ" ಎಂದು ಹೇಳಿದನು. ಅನಂತರದಲ್ಲಿ ಅವನು ಸುಂದರ ಸಾಮಂತನನ್ನು ಕರೆದು ಆ ಸೇನೆಯಲ್ಲಿರುವ ಸೇನಾಪತಿಗಳೆಲ್ಲರಿಗೂ ಬಹಳಮಟ್ಟಿಗೆ ವಸ್ತ್ರಾಭರಣಗಳನ್ನು ಉಚಿತವಾಗಿ ಕೊಟ್ಟನು.

ಅತ್ಯುತ್ತಮಾಣ್ಯಂಬರಾಣಿ ಪ್ರದದೌ ಭೂಷಣಾನಿ ಚ ।
ಗೃಹೀತ್ವಾ ತಾನಿ ಸರ್ವಾಣಿ ಭಕ್ತಾನುಗ್ರಹಸುಕ್ಷಮಃ ॥ ೭೫ ॥

ಪ್ರದಾಯ ಗಣನಾಥೇಭ್ಯಃ ಸ್ವಯಮಪ್ಯಥ ಧಾರಯನ್ ।
ಧಾರಾಸು ಧಾವಯನ್ನಶ್ವಂ ಸ್ವಕೀಯ ಮತಿಸಂಭ್ರಮಂ ॥ ೭೬ ॥

ಸೇನಾಮಧ್ಯಂ ಪ್ರವಿಶ್ಯಾಥ ಸಹಸೈವ ತಿರೋದಧೇ ।
ತಸ್ಮಿನ್ಸಮಯೇ ಅಗತ್ಯ ಕಶ್ಚಿದ್ದೂತ ಸ್ತಮಬ್ರವೀತ್ ॥ ೭೭ ॥

ನಾಥ ವನ್ಯಾಧಿಪ ಶ್ಶತ್ರು ರಸ್ಮಾಕಂ ಹರಿಣಾ ಹತಃ ।
ತದ್ವಚಃ ಸಚಿವೈಃ ಸಾರ್ಧಂ ಶ್ರುತ್ವಾ ರಾಜಾ ತಿವಿಸ್ಮಿತಃ ॥ ೭೮

ಅಥ ಸುಂದಸಾಮಂತಂ ಸತ್ಕೃತ್ಯ ಅಂಬರಭೂಷಣೈಃ ।
ತಸ್ಮೈ ಸರ್ವಾಧಿಪತ್ಯಂ ಚ ದತ್ವಾ ಪ್ರಾಹ ಸ ಭೂಪತಿಃ ॥ ೭೯ ॥

---

೭೫-೭೭. ಆಗ ಭಕ್ತರಿಗೆ ಅನುಗ್ರಹ ಮಾಡುವುದರಲ್ಲಿ ಸಮರ್ಥನಾದ ಸುಂದರೇಶ್ವರನು, ರಾಜನು ಕೊಟ್ಟ ವಸ್ತ್ರಾಭರಣಗಳೆಲ್ಲವನ್ನೂ ಸ್ವೀಕರಿಸಿ, ಗಣೇಶ್ವರರಿಗೂ ಕೊಟ್ಟು, ತಾನೂ ಧರಿಸಿಕೊಂಡು, ತನ್ನ ಕುದುರೆಯನ್ನು ಅನೇಕ ವಿಧವಾದ ನಡಿಗೆಗಳಿಂದ ಸೇನೆಯ ಮಧ್ಯದಲ್ಲಿ ನಡಸುತ್ತಾ ಬೇಗನೆ ಅಲ್ಲಿ ಅಂತರ್ಧಾನವನ್ನು ಹೊಂದಿದನು. ಆ ಸಮಯಕ್ಕೆ ಸರಿಯಾಗಿ ಒಬ್ಬ ದೂತನು ಬಂದು "ಎಲೈ ರಾಜನೆ, ನಮ್ಮ ಶತ್ರುವನ್ನು ಒಂದು ಕುದುರೆಯು ಕೊಂದುಹಾಕಿತು." ಎಂದು ಹೇಳಿದನು. ರಾಜನು ಮಂತ್ರಿಗಳೊಡನೆ ಆ ಮಾತನ್ನು ಕೇಳಿ ಆಶ್ಚರ್ಯಪಟ್ಟನು.

೭೮-೮೭. ಕುಲಭೂಷಣರಾಜನು ಸುಂದರ ಸಾಮಂತನಿಗೆ ಬಹಳ ಬೆಲೆಯುಳ್ಳ ವಸ್ತ್ರಾಭರಣಗಳಿಂದ ಮರ್ಯಾದೆ ಮಾಡಿ, " ನೀನು ನನ್ನ ಎಲ್ಲಾ ಸೇನೆಗೂ ಅಧಿಪತಿಯಾಗಿರು " ಎಂದು ದೊಡ್ಡ ಅಧಿಕಾರವನ್ನು ಕೊಟ್ಟನು. ಅನಂತರದಲ್ಲಿ " ಯುದ್ಧದ ಕೆಲಸವು ನೆರವೇರಿದ ಕಾರಣ ಈ ಸೇನೆಗೆ ಶ್ರಮವನ್ನು ಕೊಡಬಾರದು.

ಯುದ್ಧಕಾರ್ಯಂ ಕೃತಮಭೂತ್ ನೈಷಾ ಕ್ಲೇಶ್ಯಾ ಪತಾಕಿನೀ ।
ಯಥಾ ದೇಶಂ ಗಚ್ಛತೇತಿ ಪ್ರೇಷಯಾಶು ಭಟೋತ್ತಮಾನ್ ॥ ೮೦ ॥

ಇತಿ ರಾಜಾಜ್ಞಯಾ ಸದ್ಯಃ ಸ ನಿರ್ಗತ್ಯ ನೃಪಾಂತಿಕಾತ್ ।
ಗಚ್ಛ ಗಚ್ಛೇತಿ ಸರ್ವಾಂ ಸ್ತಾ ಭಟಾ ಸೇನಾಪತಿರ್ಜಗೌ ॥ ೮೧ ॥

ಕ್ಷಣಾದಂತರ್ಗತಾ ಸೇನಾ ನೃಣಾಂ ವಿಸ್ಮಯಕಾರಿಣೀ ।
ಅಂತರ್ಧಾನಂ ಕ್ಷಣಾದ್ದೃಷ್ಟ್ವಾ ವಿಸ್ಮಿತಾಶ್ಚ ನೃಪಾದಯಃ ॥ ೮೨ ॥

ಹಾಲಾಸ್ಯೇಶ್ವರಲೀಲೇಯಂ ನಿಶ್ಚಿತಾ ನಿಖಿಲೈರ್ಜನೈಃ ।
ಭಟಾಗ್ರಣೀಮಪಿ ತದಾ ಪೂಜಯಂತಿ ಮಹೇಶವತ್ ॥ ೮೩ ॥

ಸ ಚ ಸುಂದರಸಾಮಂತಃ ಮಜ್ಜನ್ ಸಂತೋಷಸಾಗರೇ ।
ಸುಂದರೇಶ್ವರ ಮಭ್ಯೇತ್ಯ ಸಾನಂದಂ ಪ್ರಣಿಪತ್ಯ ಚ ॥ ೮೪ ॥

ಸ್ತುವಂ ಸ್ತನ್ವೈಶ್ಚಿರಂ ಸ್ಥಿತ್ವಾ ಲಬ್ಧರಕ್ಷೋಽಪಿ ನಿರ್ಯಯೌ ।
ಸರ್ವೇ ಜನಾಸ್ತದಾಶ್ಚರ್ಯಂ ದೃಷ್ಟ್ವಾ ಪ್ರಾಪುಶ್ಚ ವಿಸ್ಮಯಂ ॥ ೮೫ ॥

---

ಇವರೆಲ್ಲರೂ ಅವರವರ ದೇಶಕ್ಕೆ ಹೋಗಲಿ." ಎಂದು ರಾಜನು ಸುಂದರಸಾಮಂತ ನಿಗೆಹೇಳಿದನು. ಅವನು ರಾಜನ ಹತ್ತಿರದಲ್ಲಿ ಇದ್ದುಕೊಂಡು ಸೇನೆಯವರೆಲ್ಲರಿಗೂ "ನೀವು ಹೋಗಿರಿ" ಎಂದು ಅಪ್ಪಣೆ ಮಾಡಿದನು. ಜನರೆಲ್ಲರೂ ನೋಡುತ್ತಿರು ವಾಗಲೇ ಆ ಸೇನೆಯೆಲ್ಲವೂ ಅದೃಶ್ಯವಾಯಿತು. ಅದನ್ನು ನೋಡಿದವರೆಲ್ಲರೂ ಆಶ್ಚರ್ಯಪಡುತ್ತಾ "ಇದು ಹಾಲಾಸ್ಯೇಶ್ವರನ ಲೀಲೆಯು" ಎಂದು ಧೃಡವಾಗಿ ನಂಬಿದರು. ಸೇನಾಪತಿಯಾದ ಸುಂದರ ಸಾಮಂತನನ್ನು ಮಹೇಶ್ವರನೇ ಇವನು ಎಂದು ತಿಳಿದುಕೊಂಡು (ಪೂಜಿಸುತ್ತಿದ್ದರು) ಗೌರವಿಸುತ್ತಿದ್ದರು.

೮೪–೮೭. ಆ ಸುಂದರ ಸಾಮಂತನು ಸಮುದ್ರದಂತೆ ಇರುವ ಸಂತೋಷ ದಿಂದ ಉಬ್ಬಿದವನಾಗಿ ಮಹೇಶ್ವರನಿಂದ ರಕ್ಷಿತನಾದರೂ ಸುಂದರೇಶ್ವರನ ಸಮೀಪಕ್ಕೆ ಬಂದು ನಮಸ್ಕರಿಸಿ, ಸ್ತುತಿಮಾಡಿದನಂತರ ಸಂತೋಷದಿಂದ ಮನೆಗೆ ಬಂದನು.

ಕುಲಶೇಖರಭೂಪಾಲವಂಶಜಾತಸುಮೌಕ್ತಿಕಃ ।
ಕುಲಶೇಖರಭೂಪಾಲ ಸ್ಸುಂದರೇಶರತೋಽಭವತ್ ॥ ೮೬ ॥

ಗೋಲಕಾದಿ ಪ್ರಭಾದ್ಯಂ ಚ ರತ್ನೈರ್ನಿರ್ಮಾಯ ಭಾಸ್ವರಂ ।
ದದೌ ಹಾಲಾಸ್ಯನಾಥಾಯ ಭಕ್ತಾಧೀನಾಯ ಭೂಪತಿಃ ॥ ೮೭ ॥

ಪ್ರೋಕ್ತಾ ಹಾಲಾಸ್ಯನಾಥಸ್ಯ ಲೀಲೇಯಂ ತ್ರಿಂಶಿಕಾ ಮಯಾ ।
ಶೃಣ್ವತಾಂ ಪಠತಾಂ ಸದ್ಯ ಇಷ್ಟೈವೇಷ್ಟಪ್ರದಾಯಿನೀ ॥ ೮೮ ॥

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಸೇನಾದರ್ಶನಂ ನಾಮ
ಷಟ್‌ತ್ರಿಂಶೋಽಧ್ಯಾಯಃ

---

ಜನರೆಲ್ಲರೂ ಈ ಆಶ್ಚರ್ಯವನ್ನು ನೋಡಿ, ಬಹಳ ಆಶ್ಚರ್ಯವನ್ನು ಹೊಂದಿದರು. ಕುಲಶೇಖರ ರಾಜವಂಶದ ಮುತ್ತಿನಂತಿರುವ ರಾಜನು ಸುಂದರೇಶ್ವರನಲ್ಲಿ ಬಹಳ ಭಕ್ತಿಯುಳ್ಳವನಾಗಿದ್ದನು. ಅವನು ಭಕ್ತಪರಾಧೀನನಾದ ಹಾಲಾಸ್ಯೇಶ್ವರನಿಗೆ ರತ್ನ ಖಚಿತವಾದ ಗೋಳಕ, ಪ್ರಬಾವಳಿ ಇನೇ ಮೊದಲಾದುವುಗಳನ್ನು ಮಾಡಿಸಿ ಕೊಟ್ಟನು.

೮೮. ಹಾಲಾಸ್ಯೇಶ್ವರನು ಆಚರಿಸಿದ ಮೂವತ್ತನೆಯ ಈ ಲೀಲೆಯುನ್ನು ಹೇಳಿರುವೆನು. ಈ ಲೀಲೆಯು ಕೇಳಿದವರಿಗೂ, ಓದಿದವರಿಗೂ ಆ ಕ್ಷಣದಲ್ಲಿ ಇಷ್ಟಾರ್ಥವನ್ನು (ಸಫಲಮಾಡಿ ಕೊಡುವುದು) ನೆರವೇರುವಂತೆ ಅನುಗ್ರಹಿಸುವುದು.

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆಯಲ್ಲಿ
ಸೇನಾದರ್ಶನವೆಂದು ಹೆಸರುಳ್ಳ ಮೂವತ್ತಾರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

# ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಸಪ್ತತ್ರಿಂಶೋಽಧ್ಯಾಯಃ



॥ ಅಗಸ್ತ್ಯ ಉವಾಚ ॥

**ಲೀಲಯಾ ಚ ಯಯಾ ದೇವೋ ಭಗವಾನ್ ಸೋಮಸುಂದರಃ ।**
**ನೀವೀದಾನೇನ ನೃಪತಿಂ ಪ್ರೀಣಯಾಮಾಸ ವಚ್ಮಿ ತಾಂ ॥ ೧ ॥**

**ಕುಲಶೇಖರಭೂಪಾಲಃ ಕುಲಧರ್ಮಂ ವಿಚಾರ್ಯ ಚ ।**
**ಜೀವನ್ಮುಕ್ತಿಪುರೇಶಾನೇ ಭಕ್ತಿಮೇವಾತನೋತ್ತದಾ ॥ ೨ ॥**

---

## ಮೂವತ್ತೇಳನೆಯ ಅಧ್ಯಾಯವು

೧. ಅಗಸ್ತ್ಯಋಷಿಯು ಹೇಳಿದನು:—ಪೂಜ್ಯನಾದ ಸೋಮಸುಂದರೇಶ್ವರನು ರಾಜನಿಗೆ (ಹಣದ) ಧನದ ಚೀಲವನ್ನು (ಹಣದ ಗಂಟನ್ನು) ಕೊಟ್ಟು ರಾಜನನ್ನು ಸಂತೋಷಪಡಿಸಿದ ಲೀಲೆಯನ್ನು ಹೇಳುವೆನು ಕೇಳಿರಿ.

೨. ಕುಲಶೇಖರರಾಜನು ತನ್ನ ವಂಶದವರು ಇದ್ದ ಕ್ರಮವನ್ನು ವಿಚಾರಿಸಿಕೊಂಡು ಅದಕ್ಕನುಸಾರವಾಗಿ ಜೀವನ್ಮುಕ್ತಿಪುರಾಧಿಪನಾದ ಸುಂದರೇಶ್ವರನಲ್ಲಿ ಯಾವಾಗಲೂ ಬಹಳ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದನು.

ಶಿವವ್ರತಾನಿ ಸತತಂ ಹಾಲಾಸ್ಯೇಶ್ವರತುಷ್ಟಯೇ ।
ಸೋಮವಾರವ್ರತಾದೀನಿ ಚರಿತಾನಿ ಚ ತೇನ ವೈ ॥ ೩ ॥

ಸತತಂ ಜಾಗರೂಕೇಸ್ಸರ್ವ ಪಾಲಯನ್ನಿಖಿಲಾಃ ಪ್ರಜಾಃ ।
ಸ ದ್ವಿಜಾನವಮತ್ಯಾಥ ಸುಂದರೇಶ್ವರಮನ್ವಹಂ ॥ ೪ ॥

ನಿಯಮೇನ ಸಮಭ್ಯರ್ಚ್ಯ ಕಾಲಂ ನಿನ್ಯೇ ಸ ಭೂಪತಿಃ ।
ಪಾಂಡ್ಯದೇಶೇ ದ್ವಿಜಾಃ ಸರ್ವೇ ದರಿದ್ರಾ ಯಜ್ಞವರ್ಜಿತಾಃ ॥ ೫ ॥

ನೀಚಕರ್ಮರತಾಃ ಕ್ಲಿಷ್ಟಾ ವರ್ತಂತೇ ಸ್ಮ ಕಥಂಚನ ।
ಯಜನಾದಿಕ್ರಿಯಾಲೋಪಾತ್ಸರ್ವತಃ ಸಸ್ಯ ಮಾಲಿನೀ ॥ ೬ ॥

ಪೃಥ್ವ್ಯನಾವೃಷ್ಟಿಸಂತಪ್ತಾ ನಷ್ಟವ್ರೀಹ್ಯಾದಿಕಾಭವತ್ ।
ಜನಾಃ ಸರ್ವೇ ಪಲಾಯಂತ ದೇಶಾಂತರ ಮಿತಸ್ತತಃ ॥ ೭ ॥

---

೩-೫. ಆ ರಾಜನು ಹಾಲಾಸ್ಯೇಶ್ವರನ ಸಂತೋಷಕ್ಕಾಗಿ ಯಾವಾಗಲೂ ಶಿವ ವ್ರತಾಚರಣೆಯನ್ನು ಮಾಡುತ್ತಿದ್ದನು. ಸೋಮವಾರವ್ರತವೇ ಮೊದಲಾದವುಗಳನ್ನು ಮಾಡುತ್ತಿದ್ದನು. ಅವನು ಯಾವಾಗಲೂ ಬಹಳ (ಜಾಗರೂಕನಾಗಿ) ಎಚ್ಚರಿಕೆ ಯಿಂದ ಇರುತ್ತಾ ಪ್ರಜಾಪರಿಪಾಲನೆಯನ್ನು ಮಾಡುತ್ತಿದ್ದನು. ಆ ರಾಜನು ಬ್ರಾಹ್ಮಣರನ್ನು ಲಕ್ಷ್ಯದಲ್ಲಿಡದೆ ಪ್ರತಿದಿನವೂ ಸುಂದರೇಶ್ವರನನ್ನು ತಾನೇ ಪೂಜೆ ಮಾಡುತ್ತಾ ಕಾಲವನ್ನು ಕಳೆಯುತ್ತಿದ್ದನು. ಪಾಂಡ್ಯದೇಶದಲ್ಲಿರುವ ಬ್ರಾಹ್ಮಣ ರೆಲ್ಲರೂಪ್ರಾ ಯಿಕವಾಗಿ, ಯಜ್ಞ, ಯಾಗಾದಿಗಳನ್ನು ಮಾಡದೆ, ದರಿದ್ರರಾಗಿ ಕೆಟ್ಟ ಕೆಲಸವನ್ನು ಮಾಡುವ ಸ್ವಭಾವದವರಾಗಿ ಯಾವುದೋ ಒಂದು ರೀತಿಯಿಂದ ಜೀವನ ಮಾಡುತ್ತಿರುವರು.

೬-೮. (ಯಜನಾದಿ) ಯಜ್ಞವೇ ಮೊದಲಾದ ಕೆಲಸಗಳು ನಿಂತಿರುವ ಕಾರಣ ಭೂಮಿಯು ಎಲ್ಲಾ ಕಡೆಯಲ್ಲಿಯೂ ಅನಾವೃಷ್ಟಿ ಪೀಡಿತವಾಗಿ ಬೆಳೆಯಿಲ್ಲದೆ ಇತ್ತು.

ಖಾದ್ಯಾಭಾವಾತ್ತುರಂಗಾದ್ಯಾಃ ಪ್ರಣಷ್ಟಾಃ ಪಾಂಡ್ಯಭೂಪತೇಃ ।
ಸ್ವರಾಜ್ಯೋಽಪಪ್ಲವಂ ದೃಷ್ಟ್ವಾ ಕುಲಭೂಷಣಭೂಪತಿಃ ॥ ೮ ॥

ವಾರರಾಜೇ ಸೋಮವಾರೇ ಸೋಮಸುಂದರಮಂದಿರಂ ।
ಸಂಪ್ರಾಪ್ಯ ಸ್ವರ್ಣಪದ್ಮಿನ್ಯಾಂ ಸ್ನಾತ್ವಾ ಭಸ್ಮ ನಿಧಾಯ ಚ ॥ ೯ ॥

ನಿತ್ಯಕರ್ಮಾಣಿ ನಿರ್ವರ್ತ್ಯ ನಿರ್ವಿಘ್ನಾಯ ವಿಧಾನತಃ ।
ವಿಘ್ನೇಶ್ವರಂ ಚ ಸಂಪೂಜ್ಯ ನಾರಿಕೇಲಸಹಸ್ರಕೈಃ ॥ ೧೦ ॥

ಸುಮೀನಾಕ್ಷ್ಯಾ ಮಹಾದೇವ್ಯಾಃ ಕಾರಯಿತ್ವಾ ಮಹಾರ್ಹಣಾಂ ।
ಮಹಾರ್ಘದಂ ಮೂಲಲಿಂಗಂ ಮಹಾದಾನಂದಸಾಗರಂ ॥ ೧೧ ॥

ಮಹತ್ಯಾ ಶ್ರದ್ಧಯಾ ಪೂಜ್ಯ ಪ್ರಾರ್ಥಯಾಮಾಸ ತಂ ಶಿವಂ ।
ಸುಂದರೇಶ ಸುರಾರಾತಿಸೂದನ ತ್ರಿಪುರಾಂತಕ ॥ ೧೨ ॥

---

ಆಗ ಜನಗಳು ಅಲ್ಲಲ್ಲಿರುವ ಪ್ರದೇಶಗಳಿಗೆ ಪ್ರಯಾಣಮಾಡಿದರು. ಧಾನ್ಯಗಳು ಇಲ್ಲದ ಕಾರಣ ಕುದುರೆಯೇ ಮೊದಲಾದ ಪ್ರಾಣಿಗಳು ಬಹಳಮಟ್ಟಿಗೆ ಹೋದವು. ಕುಲ ಭೂಷಣ ಪಾಂಡ್ಯರಾಜನು ತನ್ನ ದೇಶದ ಹೀನಸ್ಥಿತಿಯನ್ನು ನೋಡಿದನು.

೯-೧೧. ಅನಂತರದಲ್ಲಿ ಕುಲಭೂಷಣಪಾಂಡ್ಯರಾಜನು ಎಲ್ಲಾ ವಾರಗಳಿಗಿಂತಲೂ ಶ್ರೇಷ್ಠವಾದ ಸೋಮವಾರದಲ್ಲಿ ಸೋಮಸುಂದರೇಶ್ವರನ ದೇವಾಲಯಕ್ಕೆ ಬಂದು, ಹೇಮಾಬ್ಜಿನೀ ತೀರ್ಥದಲ್ಲಿ ಸ್ನಾನವನ್ನು ಮಾಡಿ, ಭಸ್ಮರುದ್ರಾಕ್ಷಾಲಂಕೃತನಾಗಿ ಶಾಸ್ತ್ರಕ್ರಮದಂತೆ ನಿತ್ಯಕರ್ಮಗಳೆಲ್ಲವನ್ನೂ ನೆರವೇರಿಸಿದನಂತರ, ವಿಘ್ನೇಶ್ವರನಿಗೆ ಒಂದುಸಾವಿರ ತೆಂಗಿನಕಾಯಿಗಳನ್ನು ಒಪ್ಪಿಸಿ ಪೂಜಿಸಿದನು. ಇದರಂತೆಯೇ ಮೀನಾಕ್ಷೀದೇವಿಯೊಡನೆ ಇರುವ ಸುಂದರೇಶ್ವರನಿಗೆ ಮಹಾಪೂಜೆಯನ್ನು ಭಕ್ತಿಯಿಂದ ಮಾಡಿದನು. ಮಹಾಪೂಜೆಯನ್ನು ಹಾಲಾಸ್ಯೇಶ್ವರನಿಗೆ ನಡಸಿದನಂತರ ಭಕ್ತಿಯಿಂದ ಶಿವನನ್ನು ಪ್ರಾರ್ಥಿಸಿದನು.

೧೨-೧೫. "ಎಲೈ ಸುಂದರೇಶ್ವರನೆ, (ರಾಕ್ಷಸರನ್ನು ನಿಗ್ರಹ) ದೇವತೆಗಳ ಶತ್ರುಗಳನ್ನು ನಿಗ್ರಹಮಾಡುವವನಾಗಿ, ತ್ರಿಪುರಾಂತಕನಾದ ನೀನು, ಸೂರ್ಯ,

ಸೋಮಸೂರ್ಯಾಗ್ನಿನಯನ ಷಡಧ್ವಮಯವಿಗ್ರಹ ।
ಸುಮೀನಾಕ್ಷೀಪತೇ ಶಂಭೋ ದೇವದೇವ ದಯಾನಿಧೇ ॥ ೧೩ ॥

ಭವತೋ ಭಕ್ತಭೂತೋಽಹಂ ಭಕ್ತಭಕ್ತೋ ಭವಾನಪಿ ।
ಇತಃ ಪೂರ್ವಂ ಮಯಾ ರಾಜ್ಯಂ ಶಾಸಿತಂ ಭವದಾಜ್ಞಯಾ ॥ ೧೪ ॥

ಅನಾವೃಷ್ಟಿಪರಿಕ್ಲಿಷ್ಟಮಿದಾನೀಮಭವಚ್ಚ ತತ್ ।
ಮದೀಯಮರ್ಥಜಾತಂ ಚ ಸೇನಾಸ್ವೀಕರಣಾಚ್ಛಲಾತ್ ॥ ೧೫ ॥

ಪುರಾ ಸುಂದರಸಾಮಂತಃ ಸ ಧರ್ಮೇಷು ನ್ಯಯೋಜಯತ್ ।
ಧಾನ್ಯಾಭಾವಾ ದ್ಧನಾಭಾವಾತ್ ಖಿನ್ನೋಽಸ್ಮಿ ನಿತರಾ ಮಹಂ ॥ ೧೬ ॥

ಮಹ್ಯಂ ಧಾನ್ಯಂ ಧನಂ ದತ್ವಾ ಪ್ರೀಣಯಸ್ವ ಜಗತ್ಪ್ರಭೋ ।
ಏವಂ ವಿಜ್ಞಾಪ್ಯ ಭೂಪಾಲಃ ಪುನರಾಗತ್ಯ ಕೇತನಂ ॥ ೧೭ ॥

ವಿಹಾಯಾ ಭ್ಯವಹಾರಂ ಚ ಕಿಂ ಕರ್ತವ್ಯ ಮಿತಃ ಪರಂ ।
ಚಿಂತಯಾ ತಿಮಹತ್ಯಾ ಚ ಸಂಯುಕ್ತಃ ಸುಂದರಪ್ರಭುಂ ॥ ೧೮ ॥

---

ಚಂದ್ರ ಅಗ್ನಿಗಳನ್ನು ನೇತ್ರಗಳಾಗಿ ಹೊಂದಿರುತ್ತೀಯೆ. ವರ್ಣಾಧ್ವಾ, ಪದಾಧ್ವಾ ಇವೇ ಮೊದಲಾದ ಆರು ಅಧ್ವಗಳು ನಿನ್ನ ಶರೀರವಾಗಿರುತ್ತವೆ. ಈ ಪ್ರಕಾರ ಇರುವ ನೀನು ಮೀನಾಕ್ಷೀದೇವಿಗೆ ಪತಿಯಾಗಿ ಇರುತ್ತೀಯೆ. ಎಲೈ ದೇವನೆ, ನೀನು ಬಹಳ ದಯೆಯುಳ್ಳವನಾಗಿ ನಿನ್ನ ಭಕ್ತರಿಗೆ ನೀನೇ ಭಕ್ತನಂತೆ ಇರುತ್ತೀಯೆ. ನಿನಗೆ ನಾನು ಭಕ್ತನಾಗಿರುತ್ತೇನೆ. ನಿನ್ನ ಆಜ್ಞೆಯಂತೆ ನಾನು ಇಲ್ಲಿಯವರಿಗೂ ರಾಜ್ಯವನ್ನು ರಕ್ಷಿಸಿಕೊಂಡು ಬಂದಿರುವೆನು. ಈಗ ಅನಾವೃಷ್ಟಿಯಿಂದ ರಾಜ್ಯವು ಕ್ಷಾಮಪೀಡಿತ ವಾಗಿ ಇರುವುದು. ನನ್ನ ದುಡ್ಡೆಲ್ಲವನ್ನೂ ಸುಂದರಸಾಮಂತನು ಸೇನಾಶೇಖರಣೆಯ ನೆವದಿಂದ ಧರ್ಮಕಾರ್ಯದಲ್ಲಿ ಖರ್ಚುಮಾಡಿರುವನು.

೧೬-೧೮. ನನ್ನ ದೇಶದಲ್ಲಿ ಧಾನ್ಯವೂ ದ್ರವ್ಯವೂ ಇಲ್ಲದ ಪ್ರಯುಕ್ತ ನಾನು ಅತ್ಯಂತ ದುಃಖದಿಂದ ಇರುವೆನು. ನನಗೆ ಧನ ಧಾನ್ಯಾದಿಗಳನ್ನು ಅನುಗ್ರಹಿಸಿ ನನ್ನನ್ನು ರಕ್ಷಿಸು ಎಂದು ರಾಜನು ಸೋಮಸುಂದರೇಶ್ವರನನ್ನು ಬೇಡಿಕೊಂಡು ಮನೆಗೆ ಬಂದು ಆಹಾರವನ್ನು ಸ್ವೀಕರಿಸದೆ, ಮುಂದೆ ಮಾಡಬೇಕಾದ ಕಾರ್ಯವನ್ನು ಯೋಚನೆ

ಹೃತ್ಪುಂಡರೀಕೇ ಸಂಶೀಲ್ಯ ಸ ಶೇತೇ ಭೂತಲೇ ಕ್ಷಣಂ ।
ಶಂಕರಃ ಸರ್ವಭೂತಾತ್ಮಾ ಭಗವಾನ್ ಭಕ್ತವತ್ಸಲಃ ॥ ೧೯ ॥

ಸಿದ್ಧವೇಷಧರೋ ಭೂತ್ವಾ ಸ್ವಪ್ನ ಏವಂ ತಮಬ್ರವೀತ್ ।
ಕುಲಶೇಖರಭೂಪಾಲ ಹಿಮಾಂಶುಕುಲಭೂಷಣ ॥ ೨೦ ॥

ಮದ್ಭಕ್ತೇಷ್ವಗ್ರಗಣ್ಯೋಽಸಿ ತಸ್ಮಾದ್ವಕ್ಷ್ಯೇ ಹಿತಂ ತವ ।
ಮಮ ಸ್ವರೂಪಂ ವೇದೋ ಹಿ ತತ್ಪ್ರಿಯಾ ಯೇ ಚ ಮತ್ಪ್ರಿಯಾಃ ॥ ೨೧ ॥

ತೇಷಾಂ ಭೂದೇವತಾನಾಂ ತ್ವಮುದಾಸೀನಂ ಕರೋಷಿ ಚ ।
ತಸ್ಮಾದ್ವೃಷ್ಟಿವಿಹೀನತ್ವ ಮಭವತ್ ತವ ರಾಷ್ಟ್ರಕೇ ॥ ೨೨ ॥

ದ್ವಿಜಾನ್ಸಂಭಾವಯಸಿ ಚೇದ್ಭವಿಷ್ಯಂತಿ ಸುವೃಷ್ಟಯಃ ।
ಸರ್ವದಾ ಸಂಪದಃ ಸರ್ವಾ ವಿದ್ಯಾ ವೇದಾದಿಕಾ ಅಪಿ ॥ ೨೩ ॥

---

ಮಾಡುವವನಾಗಿ, ಸುಂದರೇಶ್ವರನನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತಾ, ನೆಲದ ಮೇಲೆ ಒಂದು ಕ್ಷಣದವರೆಗೂ ಮಲಗಿಕೊಂಡನು. ಆಗ ಎಲ್ಲಾ ಪ್ರಾಣಿಗಳ ಆಕಾರದಿಂದ ಇರುವ ಶಂಕರನು ತಾನು ಭಕ್ತವತ್ಸಲನಾಗಿ ಇರುವ ಕಾರಣ ಸಿದ್ಧಪುರುಷನ ವೇಷದಿಂದ ಆ ರಾಜನ ಸ್ವಪ್ನದಲ್ಲಿ ಕಾಣಿಸಿಕೊಂಡು ಹೇಳಿದನು.

೨೦–೨೫. "ಚಂದ್ರವಂಶಕ್ಕೆ ಅಲಂಕಾರವಾಗಿರುವ ಕುಲಶೇಖರ ರಾಜನೇ, ನೀನು ನನ್ನ ಭಕ್ತರಲ್ಲಿ ಶ್ರೇಷ್ಠನಾಗಿರುತ್ತೀಯೆ. ಆದ್ದರಿಂದ ನಿನಗೆ ನಾನು ಹಿತವನ್ನು ಹೇಳುತ್ತೇನೆ. ನನ್ನ ಆಕಾರವು ವೇದಗಳ ರೂಪದಿಂದ ಇರುವುದು, ವೇದಾಧ್ಯಯನ ಮಾಡುವವರು ನನಗೆ ಪ್ರಿಯರಾಗಿರುವರು. ನೀನು ವೇದಾಧ್ಯಯನಮಾಡುವವರ ವಿಷಯದಲ್ಲಿ ಉದಾಸೀನನಾಗಿರುವ ಕಾರಣ, ನಿನ್ನ ರಾಜ್ಯದಲ್ಲಿ ಮಳೆಯು ಇಲ್ಲದೆ ಕ್ಷಾಮವು ಬಂದಿರುವುದು. ಬ್ರಾಹ್ಮಣರಿಗೆ ನೀನು ಗೌರವವನ್ನು ಮಾಡುವುದಾದರೆ ಸರಿಯಾಗಿ ಮಳೆಯು ಆಗುವುದು. ವೇದಾಧ್ಯಯನ ಮಾಡುವ ಬ್ರಾಹ್ಮಣರು ವೇದವೇ ಮೊದಲಾದ ಎಲ್ಲಾ ವಿದ್ಯೆಗಳನ್ನೂ ಕಲಿಸುವರು. ಆದರಿಂದ ಎಲ್ಲಾ ವಿಧವಾದ ಐಶ್ವರ್ಯವೂ, ಆರೋಗ್ಯವೂ, ಆಯುಸ್ಸಿನ ಅಭಿವೃದ್ಧಿಯೂ ನಿನ್ನ

ಆರೋಗ್ಯಂ ದೀರ್ಘಮಾಯುಶ್ಚ ಸಂಪ್ರಯುಚ್ಛಂತಿ ತೇ ದ್ವಿಜಾಃ ।
ಸೌವರ್ಣವೃತ್ತೈಸ್ಸಂಪೂರ್ಣಾಂ ಸುದೃಢಾಂ ಚಿರನಿರ್ಮಿತಾಂ ॥ ೨೪ ॥

ವ್ಯಯೇ ಸತ್ಯವ್ಯಯಾಂ ನೀವೀಂ ತುಭ್ಯಂ ದಾಸಾಮ್ಯಭೀಷ್ಟದಾಂ ।
ಯಥೇಷ್ಟಂ ಧನ ಮಾದಾಯ ತಸ್ಯಾಂ ನೀವ್ಯಾಂ ಮುದಾನ್ವಿತಃ ॥ ೨೫ ॥

ಕುರು ದಾನಂ ಚ ಭೋಗಂ ಚ ಲೋಭಲೇಶವಿವರ್ಜಿತಃ ।
ಇಯ ಮತ್ಯದ್ಭುತಾ ನೀವೀ ವ್ಯಯೇ ವೃದ್ಧಿಂ ಪ್ರಯಾತಿ ಚ ॥ ೨೬ ॥

ಕೋಟಿದ್ರವ್ಯವ್ಯಯೇ ಪ್ಯೇಷಾ ಮಚ್ಛಕ್ತ್ಯಾ ನೈವ ಹೀಯತೇ ।
ಇತ್ಯುಕ್ತ್ವಾ ಭಸ್ಮನಾ ಫಾಲಮಲಂಕೃತ್ಯ ಮಹೀಪತೇಃ ॥ ೨೭ ॥

ಸುವರ್ಣಟಂಕಸಂಪೂರ್ಣಾಂ ನೀವೀಂ ತಸ್ಮೈ ದದೌ ಶಿವಃ ।
ಅಥಾಂತರ್ಧಾನ ಮಗಮ ದ್ಧಾಲಾಸ್ಯಪ್ರಭುರೀಶ್ವರಃ ॥ ೨೮ ॥

---

ರಾಜ್ಯದಲ್ಲಿ ಅಭಿವೃದ್ಧಿಯಾಗುವುದು. ನಾನು ನಿನಗೆ ಚಿನ್ನದ ನಾಣ್ಯಗಳಿಂದ ತುಂಬಿದ, ಎಷ್ಟು ಖರ್ಚುಮಾಡಿದರೂ ಹೆಚ್ಚಾಗುತ್ತಿರುವ ಧನದ ಗಂಟನ್ನು ಕೊಡುವೆನು. ಅದರಿಂದ ನಿನ್ನ ಇಷ್ಟವು ನೆರವೇರುವುದು. ಆದರಿಂದ ನೀನು ಬೇಕಾದ ಹಾಗೆ ಹಣವನ್ನು ತೆಗೆದುಕೊಂಡು ಕೊಂಚವೂ ಲೋಭವಿಲ್ಲದವನಾಗಿ ಸಂತೋಷದಿಂದ ದಾನಮಾಡಿ, ಭೋಗವನ್ನು ಅನುಭವಿಸು.

೨೬–೨೮. ನಾನು ಕೊಡುವ ಹಣದ ಗಂಟಿನಲ್ಲಿ ಬಹಳ ಆಶ್ಚರ್ಯಕರವಾದ ಗುಣವಿರುವುದು. ಅದು ಎಷ್ಟು ಖರ್ಚುಮಾಡಿದರೂ ವೃದ್ಧಿಯನ್ನು ಹೊಂದುವುದು. ಕೋಟಿ ಸಂಖ್ಯೆಯಾಗಿ ಖರ್ಚುಮಾಡಿದರೂ ನನ್ನ ಶಕ್ತಿಯಿಂದ ಇದು ಮುಗಿಯು ವುದಿಲ್ಲ." ಎಂದು ಸಿದ್ಧಪುರುಷನು ರಾಜನಿಗೆ ಹೇಳಿ, ಅವನ ಹಣೆಗೆ ಭಸ್ಮವನ್ನು ಇರಿಸಿ, ಚಿನ್ನದ ನಾಣ್ಯದಿಂದ ತುಂಬಿರುವ ಹಣದ ಚೀಲವನ್ನು ಅವನಿಗೆ ಕೊಟ್ಟು ಹಾಲಾಸ್ಯೇಶ್ವರನು ಅದೃಶ್ಯನಾದನು.

ನೃಪೋऽಪಿ ಸಹಸೋದ್ಬುಧ್ವಾ ನೀವೀಮಾಲೋಕ್ಯ ವಿಸ್ಮಿತಃ ।
ಶಿರಸಾ ತಾಂ ಮುದಾ ಧೃತ್ವಾ ಶಿವಭಕ್ತಶಿರೋಮಣಿಃ ॥ ೨೯ ॥

ಮುಹೂರ್ತಮಾತ್ರ ಮಕರೋನ್ನರ್ತನಂ ಚ ಸ್ವಯಂ ನೃಪಃ ।
ಪ್ರಭಾತೇ ಸಚಿವಾನ್ ಸರ್ವಾನ್ ಸಮಾಹೂಯ ವಿಚಕ್ಷಣಾನ್ ॥ ೩೦ ॥

ತಾಂ ನೀವೀಂ ದರ್ಶಯಿತ್ವಾಥ ಸ್ವಪ್ನವೃತ್ತಾಂತ ಮಬ್ರವೀತ್ ।
ತೇ ಶ್ರುತ್ವಾ ವಿಸ್ಮಿತಾಃ ಸಂತಃ ಪ್ರಾಹುಃ ಸರ್ವೇ ಮುದಾನ್ವಿತಾಃ ॥ ೩೧ ॥

ಅಸ್ಯಾ ನೀವ್ಯಾಃ ಪ್ರಭಾವೇನ ಸಂಪದ ಸ್ಸ್ಯುಸ್ತವೇತಿ ಚ ।
ಏನಾಂ ಸಿಂಹಾಸನೇ ಸ್ಥಾಪ್ಯ ಸಮಭ್ಯರ್ಚ್ಯ ನ್ವಹಂ ತತಃ ॥ ೩೨ ॥

ಯಥೇಷ್ಟಂ ಧನ ಮಾದಾಯ ಪ್ರೀಣಯ ತ್ವಂ ಮಹೀಸುರಾನ್ ।
ಮಹಾರ್ಥದಂ ಮಹಾಲಿಂಗಂ ಮಹೀಕಲ್ಪಮಹೀರುಹಂ ॥ ೩೩ ॥

ಮಹಾಭಿಷೇಕಪ್ರಮುಖಪೂಜಯಾ ಪೂಜಯಾದರಾತ್ ।
ಅರ್ತಾದೀನಾಂ ಗ್ರಹಾಣಾಂ ಚ ಸುತ್ರಾಮಾದಿಸುಪರ್ವಣಾಂ ॥ ೩೪ ॥

---

೨೯-೩೪. ಆಗ ರಾಜನು ಬೇಗನೆ ಎಚ್ಚರವನ್ನು ಹೊಂದಿ ಹಣದಗಂಟನ್ನು ನೋಡಿ, ಆಶ್ಚರ್ಯಪಟ್ಟು, ಸಂತೋಷದಿಂದ ಅದನ್ನು ಶಿರಸ್ಸಿನಲ್ಲಿ ಧರಿಸಿ, ಸಂತೋಷವು ಹೆಚ್ಚಾದ ಕಾರಣ ಒಂದು ಕ್ಷಣದವರಿಗೂ ಕುಣಿದಾಡಿದನು. ಬೆಳಗಾದ ಕೂಡಲೆ ಬುದ್ಧಿವಂತರಾದ ಮಂತ್ರಿಗಳೆಲ್ಲರನ್ನೂ ಕರಸಿಕೊಂಡು, ಅವರಿಗೆ ಆ ಹಣದ ಗಂಟನ್ನು ತೋರಿಸಿ, ತನಗೆ ಕಂಡುಬಂದ ಸ್ವಪ್ನವೃತ್ತಾಂತವೆಲ್ಲವನ್ನೂ ಅವರಿಗೆ ಹೇಳಿದನು. ಅವರೆಲ್ಲರೂ ಅದನ್ನು ಕೇಳಿ, "ಸಂತೋಷದಿಂದ ಈಶ್ವರನು ಅನುಗ್ರಹಿಸಿದ ಈ ಧನದ ಗಂಟಿನಿಂದ ಸಂಪತ್ತುಗಳೆಲ್ಲವೂ ನಿನಗೆ ವೃದ್ಧಿಯಾಗುವವು. ಇದನ್ನು ಸಿಂಹಾಸನದಲ್ಲಿ ಇರಿಸಿ, ಪ್ರತಿದಿನವೂ ಪೂಜಿಸು. ಅನಂತರ ಇದರಿಂದ ಧನವನ್ನು ತೆಗೆದುಕೊಂಡು ಬ್ರಾಹ್ಮಣರನ್ನು ಪೂಜಿಸಿ, ಕಲ್ಪವೃಕ್ಷದಂತಿರುವ ಹಾಲಾಸ್ಯೇಶ್ವರನನ್ನೂ ಮಹಾಭಿಷೇಕವೇ ಮೊದಲಾದವುಗಳಿಂದ ಆದರದಿಂದ ಪೂಜಿಸು.

ಮುನೀನಾಂ ಚ ಪಿತ್ರೂಣಾಂ ಚ ಪ್ರೀತಿಂ ಚಾಶು ಸಮಾಚರ ।
ಬ್ರಾಹ್ಮಣಾರಾಧನೇನೈವ ಸರ್ವೇ ದೇವಾ ಮುನೀಶ್ವರಾಃ ॥ ೩೫ ॥

ಪಿತರ ಸ್ತೃಪ್ತಿ ಮಾಯಾಂತಿ ತಸ್ಮಾತ್ತಾನೇವ ಪೂಜಯ ।
ಇತ್ಯುಕ್ತೈವ ತ್ಸ್ವಮಾತ್ಯೇಷು ಶಾಸ್ತ್ರೇಷು ನಿಪುಣೇಷು ಚ ॥ ೩೬ ॥

ಯಥೋಕ್ತಂ ತೈಸ್ತದಾ ಸರ್ವಮಕರೋತ್ಕುಲಭೂಷಣಃ ।
ಸುಭಿಕ್ಷ ಮಭವದ್ರಾಜ್ಯಂ ವರ್ಷಂ ಲಬ್ಧ್ವಾ ಸಮಂ ತತಃ ॥ ೩೭ ॥

ಪಾಂಡ್ಯಃ ಸ ಭಕ್ತಿಮಾರ್ಭೂತ್ವಾ ದ್ವಿಜಾನ್ದೇವಾನ್ಸಮರ್ಚಯತ್ ।
ತಥಾ ಪ್ರಭೃತಿ ಸರ್ವತ್ರ ಪಾಂಡ್ಯದೇಶೇ ವಿಶೇಷತಃ ॥ ೩೮ ॥

ಶ್ರೌತಸ್ಮಾರ್ತಕ್ರಿಯಾಃ ಸರ್ವಾಃ ಪ್ರವರ್ತಂತಾ ಘವರ್ಜಿತಾಃ ।
ಶಿವಭಕ್ತಿಂ ವೈದಿಕತ್ವಂ ವಿಲೋಕ್ಯಾಸ್ಯಾಖಿಲಾಃ ಪ್ರಜಾಃ ॥ ೩೯ ॥

---

೩೫–೩೯ ಎಲೈ ರಾಜನೆ, ನೀನು ಸೂರ್ಯನೇ ಮೊದಲಾದ ಗ್ರಹಗಳನ್ನೂ ಇಂದ್ರನೇ ಮೊದಲಾದ ದೇವತೆಗಳನ್ನೂ, ಮುನಿಗಳನ್ನೂ ಪಿತೃಗಳನ್ನೂ ಪೂಜಿಸು. ಇದರಿಂದ ಅವರ ಪ್ರೀತಿಯನ್ನು ಸಂಪಾದಿಸು. ಬ್ರಾಹ್ಮಣರ ಸೇವೆಯಿಂದ ದೇವತೆಗಳೂ, ಮುನಿಗಳೂ, ಪಿತೃಗಳೂ ತೃಪ್ತಿಯನ್ನು ಹೊಂದುವುದರಿಂದ ಅವರನ್ನು ಮೊದಲು ಪೂಜಿಸು." ಎಂದು ಶಾಸ್ತ್ರಜ್ಞಾನನಿಪುಣರಾದ ಮಂತ್ರಿಗಳ ಮಾತಿನಂತೆ ಕುಲಭೂಷಣರಾಜನು ಎಲ್ಲವನ್ನೂ ಆಚರಿಸಿದ್ದರಿಂದ ಆವನ ರಾಜ್ಯದಲ್ಲಿ ಸರಿಯಾಗಿ ಮಳೆಯು ಆಯಿತು. ರಾಜ್ಯವೆಲ್ಲವೂ ಸುಭಿಕ್ಷವಾಗಿರುವುದನ್ನು ನೋಡಿ, ರಾಜನು ದೇವಬ್ರಾಹ್ಮಣರಲ್ಲಿ ಭಕ್ತಿಯುಳ್ಳವನಾಗಿ ಅವರನ್ನು ಗೌರವಿಸುತ್ತಿದ್ದನು. ಆಗಿನಿಂದ ಪಾಂಡ್ಯದೇಶದಲ್ಲಿ ಶ್ರೌತಸ್ಮಾರ್ತಕಾರ್ಯಗಳು ಹೆಚ್ಚಾಗಿ ಶಾಸ್ತ್ರಕ್ಕನುಸಾರವಾಗಿ ನಡೆಯುತ್ತಾ ಬಂದವು. ಪ್ರಜೆಗಳೆಲ್ಲರೂ, ರಾಜನು ಶಿವನಲ್ಲಿ ಭಕ್ತಿಯಿಂದ ಇರುವ ಕ್ರಮವನ್ನೂ ವೈದಿಕತ್ವವನ್ನೂ ಹೊಗಳುತ್ತಾ ಯಾವಾಗಲೂ ಸಂತೋಷದಿಂದ ಇದ್ದರು.

ಪ್ರಶಂಸಂತಃ ಸರ್ವದೈವ ವರ್ತಂತೇ ಸ್ಮ ಮುದಾನ್ವಿತಾಃ ।
ಅನಂತಮರ್ಥಜಾತಂ ಚ ನೀವೀಂ ಲಬ್ಧ್ವಾ ಮಹೀಪತಿಃ ॥ ೪೦ ॥

ಶಿವಾಲಯಂ ಬಹಿಶ್ಚಾಂತಃ ಸ್ವರ್ಣರತ್ನಮಯಂ ವ್ಯಧಾತ್ ।
ನಾಸ್ತಿ ದಾರಿದ್ರ್ಯ ವಾರ್ತಾಪಿ ಕುತ್ರಚಿತ್ತಸ್ಯ ದೇಶಕೇ ॥ ೪೧ ॥

ಕುಬೇರಸದೃಶಾಃ ಸರ್ವೇ ಜನಾಃ ಸಂಪತ್ಸಮನ್ವಿತಾಃ ।
ಇತ್ಯೇಕತ್ರಿಂಶಿಕಾಲೀಲಾ ಪ್ರೋಕ್ತಾ ನೀಪಾಟವೀಪತೇಃ ॥ ೪೨ ॥

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ನೀವೀದಾನಂ ನಾಮ
ಸಪ್ತತ್ರಿಂಶೋಽಧ್ಯಾಯಃ

---

೪೦–೪೨. ಕುಲಭೂಷಣರಾಜನು ಅಕ್ಷಯವಾದ ಧನವನ್ನು ಹೊಂದಿ, ಶಿವಾಲಯದ ಒಳಗೂ, ಹೊರಗೂ ಎಲ್ಲಕ್ಕೂ ರತ್ನಗಳಿಂದ ಅಲಂಕಾರವನ್ನು ಮಾಡಿಸಿದನು. ಅವನ ದೇಶದಲ್ಲಿ ಬಡತನವೆಂಬ ಶಬ್ದವೇ ಎಲ್ಲಿಯೂ ಇಲ್ಲದಂತಾಯಿತು. ಎಲ್ಲರೂ ಎಲ್ಲಾ ವಿಧವಾದ ಐಶ್ವರ್ಯವುಳ್ಳವರಾಗಿ ಕುಬೇರನಿಗೆ ಸಮರಾಗಿದ್ದರು. ನೀಪವನಾಧಿಪನಾದ ಹಾಲಾಸ್ಯೇಶ್ವರನು ಆಚರಿಸಿದ ಮೂವತ್ತೊಂದನೆಯ ಲೀಲೆಯನ್ನು ನಾನು ಹೇಳಿರುವೆನು. ಇದನ್ನು ಒಂದು ಸಾರಿ ಹೇಳಿದವರೂ, ಕೇಳಿದವರೂ, ಎಲ್ಲಾ ವಿಧವಾದ ಐಶ್ವರ್ಯವನ್ನೂ ಹೊಂದುವರು.

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆಯಲ್ಲಿ
ನೀವೀಪ್ರದಾನವೆಂದು ಹೆಸರುಳ್ಳ ಮೂವತ್ತೇಳನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಅಷ್ಟತ್ರಿಂಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಭೂಲೋಕಶಿವಲೋಕೇಶ ಶ್ಶಂಭು ರ್ವಲಯವಿಕ್ರಯಂ ।
ಯಯಾಽಕರೋಲ್ಲೀಲಯಾ ಚ ಯುಷ್ಮಾಕಂ ತಾಂ ವದಾಮ್ಯಹಂ ॥ ೧ ॥

ಪುರಾ ಭಿಕ್ಷಾಟನಂ ಕರ್ತುಂ ಪ್ರವೃತ್ತೇ ಸೋಮಸುಂದರೇ ।
ದೇವದಾರುವನಂ ಪ್ರಾಪ್ತೇ ಮುನಿಪತ್ನ್ಯ ಸ್ಸಮೋಹಿತಾಃ ॥ ೨ ॥

ಸುಂದರೇಶಸ್ಯ ಸೌಂದರ್ಯಂ ಮನೋಜ್ಞಾತಿಮನೋಹರಂ ।
ಸಮೀಕ್ಷ್ಯ ತಸ್ಯ ಸಂಸ್ಪರ್ಶ ಲುಬ್ಧಾ ಅಪಿ ನ ಲೇಭಿರೇ ॥ ೩ ॥

---

## ಮುವತ್ತೆಂಟನೆಯ ಅಧ್ಯಾಯವು

೧-೫. ಅಗಸ್ತ್ಯಋಷಿಯು ಹೇಳಿದನು:—ಭೂಲೋಕ, ಶಿವಲೋಕೇಶ್ವರನಾದ ಹಾಲಾಸ್ಯೇಶ್ವರನು ಬಳೆಗಳನ್ನು ಮಾರಿರುವ ಲೀಲೆಯನ್ನು ನಿಮಗೆ ಹೇಳುವೆನು. ಋಷಿಗಳೆಲ್ಲರೂ ಕೇಳಿರಿ. (ಚಂದ್ರನಂತೆ ಸುಂದರನಾದ) ಶಿವನು ಪೂರ್ವಕಾಲದಲ್ಲಿ ಭಿಕ್ಷೆಯನ್ನು ಮಾಡುವುದಕ್ಕಾಗಿ ದೇವದಾರೀಮರಗಳೇ ಹೆಚ್ಚಾಗಿರುವ ದೇವದಾರುವನಕ್ಕೆ ಹೋದಾಗ ಅಲ್ಲಿರುವ ಋಷಿಗಳ ಪತ್ನಿಯರು, ಬಹಳ ಮನೋಹರವಾದ ಶಿವನ ಸೌಂದರ್ಯಕ್ಕೆ ಮೋಹಗೊಂಡು, ಅವನ ಶರೀರಸ್ಪರ್ಶಮಾಡಲು ಆಶೆಪಟ್ಟರು.

ಕಠೋರಕುಚಭಾರಾಶ್ಚ ಕಮನೀಯಕಲೇಬರಾಃ ।
ಮುನಿಪತ್ನ್ಯಶ್ಚ ಗಲಿತವಲಯಾಂಬರಕುಂತಲಾಃ ॥ ೪ ॥

ಮನೋಭವಶರವ್ರಾತಶಕಲೀಕೃತವಕ್ಷಸಃ ।
ತಸ್ಯಾ ನುಧಾವನಂ ಚಕ್ರುಃ ಪೃಷ್ಠತಃ ಪಾರ್ಶ್ವಯೋಃ ಪುನಃ ॥ ೫ ॥

ತಪಸ್ವಿಂಸ್ತಿಷ್ಠ ತಿಷ್ಠೇತಿ ಕಾಶ್ಚಿತ್ತಂ ಪ್ರಾರ್ಥಯಂತಿ ಚ ।
ತತ್ಸೌಂದರ್ಯಂ ಚಿರಂ ಕಾಶ್ಚಿದ್ದೃಷ್ಟ್ವಾ ತೃಪ್ತಿಂ ಚ ನಾಯಯುಃ ॥ ೬ ॥

ಅಕರೋ ದಾನತಿಂ ಕಾಚಿತ್ಕಾಚಿತ್ಪುಷ್ಪಾಂಜಲಿಂ ವ್ಯಧಾತ್ ।
ಕಾಶ್ಚಿದ್ಭಿಕ್ಷಾಂ ದದು ಸ್ತಸ್ಮೈ ಕಾಶ್ಚಿ ದಾಭರಣಾನಿ ಚ ॥ ೭ ॥

ಪಯೋದಧಿಘೃತಕ್ಷೌದ್ರಶರ್ಕರಾದೀನಿ ತಾಃ ಸ್ತ್ರಿಯಃ ।
ಸರ್ವಾಣಿ ತಸ್ಮೈ ವಸ್ತೂನಿ ಸಮರ್ಪ್ಯ ಪ್ರೀಣಯಂತಿ ಚ ॥ ೮ ॥

---

ಇಷ್ಟವು ನೆರವೇರಲಿಲ್ಲ. ಮುನಿಪತ್ನಿಯರು ಸುಂದರಿಯರಾಗಿದ್ದರು. ಯೌವನ ವುಳ್ಳವರಾಗಿದ್ದರು. ಶಿವನ ದರ್ಶನದಿಂದ ಕಾಮವಿಕಾರವುಳ್ಳವರಾಗಿ ಭಿಕ್ಷಾರ್ಥವಾಗಿ ಬಂದಿರುವ ಶಿವನ ಹಿಂಭಾಗ ಮತ್ತು ಮುಂಭಾಗಗಳಲ್ಲಿ ಸುತ್ತಿಕೊಂಡು ಓಡಾಡು ತ್ತಿದ್ದರು.

೬ ಅವರಲ್ಲಿ ಕೆಲವರು ಶಿವನನ್ನು ನೋಡಿ, "ಎಲೈ ತಪಸ್ವಿಯೆ, ನಿಂತುಕೊ" ಎಂದು ಬೇಡಿಕೊಂಡರು. ಇನ್ನು ಕೆಲವರಿಗೆ ಅವನ ಸೌಂದರ್ಯವನ್ನು ಎಷ್ಟು ನೋಡಿದರೂ ತೃಪ್ತಿಯಾಗಲಿಲ್ಲ.

೭–೮. ಭಿಕ್ಷಾರ್ಥವಾಗಿ ಬಂದ ಶಿವನಿಗೆ ಮುನಿಪತ್ನಿಯರಲ್ಲಿ ಒಬ್ಬಳು ಮನೋ ಗತವಾದ ಕಾಮವಿಕಾರದಿಂದ ನಮಸ್ಕಾರ ಮಾಡಿದಳು. ಇನ್ನೊಬ್ಬಳು ಪುಷ್ಪಾಂಜಲಿ ಯನ್ನು ಹಾಕಿದಳು. ಕೆಲವರು ಭಿಕ್ಷವನ್ನು ಹಾಕಿದರು. ಕೆಲವರು ಆಭರಣಗಳನ್ನು ದಾನವಾಗಿ ಕೊಟ್ಟರು. ಹಾಲು, ಮೊಸರು, ತುಪ್ಪ, ಜೇನು, ಸಕ್ಕರೆ, ಇವೇ ಮೊದ ಲಾದ ವಸ್ತುಗಳೆಲ್ಲವನ್ನೂ ಶಿವನಿಗೆ ಮುನಿಪತ್ನಿಯರು ಒಪ್ಪಿಸಿ ಸಂತೋಷಪಡಿಸಿದರು. ಇನ್ನು ಕೆಲವರು ಶಿವನನ್ನು ಆಲಿಂಗನೆ ಮಾಡಿಕೊಳ್ಳಲು ಅವನ ಹತ್ತಿರಕ್ಕೆ ಹೋದರು. ಆಗ ಅವನು ದೂರಕ್ಕೆ ಹೋದ ಕಾರಣ ಆ ಸ್ತ್ರೀಯರು ಶಿವನನ್ನು ಸ್ಪರ್ಶಮಾಡಲು ಅವಕಾಶವು ದೊರೆಯಲಿಲ್ಲ.

ಕಾಶ್ಚಿದಾಲಿಂಗನಂ ಕರ್ತುಂ ತತ್ಸಮೀಪಂ ಗತಾ ಯದಾ ।
ತದಾ ದೂರಗತಸ್ತಾಭ್ಯಃ ಸ್ಪರ್ಶನಂ ನ ದದೌ ಶಿವಃ ॥ ೯ ॥

ಏವಂ ತಸ್ಯ ಚ ವೈರಾಗ್ಯ ಮನುರಾಗಂ ಚ ಯೋಷಿತಾಂ ।
ದೃಷ್ಟ್ವಾ ಮುನೀಶ್ವರಾಃ ಸರ್ವೇ ವಿಸ್ಮಿತಾ ಅಭವಂಸ್ತದಾ ॥ ೧೦ ॥

ಶ್ರೀಮದ್ಧಾಲಾಸ್ಯನಗರೀ ನಾಯಕಸ್ಯೇ ಶ್ವರಸ್ಯ ಚ ।
ಲೀಲೇಯಮಿತಿ ಜಾನಂತಿ ಸಮಾಧಿನಿಪುಣಾ ಜನಾಃ ॥ ೧೧ ॥

ವಿಕಾರಂ ಮಾನ್ಮಥಂ ದೃಷ್ಟ್ವಾ ಕ್ರುದ್ಧಾ ಸ್ತಾಸಾಂ ಸ್ವಯೋಷಿತಾಂ ।
ಪಾತಿವ್ರತ್ಯಪ್ರವೀಣಾನಾಂ ಭರ್ತಾರ ಶ್ಶೇಪು ರಂಗನಾಃ ॥ ೧೨ ॥

ಮಧುರಾನಗರ ಸ್ಥಾನಾಂ ವೈಶ್ಯಾನಾಂ ವಂಶಶಾಲಿನಾಂ ।
ಯೂಯಂ ಸ್ತ್ರಿಯಃ ಸುತಾ ಜಾತಾ ತದೀಯಸ್ಪರ್ಶ ಮಾಪ್ಸ್ಯಥ ॥ ೧೩ ॥

ಏವಂ ತಾ ಭರ್ತೃಭಿ ಶ್ಶಪ್ತಾ ನಿಖಿಲಾ ಮುನಿಯೋಷಿತಃ ।
ವೈಶ್ಯಕನ್ಯಾಃ ಸಮಭವ ನ್ವೃದ್ಧಿಂ ಚ ಪ್ರಾಪು ರನ್ವಹಂ ॥ ೧೪ ॥

---

೯–೧೧. ಮುನಿಗಳು ಭಿಕ್ಷೆಗೆ ಬಂದಿರುವವನ ವೈರಾಗ್ಯವನ್ನೂ, ತಮ್ಮ ತಮ್ಮ ಸ್ತ್ರೀಯರಿಗೆ ಅವನಲ್ಲಿ ಉಂಟಾಗಿರುವ ಪ್ರೀತಿಯನ್ನೂ ನೋಡಿ, ಆಶ್ಚರ್ಯಪಟ್ಟರು. ಯೋಗಾಭ್ಯಾಸ ಮಾಡುತ್ತಿರುವವರಲ್ಲಿ ಧ್ಯಾನನಿಷ್ಠೆಯುಳ್ಳ ಬುದ್ಧಿವಂತರಾದ ಕೆಲವರು ಹಾಲಾಸ್ಯನಗರೀಶ್ವರನಾದ ಶಿವನ ಲೀಲೆಯು ಈ ಪ್ರಕಾರವಾಗಿರುವುದು ಎಂದು ತಿಳಿದುಕೊಂಡಿದ್ದರು.

೧೨–೧೪. ತಮ್ಮ ತಮ್ಮ ಸ್ತ್ರೀಯರ ಪಾತಿವ್ರತ್ಯವನ್ನು ಕಾಪಾಡುವುದರಲ್ಲಿ ನಿಪುಣರಾದ ಋಷಿಗಳು ತಮ್ಮ ಸ್ತ್ರೀಯರ ಕಾಮವಿಕಾರವನ್ನು ನೋಡಿ, " ನೀವು ಮಧುರಾನಗರದ ವೈಶ್ಯರ ವಂಶದಲ್ಲಿ ಕುಮಾರಿಯರಾಗಿ ಜನ್ಮವನ್ನು ಹೊಂದಿ, ಶಿವನ ಸ್ಪರ್ಶ ಸುಖವನ್ನು ಅನುಭವಿಸಿ " ಎಂದು ತಮ್ಮ ತಮ್ಮ ಪತ್ನಿಯರಿಗೆ ಶಾಪವನ್ನು ಕೊಟ್ಟರು. ತಮ್ಮ ತಮ್ಮ ಗಂಡಂದಿರಿಂದ ಶಾಪವನ್ನು ಹೊಂದಿದ ಆ ಋಷಿಪತ್ನಿಯರೆಲ್ಲರೂ ಮಧುರಾನಗರದಲ್ಲಿ ವೈಶ್ಯರ ಹೆಣ್ಣುಮಕ್ಕಳಾಗಿ ಹುಟ್ಟಿ ದಿನೇ ದಿನೇ ಅಭಿವೃದ್ಧಿಯನ್ನು ಹೊಂದುತ್ತಿದ್ದರು.

ಸಂಪತ್ಸೌಭಾಗ್ಯಸೌಂದರ್ಯಸದ್ಗುಣೈ ರತುಲಾ ವಿಶಾಂ ।
ಕನ್ಯಕಾಶ್ಚ ವಿರಾಜಂತೇ ವಿಬುಧಾನಾ ಮಿವಾತ್ಮಜಾಃ ॥ ೧೫ ॥

ವಿಸ್ಮಿತಾ ಅಭವನ್ಸರ್ವೇ ಜನಾಃ ಸೌಂದರ್ಯಮದ್ಭುತಂ ।
ವಿಲೋಕ್ಯ ಕನ್ಯಕಾನಾಂ ಚ ಮಧುರಾನಗರೀವಿಶಾಂ ॥ ೧೬ ॥

ಭಿಕ್ಷಾಟನಂ ಕೃತವತಃ ಸ್ವಸ್ಯ ಸ್ಪರ್ಶನಮಾದೃತಾಃ ।
ಯಾಸ್ತಾಃ ಸ್ಪ್ರಷ್ಟುಂ ಸುಂದರೇಶೋ ವೃದ್ಧವೈಶ್ಯವಪು ರ್ದಧೌ ॥ ೧೭ ॥

ಸೌಂದರ್ಯೇಣಾ ತುಲೇನಾಪಿ ತೇಜಸಾ ಪ್ರಜ್ವಲನ್ನಿವ ।
ಪರಿಧಾಯಾಂಬರಂ ಶುಭ್ರಂ ಸೋಷ್ಣೀಷ ಸ್ಸೋತ್ತರೀಯಕಃ ॥ ೧೮ ॥

ಸುಗಂಧಾಲಿಪ್ತಸರ್ವಾಂಗಃ ಕಾಶ್ಮೀರತಿಲಕೋಜ್ಜ್ವಲಃ ।
ದುಕೂಲೇನಾವೃತತನು ರ್ಬಹಿರಾಚ್ಛಾದಿತೇನ ಚ ॥ ೧೯ ॥

---

೧೫-೧೭. ವೈಶ್ಯಕನ್ಯೆಯರು ಸಂಪತ್ತು, ಸೌಂದರ್ಯ, ಒಳ್ಳೆಯಗುಣ, ಸೌಭಾಗ್ಯ, ಇವುಗಳಿಂದ ಹೋಲಿಕೆ ಇಲ್ಲದವರಾಗಿ ದೇವಕನ್ಯೆಯರ ಹಾಗೆ ಪ್ರಕಾಶಿಸುತ್ತಿದ್ದರು. ಜನರೆಲ್ಲರೂ ಇವರ ಬಹಳ ಆಶ್ಚರ್ಯಕರವಾದ ಸೌಂದರ್ಯವನ್ನು ನೋಡಿ, ಆಶ್ಚರ್ಯಪಡುತ್ತಿದ್ದರು. ಸುಂದರೇಶ್ವರನು ವೈಶ್ಯರ ಹುಡುಗಿಯರ ಸೌಂದರ್ಯವನ್ನು ನೋಡಿ,ಹಿಂದೆ ತಾನು ಭಿಕ್ಷೆಮಾಡಿದ ಕಾಲದಲ್ಲಿ ತನ್ನ ಸ್ಪರ್ಶವನ್ನು ಅಪೇಕ್ಷಿಸಿದವರಿಗೆ ಎಲ್ಲರಿಗೂ ಸ್ಪರ್ಶಸುಖವನ್ನು ಅನುಗ್ರಹಿಸುವುದಕ್ಕಾಗಿ ವೃದ್ಧನಾದ ವೈಶ್ಯನ ಶರೀರವನ್ನು ಧರಿಸಿಕೊಂಡು ಬಂದನು.

೧೮-೨೦. ಈ ವೃದ್ಧವೈಶ್ಯನು ಬಹಳ ಸುಂದರನಾಗಿ, ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದನು. ಶುಭ್ರವಾದ ವಸ್ತ್ರವನ್ನು ಉಟ್ಟುಕೊಂಡು, ತಲೆಗೆ ರುಮಾಲನ್ನು ಇಟ್ಟುಕೊಂಡು, ಮೇಲುಗಡೆಯಲ್ಲಿ ಬಟ್ಟೆಯನ್ನು ಹೊದ್ದುಕೊಂಡಿದ್ದನು. ಶರೀರಕ್ಕೆಲ್ಲಕ್ಕೂ ಉತ್ತಮವಾದ ಗಂಧವನ್ನು ಹಚ್ಚಿಕೊಂಡಿದ್ದನು. ಕಸ್ತೂರೀತಿಲಕವನ್ನು ಧರಿಸಿಕೊಂಡಿದ್ದನು. ಉತ್ತರೀಯವಾಗಿ ರೇಶಿಮೆಯ ವಸ್ತ್ರವನ್ನು ಹೊದ್ದುಕೊಂಡಿದ್ದನು.

ಪಾದುಕಾಲಂಕೃತಾಂಘ್ರಿಶ್ಚ ಧೃತಛತ್ರೇಣ ಪಾಣಿನಾ ।
ಕಟಕಾಭ್ಯಾಂ ಕುಂಡಲಾಭ್ಯಾ ಮುಂಗುಲೀಯೈಶ್ಚ ಭೂಷಿತಃ ॥ ೨೦ ॥

ಸುಗಂಧಸಾರಕರ್ಪೂರತಾಂಬೂಲಾಮೋದಿತಾನನಃ ।
ನಾನಾವರ್ಣಾಂಶ್ಚ ವಲಯಾನ್ಶಂಖಶುಕ್ತ್ಯಾದಿನಿರ್ಮಿತಾನ್ ॥ ೨೧ ॥

ವಹನ್ನಂಸೇನ ಸುಪ್ರೋತಾ ನ್ಪಟ್ಟಸೂತ್ರೋದ್ಧರಶ್ಮಿಭಿಃ ।
ವೈಶ್ಯವೀಥ್ಯಾ ಮಟನ್ಪ್ರಾಹ ವೈಶ್ಯವೇಷಧರೋ ಹರಃ ॥ ೨೨ ॥

ಕನ್ಯಕಾಃ ಪ್ರತಿಗೃಹ್ಣಂತು ಮತ್ತ ಸ್ಸ ದ್ವಲಯಾನಿತಿ ।
ದೃಷ್ಟ್ವಾ ವಲಯವೈಶ್ಯಂ ತಂ ಜನಾಃ ಸರ್ವೇ ಸುವಿಸ್ಮಿತಾಃ ॥ ೨೩ ॥

ಕನ್ಯಕಾ ಅಪಿ ವೈಶ್ಯಾನಾಂ ಪ್ರಾಹು ರೇವಂ ಚ ಸುಸ್ವರಾಃ ।
ಮಹ್ಯಂ ದೇಹೀತಿ ಮಹ್ಯಂ ಚ ದೇಹೀತ್ಯಾಹು ರ್ಮುದಾನ್ವಿತಾಃ ॥ ೨೪ ॥

---

ಕಾಲುಗಳಿಗೆ ಪಾದುಕೆಗಳನ್ನು ಹಾಕಿಕೊಂಡು, ಛತ್ರಿಯನ್ನು ಹಿಡಿದುಕೊಂಡಿದ್ದನು. ಕೈಗಳಿಗೆ ರತ್ನಖಚಿತವಾದ ಕಡಗಗಳನ್ನೂ, ಉಂಗುರಗಳನ್ನೂ ಧರಿಸಿ, ಕಿವಿಗಳಿಗೆ ಕುಂಡಲಗಳನ್ನು ಹಾಕಿಕೊಂಡಿದ್ದನು.

೨೧–೨೩. ಸುವಾಸನೆಯುಳ್ಳ ದ್ರವ್ಯಗಳಿಂದ ಕೂಡಿದ ತಾಂಬೂಲವನ್ನು ಹಾಕಿಕೊಂಡು, ಸುವಾಸನೆಯುಳ್ಳ ಮುಖವುಳ್ಳವನಾಗಿರುವ ವೃದ್ಧವೈಶ್ಯನು ಅನೇಕ ಬಣ್ಣಗಳುಳ್ಳ ಶಂಖ, ಮುತ್ತಿನಚಿಪ್ಪು, ಇವುಗಳಿಂದ ನಿರ್ಮಿಸಿದ ಬಳೆಗಳನ್ನು ರೇಶಿಮೆಯ ದಾರಗಳಲ್ಲಿ ಪೋಣಿಸಿಕೊಂಡು ಅವನ್ನು ಹೆಗಲಮೇಲೆ ಹೊತ್ತುಕೊಂಡು ವೈಶ್ಯರ ಬೀದಿಯಲ್ಲಿ "ಬಳೆಗಳನ್ನು ನನ್ನಿಂದ ಕೊಂಡುಕೊಳ್ಳಿರಿ" ಎಂದು ಕೂಗುತ್ತಾ ತಿರುಗಾಡುತ್ತಿದ್ದನು. ಬಳೆಯನ್ನು ಮಾರುವುದಕ್ಕೆ ಬಂದಿರುವ ವೈಶ್ಯನನ್ನು ನೋಡಿದವರೆಲ್ಲರೂ, ಆಶ್ಚರ್ಯಪಡುತ್ತಿದ್ದರು.

೨೪–೨೭. ಬಹಳ ಅಂದವಾದ ಕಂಠಧ್ವನಿಯುಳ್ಳ ವೈಶ್ಯಕನ್ಯೆಯರು, ಸಂತೋಷದಿಂದ ನನಗೆ ಬಳೆಯನ್ನು ಕೊಡು, ಎಂದು ಅವನನ್ನು ಕರೆದರು. ಬಳೆಯಿಲ್ಲದವರೂ ಬಳೆಯುಳ್ಳವರೂ ಎಲ್ಲರೂ ಬಳೆಗಳನ್ನು ಕೊಂಡುಕೊಳ್ಳುವುದಕ್ಕೆ ಆ ವೃದ್ಧವೈಶ್ಯನನ್ನು

**ಅಭೂಷಿತಾಶ್ಚ ವಲಯೈರ್ಭೂಷಿತಾ ಅಪಿ ಸೋತ್ಸುಕಾಃ ।**
**ಸೋಽಪಿ ತಾಸಾಂ ಸಮಾಲಂಬ್ಯ ಮೃದುಲಾನ್ಕರಪಲ್ಲವಾನ್ ॥ ೨೫ ॥**

**ತ್ವಂ ತಿಷ್ಠ ಕನ್ಯೇ ದಾಸ್ಯಾಮಿ ತ್ವಂ ಚ ತಿಷ್ಠಾತ್ರ ಕನ್ಯಕೇ ।**
**ಮಂದಂ ಮಂದಂ ವದನ್ನೇವಂ ವಲಯಾನಾದದೌ ಶುಭಾನ್ ॥ ೨೬ ॥**

**ಗೃಹೀತಾನ್ನ ಜಹೌ ವೈಶ್ಯಃ ಕನ್ಯಕಾಕರಪಲ್ಲವಾನ್ ।**
**ತಾಸಾಂ ವಿಶಾಂ ಕನ್ಯಕಾನಾಮಪ್ಯಾನಂದಃ ಪ್ರಜಾಯತೇ ॥ ೨೭ ॥**

**ಜನಾನಾಂ ಪುರತ ಸ್ತ್ವೇವಂ ಲಜ್ಜಯಾ ತಾ ವದಂತಿ ಹಿ ।**
**ಮಮ ಹಸ್ತಂ ಗೃಹೀತ್ವಾದ್ಯ ವೈಶ್ಯ ಕಿಂ ತ್ವಂ ನ ಮುಂಚಸಿ ॥ ೨೮ ॥**

**ಜನನ್ಯೈ ಕಥಯಿಷ್ಯಾಮಿ ಮುಂಚ ಮಾಂ ಮುಂಚ ಮಾಮಿತಿ ।**
**ವೈಶ್ಯೋಽಹಂ ಮತ್ಕರಂ ಸ್ಪೃಷ್ಟ್ವಾ ತ್ವನ್ನಿಂದಾ ನ ಭವೇದಿತಿ ॥ ೨೯ ॥**

**ಭಾಷಮಾಣಃ ಪ್ರತಿಗೃಹಂ ಗತ್ವಾ ವಲಯವಿಕ್ರಯಂ ।**
**ಅಕರೋತ್ಕರುಣಾಸಿಂಧುಃ ವೈಶ್ಯವೇಷಧರೋ ಹರಃ ॥ ೩೦ ॥**

---

ಕುತೂಹಲದಿಂದ ಕರೆದರು. ಅವನು ಬಂದು ಕೂತುಕೊಂಡು, ಆ ಹುಡುಗಿಯರ ಮೃದುವಾದ ಹಸ್ತಗಳನ್ನು ಹಿಡಿದುಕೊಂಡು, " ನೀನು ಇಲ್ಲಿ ಕೂತುಕೋ, ನೀನು ಇಲ್ಲಿ ಇರು. ನಿಮಗೆ ಬಳೆಯನ್ನು ಕೊಡುತ್ತೇನೆ " ಎಂದು ಹೇಳುತ್ತಾ ನಿಧಾನವಾಗಿ ಬಳೆಗಳನ್ನು ದಾರಗಳಿಂದ ತೆಗೆಯುತ್ತಿದ್ದನು. ಆದರೆ ಹಿಡಿದುಕೊಂಡಿರುವ ಆ ಹುಡುಗಿಯರ ಹಸ್ತಗಳನ್ನು ಬೇಗನೆ ಬಿಡುತ್ತಿರಲಿಲ್ಲ. ಆ ಹುಡುಗಿಯರಿಗೂ ಕೂಡ ಇದರಿಂದ ಆನಂದವು ಉಂಟಾಗಿತ್ತು.

೨೮-೩೦. ಜನಗಳ ಎದುರಿಗೆ ನಾಚಿಕೆಯುಳ್ಳ ಆ ಹುಡುಗಿಯರು " ಎಲೈ ವೈಶ್ಯನೆ, ನನ್ನ ಹಸ್ತವನ್ನು ಯಾತಕ್ಕೆ ಬಿಡುವುದಿಲ್ಲ. ನನ್ನ ತಾಯಿಗೆ ಹೇಳುತ್ತೇನೆ. ನನ್ನನ್ನು ಬಿಡು, ಬಿಡು, " ಎಂದು ವೈಶ್ಯನ ಸಂಗಡ ಹೇಳುತ್ತಿದ್ದರು. ಅದನ್ನು ಕೇಳಿ ಅವನು " ನಾನೂ ವೈಶ್ಯನು. ನನ್ನ ಹಸ್ತ ಸ್ಪರ್ಶದಿಂದ ನಿಮಗೆ ಯಾವ ವಿಧವಾದ ನಿಂದೆಯೂ ಆಗುವುದಿಲ್ಲ. " ಎಂದು ಮಾತನಾಡುತ್ತಿದ್ದನು. ವೈಶ್ಯ ವೇಷವನ್ನು ಧರಿಸಿದ ಶಿವನು ಹೀಗೆಯೇ ವ್ಯಾಪಾರಮಾಡುತ್ತಾ ಪ್ರತಿಯೊಂದು ಮನೆಯಲ್ಲಿಯೂ ದಯೆಯಿಂದ ಬಳೆಗಳ ವಿಕ್ರಯವನ್ನು ಮಾಡಿದನು.

ತತ್ಕರಸ್ಪರ್ಶಸುಖಿತಾ ಅಪಿ ಮಿಥ್ಯೋಕ್ತಭರ್ತ್ಸನಾಃ ।
ಮಾಯಾವೈಶ್ಯಸ್ಯ ವಶತಾಂ ಪ್ರಾಪುಃ ಸರ್ವಾ ವಿಶಾಂ ಸುತಾಃ । ॥ ೩೧ ॥

ಪುನಶ್ಚ ತತ್ಕರಸ್ಪರ್ಶಲೋಭಾತ್ ಕಾಶ್ಚನ ಕನ್ಯಕಾಃ ।
ಸುಂದರೇಶಸ್ಯ ಕುಹನಾ ಮಜ್ಞಾಯಾತೀವ ಮೋಹಿತಾಃ ॥ ೩೨ ॥

ಅವಮುಕ್ತ್ವಾ ನತಿರಮ್ಯಾಂಶ್ಚ ಭಿಂದಂತ್ಯೋ ವಲಯಾನ್ ಸ್ವಹೂನ್ ।
ಪ್ರಯಚ್ಛ ನಃ ಸದ್ವಲಯಾನಿತಿ ತಂ ಪ್ರಾರ್ಥ್ಯ ನಂದಿತಾಃ ॥ ೩೩ ॥

ಅದತ್ವಾ ಯಾಸಿ ಚೇತ್ಸೋಮಸುಂದರೋ ಬಾಧಕಸ್ತವ ।
ಇತ್ಯುಕ್ತೇ ಪ್ರಹಸನ್ನಂ ತರ್ದದೌ ಸದ್ವಲಯಾನ್ ಪುನಃ ॥ ೩೪ ॥

ಗುಣಿತ್ವಂ ಚ ವಿಶೋ ದೃಷ್ಟ್ವಾ ವಿಸ್ಮಿತಾ ಅಭವನ್ ಜನಾಃ ।
ಮನಸಾ ಭಾವಯಂತ್ಯಸ್ತಾ ಸ್ತತ್ಕರಸ್ಪರ್ಶಜಂ ಸುಖಂ ॥ ೩೫ ॥

---

೩೧-೩೪. ವೈಶ್ಯರ ಹುಡುಗಿಯರೆಲ್ಲರೂ, ಲೋಕರೀತಿಯಿಂದ ಸುಮ್ಮನೆ ಮನೆಯವರಿಂದ ಆಕ್ಷೇಪಣೆಯನ್ನು ಹೊಂದಿದರೂ, ವೈಶ್ಯನ ಕರಸ್ಪರ್ಶ ಮಾತ್ರ ದಿಂದಲೇ ಸುಖವನ್ನು ಹೊಂದಿ, ಕಪಟದಿಂದ ವೈಶ್ಯನಾದ ಅವನಿಗೆ ಅಧೀನರಾದರು. ಪುನಃ ಅವನ ಹಸ್ತಸ್ಪರ್ಶವನ್ನು ಪಡೆಯುವ ಆಸೆಯಿಂದ, ಬಹಳ ಬೆಲೆಬಾಳುವ ಅವನು ತೊಡಸಿದ್ದ ಸುಂದರವಾದ ಬಳೆಗಳನ್ನು ಒಡದುಹಾಕಿ, ಇನ್ನೂ ಚೆನ್ನಾಗಿರುವ ಬಳೆಗಳನ್ನು ನಮಗೆ ಕೊಡು, ಎಂದು ಅವನನ್ನು ಸಂತೋಷದಿಂದ ಪ್ರಾರ್ಥಿಸುತ್ತಿದ್ದರು. ಸುಂದರೇಶ್ವರನ ಮಹಿಮೆಯನ್ನು ತಿಳಿಯದೆ ಮೋಹಗೊಂಡಿರುವ ಅವರು "ನೀನು ಉತ್ತಮವಾದ ಬಳೆಗಳನ್ನು ನಮಗೆ ಕೊಡದೆ ಇದ್ದರೆ, ಸುಂದರೇಶ್ವರನು ನಿನಗೆ ಒಳ್ಳೆಯದನ್ನು ಮಾಡುವುದಿಲ್ಲ." ಎಂದು ಹೇಳುತ್ತಿದ್ದರು. ಇವರ ಮಾತನ್ನು ಕೇಳಿದ ವೃದ್ಧವೈಶ್ಯನು ಮನಸ್ಸಿನಲ್ಲಿ ಸಂತೋಷಪಡುತ್ತಾ ಬದಲಾಗಿ ಅವರಿಗೆ ಒಳ್ಳೆಯ ಬಳೆಗಳನ್ನು ಕೊಟ್ಟನು.

೩೫-೩೯. ಇವನ ವ್ಯಾಪಾರವನ್ನು ನೋಡಿದ ಜನರೆಲ್ಲರೂ ವೈಶ್ಯನು ಗುಣವಂತನೆಂದು ತಿಳಿದು ಇವನ ಗುಣಕ್ಕೆ ಆಶ್ಚರ್ಯಪಟ್ಟರು. ಆ ಹುಡುಗಿಯರು ಇವನ ಹಸ್ತಸ್ಪರ್ಶಸುಖವನ್ನು ಮನಸ್ಸಿನಿಂದ ಚೆನ್ನಾಗಿ ಭಾವನೆಮಾಡಿ, "ನಾಳೆ, ನಾಡಿದ್ದು,

ಶ್ವಃ ಪರಶ್ವೋಽಪಿ ನಿತ್ಯಂ ತ್ವಮಾಗಚ್ಛೇತಿ ತಮಬ್ರುವನ್ ।
ತಥಾ ಕರಿಷ್ಯ ಇತ್ಯುಕ್ತ್ವಾ ವೈಶ್ಯವೀಥೀಷು ಸಂಚರನ್ ॥ ೩೬ ॥

ಸ ತಾಭಿಃ ಕನ್ಯಕಾಭಿಶ್ಚ ಪ್ರದತ್ತಂ ವಲಯೋಚಿತಂ ।
ಮೂಲ್ಯಂ ನ ಪ್ರತಿಗೃಹ್ಣಾತಿ ಭಕ್ತಾಭೀಷ್ಟಪ್ರದಾಯಕಃ ॥ ೩೭ ॥

ಗೃಹಾಣ ಮೂಲ್ಯ ಮಿತ್ಯುಕ್ತೇಷ್ವೇವಮಾಹ ಮಹೇಶ್ವರಃ ।
ಅದ್ಯ ನ ಪ್ರತಿಗೃಹ್ಣಾಮಿ ವಲಯಾನಾಂ ತು ಮೂಲ್ಯಕಂ ॥ ೩೮ ॥

ಶ್ವೋ ದಾಸ್ಯಥ ಭೃತಿಂ ಮಹ್ಯಂ ಸ್ವೀಕರೋಮಿ ತದಾ ಮುದಾ ।
ಏವಂ ಬ್ರುವಾಣಃ ಕುರ್ವಾಣೋ ವಲಯಾನಾಂ ತು ವಿಕ್ರಯಂ ॥ ೩೯ ॥

ಮಧುರಾವೈಶ್ಯವೀಥೀಷು ಪರ್ಯಟನ್ಪರಿತಃ ಶಿವಃ ।
ಹಾಲಾಸ್ಯನಾಥೋ ಭಗವಾನ್ ಸಚ್ಚಿದಾನಂದವಿಗ್ರಹಃ ॥ ೪೦ ॥

---

ನೀನು ಬಾ" ಎಂದು ಅವನಿಗೆ ಹೇಳುತ್ತಿದ್ದರು. "ಹಾಗೆಯೇ ಮಾಡುತ್ತೇನೆ" ಎಂದು ಹೇಳುತ್ತಾ ಆವನು ವೈಶ್ಯರ ಬೀದಿಯಲ್ಲಿ ಸಂಚರಿಸುತ್ತಿದ್ದನು. "ನೀನು ಬಳೆಗಳ ಕ್ರಯುವನ್ನು ತೆಗೆದುಕೊ" ಎಂದು ಆ ಹುಡುಗಿಯರು ಬಳೆಗಳ ಕ್ರಯದ ದ್ರವ್ಯವನ್ನು ಕೊಟ್ಟರೆ, ಅದನ್ನು ಭಕ್ತರ ಇಷ್ಟವನ್ನು ನಡಸಿಕೊಡುವ ಆ ವೈಶ್ಯನು ತೆಗೆದು ಕೊಳ್ಳುತ್ತಿರಲಿಲ್ಲ. "ನಾನು ನಾಳೆ ಬಂದು ಬಳೆಗಳ ಕ್ರಯದ ದ್ರವ್ಯವನ್ನು ತೆಗೆದು ಕೊಳ್ಳುವೆನು. ನೀವು ನಾಳೆ ಕೊಡಿ" ಎಂದು ಆವರಿಗೆ ಹೇಳುತ್ತಿದ್ದನು. ಹೀಗೆ ಹೇಳುತ್ತಾ ಆ ವೃದ್ಧವೈಶ್ಯನು ಬಳೆಗಳ ವಿಕ್ರಯವನ್ನು ಮಾಡುತ್ತಿದ್ದನು.

೪೦. ಷಡ್ಗುಣೈಶ್ವರ್ಯ ಸಂಪನ್ನನಾದ, ಸಚ್ಚಿದಾನಂದ ರೂಪದಿಂದ ಇರುವ ಹಾಲಾಸ್ಯೇಶ್ವರನು ಹೀಗೆಯೇ ಬಳೆಗಳ ವಿಕ್ರಯವನ್ನು ಮಾಡುತ್ತಾ ಮಧುರಾನಗರದ ಬೀದಿಯಲ್ಲೆಲ್ಲಾ ಸಂಚರಿಸಿ, ದೇವಸ್ಥಾನದ ಗರ್ಭಗೃಹದಲ್ಲಿರುವ ಮೂಲಲಿಂಗದಲ್ಲಿ ಅದೃಶ್ಯನಾದನು.

ಗರ್ಭಗೇಹಂ ಪ್ರವಿಶ್ಯಾಥ ಮೂಲಲಿಂಗೇ ತಿರೋದಧೇ ।
ಶಂಕರಸ್ಯ ಕರಸ್ಪರ್ಶಮಾತ್ರೇಣಾ ನುಗ್ರಹೇಣ ಚ ॥ ೪೧ ॥

ಶ್ರೀಮತ್ಯೋ ರೂಪವತ್ಯಶ್ಚ ಪುತ್ರವತ್ಯೋ ನಿರಾಮಯಾಃ ।
ವೈಶ್ಯಕನ್ಯಾಶ್ಚಿರಂ ಕಾಲಂ ಜೀವಂತ್ಯೋಥ ಮೃತಿಂ ಗತಾಃ ॥ ೪೨ ॥

ತಾಸಾಂ ಪುತ್ರಾಶ್ಚ ಪೌತ್ರಾಶ್ಚ ಪಶ್ಚಾತ್ತದ್ವಂಶಸಂಭವಾಃ ।
ಸರ್ವೇ ಚ ಸ್ಕಂದವನ್ಮಾನ್ಯಾಃ ಸುತರಾಂ ಧರ್ಮತತ್ಪರಾಃ ॥ ೪೩ ॥

ಧನಿನೋ ದಾನಶೀಲಾಶ್ಚ ಸತತಂ ಪಾಪಭೀರವಃ ।
ಅಭವನ್ನಿರ್ಮಲಸ್ವಾಂತಾಃ ಸುಂದರೇಶಶಿವಾಜ್ಞಯಾ ॥ ೪೪ ॥

ವೈಶ್ಯವಂಶೋ ಮಹಾನಾಸೀತ್ತದಾ ಪ್ರಭೃತಿಭೂತಲೇ ।
ಏವಂ ವೈಶ್ಯವಪು ರ್ಧೃತ್ವಾ ಶ್ರೀಹಾಲಾಸ್ಯಪತಿಃ ಪ್ರಭುಃ ॥ ೪೫ ॥

---

೪೧–೪೩. ಶಿವನ ಕರಸ್ಪರ್ಶಮಾತ್ರ ರೂಪವಾದ ಅನುಗ್ರಹವನ್ನು ಹೊಂದಿದ ವೈಶ್ಯ ಕನ್ಯೆಯರು ಕಾಂತಿಯುಳ್ಳವರಾಗಿಯೂ, ಐಶ್ವರ್ಯವುಳ್ಳವರಾಗಿಯೂ, ಸೌಂದರ್ಯಶಾಲಿನಿಯರಾಗಿಯೂ, ರೋಗಬಾಧೆಯಿಲ್ಲದೆ ಪುತ್ರವತಿಯರಾಗಿ ಬಹಳ ಕಾಲ ಸುಖವಾಗಿದ್ದು ಅನಂತರ ಮೃತರಾದರು. ಅವರ ವಂಶದಲ್ಲಿ ಹುಟ್ಟಿದವರಾದ ಮಕ್ಕಳು, ಮೊಮ್ಮಕ್ಕಳು, ಅವರ ವಂಶದವರೆಲ್ಲರೂ ಕುಮಾರಸ್ವಾಮಿಯ ಹಾಗೆ, ಪೂಜಾರ್ಹರಾಗಿ, ಬಹಳಮಟ್ಟಿಗೆ ಧರ್ಮವನ್ನು ಆಚರಿಸುತ್ತಿದ್ದರು. ಮತ್ತು ಹಣಗಾರರಾಗಿ, ದಾನಶೀಲರಾಗಿ, ಯಾವಾಗಲೂ ಪಾಪಭೀರುಗಳಾಗಿದ್ದರು. ಸುಂದರೇಶ್ವರನ ಆಜ್ಞೆಯಿಂದ ಪರಿಶುದ್ಧವಾದ ಮನಸ್ಸುಳ್ಳವರಾಗಿದ್ದರು.

೪೪–೪೫. ಆ ಕಾಲಮೊದಲುಗೊಂಡು ಭೂಮಿಯಲ್ಲಿ ವೈಶ್ಯವಂಶವು ಬಹಳ ವೃದ್ಧಿಯನ್ನು ಹೊಂದಿತು. ಹಾಲಾಸ್ಯಪತಿಯಾದ ಪರಮೇಶ್ವರನು ಈ ಪ್ರಕಾರದಿಂದ ವೈಶ್ಯಶರೀರವನ್ನು ಧರಿಸಿ, ಶಾಪಗ್ರಸ್ತರಾಗಿ ವೈಶ್ಯಕನ್ಯೆಯರಾಗಿ ಹುಟ್ಟಿದವರನ್ನು ದಯೆಯಿಂದ ರಕ್ಷಿಸಿದನು.

ಶಾಪಜಾತಾ ವ್ವೈಶ್ಯಕನ್ಯಾಃ ಕಾರುಣ್ಯೇನ ಸ್ಮ ರಕ್ಷತಿ ।
ಶೃಣ್ವಂತಿ ಯೇ ವಲಯವಿಕ್ರಯ ಮಾದರೇಣ ।
ಸೌಮ್ಯೇಶ್ವರಸ್ಯ ಸತತಂ ಸಕಲೇಶ್ವರಸ್ಯ ।
ಸತ್ಪುತ್ರಮಿತ್ರಸಹಿತಾ ಸ್ಸುಖ ಮನ್ವಭೂಯ ।
ಯಾಸ್ಯಂತಿ ತೇ ಶಿವಪದಂ ಪುನರಕ್ಷಯಂ ಚ ॥ ೪೬ ॥

ಇತಿ ದ್ವಾತ್ರಿಂಶಿಕಾ ಲೀಲಾ ಕಥಿತಾ ಕಲ್ಮಷಾಪಹಾ ।
ಕನ್ಯಾ ಕನಕಭೂತ್ಯಾದಿಕಾಂಕ್ಷಿತಾರ್ಥಪ್ರದಾಯಿನೀ ॥ ೪೭ ॥

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ವಲಯವಿಕ್ರಯಂ ನಾಮ
ಅಷ್ಟತ್ರಿಂಶೋಽಧ್ಯಾಯಃ

---

೪೬-೪೭. ಪ್ರಪಂಚವೆಲ್ಲಕ್ಕೂ ಅಧಿಪತಿಯಾದ ಪರಮೇಶ್ವರನು ಆಚರಿಸಿದ ವಲಯ ವಿಕ್ರಯವನ್ನು ಆದರದಿಂದ ಕೇಳಿದವರು, ಗುಣವಂತರಾದ ಮಕ್ಕಳು ಮಿತ್ರರು ಇವರೊಡನೆ ಸುಖವನ್ನು ಅನುಭವಿಸಿ, ಅಕ್ಷಯವಾದ ಶಿವಪದವನ್ನು ಹೊಂದುವರು. ಪಾಪವನ್ನು ನಾಶಮಾಡುವ ಕನ್ಯಾ, ಕನಕ, ಐಶ್ವರ್ಯ ಇವೇ ಮೊದಲಾದ ಇಷ್ಟಗಳನ್ನು ಕೊಡುವ ಮೂವತ್ತೆರಡನೆಯ ಲೀಲೆಯನ್ನು ನಿಮಗೆ ಹೇಳಿರುವೆನು.

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆ
ಯಲ್ಲಿ ವಲಯ ವಿಕ್ರಯವೆಂದು ಹೆಸರುಳ್ಳ ಮೂವತ್ತೆಂಟನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ



## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಏಕೋನಚತ್ವಾರಿಂಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಅಷ್ಟಸಿದ್ಧ್ಯುಪದೇಶಂ ಚ ಯಕ್ಷಸ್ತ್ರೀಣಾಂ ಯಯಾ ಕರೋತ್ ।
ತಾಂ ಲೀಲಾಂ ಸಂಪ್ರವಕ್ಷ್ಯಾಮಿ ಸೋಮಸುಂದರ ಈಶ್ವರಃ ॥ ೧ ॥

ಶ್ರೀಮತ್ಕೈಲಾಸಮುಖ್ಯೇಷು ಶಿವಕ್ಷೇತ್ರೋತ್ತಮೇಷು ಚ ।
ಯದಾ ಲಿಂಗಸಮುತ್ಪತ್ತಿ ಸ್ತತ್ಪುರಾ ಸುಂದರಪ್ರಭುಃ ॥ ೨ ॥

ಸಪ್ತಪಾತಾಲಮೂಲಾತ್ತು ಲಿಂಗರೂಪೀ ಸಮುತ್ಥಿತಃ ।
ಮೂಲಲಿಂಗಮಿತಿ ಪ್ರಾಹು ಸ್ತಸ್ಮಾತ್ತತ್ಸನಕಾದಯಃ ॥ ೩ ॥

---

### ಮೂವತ್ತೊಂಬತ್ತನೆಯ ಅಧ್ಯಾಯವು

೧-೩. ಅಗಸ್ತ್ಯಋಷಿಯು ಹೇಳಿದನು:--ಸೋಮಸುಂದರೇಶ್ವರನು ಯಕ್ಷಸ್ತ್ರೀಯರಿಗೆ ಅಷ್ಟಸಿದ್ಧಿಗಳ ಉಪದೇಶವನ್ನು ಮಾಡಿದ ಲೀಲೆಯನ್ನು ಹೇಳುವೆನು. ಕೈಲಾಸಪರ್ವತವೇ ಮೊದಲಾದ ಉತ್ತಮ ಶಿವಕ್ಷೇತ್ರಗಳಲ್ಲಿ ಶಿವಲಿಂಗವು ಆವಿರ್ಭವಿಸುವುದಕ್ಕಿಂತಲೂ ಮುಂಚಿತವಾಗಿ ಸುಂದರೇಶ್ವರನು ಸಪ್ತಪಾತಾಳ ಮೂಲದಿಂದ ಶಿವಲಿಂಗ ರೂಪದಿಂದ ಆವಿರ್ಭವಿಸಿದನು. ಆದರಿಂದಲೇ ಹಾಲಾಸ್ಯೇಶ್ವರನನ್ನು ಮೂಲಲಿಂಗವೆಂದು ಸನಕಾದಿಗಳು ಹೇಳುವರು

ತದೇವಾಂಕುರಿತಂ ಲಿಂಗಂ ಕೈಲಾಸಾದಿ ಸ್ಥಲೇಷ್ವಪಿ ।
ತಸ್ಮಾತ್ ಸಮಸ್ತಲಿಂಗಸ್ಥ ಸ್ತಲ್ಲಿಂಗಸ್ಥಃ ಪರಃ ಶಿವಃ ॥ ೪ ॥

ಪರಿಪೂರ್ಣಃ ಸುಂದರೇಶಃ ಪರಾತ್ಪರತರಃ ಪ್ರಭುಃ ।
ಕೈಲಾಸಾದ್ಯಖಿಲಸ್ಥಾನೇ ಸಾನ್ನಿಧ್ಯ ಮಕರೋತ್ಸದಾ ॥ ೫ ॥

ಕೈಲಾಸವಾಸೀ ದೇವೇಶಃ ಕದಂಬವನನಾಯಕಃ ।
ವಟಮೂಲಾಸನೇ ಸ್ಥಿತ್ವಾ ಗಿರಾ ಮಧುರಯಾ ಯುತಃ ॥ ೬ ॥

ಶಿವಧರ್ಮಾ ನ್ಸಮಸ್ತಾಂಶ್ಚ ಸಕಲಾ ನಾಗಮಾನಪಿ ।
ತತ್ವಜ್ಞಾನಾನಿ ಶಾಸ್ತ್ರಾಣಿ ಶ್ರವಣಪ್ರಿಯದಾನಿ ಚ ॥ ೭ ॥

ನಂದಿಭೃಂಗಿಮಹಾಕಾಲಕುಂಭೋದರನಿ ಕುಂಭಕಾನ್ ।
ಅಪರಾ ಗಣನಾಥಾಂಶ್ಚ ವ್ಯಾಜೀಕೃತ್ಯಾ ವದತ್ಸ್ವಯಂ ॥ ೮ ॥

---

೪–೭. ಆ ಮೂಲಲಿಂಗವು ಅಂಕುರಭಾವವನ್ನು ವಹಿಸಿ ಕೈಲಾಸವೇ ಮೊದಲಾದ ಎಲ್ಲಾ ಕ್ಷೇತ್ರಗಳಲ್ಲಿಯೂ ಆವಿರ್ಭವಿಸಿರುವುದು. ಆದ್ದರಿಂದಲೇ ಎಲ್ಲಾ ಶಿವಲಿಂಗಗಳಲ್ಲಿಯೂ ಶಿವನು ಇರುವನು. ಆದರೆ ಮೂಲಲಿಂಗದಲ್ಲಿ ಪರಿಪೂರ್ಣಭಾವದಿಂದ, ಪರಾತ್ಪರತರನಾದ ಶಿವನು ಇರುವನು. ಕೈಲಾಸವೇ ಮೊದಲಾದ ಎಲ್ಲಾ ಶಿವಕ್ಷೇತ್ರಗಳಲ್ಲಿಯೂ ಶಿವಲಿಂಗಗಳಲ್ಲಿ ಯಾವಾಗಲೂ ಸಾನ್ನಿಧ್ಯದಿಂದ ಇರುವ ಶಿವನು ವಟವೃಕ್ಷದ ಮೂಲದಲ್ಲಿ ಯೋಗಾಸನದಲ್ಲಿರುತ್ತಾ, ಮಧುರವಾದ ಮಾತುಗಳಿಂದ, ಶಿವಧರ್ಮಗಳು, ಆಗಮಗಳು, ತತ್ತ್ವಜ್ಞಾನ ಬೋಧಕವಾದ ಶಾಸ್ತ್ರಗಳು, ಇವುಗಳನ್ನು ನಂದಿ, ಭೃಂಗಿ, ಮಹಾಕಾಳ, ಸಿಕುಂಭಕ, ಕುಂಡೋದರ ಇವರಿಗೂ ಬೇರೆಯುವರಾದ ಗಣಾಧಿಪರಿಗೂ ತಾನೇ ಪ್ರಪಂಚದ ಜ್ಞಾನವೃದ್ಧಿಗಾಗಿ ಉಪದೇಶ ಮಾಡಿದನು.

೮. ಸನಕ, ಸನಂದನ, ಸನತ್ಕುಮಾರ, ಸನಾತನರೆಂಬವರಿಗೂ ನಮಸ್ಕರಿಸಿ ಭಕ್ತಿಯಿಂದ ಕೇಳುತ್ತಿರುವ ಭಕ್ತರೆಲ್ಲರಿಗೂ ಶ್ರೇಷ್ಠವಾದ ಕಥೆಗಳನ್ನು ಹೇಳಿದನು.

ಸನತ್ಕುಮಾರಸನಕಸನಾತನಸನಂದನಾನ್ ।
ಪ್ರಣತಾನ್ ಸರ್ವಭಕ್ತಾಂಶ್ಚ ಪ್ರಾಹ ದಿವ್ಯಾಃ ಕಥಾಃ ಶುಭಾಃ ॥ ೯ ॥

ಸ್ಕಂದಸ್ಯ ಮಾತೃಸ್ಥಾನೀಯಾ ಯಕ್ಷಿಣ್ಯಃ ಷಟ್ಸ ಕೌತುಕಾಃ ।
ಭಸ್ಮೋದ್ಧೂಲಿತಸರ್ವಾಂಗಾ ರುದ್ರಾಕ್ಷಾಂಕ ಕಲೇಬರಾಃ ॥ ೧೦ ॥

ಜಟಿಲಾ ಭಕ್ತಿಸಂಯುಕ್ತಾಃ ಕೃತಲಿಂಗಾರ್ಚನಕ್ರಿಯಾಃ ।
ನಮಸ್ಕೃತ್ಯ ಮಹಾದೇವಂ ಪ್ರಾಹುಃ ಪ್ರಮುದಿತಾಶಯಾಃ ॥ ೧೧ ॥

ಭವಾಂಭೋಧಿಪರಿಧ್ವಂಸಿ ಪದಾಂಬುಜರಜಃಕಣ ।
ದೇವಾಷ್ಟಸಿದ್ಧೀರ್ನೋ ಬ್ರೂಹಿ ಕೃಪಾರಾಶೇ ಸುವಿಸ್ತರಂ ॥ ೧೨ ॥

ಶಂಸಂತೀಷು ಚ ತಾಸ್ವೇವಂ ಸರ್ವಜ್ಞಃ ಸುಂದರೇಶ್ವರಃ ।
ಪ್ರಸನ್ನವದನೋ ಭೂತ್ವಾ ಪ್ರಮಥೇಶಃ ಪಿನಾಕಧೃಕ್ ॥ ೧೩ ॥

---

೮–೧೦. ಕುಮಾರನಾದ ಷಣ್ಮುಖನಿಗೆ ತಾಯಿಯಂತೆ ಇರುವ ಆರು ಜನ ಯಕ್ಷಿಣಿಯರು ಬಹಳ ಕುತೂಹಲದಿಂದ ಕೂಡಿದವರಾಗಿ, ಭಸ್ಮವನ್ನು ಉದ್ಧೂಳನೆ ಮಾಡಿಕೊಂಡು ರುದ್ರಾಕ್ಷಿಗಳನ್ನು ಧರಿಸಿ, ಜಟೆಗಳುಳ್ಳವರಾಗಿ, ಭಕ್ತಿಯಿಂದ ಶಿವಲಿಂಗ ಪೂಜೆಯನ್ನು ಮಾಡುತ್ತಾ, ಮಹೇಶ್ವರನ ಸಮೀಪಕ್ಕೆ ಬಂದು ಪರಿಶುದ್ಧವಾದ ಮನಸ್ಸುಳ್ಳವರಾಗಿ ಮಾತನಾಡಿದರು.

೧೨–೧೩. "ಜನ್ಮ ಮರಣ ಪ್ರವಾಹ ರೂಪವಾದ ಸಂಸಾರವನ್ನು ನಿಲ್ಲಿಸತಕ್ಕ ಶಕ್ತಿಯು ನಿನ್ನ ಪಾದಧೂಳಿನಲ್ಲಿರುವುದು. ಎಲೈ ದೇವ ದೇವನೆ, ನೀನು ನಮಗೆ ಅಷ್ಟಸಿದ್ಧಿಗಳು ಉಂಟಾಗುವ ಕ್ರಮವನ್ನು ಉಪದೇಶಮಾಡು." ಎಂದು ಆ ಯಕ್ಷಿಣಿಯರು ಹೇಳಿದರು. ಪಿನಾಕ ಧನಸ್ಸನ್ನು ಧರಿಸಿ, ಪ್ರಮಥಗಣಗಳಿಗೆ ಅಧಿಪನಾದ ಸರ್ವಜ್ಞನಾದ ಸುಂದರೇಶ್ವರನು ಅವರ ಮಾತನ್ನು ಕೇಳಿ ಸಂತೋಷದಿಂದ ಹಾಗೇ ಆಗಲಿ, ಎಂದು ಒಪ್ಪಿಕೊಂಡು ಅಷ್ಟಸಿದ್ಧಿಕ್ರಮವನ್ನು ವಿಸ್ತಾರವಾಗಿ ಹೇಳಲು ಉಪಕ್ರಮಿಸಿದನು.

ತಥೇತಿ ಮುದಿತೋ ಭೂತ್ವಾ ಪ್ರಾಹ ವಿಸ್ತೃತ್ಯ ತಾಃ ಕ್ರಮಾತ್ ।

॥ ಈಶ್ವರ ಉವಾಚ ॥

ಪರಿಪೂರ್ಣಾ ಪರಾ ಶಕ್ತಿ ರ್ಮಾಯಾ ದ್ವೈತಾ ಮಹೇಶ್ವರೀ ॥ ೧೪ ॥

ಭಾವನಾಮಾತ್ರತ ಸ್ತುಷ್ಟಾ ಸಿದ್ಧೀ ಶ್ಚಾಷ್ಟೌ ಪ್ರಯಚ್ಛತಿ ।
ನವಾವರಣಸಂಯುಕ್ತಾಂ ನವನಾದಸ್ವರೂಪಿಣೀಂ ॥ ೧೫ ॥

ಯುಕ್ತಿಜ್ಞೋ ಭಾವಯಂಸ್ತ್ವಾಶು ಸೈವಾಹಮಿತಿ ಚಾರ್ಥ್ಯತಃ ।
ಅಷ್ಟಾಭಿ ರಣಿಮಾದ್ಯಾಭಿ ರನ್ಯಾಭಿ ಶ್ಶಕ್ತಿಭಿರ್ವೃತಾಂ ॥ ೧೬ ॥

ಮದಂಕಸನ್ನಿಷಣ್ಣಾಂ ತಾಂ ತರ್ಪಯಂತು ಸಪರ್ಯಯಾ ।
ಜ್ಞಾತೃಜ್ಞಾನಜ್ಞೇಯರೂಪಂ ಜಗತಾ ಮಾದಿಕಾರಣಂ ॥ ೧೭ ॥

ಪೂರ್ಣಾಹಂತಾತ್ಮಕಂ ಜ್ಯೋತಿ ಶ್ಶೀಲಯಂತು ಶಿವಾಪ್ತಯೇ ।
ಸಮಸ್ತದುಃಖಹಂತ್ರೀಂ ಚ ಸಮಸ್ತಾನಂದದಾಯಿನೀಂ ॥ ೧೮ ॥

---

೧೪-೧೭. ಈಶ್ವರನು ಹೇಳಿದನು:—ಪರಮಾತ್ಮ ಭಾವದಿಂದ ಪರಿಪೂರ್ಣಳಾಗಿ ಮಾಯಾವಿಶಿಷ್ಟಳಾದ ಪರಾಶಕ್ತಿಯು ಮಹೈಶ್ವರ್ಯವುಳ್ಳವಳಾಗಿರುವಳು. ಅವಳು ಭಾವನಾ ಮಾತ್ರದಿಂದ ಸಂತೋಷವನ್ನು ಹೊಂದಿ ಅಷ್ಟಸಿದ್ಧಿಗಳನ್ನು ಅನುಗ್ರಹಿಸುವಳು. ಈ ದೇವಿಯು ಒಂಭತ್ತು ಆವರಣಗಳಿಂದಕೂಡಿ ಇರುವಳು. ಒಂಭತ್ತು ವಿಧವಾದ ನಾದಸ್ವರೂಪದಿಂದ ಇರುವಳು. ಈ ದೇವಿಯನ್ನು ಧೃಢವಾದ ಸೋಽಹಂ ಭಾವನೆಯಿಂದ ಧ್ಯಾನಮಾಡಬೇಕು. ಅಣಿಮಾ, ಮಹಿಮಾ, ಇವೇ ಮೊದಲಾದ ಎಂಟು ವಿಧ ಶಕ್ತಿಗಳಿಂದ ಕೂಡಿರುವ ಈ ದೇವಿಯನ್ನು ನನ್ನ ತೊಡೆಯಮೇಲೆ ಇರುವಂತೆ ಭಾವನೆಮಾಡಿ ಪೂಜಿಸಬೇಕು. ಜ್ಞಾತೃ, ಜ್ಞಾನ, ಜ್ಞೇಯ, ಎಂಬ ತ್ರಿಪುಟಿಯ ರೂಪದಿಂದ ಇರುವ ಜ್ಞಾನವು ಜಗತ್ತಿನ ಉತ್ಪತ್ತ್ಯಾದಿಗಳಿಗೆ ಕಾರಣವಾಗಿರುವುದು. ಅಹಂಭಾವದಿಂದ ಪೂರ್ಣವಾದ ಜ್ಞಾನರೂಪವಾದ ತೇಜಸ್ಸನ್ನು ನೀವುಗಳು ಧ್ಯಾನಮಾಡಿರಿ. ಅದರಿಂದ ನಿಮಗೆ ಶ್ರೇಯಸ್ಸು ಉಂಟಾಗುವುದು.

೧೮-೨೦. ಈ ದೇವಿಯನ್ನು ಧ್ಯಾನಮಾಡಲು ಮೂಲಮಂತ್ರವನ್ನು ನೀವು ಜಪಮಾಡಬೇಕು. ಆ ಮಂತ್ರವು ಎಲ್ಲಾ ವಿಧವಾದ ದುಃಖಗಳನ್ನೂ ನಾಶಮಾಡಿ

ಮೂಲವಿದ್ಯಾಂ ಮಹಾದೇವ್ಯಾ ಜಪಂತ್ವ ಖಿಲಸಿದ್ಧಯೇ ।
ಇತ್ಯಾದಿನಾ ಮಹೇಶೇನ ವಚಸಾ ವಿಸ್ತರೇಣ ಚ ॥ ೧೯ ॥

ಸಿಧ್ಯುಪಾಯೇ ಸತಿ ಪ್ರೋಕ್ತೇ ಸರ್ವಜ್ಞೇನ ದಯಾಲುನಾ ।
ತಾಸ್ತು ಕರ್ಮವಶಾ ಚ್ಚ ಕ್ರ್ಯ ರ್ಯಕ್ಷಿಣ್ಯೋಽನವಧಾನತಾಂ ॥ ೨೦ ॥

ಪ್ರಮಾದಯುಕ್ತಾ ಸ್ತಾಃ ಸರ್ವಾ ಅಶಪದ್ವೃಷಭಧ್ವಜಃ ।
ಅನಾದರಯುತಾ ಯೂಯಂ ಜ್ಞಾನೋತ್ಪತ್ತಿ ರ್ನ ವೋಭವೇತ್ ॥ ೨೧ ॥

ತತಃ ಸ್ಥಾಸ್ಯಥ ಚಾ ಜ್ಞಾನಾ ಚ್ಛಿಲಾರೂಪಧರಾ ಭುವಿ ।
ಇತಿ ಶಪ್ತ್ವಾ ಮಹೇಶೇನ ವಟಮೂಲನಿವಾಸಿನಾ ॥ ೨೨ ॥

ಯಕ್ಷಿಣ್ಯೋ ವಿಪುಲಾಕಾರಾ ಸ್ಸರ್ವಾಃ ಕಂಪಿತವಿಗ್ರಹಾಃ ।
ಭೀತಾ ಸ್ಸಪದಿ ನಿರ್ದಗ್ಧಮಾನಸಾ ನಿಭೃತೇಂದ್ರಿಯಾಃ ॥ ೨೩ ॥

---

ಎಲ್ಲಾ ವಿಧವಾದ ಸಂತೋಷವನ್ನೂ ಉಂಟುಮಾಡುವುದು. ಈ ಮೂಲಮಂತ್ರವನ್ನು ಜಪಿಸುತ್ತಾ ದೇವಿಯನ್ನು ಅಹಂಭಾವನೆಯಿಂದ ಭಾವನೆ ಮಾಡುತ್ತಾ ಬಂದರೆ ನಿಮ್ಮ ಇಷ್ಟವು ಸಿದ್ಧವಾಗುವುದು." ಎಂದು ದಯಾಶಾಲಿಯಾದ ಪರಮೇಶ್ವರನು ವಿಸ್ತಾರವಾಗಿ ಉಪದೇಶಮಾಡುತ್ತಿರುವಾಗ ಆ ಯಕ್ಷಿಣಿಯರಿಗೆ ಅವರಜನ್ಮಾಂತರ ಕರ್ಮದಿಂದ ಚಿತ್ತೈಕಾಗ್ರತೆಯು ಉಂಟಾಗಲಿಲ್ಲ. ಪರಮೇಶ್ವರನು ಅವರ ಸೋಮಾರಿತನವನ್ನು ನೋಡಿ ಅವರಿಗೆ ಶಾಪವನ್ನು ಕೊಟ್ಟನು.

೨೧-೨೩. "ನೀವು ನಾನು ಉಪದೇಶ ಮಾಡುತ್ತಿರುವುದನ್ನು ಕೇಳುವುದರಲ್ಲಿ ತಿರಸ್ಕಾರವುಳ್ಳವರಾಗಿ ಇದ್ದೀರಿ. ಇದರಿಂದ ನಿಮಗೆ ಸರಿಯಾಗಿ ತಿಳುವಳಿಕೆಯು ಉಂಟಾಗುವುದಿಲ್ಲ. ಆದ್ದರಿಂದ ನೀವು ಅಜ್ಞಾನದಿಂದ ಕಲ್ಲಿನ ರೂಪವನ್ನು ಹೊಂದಿ ಭೂಮಿಯಲ್ಲಿ ಕೆಲವು ಕಾಲವನ್ನು ಕಳೆಯಿರಿ," ಎಂದು ವಟವೃಕ್ಷದ ಬುಡದಲ್ಲಿರುವ ಪರಮೇಶ್ವರನ ಶಾಪವನ್ನು ಕೇಳಿದ ಯಕ್ಷಿಣಿಯರಿಗೆ ಬಹಳ ಹೆದರಿಕೆಯು ಉಂಟಾಯಿತು. ಆಗ ಅವರು ದೊಡ್ಡ ಶರೀರವುಳ್ಳವರಾದ್ದರಿಂದ ಅವರೆಲ್ಲರೂ ಶಾಪದಿಂದ ನಡುಗುತ್ತಾ ಇದ್ದರು. ಕೂಡಲೆ ಮನಸ್ಸು ನಾಶವಾಗುತ್ತಾ, ಇಂದ್ರಿಯಗಳೆಲ್ಲವೂ

ಅಕುರ್ವಂ ಸ್ತೋತ್ರಜಾತಾನಿ ಶಿವಪ್ರೀತಿಕರಾಣಿ ಚ ।
ಪುನಃ ಶಶಂಸು ಸ್ತ್ವಾ ಸ್ಸರ್ವಾಃ ಕದಾ ಯಾಮ ಸ್ತ್ವಾಂ ತಿಕಂ ॥ ೨೪ ॥

ಕಸ್ಮಿನ್ದೇಶೇ ವಸಿಷ್ಯಾಮಃ ಪಾಷಾಣತ್ವಂ ಗತಾ ವಯಂ ।
ಇತ್ಯುಕ್ತೋ ಮುದಿತಾ ಸ್ತಾಭಿ ರೀಶಃ ಪಶುಪತಿ ಸ್ತದಾ ॥ ೨೫ ॥

ಪ್ರತಿಶಾಪಂ ದದೌ ತಾಭ್ಯಃ ಪ್ರಹರ್ಷ ಕೃಪಯಾನ್ವಿತಃ ।
ಶ್ರೀಪಟ್ಟಮಂಗಲಗ್ರಾಮಃ ಪಾಂಡ್ಯದೇಶೇಽಸ್ತಿ ಕಶ್ಚನ ॥ ೨೬ ॥

ಮಹಾ ನ್ವಟೋಽಸ್ತಿ ತತ್ರಾಢ್ಯ ಶ್ಶಾಖಾಭಿಃ ಕ್ರಾಂತಯೋಜನಃ ।
ದಿವ್ಯಶಕ್ತ್ಯಭಿಸಂಯುಕ್ತೋ ಮೇಘಮಾರ್ಗನಿರೋಧಕಃ ॥ ೨೭ ॥

ವಿಶಾಲದಲಸಂಪೂರ್ಣಃ ಪ್ರರೋಹಾನೇಕಸಂಯುತಃ ।
ತಸ್ಯಾಧ ಸ್ತಿಷ್ಠತ ಭ್ರಾಂತಾ ಶ್ಶಿಲಾಭಾವಸಮನ್ವಿತಾಃ ॥ ೨೮ ॥

---

ನಿಂತುಹೋಗಿ ಶಾಪಫಲರೂಪವಾದ ಪಾಷಾಣಭಾವ ಪ್ರಾಪ್ತಿಯಾಗಲು ಉಪಕ್ರಮವಾದ ಕಾರಣ ಶಿವನನ್ನು ಸಂತೋಷ ಪಡಿಸುವ, ಸ್ತೋತ್ರಗಳನ್ನು ಬಹಳವಾಗಿ ಹೇಳಿದರು. ಅನಂತರದಲ್ಲಿ "ನಿನ್ನ ಸಮೀಪಕ್ಕೆ ಬರುವ ಕಾಲವು ಯಾವುದು. ನಾವು ಶಿಲಾರೂಪದಿಂದ ಭೂಮಿಯಲ್ಲಿ ಯಾವ ಪ್ರದೇಶದಲ್ಲಿರತಕ್ಕದ್ದು." ಎಂದು ಶಿವನನ್ನು ಬೇಡಿಕೊಂಡರು.

೨೬–೨೮. ಆಗ ದಯಾಳುವಾದ ಪರಮೇಶ್ವರನು "ಪಾಂಡ್ಯದೇಶದಲ್ಲಿ ಪಟ್ಟಮಂಗಳಗ್ರಾಮವೆಂದು ಹೆಸರಿನ ಒಂದು ಗ್ರಾಮವಿರುವುದು. ಅದರಲ್ಲಿ ಒಂದು ಯೋಜನ ವಿಸ್ತಾರವಾಗಿರುವ ಕೊಂಬೆಗಳುಳ್ಳ ದೊಡ್ಡ ಆಲದಮರವಿರುವುದು. ಆ ಮರವು ಬಹಳ ಎತ್ತರವಾಗಿ ಮೇಘ ಮಾರ್ಗವನ್ನು ತಡೆದು ಇರುವುದು. ಆ ಮರದ ಎಲೆಗಳು ಬಹಳ ಅಗಲವಾಗಿರುವವು. ಆ ಮರದಿಂದ ಬಹಳ ಬಿಳಲುಗಳು ಉಂಟಾಗಿರುವವು. ನೆರಳಿನಿಂದ ಸುಖವಾಗಿರುವ ಆ ಆಲದಮರದ ಬುಡದಲ್ಲಿ ಭ್ರಾಂತಿಯಿಂದ ಶಿಲಾಭಾವವನ್ನು ಹೊಂದಿ ಇರುವ ನೀವು ಸೂಕ್ಷ್ಮಸ್ಥೂಲ ರೂಪಗಳಿಂದ ತಮೋಗುಣಯುಕ್ತರಾಗಿ ಒಂದು ಸಾವಿರ ವರ್ಷಗಳು ಶಾಪವನ್ನು ಅನುಭವಿಸಿರಿ.

ಅಂತರ್ಬಹಿಸ್ತವೋರೂಪಾಃ ಸಂವತ್ಸರಸಹಸ್ರಕಂ ।
ಅನಾದಿಕ್ಷೇತ್ರ ಮಮಲ ಮಾಖ್ಯಯಾ ಮಧುರಾಪುರಂ ॥ ೨೯ ॥

ಮದೀಯ ಮಸ್ತಿ ಭೂಲೋಕೇ ಮಹ ದತ್ಯಂತಪಾವನಂ ।
ತತ್ರಾಸ್ತಿ ಮನ್ಮೂಲಲಿಂಗಂ ಸುಂದರೇಶ್ವರಸಂಜ್ಞಿತಂ ॥ ೩೦ ॥

ತತ್ರ ಸಾನ್ನಿಧ್ಯಕೃನ್ನಿತ್ಯ ಮಸಂಖ್ಯಾತಯುಗಾದಿತಃ ।
ನಿರ್ಗತ್ಯ ತನ್ಮೂಲಲಿಂಗಾ ದಹಂ ಗುರುವಪು ರ್ದಧನ್ ॥ ೩೧ ॥

ತತ್ರಾ ಗತ್ಯ ಕರಿಷ್ಯಾಮಿ ಸಿದ್ಧೀನಾ ಮುಪದೇಶಕಂ ।
ತದಾ ಯೂಯಂ ಮುಕ್ತಶಾಪಾಃ ಪೂರ್ವರೂಪಂ ಮನೋಹರಂ ॥ ೩೨ ॥

ಲಬ್ಧ್ವಾ ಥ ಮಮ ಸಾಮೀಪ್ಯ ಮಾಗಮಿಷ್ಯಥ ಚಾಜ್ಞಯಾ ।
ಇತ್ಯುಕ್ತವತಿ ದೇವೇಶೇ ಖಿನ್ನಾಃ ಪ್ರೀತಾಶ್ಚ ತಾ ಜವಾತ್ ॥ ೩೩ ॥

ಯಕ್ಷಿಣ್ಯೋ ವಟ ಮಾಸ್ಯಾಶು ಪೇತುಃ ಪಾಷಾಣಮೂರ್ತಯಃ ।
ಗೋಷ್ಠೀಂ ಕೃತ್ವಾ ದಿದೇವಶ್ಚ ಗಣೇಶ್ವರಮುನೀಶ್ವರೈಃ ॥ ೩೪ ॥

---

೨೯–೩೩. ಪಾವನವಾದ, ಪುರಾತನವಾದ ಮಧುರಾಪುರವೆಂದು ಹೆಸರಿನ ಕ್ಷೇತ್ರದಲ್ಲಿ ಬಹಳ ಪರಿಶುದ್ಧವಾದ ಸುಂದರೇಶ್ವರನೆಂದು ಹೆಸರುಳ್ಳ ಶಿವಲಿಂಗವಿರುವುದು. ಅಲ್ಲಿ ಯಾವಾಗಲೂ ನನ್ನ ಸನ್ನಿಧಾನವನ್ನು ಕೊಟ್ಟಿರುವ ನಾನು ಗುರುವಿನ ರೂಪವನ್ನು ಧರಿಸಿ ಮೂಲಲಿಂಗದಿಂದ ಬಂದು ನಿಮಗೆ ಅಷ್ಟಸಿದ್ಧಿಗಳನ್ನು ಉಪದೇಶಮಾಡುವೆನು. ಆಗ ನಿಮಗೆ ಶಾಪವು ಕಳೆದು ಹೋಗಿ ನಿಮ್ಮ ಸುಂದರವಾದ ರೂಪವು ನಿಮಗೆ ಹಿಂದಿನಂತೆ ಬರುವುದು. ಆಗ ನನ್ನ ಅಪ್ಪಣೆಮೇರೆ ನನ್ನ ಸಮೀಪಕ್ಕೆ ಬನ್ನಿರಿ, " ಎಂದು ದೇವ ದೇವನು ಪ್ರತಿಶಾಪವನ್ನು ಕೊಡಲು, ಅದನ್ನು ಕೇಳಿದ ಯಕ್ಷಿಣಿಯರು ಶಾಪ, ಪ್ರತಿಶಾಪಗಳಿಂದ ಖೇದಹರ್ಷಯುಕ್ತರಾಗಿ ಬೇಗನೆ ಶಿಲಾಭಾವವನ್ನು ಹೊಂದಿ ವಟವೃಕ್ಷದ ಮೂಲಭಾಗವನ್ನು ಸೇರಿದರು.

೩೪–೩೭. ಆದಿದೇವನಾದ ಪರಮೇಶ್ವರನು ಗಣೇಶ್ವರರು, ಮತ್ತು ಮುನೀಶ್ವರರೊಡನೆ ಸಭೆಯನ್ನು ಮಾಡಿಕೊಂಡಿದ್ದು, ಸಭೆಯು ಮುಗಿದನಂತರ

ನಂದೀಶಾರ್ಪಿತಹಸ್ತ ಸ್ತ್ವಗದೇವ್ಯಾ ವಾಸ ಮಗಾತ್ತತಃ ।
ಸಹಸ್ರವತ್ಸರೇ ಯಾತೇ ಸುಂದರೇಶಃ ಕೃಪಾನಿಧಿಃ ॥ ೩೫ ॥

ಗುರುಮೂರ್ತಿಧರೋ ಗತ್ವಾ ಸಿದ್ಧೀಶ್ಚಾಷ್ಟಾ ವುಪಾದಿಶತ್ ।
ತಾಶ್ಚ ಸಿದ್ಧಿಪ್ರಭಾವೇನ ಸರ್ವತೋ ದಿಕ್ಷ್ವಥ ಕ್ರಮಾತ್ ॥ ೩೬ ॥

ಆಕಾಶಗಮನಾದೀನಿ ದರ್ಶಯಂತ್ಯೋ ಮುಹುರ್ಮುಹುಃ ।
ಪೂರ್ವರೂಪಂ ಚ ಸಂಪ್ರಾಪ್ಯ ಸರ್ವವಿಜ್ಞಾನಸಂಯುತಾಃ ॥ ೩೭ ॥

ಕೈಲಾಸಾಚಲ ಮಾಸಾದ್ಯ ಸಂಪ್ರಾಪು ಶ್ಶಂಕರಾಂತಿಕಂ ।
ಏವಂ ಶಂಭೋ ಸ್ತ್ರಯಸ್ತ್ರಿಂಶಲ್ಲೀಲಾ ವಃ ಸಂಪ್ರಕೀರ್ತಿತಾ ॥ ೩೮ ॥

ಸರ್ವಸಿದ್ಧಿಪ್ರದಾ ಸದ್ಯ ಶ್ಶ್ರವಣಾ ತ್ಪಠನಾದಪಿ ।

---

ನಂದೀಶ್ವರನ ಹಸ್ತದ (ಹಸ್ತಾವಲಂಬನೆಯಿಂದ) ಲ್ಲಿ ತನ್ನ ಹಸ್ತವನ್ನು ಇರಿಸಿಕೊಂಡು ದೇವಿಯಾದ ಪಾರ್ವತಿಯು ವಾಸಗೃಹಕ್ಕೆ ಹೊರಟನು. ಸಾವಿರ ವರ್ಷಗಳು ಕಳೆದ ನಂತರ, ದಯಾನಿಧಿಯಾದ ಸುಂದರೇಶನು ಗುರುವಿನ ಆಕೃತಿಯನ್ನು ಧರಿಸಿ ಅಷ್ಟ ಸಿದ್ಧಿಗಳನ್ನು ಹೊಂದುವ ಕ್ರಮವನ್ನು ಯಕ್ಷಿಣಿಯರಿಗೆ ಉಪದೇಶಮಾಡಿದನು. ಅವರು ಸಿದ್ಧಿಗಳ ಮಹಿಮೆಯಿಂದ ಎಲ್ಲಾ ದಿಕ್ಕುಗಳಲ್ಲಿಯೂ, ಎಲ್ಲಾ ಕಡೆಯಲ್ಲಿಯೂ ಪದೇ ಪದೇ ಆಕಾಶ ಗಮನವೇ ಮೊದಲಾದ ವಿದ್ಯೆಗಳನ್ನು ತೋರಿಸುತ್ತಾ, ತಮ್ಮ ಪೂರ್ವ ರೂಪವನ್ನು ಹೊಂದಿ, ತಮ್ಮ ಜ್ಞಾನದಿಂದ ಕೂಡಿದವರಾಗಿ, ಕೈಲಾಸಪರ್ವತದಲ್ಲಿರುವ ಶಿವನ ಸಮೀಪವನ್ನು ಹೊಂದಿದರು.

೩೮, ಶಿವನು ಆಚರಿಸಿದ ಮೂವತ್ತಮೂರನೆಯ ಲೀಲೆಯು ಓದಿದವರಿಗೂ, ಕೇಳಿದವರಿಗೂ ಆ ಕ್ಷಣದಲ್ಲಿ ಎಲ್ಲಾ ವಿಧವಾದ ಸಿದ್ಧಿಗಳನ್ನು ಉಂಟುಮಾಡುವುದಾಗಿ ರುವುದು. ಈ ಲೀಲೆಯನ್ನು ನಾನು ಹೇಳಿರುವೆನು.

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಅಷ್ಟಸಿದ್ಧ್ಯುಪದೇಶೋ ನಾಮ
ಏಕೋನಚತ್ವಾರಿಂಶೋಽಧ್ಯಾಯಃ

---

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆಯಲ್ಲಿ
ಅಷ್ಟಸಿದ್ಧ್ಯುಪದೇಶವೆಂದು ಹೆಸರುಳ್ಳ ಮೂವತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥
॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಚತ್ವಾರಿಂಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಕಾಂತಾರಚ್ಛೇದಿಚೋಳಾಯ ದ್ವಾರಭೇದಂ ಯಯಾ ಕರೋತ್
ತಾಂ ಲೀಲಾಂ ಸಂಪ್ರವಕ್ಷ್ಯಾಮಿ ಭಗವಾನ್ಸುಂದರೇಶ್ವರಃ ॥ ೧ ॥

ಕಾಂತಾರಚ್ಛೇದಕೋ ನಾಮ ಚೋಲಃ ಕಶ್ಚಿನ್ಮಹಾಪ್ರಭುಃ ।
ಮಹೇಶ್ವರೇತ್ಯಿಭಕ್ತಶ್ಚ ಸರ್ವಶಾಸ್ತ್ರಾರ್ಥತತ್ತ್ವವಿತ್ ॥ ೨ ॥

ಹಾರಕೇಯೂರಮುಕುಟಕುಂಡಲಾದಿವಿಭೂಷಣಂ ।
ಚಂದ್ರಚಂದನಕಸ್ತೂರೀಕುಂಕುಮಾದಿವಿಲೇಪನಂ ॥ ೩ ॥

---

## ನಲವತ್ತನೆಯ ಅಧ್ಯಾಯವು

೧–೫. ಅಗಸ್ತ್ಯಋಷಿಯು ಹೇಳಿದನು :— ಪೂಜ್ಯನಾದ ಸುಂದರೇಶ್ವರನು ಕಾಂತಾರಛೇದ ಚೋಳರಾಜನಿಗೆ ದೇವಾಲಯದ ಗರ್ಭಗೃಹದಲ್ಲಿ ತಾನು ಇದ್ದರೂ ಬಾಗಿಲಿಗೆ ಹಾಕಿದ್ದ ಬೀಗಮುದ್ರೆಗಳನ್ನು ತೆರೆದುಕೊಂಡು ದರ್ಶನವನ್ನು ಅನುಗ್ರಹಿಸಿದ ಲೀಲೆಯನ್ನು ನಿಮಗೆ ಹೇಳುವೆನು. ಅದನ್ನು ಕೇಳಿರಿ. ಕಾಂತಾರ ಚ್ಛೇದಕನೆಂದು ಹೆಸರಿನ ಚೋಳರಾಜನು ಪರಮೇಶ್ವರನಲ್ಲಿ ಬಹಳ ಭಕ್ತಿಯುಳ್ಳವ ನಾಗಿದ್ದನು. ಅವನು ಎಲ್ಲಾ ಶಾಸ್ತ್ರಗಳ ತತ್ತ್ವವನ್ನೂ ತಿಳಿದುಕೊಂಡು, ರಾಜನು

ವಿಹಾಯ ವಿದ್ಯಯಾ ಶಂಭೋ ರ್ವಿಭೂತ್ಯೋ ದ್ಧೂಳ್ಯವಿಗ್ರಹಂ ।
ದಧೌ ರುದ್ರಾಕ್ಷಮಾಲಾಭಿ ಸ್ತ್ರಿಪುಂಡ್ರಂ ಸರ್ವಸಂಧಿಷು ॥ ೪ ॥

ಸರ್ವೋಪಚಾರೈಃ ಸಂಪೂಜ್ಯ ಸತ್ಯಂ ಸಾಂಬಂ ಸದಾಶಿವಂ ।
ಜಪತಿ ಶ್ರದ್ಧಯಾ ನಿತ್ಯಂ ಶ್ರೀಮತ್ಪಂಚಾಕ್ಷರಂ ಮನುಂ ॥ ೫ ॥

ಯುಗಾಂತಕಾಲೇ ಕಾಮಾಕ್ಷ್ಯಾ ವಿಶೀರ್ಣಂ ಮಹದಾಲಯಂ ।
ನವೀಕರೋತಿ ತತ್ಸರ್ವಂ ಭಿತ್ವಾ ಕಾಂತಾರಮುದ್ಧೃತಂ ॥ ೬ ॥

ತದಾ ಪ್ರಭೃತಿ ಸರ್ವೇ ಚ ಕಾಂಚೀಪುರವರೇಶ್ವರಂ ।
ಕಾಂತಾರಚ್ಛೇದಕ ಇತಿ ಕಥಯಂತಿ ವಿಚಕ್ಷಣಾಃ ॥ ೭ ॥

ಕರ್ತುಂ ಕಂಪಾನದೀಸ್ನಾನಂ ಕಾಮಾಕ್ಷೀಪಾದುಕಾರ್ಚನಂ ।
ಕದಾಚಿದಾಗತಾಂ ಸ್ತತ್ರ ಪುರಾಣಜ್ಞಾ ನ್ಮುನೀಶ್ವರಾನ್ ॥ ೮ ॥

ಧರಿಸುವ ಹಾರ, ಭುಜಕೀರ್ತಿ, ಕಿರೀಟ, ಕುಂಡಲ ಇವೇ ಮೊದಲಾದ ಆಭರಣಗಳನ್ನೂ, ಪಚ್ಚಕರ್ಪೂರ, ಗಂಧ, ಕಸ್ತೂರಿ, ಕುಂಕುಮಕೇಸರಿ, ಇವೇ ಮೊದಲಾದ ಸುವಾಸನೆಯ ವಸ್ತುಗಳನ್ನೂ ಬಿಟ್ಟು, ವೈರಾಗ್ಯದಿಂದ ಇರುತ್ತಾ ಶಿವಧರ್ಮಾಚರಣೆಯಲ್ಲಿ ಆಸಕ್ತಿಯುಳ್ಳವನಾಗಿ, ಭಸ್ಮೋದ್ಧೂಳನೆಯನ್ನು ಮಾಡಿಕೊಂಡು ರುದ್ರಾಕ್ಷೆಗಳನ್ನು ಧರಿಸಿ, ಪಾರ್ವತೀಸಹಿತನಾದ ಪರಮೇಶ್ವರನನ್ನು ಎಲ್ಲಾ ವಿಧವಾದ ಉಪಚಾರಗಳಿಂದಲೂ ಪೂಜಿಸುತ್ತಾ, ಪಂಚಾಕ್ಷರ ಮಂತ್ರವನ್ನು ಜಪಮಾಡುತ್ತಿದ್ದನು.

೬–೭. ಪ್ರಳಯಕಾಲದಲ್ಲಿ ಕಾಮಾಕ್ಷೀದೇವಿಯ ದೇವಾಲಯವು ಜೀರ್ಣವಾಗಿದ್ದ ಕಾರಣ, ಅದರ ಸುತ್ತಲೂ ಇದ್ದ ಕಾಡನ್ನು ಕತ್ತರಿಸಿ, ಅದನ್ನು ಸರಿಮಾಡಿಸಿ, ಜೀರ್ಣೋದ್ಧಾರಮಾಡಿದ್ದರಿಂದ ಕಾಂಚೀನಗರಾಧೀಶನಾದ ಈ ರಾಜನನ್ನು ಕಾಂತಾರಚ್ಛೇದಿ ಚೋಳರಾಜನೆಂದು ಹೆಸರಿಟ್ಟು ಕರೆಯುತ್ತಿದ್ದರು.

೮–೧೨. ಹೀಗೆ ಇರುವಾಗ ಕಾಂಚೀನಗರಕ್ಕೆ ಬಂದು ಕಂಪಾನದಿಯಲ್ಲಿ ಸ್ನಾನಮಾಡಿ, ಕಾಮಾಕ್ಷೀದೇವಿಯ ಪಾದುಕಾರ್ಚನೆಯನ್ನು ಮಾಡುವುದಕ್ಕಾಗಿ ಬಂದಿರುವ

ಹಾಲಾಸ್ಯಕ್ಷೇತ್ರಮಾಹಾತ್ಮ್ಯಂ ತೀರ್ಥರಾಜಸ್ಯ ವೈಭವಂ ।
ಅನಾದಿಲಿಂಗವೈಶಿಷ್ಟ್ಯಂ ಶ್ರುತ್ವಾ ಭೂಪ ಸ್ಸುವಿಸ್ಮಿತಃ ॥ ೯ ॥

ಕದಾ ಹಾಲಾಸ್ಯ ಮಭ್ಯೇತ್ಯ ಸುಂದರೇಶ್ವರದರ್ಶನಾತ್ ।
ಕೃತಾರ್ಥೋಽಹಂ ಭವಿಷ್ಯಾಮೀ ತ್ಯೇವಂ ಚಿಂತಾರ್ಣವಂಗತಃ ॥ ೧೦ ॥

ಸುಂದರೇಶೋಽವದ ತ್ಸ್ವಪ್ನೇ ಭೂಪತೇ ರ್ಭಕ್ತವತ್ಸಲಃ ।
ಏಕಾಕಿನಾ ತ್ವಯಾ ಗತ್ಯ ಮಾಂ ದೃಷ್ಟ್ವಾ ಗಮ್ಯತಾಮಿತಿ ॥ ೧೧ ॥

ಸ ಬುಧ್ವಾ ಸಹಸೋತ್ಥಾಯ ವೇಷಾಂತರ ಮಥಾದ್ಭುತಂ ।
ಪರಿಗೃಹ್ಯ ಪರಾಜ್ಞಾತೋ ಮಧುರಾ ಮಾಯಯೌ ಕ್ಷಣಾತ್ ॥ ೧೨ ॥

ಕೂಲಂಕಷಾ ವೇಗವತೀ ತದಾನೀಂ ಪ್ರವಹದ್ಭೃಶಂ ।
ಸ ನದೀ ತರಣೇಽಶಕ್ತೋ ಮನಸ್ಯೇ ವ ಮಚಿಂತಯತ್ ॥ ೧೩ ॥

---

ಪುರಾಣಜ್ಞರಾದ ಮುನಿಗಳಿಂದ ಹಾಲಾಸ್ಯಕ್ಷೇತ್ರ, ಹೇಮಾಬ್ಜಿನೀತೀರ್ಥ, ಅನಾದಿಯಾಗಿರುವ ಹಾಲಾಸ್ಯೇಶ್ವರ ಇವುಗಳ ಮಹಿಮೆಯನ್ನು ಕೇಳಿ, ರಾಜನಿಗೆ ಆಶ್ಚರ್ಯವು ಉಂಟಾಯಿತು. ರಾಜನು "ನಾನು ಯಾವಾಗ ಹಾಲಾಸ್ಯಕ್ಷೇತ್ರಕ್ಕೆ ಹೋಗಿ, ಸುಂದರೇಶ್ವರನ ದರ್ಶನದಿಂದ ಕೃತಕೃತ್ಯನಾಗುವೆನು" ಎಂದು ಬಹಳವಾಗಿ ಯೋಚಿಸುತ್ತಿದ್ದನು. ಭಕ್ತವತ್ಸಲನಾದ ಸುಂದರೇಶ್ವರನು ಆ ರಾಜನ ಸ್ವಪ್ನದಲ್ಲಿ ಬಂದು "ನೀನು ಏಕಾಕಿಯಾಗಿ ಬಂದು ನನ್ನ ದರ್ಶನವನ್ನು ಮಾಡಿಕೊಂಡು ಹೋಗು" ಎಂದು ಹೇಳಿದನು. ಆಗ ರಾಜನು ಕೂಡಲೆ ಎಚ್ಚರಗೊಂಡು, ಆ ಕ್ಷಣದಲ್ಲಿಯೇ ಇತರರಿಗೆ ಆಶ್ಚರ್ಯವುಂಟಾಗುವಂತೆ ವೇಷವನ್ನು ಹಾಕಿಕೊಂಡು ಯಾರಿಗೂ ತಿಳಿಯದ ಹಾಗೆ ಮಧುರಾನಗರಕ್ಕೆ ಬಂದನು.

೧೩. ಆಗ ವೇಗವತೀನದಿಯಲ್ಲಿ ಪ್ರವಾಹವು ಹೆಚ್ಚಾಗಿ ಬಂದು ಹೊಳೆಯಲ್ಲಿ ನೀರೂ ಹೆಚ್ಚಾಗಿತ್ತು. ಅವನು ಹೊಳೆಯನ್ನು ದಾಟಲು ಶಕ್ತಿಯಿಲ್ಲದೆ ಯೋಚಿಸಿದನು.

ಯೇನ ಕೇನಾ ಪ್ಯುಪಾಯೇನ ತೀರ್ಣೇಯಂ ಚೇತ್ತರಂಗಿಣೀ ।
ಮಮ ಶತ್ರು ರ್ಮತ್ಸರವಾ ನ್ಮಧುರಾಪುರನಾಯಕಃ ॥ ೧೪ ॥

ಸಮಾಗತಂ ಮಾಂ ಜ್ಞಾತ ಶ್ಚೇದ್ಯುದ್ಧಂ ಸದ್ಯಃ ಕರಿಷ್ಯತಿ ।
ಕಥಂ ಜೇಷ್ಯಾಮಿ ಸಂಕ್ರುದ್ಧಾವುಭೌ ನೃಪನದೀರಯೌ ॥ ೧೫ ॥

ಕಾಂತಾರಚ್ಛೇದಕಃ ಖಿನ್ನೋ ನದ್ಯಾ ಉತ್ತರತೀರತಃ ।
ಏವಂ ಬಹೂನಿ ವಾಕ್ಯಾನಿ ಪ್ರೋಕ್ತ್ವಾ ಭಕ್ತ್ಯೇಶ ಮಬ್ರವೀತ್ ॥ ೧೬ ॥

ಹಾಲಾಸ್ಯವಾಸಿ ದೇವೇಶ ಹಾಲಾಹಲವಿಷಾಪಹ ।
ವಿಬುಧೇಶಾದಿವಿಬುಧೈಃ ಪರಿಪೂಜಿತಪಾದುಕ ॥ ೧೭ ॥

ತ್ವದೀಯಂ ಚ ಮಹಾಕ್ಷೇತ್ರಂ ವಿಮಾನಂ ದಿಗ್ಗಜೈ ರ್ಧೃತಂ ।
ಸ್ವಯಂ ಭೂತಂ ಮಹಾಲಿಂಗ ಮಮೃತಾಕಾರ ಮದ್ಭುತಂ ॥ ೧೮ ॥

---

೧೪–೧೬. "ನಾನು ಯಾವುದಾದರೂ ಒಂದು ಉಪಾಯದಿಂದ ಹೊಳೆಯನ್ನು ದಾಟಿಕೊಂಡು ಮಧುರಾನಗರಕ್ಕೆ ಸೇರಿದರೆ, ನನ್ನಲ್ಲಿ ದ್ವೇಷದಿಂದ ಇರುವ ಮಧುರಾನಗರದ ರಾಜನು ನನ್ನ ಸಂಗಡ ಯುದ್ಧವನ್ನು ಆ ಕ್ಷಣದಲ್ಲಿಯೇ ಮಾಡುವನು. ನದೀವೇಗವನ್ನೂ, ಕೋಪದಿಂದ ಇರುವ ರಾಜನನ್ನೂ ನಾನು ಹೇಗೆ ಜಯಿಸಬಲ್ಲೆನು" ಎಂದು ಕಾಂತಾರಚ್ಛೇದಿಚೋಳರಾಜನು ಮನಸ್ಸಿನಲ್ಲಿ ಖೇದಗೊಂಡು ವೇಗವತೀನದಿಯ ಉತ್ತರ ತೀರದಲ್ಲಿಯೇ ನಿಂತುಕೊಂಡು ಭಕ್ತಿಯಿಂದ ಬಹಳ ವಾಕ್ಯಗಳನ್ನು ಹೇಳುತ್ತಾ ಹಾಲಾಸ್ಯೇಶ್ವರನನ್ನು ಸ್ತೋತ್ರಮಾಡಿದನು.

೧೭–೧೮. "ಹಾಲಾಸ್ಯಕ್ಷೇತ್ರನಿವಾಸಿಯಾದ ದೇವ ದೇವನೆ, ನೀನು ಹಾಲಾಹಲವಿಷವನ್ನು ನಾಶಪಡಿಸಿ, ಇಂದ್ರನೇ ಮೊದಲಾದ ದೇವತೆಗಳಿಂದ ಪೂಜಿಸಲ್ಪಟ್ಟ ಪಾದಗಳುಳ್ಳವನಾಗಿರುತ್ತೀಯೆ. ನೀನು ವಾಸಮಾಡುವ ಪ್ರದೇಶವು ಮಹಾಕ್ಷೇತ್ರವಾಗಿರುವುದು. ನೀನು ಇರುವ ವಿಮಾನವನ್ನು ದಿಗ್ಗಜಗಳು ಧರಿಸಿರುವವು. ತನ್ನಷ್ಟಕ್ಕೆ ತಾನೆ ಆವಿರ್ಭೂತವಾಗಿರುವ ಅಮೃತಾಕಾರವಾದ, ಆಶ್ಚರ್ಯಕರವಾದ ಮಹಾಲಿಂಗವನ್ನು ನಾನು ದರ್ಶನಮಾಡಲು ಬಂದಿರುವೆನು. ಈ ನದಿಯೂ, ರಾಜನೂ

ದ್ರಷ್ಟುಂ ಸಮಾಗತೋಽಸ್ಮ್ಯದ್ಯ ಸಹ ತೇನ ನದೀನ್ನೃಪ ।
ಕಿಂ ಕರಿಷ್ಯಾಮಿ ಶಂಸ ತ್ವಂ ತ್ವಮೇವ ಶರಣಂ ಮಮ ॥ ೧೯ ॥

ದೀನಾನಿ ತಸ್ಯ ವಾಕ್ಯಾನಿ ಶ್ರುತ್ವಾ ಸುಂದರನಾಯಕಃ ।
ಭಕ್ತಂ ತಂ ರಕ್ಷಿತುಮನಾಃ ಕಾಂಚಿದೇವ ವ್ಯಧಾತ್ಕ್ರಿಯಾಂ ॥ ೨೦ ॥

ಸರ್ವಾಣಿ ಸಾಲದ್ವಾರಾಣಿ ಪಿಧಾಯ ದ್ವಾರರಕ್ಷಿಣಃ ।
ನಿಧಾಯ ಮೀನಮುದ್ರಾಂ ಚ ವಸತೀರಾಪ್ನುವಂ ಸ್ತದಾ ॥ ೨೧ ॥

ದ್ವಾರ ಮುತ್ತರಸಾಲಸ್ಯ ಮಧ್ಯೇ ಕೃತ್ವಾ ವಿಶಂಕಟಂ ।
ಸಿದ್ಧಂ ಮಹಾದ್ಭುತಂ ವೇಷಂ ಧೃತ್ವಾ ಗಚ್ಛತ್ಸ್ವಯಂ ಹರಃ ॥ ೨೧ ॥

ಕ್ಷಣಾತ್ಸ ವಾಲುಕಾಶೇಷಾಂ ಕೃತ್ವಾ ವೇಗವತೀಂ ನದೀಂ ।
ಕಾಂತಾರಚ್ಛೇದಕಂ ಭೂಪ ಮರ್ಧರಾತ್ರೇ ಸಮಾನಯತ್ ॥ ೨೨ ॥

---

ನನ್ನ ಉದ್ದೇಶವು ನೆರವೇರಲು ಅವಕಾಶವನ್ನು ಕೊಡುವುದಿಲ್ಲ. ಹೀಗೆ ಇರುವಾಗ ನಾನು ಏನು ಮಾಡುವುದಕ್ಕಾದೀತು? ನಿಜವಾಗಿಯೂ ನೀನೇ ನನಗೆ ರಕ್ಷಕನು. ನಿನ್ನ ದಯೆಯಿಂದಲೇ ನನ್ನ ಇಷ್ಟವು ನೆರವೇರತಕ್ಕದ್ದಾಗಿರುವುದು."

೨೦–೨೪. ಆಗ ಸುಂದರೇಶ್ವರನು ಕಾಂತಾರಚ್ಛೇದಿಚೋಳರಾಜನು ಹೇಳಿದ ಸಂಕಟಕರವಾದ ಮಾತನ್ನು ಕೇಳಿ, ಆ ಭಕ್ತನನ್ನು ರಕ್ಷಿಸುವುದಕ್ಕಾಗಿ ಒಂದು ಉಪಾಯವನ್ನು ಮಾಡಿದನು. ದೇವಸ್ಥಾನದ ಕಾವಲುಗಾರರು ಎಲ್ಲಾ ಬಾಗಿಲುಗಳನ್ನೂ ಹಾಕಿಕೊಂಡು, ಮೀನಿನ ಆಕಾರದ ಮುದ್ರೆಯನ್ನು ಹಾಕಿ, ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು. ಅನಂತರದಲ್ಲಿ ಹಾಲಾಸ್ಯೇಶ್ವರನು ದೇವಾಲಯದ ಉತ್ತರದಿಕ್ಕಿನ ಬಾಗಿಲಿನ ಮಧ್ಯದಲ್ಲಿ ದೊಡ್ಡದಾದ ಬಾಗಿಲನ್ನು ಹೊಸದಾಗಿ ಮಾಡಿಕೊಂಡು, ಸಿದ್ಧಪುರುಷನ ವೇಷದಿಂದ ತಾನೇ ತನ್ನ ಭಕ್ತನಾದ ಚೋಳರಾಜನು

ಸ್ನಾಪಯಿತ್ವಾ ಮಹಾತೀರ್ಥೇ ಮಹಾದೇವೋ ಮಹೀಪತಿಂ ।
ದೃಕ್ಪ್ರಸಾದಂ ದದೌ ತಸ್ಮೈ ದ್ರಷ್ಟುಂ ಸರ್ವಂ ತಮೋವೃತಃ ॥ ೨೩ ॥

ಪುರಾ ದೇವ್ಯಾಃ ಸುಮೀನಾಕ್ಷ್ಯಾ ಮೂರ್ತಿಂ ಚ ಕರುಣಾಮಯೀಂ ।
ವಿಮಾನಂ ದರ್ಶಯಾಮಾಸ ವಿಚಿತ್ರಮಪಿ ಮಂದಿರಂ ॥ ೨೪ ॥

ತಥಾ ಶ್ರೀಯುಂ ವಿಮಾನಂ ಚ ಗಜೈಶ್ಚ ಗಜವೈರಿಭಿಃ ।
ಗಣೈರ್ವಿಧೃತ ಮಾಶ್ಚರ್ಯಂ ಲಿಂಗಂ ಚಾದ್ಯ ಮದರ್ಶಯತ್ ॥ ೨೫ ॥

ತಲ್ಲಿಂಗದರ್ಶನಾ ದ್ಭೂಪಃ ಪುಲಕಾಂಚಿತದೇಹವಾನ್ ।
ವಾಚಾ ಗದ್ಗದಯಾ ಯುಕ್ತ ಶ್ಚಾಸೀ ದಾನಂದಜಾಶ್ರುಭಿಃ ॥ ೨೬

ಭಕ್ತ್ಯಾ ಪರವಶೋ ಭೂತ್ವಾ ಸ್ತೋತ್ರೈಃ ಪಂಚಾಕ್ಷರೇಣ ಚ ।
ಸ್ತುವನ್ ಜಪನ್ ಮುದಾ ಗಾಯ ನ್ನೃತ್ಯಂ ಸ್ತಸ್ಥೌ ತದಗ್ರತಃ ॥ ೨೭ ॥

---

ಇರುವ ಪ್ರದೇಶಕ್ಕೆ ಹೋದನು. ಒಂದು ಕ್ಷಣದಲ್ಲಿ ವೇಗವತೀನದಿಯ ಪ್ರವಾಹವು ಬತ್ತಿಹೋಯಿತು. ಆ ಚೋಳರಾಜನನ್ನು ಅರ್ಧರಾತ್ರಿಯಲ್ಲಿ ಅಲ್ಲಿಗೆ ಕರದುಕೊಂಡು ಬಂದು ಮಹಾತೀರ್ಥದಲ್ಲಿ ಸ್ನಾನಮಾಡಿಸಿ, ಕತ್ತಲೆಯಿಂದ ಇರುವ ದೇವಾಲಯದಲ್ಲಿ ಎಲ್ಲವನ್ನೂ ನೋಡುವುದಕ್ಕೆ ಅನಕೂಲವಾಗುವಂತೆ ದೃಷ್ಟಿಪಾಟವನ್ನು ಮಹಾದೇವನು ಅವನಿಗೆ ಅನುಗ್ರಹಿಸಿದನು.

೨೫–೨೯. ಅನಂತರದಲ್ಲಿ ಮೊದಲು ದಯಾಶಾಲಿಯಾದ ಮೀನಾಕ್ಷೀದೇವಿಯ ಮೂರ್ತಿಯನ್ನು ಆ ರಾಜನಿಗೆ ದರ್ಶನಮಾಡಿಸಿ, ಆಶ್ಚರ್ಯಕರವಾದ ದೇವಾಲಯದಲ್ಲಿ ಎಲ್ಲವನ್ನೂ ತೋರಿಸಿದನು. ಆನಂತರದಲ್ಲಿ ದಿಗ್ಗಜಗಳೂ, ಸಿಂಹಗಳೂ, ಧರಿಸಿರುವ ಪ್ರಮಥಗಣಗಳಿಂದ ರಕ್ಷಿತವಾದ ತನ್ನ ವಿಮಾನವನ್ನು ಆ ಸಿದ್ಧನು ರಾಜನಿಗೆ ತೋರಿಸಿದನು. ಅನಾದಿಯಾಗಿರುವ ಶಿವಲಿಂಗವನ್ನು ಅವನಿಗೆ ದರ್ಶನ ಮಾಡಿಸಿದನು. ಆಗ ಶಿವಲಿಂಗವನ್ನು ನೋಡಿದ ರಾಜನಿಗೆ ಶರೀರದಲ್ಲಿ ರೋಮಾಂಚವು ಉಂಟಾಗಿ, ಆನಂದ ಪರವಶವಾದ ಧ್ವನಿಯಿಂದ ಕೂಡಿದ ಆ ರಾಜನು ಆನಂದಬಾಷ್ಪಗಳನ್ನು ಸುರಿಸುತ್ತಾ

ತದ್ಭಕ್ತ್ಯತಿಶಯಂ ದೃಷ್ಟ್ವಾ ಭಕ್ತಚಿಂತಾಮಣಿಃ ಶಿವಃ ।
ಚಿಂತಿತಾರ್ಥಾನ್ ದದೌ ತಸ್ಮೈ ನಿಖಿಲಾ ನತಿದುರ್ಲಭಾನ್ ॥ ೨೮ ॥

ಅಸ್ಮದೀಯೇನ ಯೋದ್ಧುಂ ತೇ ಪಾಂಡ್ಯೇನಾ ದ್ಯ ಬಲಂ ನ ಹಿ ।
ಶೀಘ್ರಂ ಗಚ್ಛೇತಿ ತಂ ಪ್ರೋಚ್ಯ ಪ್ರಾಪಯ ತ್ತೀರ ಮುತ್ತರಂ ॥ ೨೯ ॥

ಅಥ ತಸ್ಯ ಲಲಾಟಂ ತು ಕೃತ್ವಾ ಭಸ್ಮಾ ಭಿರಾಮುಕಂ ।
ಅಂತರ್ದಧೇ ಸಿದ್ಧರೂಪೀ ಸುಂದರೇಶ್ವರ ಈಶ್ವರಃ ॥ ೩೦ ॥

ಸೋಽತಿ ವಿಸ್ಮಯಸಂಯುಕ್ತಃ ಕಾಂತಾರಚ್ಛೇದಭೂಪತಿಃ ।
ಸ್ಮರನ್ ಶಂಭೋಃ ಕೃಪಾ ಮಂತಃ ಸ್ವಕೀಯಂ ರಾಜ್ಯ ಮಾವಿಶತ್ ॥ ೩೧ ॥

ಸುಂದರೇಶಃ ಪುನಃ ಪ್ರಾಪ್ಯ ದ್ವಾರಭೇದಂ ಸ್ವಯಂ ಕೃತಂ ।
ಪಿಧಾಯ ವೃಷಮುದ್ರಾಂ ಚ ಕೃತ್ವಾ ಭಕ್ತಾರ್ತಿಭಂಜನಃ ॥ ೩೨ ॥

---

ಭಕ್ತಿಪರವಶನಾದನು. ಆಗ ಅವನು ಸ್ತೋತ್ರಮಾಡಿದನು. ಪಂಚಾಕ್ಷರ ಮಂತ್ರವನ್ನು ಜಪಿಸಿದನು. ಮೂಲಲಿಂಗವನ್ನು ಧ್ಯಾನಮಾಡಿದನು. ಆ ಶಿವಲಿಂಗದ ಮುಂದುಗಡೆಯಲ್ಲಿ ನರ್ತನ ಮಾಡಿದನು. ಆಗ ಭಕ್ತರಿಗೆ ಬೇಕಾದ್ದನ್ನು ಕೊಡುವ ಪರಮೇಶ್ವರನು ಇತರರು ಹೊಂದಲಶಕ್ಯವಾದ ಎಲ್ಲಾ ಇಷ್ಟಾರ್ಥಗಳನ್ನೂ ಅವನಿಗೆ ಅನುಗ್ರಹಿಸಿದನು.

೩೯-೩೧. ಸುಂದರೇಶ್ವರನು "ಎಲೈ ರಾಜನೆ, ನಮ್ಮ ಪಾಂಡ್ಯರಾಜನ ಸಂಗಡ ಯುದ್ಧಮಾಡಲು ನಿನಗೆ ಶಕ್ತಿಯಿಲ್ಲವಾದ ಕಾರಣ ನೀನು ಬೇಗನೆ ಹೋಗು." ಎಂದು ಹೇಳಿ ಅವನನ್ನು ವೇಗವತೀನದಿಯ ಆಚೆ ಪಕ್ಕಕ್ಕೆ ಕಳುಹಿಸಿಕೊಟ್ಟನು. ಆಗ ಅವನ ಹಣೆಗೆ ಭಸ್ಮದಿಂದ ರಕ್ಷೆಯನ್ನು ಮಾಡಿ, ಸಿದ್ಧರೂಪದಿಂದ ಅದೃಶ್ಯನಾದನು.

೩೨-೩೬. ಕಾಂತಾರಚ್ಛೇದಚೋಳರಾಜನು ಸಿದ್ಧಪುರುಷನು ಮಾಡಿದ ಕೆಲಸವನ್ನು ನೋಡಿ, ಆಶ್ಚರ್ಯವುಳ್ಳವನಾಗಿ ಶಿವನಿಗೆ ತನ್ನಲ್ಲಿರುವ ದಯೆಯನ್ನು ಮನಸ್ಸಿನಲ್ಲಿ ಯೋಚಿಸುತ್ತಾ ತನ್ನ ರಾಜ್ಯವನ್ನು ಸುಖವಾಗಿ ಸೇರಿದನು. ಸುಂದ

ಸ್ವಪ್ರಾಸಾದಂ ಸಮಾಸಾದ್ಯ ದೇವ್ಯಾ ಶಫರನೇತ್ರಯಾ ।
ಮನೋಜ್ಞಮಂಚಮಧ್ಯೇ ತು ಮಹಾದೇವಃ ಸುಖಂ ಸ್ಥಿತಃ ॥ ೩೩ ॥

ಕುಲಭೂಷಣಭೂಪಾಲ ಸ್ತದಾ ಪಾಂಡ್ಯಮಹೀಪತಿಃ ।
ಪ್ರಾತಃ ಕವಾಟಭೇದಂ ಚ ಮುದ್ರಾಭೇದಂ ಚ ಪಾಲಕಾಃ ॥ ೩೪ ॥

ವಿಜ್ಞಾಯ ರಾಜ್ಞೇ ವಿಜ್ಞಪ್ತಿಂ ಚಕ್ರು ಸ್ಸ ಸ್ತಿಮಿತೋಽಭವತ್ ।
ವಿಚಾರಯಂತು ಯೂಯಂ ದ್ರಾಗಿ ತ್ಯುಕ್ತವತಿ ಭೂಭುಜಿ ॥ ೩೫ ॥

ಸರ್ವೇ ವಿಚಾರ್ಯ ಸರ್ವತ್ರ ನಾ ಸ್ಮಾಭಿಃ ಜ್ಞಾಯತೇ ನೃಪ ।
ಕೇನೈವಂ ಕೃತ ಮಿತ್ಯತ್ರ ಜ್ಞಾತಾ ಚೇದೀಶ ಏವ ಹಿ ॥ ೩೬ ॥

ಇತ್ಯುಕ್ತ್ವೋ ಭುಕ್ತ ಏವಾ ರ್ತ ಶ್ಶೇತೇ ಭೂಮೌ ಮಹೀಪತಿಃ ।
ಜ್ಞಾತಾರ್ಥ ಮಕರೋ ದ್ಧೂಪಂ ರಾಜೇಂದ್ರಂ ರಾಜಪೂಜಿತಂ ॥ ೩೭ ॥

---

ರೇಶ್ವರನು ತಾನು ಮಾಡಿರುವ ದಾರಿಯಿಂದ ಹಿಂದಕ್ಕೆ ಬಂದು, ತಾನು ತೆಗೆದಿರುವ ಬಾಗಿಲನ್ನು ಮುಚ್ಚಿಕೊಂಡು, ವೃಷಭದ ಮುದ್ರೆಯನ್ನು ಹಾಕಿ, ತನ್ನ ಮನೆಯಲ್ಲಿ ಮನೋಹರವಾದ ಮಂಚದಲ್ಲಿರುವ ಮೀನಾಕ್ಷೀದೇವಿಯೊಡನೆ ಸುಖದಿಂದ ಇದ್ದನು. ಆಗ ಕುಲಭೂಷಣನೆಂದು ಹೆಸರುಳ್ಳ ರಾಜನು ಪಾಂಡ್ಯದೇಶಕ್ಕೆ ದೊರೆಯಾಗಿದ್ದನು. ದೇವಾಲಯದ ಬಾಗಿಲು ಮೊದಲು ಹಾಕಿದಂತೆ ಇರಲಿಲ್ಲ. ಹಾಕಿದ ಮುದ್ರೆಗೆ ಬದಲಾಗಿ ಬೇರೆಯ ಮುದ್ರೆಯು ಇತ್ತು. ಇದನ್ನು ನೋಡಿದ ದೇವಾಲಯದ ಕಾವಲುಗಾರನು ಬೆಳಗಾದಕೂಡಲೆ ರಾಜನಿಗೆ ವಿಜ್ಞಾಪಿಸಿಕೊಂಡನು. ಅದನ್ನು ಕೇಳಿದ ರಾಜನು ಆಹಾರವನ್ನು ತೆಗೆದುಕೋಳ್ಳದೆ ಸಂಕಟದಿಂದ ಸುಮ್ಮನೆ ಮಲಗಿಕೊಂಡನು. ಅನಂತರದಲ್ಲಿ ರಾಜನು " ಬೇಗನೆ ನೀವು ಹೀಗಾಗಲು ಕಾರಣವನ್ನು ವಿಚಾರಮಾಡಬೇಕು " ಎಂದು ಆಜ್ಞೆಮಾಡಿದನು.

೩೭–೪೦. ಎಲ್ಲರೂ ವಿಚಾರಮಾಡಿ, ನಮಗೆ ಯಾವುದೂ ತಿಳಿಯಲಿಲ್ಲವಾದ ಕಾರಣ ಈ ಕೆಲಸ ಮಾಡಿದವರನ್ನು ಪರಮೇಶ್ವರನೇ ತಿಳಿದಿರುವನು. ಎಂದು ರಾಜನಿಗೆ ಅವರು ತಿಳಿಸಿದರು. ಆ ಮಾತನ್ನು ಕೇಳಿ ಕುಲಭೂಷಣರಾಜನು ಸಂಕಟದಿಂದ

ಭೂಲೋಕಶಿವಲೋಕೇಶಃ ಸ್ವಸ್ನೇ ಕೃತ್ರಿಮ ಕೃಚ್ಛಿವಃ ।
ಸದ್ಯ ಉತ್ಥಾಯ ಮಂತ್ರಿಭ್ಯ ಸ್ಸುಂದರೇಶೋಕ್ತಮಬ್ರವೀನ್ ॥ ೩೮ ॥

ಅಸ್ತುವನ್ ಭಕ್ತವಾತ್ಸಲ್ಯಂ ತೇ ಸರ್ವೇ ಸುಂದರಪ್ರಭೋಃ ।
ಪೂರ್ವಸ್ಮಾದಭವದ್ಭಕ್ತಃ ಕುಲಭೂಷಣ ಈಶ್ವರೇ ॥ ೩೯ ॥

ದೀರ್ಘ ಮಾಯುಶ್ಚ ಕಾಮಾಂಶ್ಚ ತಸ್ಮೈ ರಾಜ್ಞೇ ಶಿವೋ ದದೌ ।
ಕಾಂತಾರಚ್ಛೇದಕಾರ್ಥಂ ಯತ್ಕೃತಂ ಕರ್ಮೇಶ್ವರೇಣ ಚ ॥ ೪೦ ॥

ತಚ್ಛೃಣೋತಿ ಸಕೃದ್ಯಸ್ತು ತಂ ಕಾಂತಾರಂ ನ ಭಾಧತೇ ।
ಸುಂದರೇಶಚತುಸ್ತ್ರಿಂಶಲೀಲಾ ಯುಷ್ಮಾಕ ಮೀರಿತಾ ॥ ೪೧ ॥
ಸರ್ವಕಾಮಪ್ರದಾ ಸದ್ಯಃ ಕಾಮಧೇನು ರಿವಾಪರಾ ।

---

ಭೂಮಿಯಲ್ಲಿ ಮಲಗಿದನು. ಈ ಕಪಟಕಾರ್ಯವನ್ನು ಮಾಡಿದ ಭೂಲೋಕ ಶಿವ ಲೋಕೇಶನಾದ ಶಿವನು ರಾಜಪೂಜಿತನಾದ ಕುಲಭೂಷಣರಾಜನಿಗೆ ಎಲ್ಲವನ್ನೂ ತಿಳಿಸಿದನು. ಅದನ್ನು ಕೇಳಿ ಅವರೆಲ್ಲರೂ ದೇವದೇವನಿಗೆ ಇರುವ ಭಕ್ತರ ವಿಷಯವಾದ ಪ್ರೀತಿಯನ್ನು ಹೊಗಳಿದರು. ಕುಲಭೂಷಣರಾಜನು ಮೊದಲಿಗಿಂತಲೂ ಹೆಚ್ಚಾದ ಭಕ್ತಿಯನ್ನು ಶಿವನಲ್ಲಿ ಹೊಂದಿದನು.

೪೧–೪೨. ಶಿವನು ಆ ರಾಜನಿಗೆ ದೀರ್ಘಾಯುಸ್ಸನ್ನೂ ಅವನಿಗೆ ಬೇಕಾದ ಇಷ್ಟಾರ್ಥಗಳನ್ನೂ ಅನುಗ್ರಹಿಸಿದನು. ಕಾಂತಾರಚ್ಛೇದಚೋಳರಾಜನಿಗಾಗಿ ಹಾಲಾಸ್ಯೇಶ್ವರನು ಮಾಡಿದ ಕಾರ್ಯವನ್ನು ಒಂದು ಸಾರಿಯಾದರೂ ಕೇಳಿದವನು ಕಾಡಿನಿಂದ ಉಂಟಾಗುವ ಭಯವನ್ನು ಹೊಂದಲಾರನು. ಪ್ರಸಿದ್ಧವಾದ ಕಾಮಧೇನುವಿನಂತೆ ಇಷ್ಟಾರ್ಥವನ್ನು ಕೊಡುವುದರಲ್ಲಿ ಬೇರೆಯ ಕಾಮಧೇನುವಾಗಿರುವ, ಎಲ್ಲಾ ಇಷ್ಟಾರ್ಥಗಳನ್ನೂ ಕೊಡುವ ಸುಂದರೇಶ್ವರನ ಮೂವತ್ತನಾಲ್ಕನೆಯ ಲೀಲೆಯನ್ನು ನಿಮಗೆ ತಿಳಿಸಿರುವೆನು.

**ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಕಾಂತಾರಚ್ಛೇದಿಚೋಲಾರ್ಥದ್ವಾರಭೇದೋ ನಾಮ ಚತ್ವಾರಿಂಶೋಽಧ್ಯಾಯಃ**

---

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ ಕಾಂತಾರಚ್ಛೇದಿ ಚೋಳಾರ್ಥದ್ವಾರ ಭೇದವೆಂದು ಹೆಸರುಳ್ಳ ನಾಲ್ವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಏಕಚತ್ವಾರಿಂಶೋಽಧ್ಯಾಯಃ



॥ ಅಗಸ್ತ್ಯ ಉವಾಚ ॥

ಕುಲಭೂಷಣಭೂಪಾಲೇ ಸಂಪ್ರಾಪ್ತೇ ಶಾಂಭವಂ ಪದಂ ।
ರಾಜಾ ಭವತ್ತಸ್ಯ ಪುತ್ರೋ ರಾಜೇಂದ್ರೋ ಮಧುರಾಪುರೇ ॥ ೧ ॥

ಶೌರ್ಯಾದಿಸದ್ಗುಣೋಪೇತಃ ಸಾಮಂತಗಣಸಂವೃತಃ ।
ರೂಪೇಣ ಜಿತಕಾಮಸ್ಸನ್ರಾಜ್ಯಂ ಚಕ್ರೇ ಸನೀತಿಕಂ ॥ ೨ ॥

ಕಾಂತಾರಚ್ಛಿನ್ಮಹೀಪಾಲ ಸ್ಸಂಬಂಧಂ ಕರ್ತುಮುದ್ಯತಃ ।
ದಾತುಂ ಸ್ವಪುತ್ರೀಂ ಪಾಂಡ್ಯಾಯ ಪ್ರಾಹಿಣೋ ತ್ಪ್ರಾಪ್ತ ಮಾಪ್ತಕಂ ॥ ೩ ॥

---

### ನಲವತ್ತೊಂದನೆಯ ಅಧ್ಯಾಯವು

೧–೨. ಅಗಸ್ತ್ಯಋಷಿಯು ಹೇಳಿದನು:—ಕುಲಭೂಷಣರಾಜನು ಶಿವನ ಸಾಯುಜ್ಯವನ್ನು ಹೊಂದಿದನಂತರ ಅವನ ಮಗನಾದ ರಾಜೇಂದ್ರಪಾಂಡ್ಯನು ಮಧುರಾನಗರಕ್ಕೆ ರಾಜನಾಗಿದ್ದನು. ಅವನು ಶೌರ್ಯವೇ ಮೊದಲಾದ ಗುಣಗಳಿಂದ ಕೂಡಿದವನಾಗಿ ಸಾಮಂತರಾಜರ ಗುಂಪಿನಿಂದ ಕೂಡಿ, ಮನ್ಮಥನನ್ನು ಮೀರಿದ ರೂಪವುಳ್ಳವನಾಗಿ ಇರುತ್ತಾ ನೀತಿಶಾಸ್ತ್ರಕ್ಕನುಸಾರವಾಗಿ ರಾಜ್ಯವನ್ನಾಳುತ್ತಿದ್ದನು.

೩–೪. ಕಾಂತಾರಚ್ಛೇದಚೋಳರಾಜನು ತನ್ನ ಮಗಳನ್ನು ಪಾಂಡ್ಯರಾಜನಿಗೆ ಕೊಟ್ಟು ವಿವಾಹಮಾಡಿ ತನ್ಮೂಲಕ ಸಂಬಂಧವನ್ನು ಬೆಳೆಸಲು ಇಚ್ಛೆಯಿಂದ ಆಪ್ತ

ತಚ್ಛ್ರುತ್ವಾ ಪಾಂಡ್ಯಭೂಪಾಲಃ ಸೋತ್ಕರ್ಷಾದಿಗುಣಾನ್ವಿತಂ ।
ಸಂಪ್ರಾಹಿಣೋ ತ್ಪ್ರವೃತಾನಿ ಚೋಲಾಯ ಮಹಿತಾತ್ಮನೆ ॥ ೪ ॥

ಸ ಚ ಪ್ರತಿಪ್ರಾವೃತಕಂ ಪಾಂಡ್ಯೇಶಾಯ ದದೌ ಮುದಾ ।
ಏವಂ ಗಚ್ಛತಿ ಕಾಲೇ ತು ರಾಜೇಂದ್ರಸ್ಯಾನುಜಃ ಖಲಃ ॥ ೫ ॥

ರಾಜಸಿಂಹ ಇತಿ ಖ್ಯಾತಃ ಪರಾಕ್ರಮವಿಶೇಷವಾನ್ ।
ಚೋಳಕನ್ಯಾಂ ಸಮಾದಾತುಂ ಸಸೈನ್ಯಃ ಪ್ರಯಯೌ ಸ್ವಯಂ ॥ ೬ ॥

ಸ್ವಬಲಂ ತದ್ಬಲಂ ಚಾಪಿ ಕಾಂಚೀನಾಥೋ ವಿಚಾರ್ಯ ಚ ।
ದಾತು ಮುದ್ಯೋಗ ಮಕರೋ ತ್ತಸ್ಮೈ ಪುತ್ರೀಂ ಸುಶೋಭನಾಂ ॥ ೭ ॥

ಅಥಾ ಭಿಮುಖ ಮಾಗತ್ಯ ಪಾಂಡ್ಯಭೂಪಾನುಜಸ್ಯ ಸಃ ।
ತಂ ಪೂಜ್ಯ ಚ ಯಥಾನ್ಯಾಯಂ ಹೇಮಪುಷ್ಪೈಶ್ಚ ಮೌಕ್ತಿಕೈಃ ॥ ೮ ॥

---

ನಾದವನನ್ನು ಕಳುಹಿಸಿದನು. ಅದನ್ನು ಕೇಳಿ ಪಾಂಡ್ಯರಾಜನು ಗುಣವಂತರಾದ ದೂತರೊಡನೆ ಚೋಳರಾಜನಿಗೆ ಮರ್ಯಾದೆಯನ್ನು ಕಳುಹಿಸಿದನು. ಇದಕ್ಕೆ ಪ್ರತಿಯಾಗಿ ಚೋಳರಾಜನೂ ಮರ್ಯಾದೆಗಳನ್ನು ಕಳುಹಿಸಿದನು.

ಹೀಗೆಯೇ ಕೆಲವುಕಾಲ ಕಳೆದನಂತರ ರಾಜೇಂದ್ರಪಾಂಡ್ಯನ ತಮ್ಮನಾದ ಶೂರನಾದ ರಾಜಸಿಂಹನೆಂಬುವನು ಚೋಳರಾಜನ ಮಗಳನ್ನು ಮದುವೆಮಾಡಿಕೊಳ್ಳಲು ಸೇನಾಸಮೇತನಾಗಿ ಕಾಂಚೀನಗರಕ್ಕೆ ಹೋದನು. ಕಾಂಚೀರಾಜನು ತನ್ನ ಶಕ್ತಿಯನ್ನೂ, ಅವನ ಶಕ್ತಿಯನ್ನೂ ವಿಚಾರಮಾಡಿಕೊಂಡು ಮಂಗಳಕರಳಾದ ತನ್ನ ಮಗಳನ್ನು ಅವನಿಗೆ ಕೊಟ್ಟು ಮದುವೆ ಮಾಡಲು ಯತ್ನಮಾಡಿದನು.

೭-೧೧. ಅನಂತರದಲ್ಲಿ ಚೋಳರಾಜನು ಪಾಂಡ್ಯರಾಜನ ತಮ್ಮನಾದ ರಾಜಸಿಂಹನನ್ನು ಎದುರುಗೊಂಡು ಚಿನ್ನದ ಹೂವು ಮತ್ತು ಮುತ್ತುಗಳಿಂದ ಅವನಿಗೆ ಮರ್ಯಾದೆಮಾಡಿ, ಕುಬೇರನಂತೆ ಪ್ರಕಾಶಿಸುತ್ತಿರುವ ರಾಜಸಿಂಹನನ್ನು ಭೂದೇವಿಗೆ ಡಾಬಿನಂತಿರುವ ಕಾಂಚೀನಗರಕ್ಕೆ ಕರೆದುಕೊಂಡು ಹೋದನು. ಚೋಳರಾಜನು

**ರಾಜಸಿಂಹೇನ ಸಹಿತೋ ರಾಜರಾಜನಿಭ ಶ್ರಿಯಾ ।**
**ಕಾಂಚೀಂ ಚೋಳೇಶ್ವರಃ ಪ್ರಾಪ ಭುವಃ ಕಾಂಚೀ ಮಿವ ಸ್ಥಿತಾಂ ॥ ೯ ॥**

**ಮಹಿಮ್ನ ಸ್ಸ್ವಸ್ಯ ತಸ್ಯಾಪಿ ಸದೃಶೀ ಮುತ್ಸವಕ್ರಿಯಾಂ ।**
**ಅಕರೋದ್ವರವೇಷಾಂ ತಾಂ ಕನ್ಯಾಂ ದತ್ವಾ ವರಾಯ ಸಃ ॥ ೧೦ ॥**

**ಜಾಮಾತ್ರಾ ರಾಜಸಿಂಹೇನ ಸಹಿತ ಶ್ಚೋಳಭೂಪತಿಃ ।**
**ಜೇತು ಮೈಚ್ಛತ್ಪಾಂಡ್ಯಭೂಪಂ ದಿನೈಃ ಕತಿಪಯೈ ರಥ ॥ ೧೧ ॥**

**ಜ್ಯೇಷ್ಠಾಯ ನಿಶ್ಚಿತಾಂ ಕನ್ಯಾಂ ಗೃಹೀತ್ವಾ ಸೋನುಜಾಧಮಃ ।**
**ಜ್ಯೇಷ್ಠಂ ಪ್ರಹರ್ತು ಮಕರೋ ದುದ್ಯೋಗಂ ಚೋಳಭೂಭುಜಾ ॥ ೧೨ ॥**

**ಉಭಾವಪಿ ಸುಸನ್ನದ್ಧೌ ಚತುರಂಗಬಲಾನ್ವಿತೌ ।**
**ಆಯಾತೌ ಮಧುರಾಪುರ್ಯಾ ಯೋಜನದ್ವಯಮಾತ್ರಕೇ ॥ ೧೩ ॥**

**ಅತಿಶೂರಂ ಸೈನ್ಯವಂತಂ ಚೋಳರಾಜಸಮನ್ವಿತಂ ।**
**ಆಕರ್ಣ್ಯ ಯಾಂತಮನುಜಂ ಭೀತೋಽಭೂತ್ಪಾಂಡ್ಯಭೂಪತಿಃ ॥ ೧೪ ॥**

---

ತನ್ನ ಮತ್ತು ಅವನ ಯೋಗ್ಯತೆಗೆ ಅನುಸಾರವಾಗಿ ಉತ್ಸವಗಳನ್ನು ಮಾಡಿ, ವರನಾದ ಅವನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದನು. ಮದುವೆಯು ನಡೆದ ಕೆಲವು ದಿನಗಳನಂತರ ಚೋಳರಾಜನು ತನ್ನ ಅಳಿಯನಾದ ರಾಜಸಿಂಹನೊಡನೆ ಪಾಂಡ್ಯರಾಜನನ್ನು ಯುದ್ಧಮಾಡಿ ಸೋಲಿಸಬೇಕೆಂದು ಅಪೇಕ್ಷಿಸಿದನು.

೧೨-೧೪. ನೀಚನಾದ ತಮ್ಮನು ಅಣ್ಣನಿಗೆ ಮದುವೆಯಾಗಬೇಕಾಗಿದ್ದ ಕನ್ಯೆಯನ್ನು ತಾನು ಮದುವೆಮಾಡಿಕೊಂಡು, ಚೋಳರಾಜನೊಡನೆ ಸೇರಿ, ಅಣ್ಣನನ್ನು ಹೊಡೆಯಲು ಪ್ರಯತ್ನಮಾಡಿದನು. ಇವರಿಬ್ಬರೂ ತಮ್ಮ ಚತುರಂಗ ಸೇನೆಯನ್ನು ಯುದ್ಧಕ್ಕಾಗಿ ಸಿದ್ಧಪಡಿಸಿಕೊಂಡು ಮಧುರಾನಗರವು ಎರಡು ಯೋಜನವು ಇರುವಷ್ಟು ಹತ್ತಿರಕ್ಕೆ ಬಂದರು. ಬಹಳ ಶೂರನಾಗಿ ಸೇನೆಯನ್ನು ಸೇರಿಸಿಕೊಂಡು, ಯುದ್ಧಮಾಡಲು ಸಿದ್ಧನಾಗಿ ಬರುತ್ತಿರುವ ಚೋಳರಾಜನು ಮಧುರಾನಗರದ ಹತ್ತಿರಕ್ಕೆ ಬರುತ್ತಿರುವ ವರ್ತಮಾನವನ್ನು ಕೇಳಿ, ರಾಜೇಂದ್ರಪಾಂಡ್ಯನು ಹೆದರಿದನು.

ಸ್ವಲ್ಪಸೇನಾಸಮಾಯುಕ್ತಃ ಸ್ವಲ್ಪಶೌರ್ಯಸಮನ್ವಿತಃ ।
ಮಹತ್ಯಾ ಶ್ರದ್ಧಯಾ ಭಕ್ತ್ಯಾ ಸಹಿತಃ ಸುಂದರೇಶ್ವರೇ ॥ ೧೫ ॥

ಭಕ್ತಾಭೀಷ್ಟಪ್ರದಂ ಸದ್ಯ ಶ್ಯಂಕರಂ ಪ್ರಾಪ್ಯ ಖಿನ್ನಧೀಃ ।
ಪ್ರದಕ್ಷಿಣನಮಸ್ಕಾರಸ್ತೋತ್ರಾಣಿ ವಿವಿಧಾಯ ಚ ॥ ೧೬ ॥

ಜಪ್ತ್ವಾ ಪಂಚಾಕ್ಷರಂ ಮಂತ್ರ ಮಶೇಷಾರ್ಥಪ್ರದಾಯಕಂ ।
ಪ್ರಾಂಜಲಿಃ ಪ್ರಾರ್ಥಯಾಮಾಸ ಸ್ವಜಯಂ ತತ್ಪರಾಜಯಂ ॥ ೧೭ ॥

ಸರ್ವಜ್ಞಃ ಸರ್ವಗ ಶ್ಯಂಭು ರ್ಭಕ್ತೇಷ್ವತಿಕೃಪಾನ್ವಿತಃ ।
ಖೇದೋ ಮಾಸ್ತು ತವೇತ್ಯುಕ್ತ್ವಾ ತಮಾಶ್ವಾಸ್ಯೈವ ಮಬ್ರವೀತ್ ॥ ೧೮ ॥

ತವಾ ಭೀಷ್ಟಂ ಕರಿಷ್ಯಾಮಿ ತ್ವಮಾಧಿಂ ಮಾಕೃಥಾಃ ಪುನಃ ।
ಪ್ರಭಾತೇ ಸತ್ವರಂ ಗತ್ವಾ ತಾಭ್ಯಾ ಮಾಯೋಧನಂ ಕುರು ॥ ೧೯ ॥

---

೧೫–೧೭. ಪಾಂಡ್ಯರಾಜನಲ್ಲಿ ಕೊಂಚ ಸೇನೆಯಿತ್ತು. ಇವನಿಗೆ ಶಕ್ತಿಯೂ ಹೆಚ್ಚಾಗಿ ಇರಲಿಲ್ಲ. ಆದರೆ ಇವನಿಗೆ ಸುಂದರೇಶ್ವರನಲ್ಲಿ ಭಕ್ತಿಯು ಬಹಳವಾಗಿ ಇತ್ತು. ಯುದ್ಧವೂ ಒದಗಿ ಬಂತು. ತನ್ನಲ್ಲಿ ತಕ್ಕಷ್ಟು ಸಾಮರ್ಥ್ಯವಿಲ್ಲದ ಕಾರಣ ಪಾಂಡ್ಯ ರಾಜನು ಯೋಚನೆಯುಳ್ಳವನಾಗಿ, ಆ ಕ್ಷಣದಲ್ಲಿಯೇ ಭಕ್ತರಿಗೆ ಇಷ್ಟಸಿದ್ಧಿಯನ್ನು ಅನುಗ್ರಹಿಸುವ ಸುಂದರೇಶ್ವರನ ಸಮೀಪಕ್ಕೆ ಅವನು ಬಂದನು. ಪ್ರದಕ್ಷಿಣ ನಮಸ್ಕಾರ ಗಳನ್ನು ಮಾಡಿ, ಸ್ತೋತ್ರಮಾಡಿ ಇಷ್ಟ ಸಿದ್ಧಿಯನ್ನು ಕೊಡುವ ಪಂಚಾಕ್ಷರಮಂತ್ರ ಜಪವನ್ನು ಮಾಡಿದನಂತರ ತನಗೆ ಜಯವಾಗುವಂತೆಯೂ, ಶತ್ರುವಿಗೆ ಅಪಜಯ ವಾಗುವಂತೆಯೂ ಬೇಡಿಕೊಂಡನು.

೧೮–೨೨. ಸರ್ವಜ್ಞನಾಗಿಯೂ, ಎಲ್ಲಾ ಪದಾರ್ಥಗಳಲ್ಲಿಯೂ ಇರುವ ಶಿವನು ಭಕ್ತರಲ್ಲಿ ಬಹಳ ದಯೆಯುಳ್ಳವನಾಗಿ "ಎಲೈ ರಾಜನೆ, ನೀನು ಖಿನ್ನನಾಗಬೇಡ. ನಿನ್ನ ಇಷ್ಟವನ್ನು ನೆರವೇರಿಸುವೆನು. ಬೆಳಗಾದಕೂಡಲೆ ಬೇಗನೆ ನೀನು ಅವರಿಬ್ಬ ರೊಡನೆ ಯುದ್ಧವನ್ನು ಮಾಡು" ಎಂದು ಉತ್ತಮವಾದ ವಾಣಿಯಿಂದ ಹೇಳಿದನು.

ಇತಿ ಪ್ರೋಕ್ತಂ ದಿವ್ಯವಾಣ್ಯಾ ಶಂಕರೇಣ ದಯಾಲುನಾ ।
ಶ್ರುತ್ವಾ ರಾಜೇಂದ್ರಭೂಪಾಲಃ ಕೃತಾರ್ಥೋಽಸ್ಮೀತಿ ಪಿಪ್ರಿಯೇ ॥ ೨೦ ॥

ಪುನಃ ಪ್ರಭಾತೇ ಸಂಪ್ರಾಪ್ತೇ ಭಸ್ಮರುದ್ರಾಕ್ಷಕಂಚುಕಃ ।
ಯಾವತೀ ವಿದ್ಯತೇ ಸೇನಾ ತಾವತ್ಯಾ ಸೇನಯಾ ವೃತಃ ॥ ೨೧ ॥

ಮಹಾಲಿಂಗಸ್ಯ ಪುರತಃ ಪ್ರಣಿಪತ್ಯ ಪುನಃ ಪುನಃ ।
ಪ್ರದಕ್ಷಿಣಕ್ರಮೇಣೈವ ಪ್ರಯಯೌ ಪರಿಪಂಥಿನಂ ॥ ೨೨ ॥

ಅನುಜೋ ರಾಜಸಿಂಹಶ್ಚ ಕಾಂತಾರಚ್ಛೇದಕಾನ್ವಿತಃ ।
ಆಯಯಾ ವತಿವೇಗೇನ ಬಲವೀರ್ಯಸಮುದ್ಧತಃ ॥ ೨೩ ॥

ದೃಷ್ಟ್ವಾ ದೃಷ್ಟಿಪಥಂ ಪ್ರಾಪ್ತಂ ಸಸೈನ್ಯ ಮನುಜಾಧಮಂ ।
ಯೋದ್ಧುಂ ಪ್ರಚಕ್ರಮೇ ಪಾಂಡ್ಯಃ ಸಿಂಹನಾದಸಮನ್ವಿತಃ ॥ ೨೪ ॥

---

ರಾಜೇಂದ್ರಪಾಂಡ್ಯನು ಆ ಮಾತನ್ನು ಕೇಳಿ, ತಾನು ಕೃತಾರ್ಥನೆಂದು ಬಹಳ ಸಂತೋಷಪಟ್ಟನು. ಬೆಳಗಾದಕೂಡಲೆ ರಾಜನು ಭಸ್ಮರುದ್ರಾಕ್ಷಿಗಳನ್ನು ಧರಿಸಿ, ತನ್ನಲ್ಲಿ ಇರುವ ಸೇನೆಯೆಲ್ಲವನ್ನೂ ಯುದ್ಧಮಾಡಲು ತೆಗೆದುಕೊಂಡು ಹಾಲಾಸ್ಯೇಶ್ವರ ಮೂಲಲಿಂಗಕ್ಕೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ಶಿವಲಿಂಗವನ್ನು ಪ್ರದಕ್ಷಿಣ ಮಾಡುವ ಕ್ರಮದಿಂದಲೇ ಶತ್ರುವಿಗೆ ಎದುರಾದನು.

೨೩–೨೬. ರಾಜೇಂದ್ರಪಾಂಡ್ಯನ ತಮ್ಮನಾದ ರಾಜಸಿಂಹನೂ, ಕಾಂತಾರಚ್ಛೇದಕಚೋಳರಾಜನೂ ಇವರಿಬ್ಬರೂ ಸೇನಾಸಹಿತರಾಗಿ ಬಹಳ ಶಕ್ತಿಯುಳ್ಳವರಾಗಿ ಯುದ್ಧಮಾಡಲು ಬಂದರು. ತನ್ನ ತಮ್ಮನು ಸೇನಾಸಹಿತನಾಗಿ ತನ್ನೊಡನೆ ಯುದ್ಧಕ್ಕಾಗಿ ಬಂದಿರುವುದನ್ನು ನೋಡಿದಕೂಡಲೆ, ರಾಜೇಂದ್ರಪಾಂಡ್ಯನು ಸಿಂಹನಾದವನ್ನು ಮಾಡುತ್ತಾ ಯುದ್ಧಕ್ಕಾಗಿ ಉಪಕ್ರಮ ಮಾಡಿದನು. ಆಗ ತನ್ನ ಅಣ್ಣನು ಯುದ್ಧ ಮಾಡುವುದಕ್ಕೆ ಉಪಕ್ರಮ ಮಾಡಿರುವುದನ್ನು ನೋಡಿ, ತಮ್ಮನಾದ ರಾಜಸಿಂಹನು ನಗುತ್ತಾ ತಮ್ಮ ಬಹಳ ಸೇನೆಯೊಡನೆ ತಾನೂ ಯುದ್ಧಮಾಡುವುದಕ್ಕೆ ಉಪಕ್ರಮ

ಬಹುಸ್ಸೈನ್ಯಾನುಜೋ ವೀಕ್ಷ್ಯ ಜನ್ಯಂ ಜ್ಯೇಷ್ಠಕೃತಂ ಹಸನ್ ।
ಸ್ವರಿಯೆರ ಪ್ರಚಕ್ರಮೇ ಯೋದ್ಧುಂ ಸೈನ್ಯೈ ರಶ್ವೈ ರಥೈ ರ್ಗಜೈಃ ॥ ೨೫ ॥

ಅನ್ಯೋನ್ಯ ಮಭವ ದ್ಯುದ್ಧಂ ಸೇನಯೋ ರುಭಯೋ ರಪಿ ।
ಶಸ್ತ್ರಾಸ್ತ್ರಪಾತನಂ ಘೋರ ಮತಿನೃತ್ಯತ್ಕಬಂಧಕಂ ॥ ೨೬ ॥

ಯಾಮಮಾದ್ಯಾ ಮಾಂತಪರ್ಯಂತಂ ಯೋಧಯಿತ್ವಾ ವರೂಥಿನೀ ।
ಮಧ್ಯಂ ಪ್ರಾಪ್ತೇ ಪತಂಗೇ ತು ಪ್ರಾಪ ಶಾಂತಿಂ ಚ ತೃಷ್ಣಯಾ ॥ ೨೭ ॥

ತದಾನೀಂ ಗ್ರೀಷ್ಮಕಾಲತ್ವಾದ ಗ್ನಿಕಲ್ಪಾತಪೇನ ತು ।
ಪ್ರಪೀಡಿತಾ ಚೋಲಸೇನಾ ಶುಷ್ಕಾಸ್ಯಾ ನ್ಯಪತದ್ಭುವಿ ॥ ೨೮ ॥

ಕಾಲಸ್ವಭಾವಾ ತ್ಪಾಂಡ್ಯಸ್ಯ ಸೇನಾ ತೃಷ್ಣಾವಶೇನ ಚ ।
ಲಭ್ಯತೇ ಕುತ್ರ ಪಾನೀಯ ಮಿತಿ ಯುದ್ಧಾನ್ನ್ಯವರ್ತತ ॥ ೨೯ ॥

ತದಾ ದಯಾಲು ರ್ಭಗವಾ ಭಕ್ತಭಕ್ತಃ ಪರಃ ಶಿವಃ ।
ರಣಸ್ಥಲೇ ಸುವಿಸ್ತೀರ್ಣಾಂ ಪ್ರಪಾಂ ನಿರ್ಮಾಯ ಮಾಯಯಾ ॥ ೩೦ ॥

---

ಮಾಡಿದನು. ಆಗ ಎರಡು ಸೇನೆಯವರಿಗೂ ಪರಸ್ಪರವಾಗಿ ಯುದ್ಧವು ನಡೆಯಿತು. ಆ ಯುದ್ಧದಲ್ಲಿ ಶಸ್ತ್ರ ಮತ್ತು ಅಸ್ತ್ರಗಳ ಏಟುಗಳು ಘೋರವಾಗಿ ಬೀಳುತ್ತಿರುವ ಕಾರಣ ತಲೆಯಿಲ್ಲದ ಮುಂಡಗಳು ಕುಣಿಯುತ್ತಿದ್ದವು.

೨೭–೨೯. ಒಂದು ಯಾಮವು ಪ್ರಾರಂಭವಾಗಿ ಮುಗಿಯುವವರಿಗೂ ಯುದ್ಧವಾಯಿತು. ಅಷ್ಟುಹೊತ್ತಿಗೆ ಸರಿಯಾಗಿ ಮಧ್ಯಾಹ್ನಕಾಲವು ಆಯಿತಾದ್ದರಿಂದ ಎರಡು ಕಡೆಯ ಸೇನೆಯೂ ಬಾಯಾರಿಕೆಯಿಂದ ಬಳಲಿತು. ಆಗ ಗ್ರೀಷ್ಮಕಾಲವಾದದ್ದರಿಂದಲೂ, ಬಿಸಿಲು ಬೆಂಕಿಯಂತೆ ಬಹಳ ಸುಡುತ್ತಿರುವುದರಿಂದಲೂ ಚೋಳರಾಜನ ಸೇನೆಯು ಬಹಳ ಸಂಕಟವುಳ್ಳದ್ದಾಗಿ ಭೂಮಿಯಲ್ಲಿ ಮಲಗಿತು. ಪಾಂಡ್ಯರಾಜನ ಸೇನೆಯು ಕಾಲಕ್ಕೆ ಅನುಗುಣವಾಗಿ ಬಾಯಾರಿಕೆಯ ಬಾಧೆಯನ್ನು ಪರಿಹರಿಸಿಕೊಳ್ಳಲು ನೀರನ್ನು ಹುಡುಕುತ್ತಾ ಯುದ್ಧಮಾಡಲು ಇಷ್ಟವಿಲ್ಲದೆ ಹಿಂತಿರುಗಿತು.

೩೦–೩೪. ಆಗ ದಯಾಳುವಾದ, ತನ್ನ ಭಕ್ತರನ್ನು ರಕ್ಷಿಸುವ ಪರಮೇಶ್ವರನು ಯುದ್ಧರಂಗದ ಮಧ್ಯದಲ್ಲಿ ತನ್ನ ಮಹಿಮೆಯಿಂದ ನಾಲ್ಕು ವೇದಗಳನ್ನು ನಾಲ್ಕು

ತತ್ರ ವೇದಮಯೆಸ್ತ್ರಂಭೈ ರ್ಮಂಚಂ ಕೃತ್ವಾ ಮಹೋಜ್ವಲಂ ।
ತನ್ಮಧ್ಯೇ ಸನ್ನಿವಿಷ್ಟ ಸ್ಸಂದೃಶ್ಯತೇ ದೇವನಾಯಕಃ ॥ ೩೧ ॥

ಮಂಜುಸಿಂಜಾನಮಂಜೀರಲಸತ್ಪಾದಸರೋರುಹಃ ।
ವ್ಯಾಘ್ರಚರ್ಮಾಂಬರಧರವಿರಾಜಿತಕಟೀತಟಃ ॥ ೩೨ ॥

ಭಸ್ಮರುದ್ರಾಕ್ಷಮಾಲಾಭಿ ರ್ಮನೋಹರಕಲೇಬರಃ ।
ಲಾವಣ್ಯಾಬ್ಧಿಸಮುದ್ಭೂತ ಪೂರ್ಣೇಂದ್ರುಪತಿಮಾನನಃ ॥ ೩೩ ॥

ತಪ್ತಕಾಂಚನಸಂಕಾಶಜಟಾಮಂಡಲಮಂಡಿತಃ ।
ಕನಕಾದ್ರಿನಿಭಃ ಕಾಂತ್ಯಾ ಕನಕೋಡ್ಯಾಣಬಂಧವಾನ್ ॥ ೩೪ ॥

ಏವಂ ತಪಸ್ವಿನಂ ವೇಷಂ ಧೃತ್ವಾ ಹಾಲಾಸ್ಯನಾಯಕಃ ।
ಪುರಃ ಸ್ಥಿತಂ ಮಹಾಕುಂಭಂ ಮಾಯಾಶಕ್ತ್ಯಾ ಽಕರೋತ್ಪ್ರಭುಃ ॥ ೩೫ ॥

ಸ್ವಕಪರ್ದಸ್ಥಗಾಂಗೇಯವಾರಿಭಿಃ ಪರಿಪೂರಿತಂ ।
ತನ್ನಿಸ್ಸೃತಾಭ್ಧಿಃ ಪಾಂಡ್ಯಸ್ಯ ಭಟೇಭ್ಯಃ ಪ್ರದದೌ ಜಲಂ ॥ ೩೬ ॥

---

ಕಂಬಗಳನ್ನಾಗಿ ಮಾಡಿರುವ ಮಂಚದಮೇಲೆ ತಾನು ಕುಳಿತುಕೊಂಡು, ಒಂದು ಅರ ವಟ್ಟಿಗೆಯನ್ನು ಮಾಡಿಕೊಂಡು ಇದ್ದನು. ದೇವ ದೇವನಾದ ಪರಮೇಶ್ವರನು ಮನೋಹರವಾಗಿ ಧ್ವನಿಮಾಡುವ ಮಂಜೀರಗಳನ್ನು ಕಾಲಿನಲ್ಲಿ ಧರಿಸಿ, ನಡುವಿಗೆ ವ್ಯಾಘ್ರಚರ್ಮವನ್ನು ಕಟ್ಟಿಕೊಂಡು, ಭಸ್ಮರುದ್ರಾಕ್ಷೆಗಳನ್ನು ಧರಿಸಿ, ಬಹಳ ಸುಂದರ ವಾದ ಚಂದ್ರನಂತಿರುವ ಮುಖವುಳ್ಳವನಾಗಿ, ಪುಟಹಾಕಿದ ಚಿನ್ನದಂತಿರುವ ಜಟಾ ಮಂಡಲದಿಂದ ಪ್ರಕಾಶಿಸುತ್ತಾ, ಚಿನ್ನದ ಒಡ್ಯಾಣವನ್ನು ಧರಿಸಿ, ಮೇರುಪರ್ವತದಂತೆ ಇರುವ ಶರೀರದಿಂದ ಮಂಚದಮೇಲೆ ಪ್ರಕಾಶಿಸುತ್ತಿದ್ದನು.

೩೫–೩೬. ಹಾಲಾಸ್ಯೇಶ್ವರನು ಈ ಪ್ರಕಾರದಿಂದ ತಪಸ್ವಿ ವೇಷವನ್ನು ಹೊಂದಿ ತನ್ನ ಮುಂದುಗಡೆಯಲ್ಲಿ ಒಂದು ದೊಡ್ಡದಾದ ಗಡಿಗೆಯನ್ನು ತನ್ನ ಮಾಯೆಯಿಂದ

ಘಟಿಕರ್ಣೋರ್ಧ್ವಕಂಠಸ್ಥರಂಧ್ರಾ ದೇಕೈವ ನಿಸ್ಸೃತಾ ।
ಜಲಧಾರಾ ತ್ವನೇಕಾ ಸೀಚ್ಛತಧಾ ಚ ಸಹಸ್ರಧಾ ॥ ೩೭ ॥

ತಾಭಿಶ್ಚ ಜಲಧಾರಾಭಿಃ ಪವಿತ್ರಾಭಿಃ ಸುಧಾರಸಂ ।
ಪರಿಹಾಸಂ ಕುರ್ವತೀಭಿ ಸ್ತೃಪ್ತಿ ಮಾಪುಃ ಕ್ಷಣಾದ್ಭಟಾಃ ॥ ೩೮ ॥

ಪಾನೀಯಪಾನಾತ್ ಸಂಹೃಷ್ಟಾ ಬಲವೀರ್ಯಸಮುದಾನ್ವಿತಾಃ ।
ಪುನ ರ್ಯೋದ್ಧುಂ ಜವಾ ಜ್ಜಗ್ಮುಃ ಸೇನಾಃ ಪಾಂಡ್ಯಮಹೀಪತೇಃ ॥ ೩೯ ॥

ಚೋಲೇಂದ್ರಸೇನಾ ನೇಕಾಪಿ ಪಾನೀಯಾಭಾವತ ಸ್ತದಾ ।
ಚೋಲಪಾಂಡ್ಯಾನುಜಾಭ್ಯಾಂ ಚ ನಿರುದ್ಧಾಪಿ ಪಲಾಯಿತಾ ॥ ೪೦ ॥

ತಥಾಪಿ ಯಾಮಮಾತ್ರಂ ತು ಯುಧ್ವಾ ಸೈನ್ಯೇ ಪಲಾಯಿತೇ ।
ರಾಜಸಿಂಹಶ್ಚ ಚೋಲಶ್ಚ ತಾವುಭೌ ರಣಭೂಸ್ಥಿತೌ ॥ ೪೧ ॥

---

ಮಾಡಿಸಿ ಇರಿಸಿಕೊಂಡಿದ್ದನು. ಆ ಗಡಿಗೆಯಲ್ಲಿ ಅವನ ಜಟಾಮಂಡಲದಲ್ಲಿರುವ ಗಂಗೆಯ ನೀರು ತುಂಬಿತ್ತು. ಆ ನೀರನ್ನು ಪಾಂಡ್ಯರಾಜನ ಸೇನೆಯವರೆಲ್ಲರಿಗೂ ಅವನು ಕುಡಿಯಲು ಕೊಡುತ್ತಿದ್ದನು.

೩೭–೪೦. ಆ ಕಲಶದ (ಕುತ್ತಿಗೆ) ಕಿವಿಯ ಹತ್ತಿರದಲ್ಲಿರುವ ರಂಧ್ರದಿಂದ ಹೊರಡುತ್ತಿರುವ ಒಂದು ಜಲಧಾರೆಯ ನೀರು, ಸಾವಿರ ಧಾರೆಗಳ ಕೆಲಸವನ್ನು ಮಾಡುತ್ತಾ ಇತ್ತು. ಪವಿತ್ರವಾಗಿಯೂ ಅಮೃತದ ರುಚಿಯನ್ನು ತಿರಸ್ಕರಿಸುವುದಾಗಿಯೂ ಇರುವ ಜಲಧಾರೆಗಳಿಂದ ಪಾಂಡ್ಯಸೇನೆಯ ಜನರು ಒಂದು ಕ್ಷಣದಲ್ಲಿ ತೃಪ್ತಿಯನ್ನು ಹೊಂದಿದರು. ಬಾಯಾರಿಕೆಯನ್ನು ಅಡಗಿಸುವ ನೀರನ್ನು ಕುಡಿದು, ಸಂತೋಷವುಳ್ಳ ಪಾಂಡ್ಯರಾಜನ ಸೇನೆಯವರು ವೇಗವಾಗಿ ಯುದ್ಧಮಾಡಲು ತಿರುಗಿ ಬಂದರು. ಚೋಳರಾಜನ ಸೇನೆಯವರಿಗೆ ನೀರು ಸಿಕ್ಕದಿರುವುದರಿಂದ, ರಾಜನೂ ರಾಜಸಿಂಹನೂ ಬಲಾತ್ಕಾರದಿಂದ ತಡೆದರೂ ಅವರು ಒಬ್ಬರೂ ನಿಲ್ಲದೆ ಓಡಿಹೋದರು.

೪೧–೪೪. ಹೀಗೆ ಕಷ್ಟಕರವಾದ ಸ್ಥಿತಿಯಲ್ಲಿಯೂ ಒಂದು ಯಾಮದವರೆಗೆ ಯುದ್ಧವನ್ನು ಮಾಡಿ, ಅವರಿಬ್ಬರ ಸೇನೆಯು ಓಡಿಹೋಯಿತು. ರಾಜಸಿಂಹನೂ, ಮತ್ತು ಚೋಳರಾಜನೂ ಇವರಿಬ್ಬರೂ ಓಡಿಹೋಗದೆ, ಯುದ್ಧರಂಗದಲ್ಲಿ ನಿಂತು

ಜೀವಗ್ರಾಹಂ ಗೃಹೀತ್ವಾ ತಾ ರಾಜೇಂದ್ರಃ ಪರಯಾ ಮುದಾ ।
ಆಗತ್ಯ ಸುಂದರೇಶಾಯ ದರ್ಶಯಾಮಾಸ ನಿರ್ಮದೌ ॥ ೪೨ ॥

ಕೃತ್ಯಂ ಕೃತಂ ಮಯಾ ತೇದ್ಯ ಯಥೇಷ್ಟಂ ಕುರ್ವಿಮೌ ವ್ರಜ ।
ಇತಿ ದಿವ್ಯಾಭವದ್ವಾಣೀ ತಾಂ ಸ ಚಾನ್ಯೇಪಿ ಶುಶ್ರುವುಃ ॥ ೪೩ ॥

ರಾಜೇಂದ್ರಃ ಶಂಭುಭಕ್ತತ್ವಾ ದ್ಧರ್ಮನಿಷ್ಠಾಪರತ್ವತಃ ।
ಚೋಲೇ ಚ ರಾಜಸಿಂಹೇ ಚ ಸದಯಸ್ತಾವಪಾಲಯತ್ ॥ ೪೪ ॥

ಗತೇಷು ಪಂಚದಿವಸೇಷ್ವಥ ಪಾಂಡ್ಯೋ ಯಶಃಪರಃ ।
ಚೋಲಂ ವಿಸರ್ಜಯಾಮಾಸ ದತ್ವಾ ಸೈನ್ಯಂ ಧನಾದಿಕಂ ॥ ೪೫ ॥

ಅನುಜಂ ಚ ಖಲಂ ಪಶ್ಚಾದಲ್ಪಕರ್ಮಸು ಯೋಜ್ಯ ಚ ।
ಭಕ್ತ್ಯಾ ಮಹತ್ಯಾ ಸಂಯುಕ್ತಃ ಸುಂದರೇಶೇಽಭ್ಯವರ್ತತ ॥ ೪೬ ॥

---

ಕೊಂಡರು. ರಾಜೇಂದ್ರಪಾಂಡ್ಯರಾಜನು ಅವರಿಬ್ಬರನ್ನೂ ಸೆರೆಹಿಡಿದುಕೊಂಡು ಬಂದನು. ಅಹಂಕಾರವಿಲ್ಲದಿರುವ ಅವರಿಬ್ಬರನ್ನೂ ಕರೆದುಕೊಂಡು ಬಂದು ಸುಂದರೇಶ್ವರನ ಮುಂದುಗಡೆಯಲ್ಲಿ ನಿಲ್ಲಿಸಿದನು. ಆಗ "ನಾನು ಮಾಡಬೇಕಾದ ಕೆಲಸವನ್ನು ಮಾಡಿರುವೆನು. ನೀನು ಇವರಿಬ್ಬರನ್ನೂ ನಿನ್ನ ಇಷ್ಟ ಬಂದಂತೆ ಇರಿಸು ಎಂದು ಹೇಳಿದ ಆಕಾಶವಾಣಿಯನ್ನು ಎಲ್ಲರೂ ಕೇಳಿದರು. ರಾಜೇಂದ್ರಪಾಂಡ್ಯನು ಶಿವಭಕ್ತನಾದ ಕಾರಣದಿಂದಲೂ, ಧರ್ಮಾಚರಣೆಯಲ್ಲಿ ಆಸಕ್ತನಾದ್ದರಿಂದಲೂ ಅವರಿಬ್ಬರ ವಿಷಯದಲ್ಲಿಯೂ ದಯೆಯುಳ್ಳವನಾಗಿ ಅವರಿಬ್ಬರನ್ನೂ ರಕ್ಷಿಸಿದನು.

೪೫–೪೬. ಪಾಂಡ್ಯರಾಜನು ಯಶಸ್ಸನ್ನು ಅಪೇಕ್ಷಿಸುವವನಾಗಿ, ಐದಾರು ದಿನಗಳು ಕಳೆದನಂತರ ಚೋಳರಾಜನಿಗೆ ಸೇನೆಯನ್ನೂ ದ್ರವ್ಯವನ್ನೂ ಕೊಟ್ಟು, ಅವನ ರಾಜ್ಯಕ್ಕೆ ಅವನನ್ನು ಕಳುಹಿಸಿದನು. ತನ್ನ ತಮ್ಮನಿಗೆ ಅವನ ಗೌರವಕ್ಕೆ ಕಮ್ಮಿಯಾಗಿರುವ ಕೆಲಸವನ್ನು ತನ್ನ ರಾಜ್ಯದಲ್ಲಿ ಕೊಟ್ಟು ಇರಿಸಿಕೊಂಡನು. ಸುಂದರೇಶ್ವರನಲ್ಲಿ

ಶಿವಂ ಪಾನೀಯದಾತಾರಂ ತದ್ಭಕ್ತಂ ಪಾಂಡ್ಯಭೂಪತಿಂ ।
ಸರ್ವೇ ಜನಾ ವಿಸ್ಮಿತಾಶ್ಚ ಪ್ರಶಶಂಸು ಸ್ಸಮಂತತಃ ॥ ೪೭ ॥

ಇತಿ ಪಂಚತ್ರಿಂಶಿಕಾ ಚ ಲೀಲಾ ನೀಪಾಟವೀಪತೇಃ ।
ಸಂಪ್ರೋಕ್ತಾ ಶ್ರುತಮಾತ್ರೇಣ ಸರ್ವಕಲ್ಯಾಣದಾಯಿನೀ ॥ ೪೮ ॥

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಪಾನೀಯಪ್ರದಾನಂ ನಾಮ
ಏಕಚತ್ವಾರಿಂಶೋಽಧ್ಯಾಯಃ

---

ಬಹಳ ಭಕ್ತಿಯಿಂದ ಇದ್ದನು. ಯುದ್ಧವು ನಡೆಯುತ್ತಿರುವಾಗ ಕುಡಿಯಲು ನೀರನ್ನು ತಂದುಕೊಟ್ಟ ಶಿವನನ್ನು, ಶಿವನಲ್ಲಿ ಭಕ್ತನಾಗಿರುವ ಪಾಂಡ್ಯರಾಜನನ್ನೂ ಎಲ್ಲರೂ ಎಲ್ಲಾ ಕಡೆಯಲ್ಲಿಯೂ ಆಶ್ಚರ್ಯದಿಂದ ಹೊಗಳುತ್ತಿದ್ದರು.

೪೮. ಕೇಳಿದವರಿಗೆ ಕೇಳಿದ ಮಾತ್ರದಿಂದ ಶ್ರೇಯಸ್ಸನ್ನುಂಟುಮಾಡುವ ನೀಪವನಾಧಿಪನಾದ ಹಾಲಾಸ್ಯೇಶ್ವರನ. ಮೂವತ್ತೈದನೆಯ ಲೀಲೆಯುನ್ನು ನಾನು ಹೇಳಿರುವೆನು.

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ
ಪಾನೀಯ ಪ್ರದಾನವೆಂದು ಹೆಸರುಳ್ಳ ನಲವತ್ತೊಂದನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ದ್ವಿಚತ್ವಾರಿಂಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

**ಸಿದ್ಧೋ ಭೂತ್ವಾ ಸುಂದರೇಶೋ ರಸವಾದಪ್ರದರ್ಶನಂ ।**
**ಯಯಾ ವ್ಯಧಾಲ್ಲೀಲಯಾ ಚ ಸಾ ಲೀಲಾ ಚ ಮಯೋಚ್ಯತೇ ॥ ೧ ॥**

**ಪುರಾ ಪುಷ್ಪವನಾಭಿಖ್ಯೇ ಪುರೇ ಸರ್ವಮನೋಹರೇ ।**
**ಪುರುಹೂತಾದಿ ದೇವೈಶ್ಚ ಮುನಿಮುಖ್ಯೈ ರಭಿಷ್ಟುತೇ ॥ ೨ ॥**

**ಅಸ್ತಿ ಸೌಂದರ್ಯಸಂಪನ್ನಾ ರುದ್ರಾಕ್ಷಾಭರಣೋಜ್ಜ್ವಲಾ ।**
**ಶಿವಸ್ಯ ಶಿವಭಕ್ತಾನಾಂ ಸೇವಯಾ ತುಷ್ಟಮಾನಸಾ ॥ ೩ ॥**

---

### ನಲವತ್ತೆರಡನೆಯ ಅಧ್ಯಾಯವು

೧-೪. ಅಗಸ್ತ್ಯಋಷಿಯು ಹೇಳಿದನು:—ಸುಂದರೇಶನು ಸಿದ್ಧಪುರುಷನ ವೇಷದಿಂದ ರಸವಾದವನ್ನು ಪ್ರದರ್ಶನಮಾಡಿದ ಲೀಲೆಯನ್ನು ಹೇಳುವೆನು. ಬಹಳ ದಿನಗಳ ಹಿಂದೆ ಪುಷ್ಪವನವೆಂದು ಹೆಸರುಳ್ಳ ನಗರವು ಬಹಳ ಮನೋಹರವಾಗಿ ಇಂದ್ರನೇ ಮೊದಲಾದ ದೇವತೆಗಳಿಂದಲೂ, ಋಷಿಶ್ರೇಷ್ಠರಿಂದಲೂ ಶ್ಲಾಘ್ಯವಾಗಿ ಇತ್ತು. ಆ ನಗರದಲ್ಲಿ ಸುಂದರಳಾದ ಒಬ್ಬ ಸ್ತ್ರೀಯು, ರುದ್ರಾಕ್ಷಿಗಳನ್ನು ಆಭರಣವಾಗಿ ಧರಿಸಿಕೊಂಡು, ಶಿವನನ್ನೂ, ಶಿವಭಕ್ತರನ್ನೂ ಸೇವಿಸುವುದರಿಂದ ಸಂತೋಷವುಳ್ಳ

ಶ್ರೀಮತ್ಪುಷ್ಪವನೇಶಸ್ಯ ಸ್ವಯಂಭೂತಶಿವಸ್ಯ ಚ ।
ಪೂಜಾವಸಾನಬಲ್ಯಂತೇ ಶುದ್ಧನೃತ್ತಂ ಕರೋತಿ ಸಾ ॥ ೪ ॥

ಬ್ರಾಹ್ಮೇ ಮುಹೂರ್ತ ಉತ್ಥಾಯ ಸ್ನಾತ್ವಾ ತೋಯೇನ ಭಸ್ಮನಾ ।
ನಿತ್ಯಕೃತ್ಯಂ ವಿಧಾಯಾಥ ಪೂಜಯಾಮಾಸ ಸಾ ಶಿವಂ ॥ ೫ ॥

ಸೂರ್ಯೇಣ ಪೂಜಿತಸ್ಯಾದೌ ಸೂರ್ಯನಾಥಸ್ಯ ಶೂಲಿನಃ ।
ಪ್ರದಕ್ಷಿಣನಮಸ್ಕಾರಸ್ತೋತ್ರೈಃ ತುಷ್ಟಿಂ ಸದಾಽಕರೋತ್ ॥ ೬ ॥

ತತ್ಕ್ಷೇತ್ರಸ್ಯ ಚ ಮಾಹಾತ್ಮ್ಯಂ ಕೋ ವಾ ವರ್ಣಯಿತುಂ ಕ್ಷಮಃ ।
ತತ್ಕ್ಷೇತ್ರಜಾಃ ಪಾಂಸವಶ್ಚ ಯಯುಶ್ಶಂಭೋಸ್ತು ಲಿಂಗತಾಂ ॥ ೭ ॥

ಸೂರ್ಯಾದಯೋ ಗ್ರಹಾಃ ಸರ್ವೇ ನಕ್ಷತ್ರಾಣ್ಯಖಿಲಾನಿ ಚ ।
ಪ್ರದಕ್ಷಿಣಂ ಚ ಕುರ್ವಂತಿ ಶ್ರೀಮತ್ಪುಷ್ಪವನೇಶ್ವರಂ ॥ ೮ ॥

---

ಮನಸ್ಸಿನಿಂದ ಇರುತ್ತಿದ್ದಳು. ಅವಳು ಪುಷ್ಪವನಕ್ಕೆ ಅಧಿಪತಿಯಾದ ಶಿವನ ಪೂಜೆಯು ಕೊನೆಯಲ್ಲಿ ಬಲಿಹರಣವನ್ನು ಹಾಕಿದನಂತರ ಶುದ್ಧಳಾಗಿ ನರ್ತನವನ್ನು ಮಾಡುತ್ತಿದ್ದಳು.

೫-೭. ಅವಳು ಪ್ರತಿದಿನವೂ ಬ್ರಾಹ್ಮಮುಹೂರ್ತದಲ್ಲಿ ಎಚ್ಚರಗೊಂಡು ಸ್ನಾನವನ್ನು ಮಾಡಿ, ಭಸ್ಮೋದ್ಧೂಳನೆಯನ್ನು ಮಾಡಿಕೊಂಡು, ತನ್ನ ನಿತ್ಯಕಾರ್ಯಗಳನ್ನು ಮಾಡಿಕೊಂಡನಂತರ ಶಿವನನ್ನು ಪೂಜಿಸುತ್ತಿದ್ದಳು ಅವಳು ಮೊದಲು ಸೂರ್ಯ, ಚಂದ್ರರು ಪೂಜಿಸುತ್ತಿದ್ದ, ಸೂರ್ಯನಾಥನೆಂದು ಹೆಸರುಳ್ಳ ಶಿವನನ್ನು (ಅರ್ಕನಾಥೇಶ್ವರ) ಸ್ತೋತ್ರಗಳನ್ನು ಹೇಳುವುದರಿಂದ ಸಂತೋಷಪಡಿಸುತ್ತಿದ್ದಳು. ಆ ಕ್ಷೇತ್ರದ ಮಹಿಮೆಯನ್ನು ಯಾರೂ ವರ್ಣಿಸಲು ಶಕ್ತರಲ್ಲ. ಆ ಕ್ಷೇತ್ರದಲ್ಲಿರುವ ಸಣ್ಣ ಸಣ್ಣ ಧೂಳುಗಳೂ ಶಿವಲಿಂಗಗಳಾಗಿರುತ್ತಿದ್ದವು. ಸೂರ್ಯನೇ ಮೊದಲಾದ ಗ್ರಹಗಳೂ, ನಕ್ಷತ್ರಗಳೂ ಇವೆಲ್ಲವೂ ಪುಷ್ಪವನೇಶ್ವರನನ್ನು ಪ್ರದಕ್ಷಿಣೆ ಮಾಡುತ್ತಿರುವವು.

೮-೧೨. ಇಂದ್ರನೇ ಮೊದಲಾದ ದೇವತೆಗಳು ಆ ಕ್ಷೇತ್ರದಲ್ಲಿ ಕಾಲಿನಿಂದ ಸಂಚಾರಮಾಡಲು ಹೆದರಿಕೊಂಡು ದೂರದಲ್ಲಿಯೇ ಇರುತ್ತಾ ಪುಷ್ಪವನೇಶ್ವರನನ್ನು

ಪದ್ಭ್ಯಾಂ ಮಸ್ಯಸ್ಪೃಶಂ ತಚ್ಚ ಕ್ಷೇತ್ರಂ ಗೋತ್ರಭಿದಾದಯಃ ।
ಸ್ತುವಂತಿ ದೂರತಃ ಸ್ಥಿತ್ವಾ ಪ್ರಾಪು ಸ್ಸಿದ್ಧಿ ಮಥಾ ದೃತಾಃ ॥ ೯ ॥

ಅನ್ನಪೂರ್ಣೇಶ್ವರೀ ದೇವೀ ಶ್ರೀಮತ್ಪುಷ್ಪವನೇಶಿತುಃ ।
ಅಜಸ್ರ ಮನ್ನದಾನಂ ಚ ಯಯಾ ಕಾರಯತಿ ಪ್ರಿಯಾತ್ ॥ ೧೦ ॥

ನಾಮತೋ ಹೇಮನಾಥಾ ಸಾ ಯುವಭಿರ್ದ್ರವ್ಯ ಮಾದೃತೈಃ ।
ಯಾವತ್ಪ್ರಾಪ್ತ ಮಶೇಷೇಣ ತಾವತಾರ್ಥೇನ ನಿಸ್ಪೃಹಾ ॥ ೧೧ ॥

ಭೋಜಯಾಮಾಸ ಸರ್ವಾಂಶ್ಚ ಶಿವಭಕ್ತಾನ್ ಷಡ್ರಸಂ ।
ಹಿ ಏವಂವರ್ತಮಾನಾ ಸಾ ಕದಾಚಿ ದ್ಭಕ್ತಿಚೋದಿತಾ ॥ ೧೨ ॥

ಪ್ರತಿಮಾಂ ನಾಯಿಕಾಖ್ಯಾಂ ಚ ಕರ್ತುಮುದ್ಯೋಗ ವತ್ಯಭೂತ್ ।
ಅಥ ಭುಕ್ತ್ವಾ ಮಧೂಚ್ಛಿಷ್ಟಂ ಸೋಮಂ ಸೋಮಧರಂ ಶಿವಂ ॥ ೧೩ ॥

---

ಆದರದಿಂದ ಸ್ತೋತ್ರಮಾಡಿ ಸಿದ್ಧಿಯನ್ನು ಹೊಂದಿರುವರು. ಪುಷ್ಪವನೇಶ್ವರನಶಕ್ತಿಯಾದ ಅನ್ನಪೂರ್ಣೇಶ್ವರೀದೇವಿಯು. ಯಾವಾಗಲೂ ಅನ್ನದಾನವನ್ನು ಮಾಡಿಸುತ್ತಿದ್ದಳು. ಹೇಮನಾಥಾ ಎಂಬುವಳು ಆದರದಿಂದ ದ್ರವ್ಯವನ್ನು ಪದಗಿಸಿಕೊಡುವ ಪುರುಷರಿಂದ ಬಂದ ದ್ರವ್ಯದಿಂದ ಸಂತೋಷಪಟ್ಟುಕೊಂಡು, ಆ ದ್ರವ್ಯವೆಲ್ಲವನ್ನೂ ಶಿವಭಕ್ತರೆಲ್ಲರ ಷಡ್ರಸೋಪೇತವಾದ ಭೋಜನಕ್ಕಾಗಿ ವಿನಿಯೋಗಿಸುತ್ತಿದ್ದಳು. ಹೀಗೆಯೇ ಇರುವಾಗಕೆಲವು ಕಾಲಕಳೆದನಂತರ ಅವಳಿಗೆ ಶಿವನಲ್ಲಿ ಭಕ್ತಿಯು ಬಹಳ ಹೆಚ್ಚಾಗಿ ಉಂಟಾಯಿತು.

೧೩–೧೭. ಅವಳು ಸುಂದರೇಶ್ವರನ ವಿಗ್ರಹವನ್ನು ಮಾಡಿಸಬೇಕೆಂದು ಉದ್ದೇಶಪಟ್ಟಳು. ಆಗ ಅವಳು ಭೋಜನಮಾಡಿದ ನಂತರ, ಶಿಲ್ಪಿಯನ್ನು ಕರಸಿ, ಅವನಿಂದ ಪಾರ್ವತೀಸಹಿತನಾಗಿ, ಚಂದ್ರಶೇಖರನಾಗಿರುವ ಶಿವನ ವಿಗ್ರಹವನ್ನು ಮೇಣದಿಂದ ಮಾಡಿಸಿದಳು. ನನ್ನ ಮನಸ್ಸು ದೈವಗತಿಯ ಯೋಗದಿಂದ ಈ ಕಾರ್ಯವನ್ನು ಮಾಡಿಸುವುದಕ್ಕೆ ಸಂತೋಷದಿಂದ ಉದ್ಯುಕ್ತವಾಯಿತು. ಶಿವಭಕ್ತರನ್ನು ಭೋಜನಮಾಡಿಸಲು ತಕ್ಕಷ್ಟು ಮಾತ್ರವೇ ದ್ರವ್ಯವು ದೊರಕುವುದು.

ಕಾರಯಿತ್ವಾ ಶಿಲ್ಪಿನಾ ಚ ಮನಸ್ಯೆ ವಮಚಿಂತಯತ್ ।
ಮನ್ಮನೋ ದೈವಯೋಗೇನ ಸಮುದ್ಯಕ್ತ ಮಭೂನ್ಮುದಾ ॥ ೧೪ ॥

ಲಬ್ಧಂ ಧನಂ ಭೋಜಯಿತು ಮಲಂ ಭವತಿ ಶಾಂಭವಾನ್ ।
ಅಭವನ್ನಾತಿರಿಕ್ತಂ ಚ ಲೋಭಂ ಕರ್ತುಂ ನ ಹಿ ಕ್ಷಮಾ ॥ ೧೫ ॥

ದಯಾಳು ಸ್ಸುಂದರೇಶಶ್ಚ ನ ಜಾನೇ ಕಿಂ ವಿಧಾಸ್ಯತಿ ।
ಏವಂ ಗಚ್ಛತಿ ಕಾಲೇ ತು ಸರ್ವವ್ಯಾಪೀ ಸದಾಶಿವಃ ॥ ೧೬ ॥

ಮುನೀಷಿತಂ ಪೂರಯಿತುಂ ತಸ್ಯಾಃ ಸಿದ್ಧಾಕೃತಿ ರ್ಬಭೌ ।
ಭೋಕ್ತು ಮಿಚ್ಛಾವತಾಂ ತೇಷಾಂ ಭಕ್ತಾನಾಂ ಮಧ್ಯತ ಸ್ತದಾ ॥ ೧೭ ॥

ನಂತುಂ ತಾನಾಗತಾಂಸ್ತತ್ರ ಸಿದ್ಧ ಸ್ತಾ ಮಭ್ಯಲೋಕಯತ್ ।
ಅಂಗಪ್ರತ್ಯಂಗನಿಹಿತದೃಷ್ಟಿಃ ಕಾರುಣ್ಯಸಂಯುತಃ ॥ ೧೮ ॥

---

ಹೆಚ್ಚಾಗಿ ದೊರೆಯುವುದಿಲ್ಲ. ನಾನು ಲೋಭವನ್ನು ಮಾಡುವುದಕ್ಕಾಗುವುದಿಲ್ಲ. ದಯಾಶಾಲಿಯಾದ ಸುಂದರೇಶನು ಏನು ಮಾಡುವನೋ! ಎಂದು ಅವಳು ಯೋಚಿಸಿದಳು. ಹೀಗೆಯೇ ಕೆಲವು ಕಾಲವು ಕಳೆಯಲು, ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವ ಪರಮೇಶ್ವರನು ಅವಳ ಇಷ್ಟವನ್ನು ನೆರವೇರಿಸಲು ಸಿದ್ಧಪುರುಷನ ಆಕಾರವನ್ನು ಧರಿಸಿ ಬಂದನು. ಅವನು ಭೋಜನಕ್ಕಾಗಿ ಬಂದು ಇರುವ ಶಿವಭಕ್ತರ ಮಧ್ಯದಲ್ಲಿ ಇದ್ದನು. ಅವರಿಗೆ ನಮಸ್ಕರಿಸಲು ಬಂದ ಅವಳನ್ನು ಸಿದ್ಧಪುರುಷನು ನೋಡಿದನು. ಅವಳ ಪ್ರತಿಯೊಂದು ಅವಯವಗಳಲ್ಲಿಯೂ ದೃಷ್ಟಿಯನ್ನು ಇರಿಸಿ, ಅವಳಿಗೆ ಅನುಗ್ರಹ ಮಾಡಲು ದಯೆಯಿಂದ ಚಾಕ್ಷುಷ ದೀಕ್ಷೆಯನ್ನು ಕೊಟ್ಟನು.

೧೮–೨೦. ಶಿವಭಕ್ತರೆಲ್ಲರೂ ಖಟ್ವಾಂಗವನ್ನು ಹಸ್ತದಲ್ಲಿ ಧರಿಸಿಕೊಂಡು ಸ್ಫಟಿಕದಂತೆ ಕುಂಡಲದಿಂದ ಅಲಂಕಾರವಾದ ಮುಖವುಳ್ಳ ಈ ಸಿದ್ಧನನ್ನು ನೋಡಿದರು. ಅವನು ಪ್ರತಿಯೊಂದು ಅವಯವದಲ್ಲಿಯೂ ಬಹಳ ಸುಂದರನಾಗಿದ್ದನು.

ಅಕರೋಃ ಚ್ಚಾಕ್ಷುಷೀಂ ದೀಕ್ಷಾಂ ತದನುಗ್ರಹತತ್ಪರಃ ।
ಖಟ್ವಾಂಗಪಾಣಿಸ್ಸ್ಫಟಿಕಕುಂಡಲಾಲಂಕೃತಾನನಂ　　॥ ೧೯ ॥

ಪಶ್ಯತಿ ಸ್ಮ ಮಹಾಭಾಗಾ ಸಿದ್ಧಂ ಸರ್ವಾಂಗಸುಂದರಂ ।
ಪಾದಪ್ರಕ್ಷಾಲನಾದ್ಯಂ ಚ ಕರ್ಮ ಕೃತ್ವಾ ಯಥಾವಿಧಿ　　॥ ೨೦ ॥

ತಯಾ ಸಂಭೋಜಿತಾಃ ಸರ್ವೇ ಮುದಾ ಮಾಹೇಶ್ವರಾಶ್ಚ ಯೇ ।
ಯಾತೇಷು ತೇಷು ಭುಕ್ತೇಷು ನಿಖಿಲೇಷು ತಪಸ್ವಿಷು　　॥ ೨೧ ॥

ಸಿದ್ಧೋ ಮಂದಸ್ಮಿತಂ ಕೃತ್ವಾತಿಷ್ಠದ ಭೋಜಿತಃ ।
ದಾಸ್ಯಸಿದ್ಧಂ ಸಮಾಲೋಕ್ಯ ಸ್ಥಿತಂ ಭೋಜನಮಂಟಪೇ　　॥ ೨೨ ॥

ಅವದನ್ರುದ್ರಕನ್ಯಾಯಾ ಉಪಯಾತಾ ಅಥಾಂತಿಕಂ ।
ಸಾ ಸಮುತ್ಥಾಯ ಸಹಸಾ ಸಸ್ಮಿತಾ ಚ ಸಮಾಗತಾ　　॥ ೨೩ ॥

ಸಾಂಜಲಿಃ ಸನ್ನಿಧೌ ತಸ್ಯ ಪ್ರಾಹ ಭಕ್ತಿವಿಶಾರದಾ ।
ಕಾಮಸ್ಯ ದೃಷ್ಟಿರ್ನೈವಾ ಸ್ತೀತ್ಯಾಹುಃ ಸರ್ವೇ ಜಗತ್ಯಪಿ　　॥ ೨೪ ॥

---

ಅನಂತರದಲ್ಲಿ ಅವಳು ಆ ಮಹೇಶ್ವರರೆಲ್ಲರಿಗೂ ಶಾಸ್ತ್ರಕ್ಕನುಸಾರವಾಗಿ ಪಾದಪ್ರಕ್ಷಾಳನಾದಿಗಳನ್ನು ಮಾಡಿ, ಸಂತೋಷದಿಂದ ಭೋಜನ ಮಾಡಿಸಿದಳು. ತಪಸ್ವಿಗಳಾದ ಅವರೆಲ್ಲರೂ ಊಟಮಾಡಿಕೊಂಡು ಸಂತೋಷದಿಂದ ಹೊರಟುಹೋದರು.

೨೧-೨೬. ಸಿದ್ಧಪುರುಷನು ಮಾತ್ರ ಮಂದಹಾಸಮಾಡುತ್ತಾ (ಮುಗುಳುನಗೆಯುಳ್ಳವನಾಗಿ) ಭೋಜನಮಾಡದೆ ಇದ್ದನು. ಭೋಜನಶಾಲೆಯಲ್ಲಿ ಇದ್ದ ದಾಸ್ಯಸಿದ್ಧನನ್ನು ನೋಡಿದ ರುದ್ರಕನ್ಯೆಯರು ಹೇಮನಾಥೆಯ ಹತ್ತಿರಕ್ಕೆ ಹೋಗಿತಿಳಿಸಿದರು. ಅವಳು ಬೇಗ ಎದ್ದು ಮಂದಹಾಸಮಾಡುತ್ತಾ, ಇವನ ಹತ್ತಿರಕ್ಕೆ ಬಂದಳು. ಭಕ್ತಿಯುಳ್ಳವಳಾಗಿ ನಿಪುಣೆಯಾದ ಹೇಮನಾಥೆಯು " ಲೋಕದಲ್ಲಿ ಕಾಮನಿಗೆ ದೃಷ್ಟಿಯಿಲ್ಲ. ಎಂದು ಹೇಳುವರು. ಪೂಜ್ಯರಾದ ನಿಮಗೆ ನನ್ನನ್ನು ಭೋಗಿಸುವುದರಲ್ಲಿ ಇಚ್ಛೆಯು ಇದ್ದರೆ, ಒಳಗಡೆ ಇರುವ ಮಂಚವೀಠ ಕೂಡಿರುವ ಅಂತಃಪುರಕ್ಕೆ ಬೇಗನೆ

ಯುಷ್ಮಾಕ ಮಿಚ್ಛಾ ಮಾಂ ಭೋಕ್ತುಂ ಮಹತಾಂ ಯದಿ ವಿದ್ಯತೇ ।
ಸಮುಂಚ ಮಂತರ್ಭವನ ಮಾಗಚ್ಛತ್ವ ವಿಲಂಬಿತಂ ॥ ೨೫ ॥

ಶಿವಭಕ್ತೇಷ್ಟಕರಣಂ ಮದೀಯಂ ವ್ರತಮನ್ವಹಂ ।
ತತ್ತ್ವಂ ಭುಂಕ್ಷ್ವ ಯಥಾ ಕಾಮಂ ಪ್ರಾರ್ಥಿತಾಂ ಮಾಂ ಮನೋಹರ ॥೨೬॥

ಏವಂ ಮಧುರಯಾ ವಾಚಾ ಪ್ರೋಕ್ತ ಶ್ಯಂಕರಕನ್ಯಯಾ ।
ಸಿದ್ಧರೂಪೀ ಸುಂದರೇಶೋ ವಕ್ತುಮಾರಭತೇ ಮುದಾ ॥ ೨೭ ॥

॥ ಸಿದ್ಧ ಉವಾಚ ॥

ಶೃಣು ಕಲ್ಯಾಣಿ ಸುಭಗೇ ಸುಭಕ್ತೇ ಹೇಮನಾಯಿಕೇ ।
ತ್ವಯಾ ಸಮಾ ನಾಸ್ತಿ ಲೋಕೇ ನಾರೀ ಧರ್ಮಪರಾಯಣಾ ॥ ೨೮ ॥

ಅಧ್ರುವೇಣ ಶರೀರೇಣ ತ್ವಯಾ ಧ್ರುವಮುಪಾರ್ಜಿತಂ ।
ಅನ್ನೇನಾರ್ಥೇನ ವಪುಷಾ ದಯಯಾ ಸತ್ಯಯಾ ಗಿರಾ ॥ ೨೯ ॥

---

ಬರಬಹುದು. ಶಿವಭಕ್ತರ ಇಷ್ಟವನ್ನು ನೆರವೇರಿಸುವುದು ಪ್ರತಿದಿನದಲ್ಲಿಯೂ ನನ್ನ ವ್ರತವಾಗಿರುವುದು. ಎಲೈ ಸುಂದರನೆ! ನಾನೂ ಪ್ರಾರ್ಥಿಸುತ್ತಾ ಇರುತ್ತೇನೆ. ಆದ್ದರಿಂದ ನನ್ನಲ್ಲಿ ನೀನು ನಿನ್ನ ಇಚ್ಛೆಯಂತೆ ಸಂಭೋಗವನ್ನು ಮಾಡು" ಎಂದು ಮಧುರವಾಗಿ ಹೇಳಿದಳು.

೨೭-೩೧. ರುದ್ರಕನ್ಯೆಯಾದ ಹೇಮನಾಥೆಯ ಮಾತನ್ನು ಕೇಳಿದ ಸಿದ್ಧ ಪುರುಷನಾದ ಸುಂದರೇಶ್ವರನು "ಎಲೈ ಭಕ್ತಳಾದ, ಮಂಗಳಕರಳಾದ, ಹೇಮನಾಥೆಯೆ! ಕೇಳು. ನಿನ್ನಂತೆ ಧರ್ಮಾಚರಣೆಯನ್ನು ಮಾಡುವವರು ಇಲ್ಲವು. ಅನಿತ್ಯವಾದ ಶರೀರದಿಂದ ನೀನು ನಿತ್ಯವಾದ ಪುರುಷಾರ್ಥವನ್ನು ಸಾಧಿಸಿರುತ್ತೀಯೆ. ನೀನು ಅನ್ನದಾನಮಾಡುವುದು, ದ್ರವ್ಯವನ್ನು ಸತ್ಕರ್ಮದಲ್ಲಿ ವಿನಿಯೋಗಿಸುವುದು, ನೀನು ಉಪಕಾರ ಮಾಡುವುದು, ಶರೀರವನ್ನು ಸತ್ಕಾರ್ಯದಲ್ಲಿ ಪ್ರೇರಿಸುವುದು, ಪ್ರಾಣಿಗಳಲ್ಲಿ ದಯೆಯಿಂದ ಇರುವುದು, ನಿಜವಾದ ಮಾತನಾಡುವುದು, ಇವುಗಳಿಂದ ನೀನು ಪುಣ್ಯವನ್ನು ಸಂಪಾದಿಸುತ್ತಾ ಇರುತ್ತೀಯೆ. ಬುದ್ಧಿವಂತರು ಎಲ್ಲಾ ಧರ್ಮ

ಧರ್ಮಾಣಾಂ ಶಿವಧರ್ಮಶ್ಚ ಮುಖ್ಯಃ ಪ್ರೋಕ್ತೋ ಮುನೀಷಿಭಿಃ ।
ತದ್ಧರ್ಮೇಷು ಚ ಸರ್ವೇಷು ಶಿವಲಿಂಗಾರ್ಚನಂ ವರಂ ॥ ೩೦ ॥

ಶಿವಲಿಂಗಾರ್ಚನಾಚ್ಛ್ರೇಷ್ಠಂ ತದ್ಭಕ್ತಾನಾಂ ಪ್ರಪೂಜನಂ ।
ಸರ್ವೈಃ ಪ್ರೋಕ್ತೈಃ ಮಹಾಧರ್ಮೈಃ ಕೃತಾರ್ಥಾ ತ್ವಂ ನ ಸಂಶಯಃ॥ ೩೧ ॥

ಉತ್ಸವೇಶ್ವರ ಮೀಶಾನಂ ಕರ್ತು ಮುದ್ಯೋಗವತ್ಯಸಿ ।
ತ್ವನ್ನಾಮಧೇಯ ಸದೃಶಂ ಕುರು ಹೇಮ್ನಾ ತ ಮೀಶ್ವರಂ ॥ ೩೨ ॥

ಹಾಲಾಸ್ಯವಾಸೀ ಸಿದ್ಧೋಽಹಂ ತವ ಕಾರ್ಯ ಸುಸಿದ್ಧಯೇ ।
ಸಮಾಗತೋಽಸ್ಮಿ ಕೃಪಯಾ ರಸವಾದವಿಚಕ್ಷಣಃ ॥ ೩೩ ॥

ತ್ವದ್ಗೇಹೇ ಯಾವದಸ್ತ್ಯದ್ಯ ರೌಪ್ಯತಾಮ್ರಾದಿಲೋಹಕಂ ।
ಸೂಚ್ಯಂತಂ ನಿಖಿಲಂ ತಾವತ್ ಸಮಾನಯ ಸುಮಧ್ಯಮೇ ॥ ೩೪ ॥

---

ಗಳಿಗಿಂತಲೂ ಶಿವಧರ್ಮವನ್ನು ಮುಖ್ಯವೆಂದು ಹೇಳುವರು. ಅದರಲ್ಲಿ ಶಿವಲಿಂಗಾರ್ಚನೆಯು ಉತ್ತಮವು. ಶಿವಲಿಂಗಪೂಜೆಗಿಂತಲೂ, ಶಿವಭಕ್ತರ ಪೂಜೆಯು ಶ್ರೇಷ್ಠವಾದದ್ದು. ಈ ಧರ್ಮವನ್ನು ನೀನು ಆಚರಿಸುತ್ತಿರುವುದರಿಂದ ನೀನು ಕೃತಾರ್ಥಳಾಗಿ ಇರುತ್ತೀಯೆ. ಇದರಲ್ಲಿ ಸಂದೇಹವಿಲ್ಲ.

೩೨-೩೪. ನೀನು ಚಿನ್ನದಿಂದ ಉತ್ಸವವಿಗ್ರಹವನ್ನು ಮಾಡಿಸಲು ಉದ್ಯೋಗವುಳ್ಳವಳಾಗಿರುತ್ತೀಯೆ. ಆ ಪ್ರತಿಮೆಗೆ ನಿನ್ನ ಹೆಸರನ್ನು ಇರಿಸು. (ಹೇಮನಾಥೇಶ್ವರನೆಂದು ಹೆಸರಾಗಲಿ) ಹಾಲಾಸ್ಯಕ್ಷೇತ್ರದಲ್ಲಿ ವಾಸವಾಗಿರುವ ನಾನು ಸಿದ್ಧರೂಪದಿಂದ ಇಲ್ಲಿಗೆ ನಿನ್ನ ಕಾರ್ಯವನ್ನು ನೆರವೇರಿಸಲು ಬಂದಿರುವೆನು. ನನಗೆ ರಸವಾದದಲ್ಲಿ ತುಂಬಾ ತಿಳುವಳಿಕೆ ಇರುವುದು. ನಿನ್ನ ಮನೆಯಲ್ಲಿರುವ ಈಗ ಸಿಕ್ಕುವ ಬೆಳ್ಳಿ, ತಾಮ್ರ ಮುಂತಾದ ಲೋಹಗಳನ್ನು ಸೂಜಿಯವರೆಗೂ ಇರುವ ಸಣ್ಣದಾದರೂ ಅವನ್ನು ತೆಗೆದುಕೊಂಡು ಬಾ " ಎಂದು ಹೇಳಿದನು.

ಇತ್ಯುಕ್ತ್ವಾ ಪ್ರೀತಹೃದಯಾ ಹೇಮನಾಥಾ ಸುವಿಸ್ಮಿತಾ ।
ಕ್ಷಣಾದ್ಗೃಹೀತ್ವಾ ತತ್ಸರ್ವಂ ಸಿದ್ಧಸ್ಯಾಂತಿಕ ಮಾಯಯೌ ॥ ೩೫ ॥

ಸುಂದರೇಶಃ ಸ ಸಿದ್ಧೋಽಪಿ ರೌಪ್ಯಾದ್ಯಂ ಸ್ವಪುರಸ್ಸ್ಥಿತಂ ।
ಸ್ಪೃಷ್ಟ್ವಾ ಸಭಸ್ಮಹಸ್ತೇನ ಭಕ್ತಾಂ ತಾಮೇವ ಮಬ್ರವೀತ್ ॥ ೩೬ ॥

ಪ್ರಕ್ಷಿಪ್ಯೈತತ್ಸರ್ವಮಗ್ನೌ ಶ್ವಃ ಪ್ರಭಾತೇ ವಿಲೋಕಯ ।
ಉತ್ತಮಸ್ವರ್ಣರೂಪಂ ಸ್ಯಾತ್ ತದಾದಾಯ ಮುದಾನ್ವಿತಾ ॥ ೩೭ ॥

ಸೌವರ್ಣಪ್ರತಿಮಾಂ ಕೃತ್ವಾ ಪೂರ್ಣಕಾಮಾ ಭವ ಧ್ರುವಂ ।
ಇತ್ಯುಕ್ತೇ ಸಾ ಪುನರ್ನತ್ವಾ ಸಿದ್ಧಮೇವಮಯಾಚತ ॥ ೩೮ ॥

ಸ್ವಾಮಿನ್ನಭ್ಯವಹಾರಂ ತ್ವಮತ್ರ ಕೃತ್ವಾನುಗೃಹ್ಯ ಮಾಂ ।
ನಿಶಾಮುಷ್ಯತ್ರ ನೀತ್ವಾಥ ಪ್ರಭಾತೇ ಗಮ್ಯತಾಂ ತ್ವಯಾ ॥ ೩೯ ॥

---

೩೫–೩೭. ಈ ಮಾತನ್ನು ಕೇಳಿದ ಕೂಡಲೆ ಅವಳಿಗೆ ಸಂತೋಷವಾಯಿತು. ಅವಳು ಆಶ್ಚರ್ಯದಿಂದ ಕೂಡಿದವಳಾಗಿ ಎಲ್ಲವನ್ನೂ ಸಿದ್ಧಪುರುಷನ ಹತ್ತಿರಕ್ಕೆ ತಂದು ಇರಿಸಿದಳು. ಸಿದ್ಧರೂಪದಿಂದ ಇರುವ ಸುಂದರೇಶ್ವರನು ತನ್ನ ಮುಂದೆ ಇರುವ ಬೆಳ್ಳಿಯೇ ಮೊದಲಾದ ಲೋಹವೆಲ್ಲವನ್ನೂ ಭಸ್ಮಸಹಿತವಾದ ತನ್ನ ಹಸ್ತದಿಂದ ಸ್ಪರ್ಶ ಮಾಡಿದನು. "ನೀನು ನಾಳೆ ಬೆಳಗ್ಗೆ ಇವೆಲ್ಲವನ್ನೂ ಬೆಂಕಿಯಲ್ಲಿ ಹಾಕಿ ಕಾಯಿಸು. ಇವೆಲ್ಲವೂ ಉತ್ತಮವಾದ ಚಿನ್ನವಾಗುವುದು. ಅದನ್ನು ತೆಗೆದುಕೊಂಡು ಸಂತೋಷ ದಿಂದ ಚಿನ್ನದ ಪ್ರತಿಮೆಯನ್ನು ಮಾಡಿಸು. ನಿನ್ನ ಇಷ್ಟವು ನೆರವೇರಲಿ" ಎಂದು ಸಿದ್ಧಪುರುಷನು ಅವಳಿಗೆ ಹೇಳಿದನು.

೩೮–೪೦. ಸಿದ್ಧಪುರುಷನು ಹೇಳಿದ ಮಾತನ್ನು ಕೇಳಿ, ಆ ಹೇಮನಾಥೆಯು ಅವನಿಗೆ ನಮಸ್ಕಾರ ಮಾಡಿ, "ಎಲೈ ಪ್ರಭುವೆ, ನೀನು ಇಲ್ಲಿ ಭೋಜನವನ್ನು ಮಾಡಿ, ನನ್ನನ್ನು ಅನುಗ್ರಹಿಸು. ಈ ರಾತ್ರಿ ಇಲ್ಲಿ ಇದ್ದು, ಬೆಳಗಾದನಂತರ ನೀನು ಇಲ್ಲಿಂದ ಪ್ರಯಾಣಮಾಡಬೇಕು" ಎಂದು ಅವನನ್ನು ಬೇಡಿಕೊಂಡಳು. ಅವನು

ಆಕರ್ಣ್ಯ ತಸ್ಯಾ ವಚನಂ ಮಂದಸ್ಮಿತಮನೋಹರಃ ।
ಸಿದ್ಧೋ ಗಗನಮಾರ್ಗೇಣ ತೇಜೋರೂಪೀ ತಿರೋದಧೇ ॥ ೪೦ ॥

ಸಾ ಚ ತೋಷೇಣ ಖೇದೇನ ಸಂಯುಕ್ತಾ ರುದ್ರಕನ್ಯಕಾ ।
ಯಥೋಕ್ತಂ ತೇನ ಸಿದ್ಧೇನ ತಥಾ ಸರ್ವಂ ಚಕಾರ ಚ ॥ ೪೧ ॥

ತದಶೇಷಂ ಸ್ವರ್ಣಮಯಂ ಪ್ರಭಾತೇ ಚ ವಿಲೋಕ್ಯ ಚ ।
ಶಿಲ್ಪಿಭಿಃ ಕಾರಯಾಮಾಸ ಸೋಮಂ ಸೋಮಧರಂ ಶಿವಂ ॥ ೪೨ ॥

ಶಿವಾಗಮಜ್ಞೈ ರಾಚಾರ್ಯೈಃ ಸಾಧಕೈಃ ಸುಮುಹೂರ್ತಕೇ ।
ಪ್ರತಿಷ್ಠಾಂ ಕಾರಯಿತ್ವಾ ಚ ಪ್ರಣನಾಮ ಮುದಾನ್ವಿತಾ ॥ ೪೩ ॥

ತತ ಉತ್ಥಾಯ ಸೌಂದರ್ಯ ಮನೌಪಮ್ಯಂ ವಿಲೋಕ್ಯ ಚ ।
ಪ್ರತಿಮಾ ತ್ವನಯಾ ತುಲ್ಯಾ ಲೋಕೇ ನಾಸ್ತೀತಿ ಸಾ ಜಗೌ ॥ ೪೪ ॥

---

ಆ ರುದ್ರಕನ್ಯೆಯ ಮಾತನ್ನು ಕೇಳಿ, ಮಂದಹಾಸ ಮಾಡುವುದರಿಂದ ಮನೋಹರನಾಗಿ ಅಂತರಿಕ್ಷ ಮಾರ್ಗಕ್ಕೆ ಹೋಗಿ, ತೇಜಸ್ಸಿನ ರೂಪದಿಂದ ಇದ್ದು ಅನಂತರದಲ್ಲಿ ಅದೃಶ್ಯ ನಾದನು.

೪೧–೪೪. ಆ ರುದ್ರಕನ್ಯೆಯು ಸಂತೋಷ ಮತ್ತು ಖಿನ್ನತೆಗಳಿಂದ ಕೂಡಿದ ವಳಾಗಿ, ಸಿದ್ಧಪುರುಷನು ಹೇಳಿದ ಪ್ರಕಾರ ಎಲ್ಲವನ್ನೂ ಮಾಡಿದಳು. ಲೋಹ ವೆಲ್ಲವೂ ಉತ್ತಮವಾದ ಚಿನ್ನವಾಯಿತು. ಅದೆಲ್ಲವನ್ನೂ ತೆಗೆದುಕೊಂಡು ಶಿಲ್ಪಿಗಳಿಂದ ಪಾರ್ವತೀಸಹಿತವಾಗಿರುವ ಸೋಮಸುಂದರೇಶ್ವರ ವಿಗ್ರಹವನ್ನು ಮಾಡಿಸಿದಳು. ಶಿವಾಗಮವನ್ನು ತಿಳಿದಿರುವ ಆಚಾರ್ಯರು ಮತ್ತು ಶಿವಮಂತ್ರೋಪಾಸಕರು ಇವರಿಂದ ಸರಿಯಾದ ಮುಹೂರ್ತದಲ್ಲಿ ಪ್ರತಿಷ್ಠೆಯನ್ನು ಮಾಡಿಸಿ, ಸಂತೋಷದಿಂದ ಆ ಪ್ರತಿಮೆಗೆ ನಮಸ್ಕಾರ ಮಾಡಿದಳು. ಅನಂತರದಲ್ಲಿ ಎದ್ದು ಆ ಪ್ರತಿಮೆಯ ಹೋಲಿಕೆಯಿಲ್ಲ ದಿರುವ ಸೌಂದರ್ಯವನ್ನು ನೋಡಿ ಇದಕ್ಕೆ ಸಮನಾದ ಪ್ರತಿಮೆಯು ಲೋಕದಲ್ಲಿ ಎಲ್ಲಿಯೂ ಇಲ್ಲ. ಎಂದು ಅವಳು ಹೇಳಿದಳು.

ಅಥ ಸುಂದರನಾಥಾಖ್ಯೋ ಭವತ್ವೇವಾಯ ಮೀಶ್ವರಃ ।
ಹೇಮನಾಥಾಖ್ಯನಾಮಾಸ್ಯ ಪ್ರಿಯಾದೇವಂ ಚಕಾರ ಸಾ ॥ ೪೫ ॥

ಅಂಗುಲೀಭಿರ್ಗಂಡದೇಶಂ ಸ್ಪೃಷ್ಟ್ವಾ ತಂ ಜಿಘ್ರತಿ ಸ್ಮ ಸಾ ।
ತದಂಗುಲ್ಯುದ್ಭವಂ ಚಿಹ್ನಂ ದೃಶ್ಯತೇದ್ಯಾಪಿ ತತ್ರ ತು ॥ ೪೬ ॥

ಸರ್ವೇ ಜನಾಸ್ತಾಂ ಪ್ರಾಶಂಸು ಶ್ಶಿವಭಕ್ತಪ್ರಪೂಜನೇ ।
ಏವಂ ಸಾ ಶಂಸತಃ ಸರ್ವಾನ್ನಾತ್ಮನೋತಿದ್ರಾಕ್ ನಿವಾರ್ಯ ಚ ॥ ೪೭ ॥

ತಸ್ಯೋತ್ಸವಂ ಕಾರಯಿತ್ವಾ ಭೂಷಾಶ್ಚ ವಿವಿಧಾ ದದೌ ।
ಸ್ವಾಮಾರ್ಗ್ಯೇನ ಪ್ರಭಜತಾಂ ಸರ್ವೇಷಾಂ ಶಂಕರೋ ಧ್ರುವಂ ॥ ೪೮ ॥

ಐಹಿಕಾಮುಷ್ಮಿಕಾರ್ಥ ಕಾಮಾರ್ಥದಾಸ್ಯತ್ಯೇವ ನ ಸಂಶಯಃ ।
ಭಕ್ತಾಭೀಷ್ಟಪ್ರದಂ ಸದ್ಯಃ ಸೋಮಸುಂದರಮೀಶ್ವರಂ ॥ ೪೯ ॥

---

೪೫–೪೭. ಆಮೇಲೆ ಈ ಈಶ್ವರನ ಪ್ರತಿಮೆಯು ಬಹಳ ಸುಂದರವಾಗಿರುವ ಕಾರಣ ಸುಂದರನಾಥನೆಂತಲೂ, ಹೇಮನಾಥೇಶ್ವರನೆಂತಲೂ ಹೆಸರನ್ನು ಹೊಂದಿ ಪ್ರಸಿದ್ಧವಾಗಿರಲಿ, ಎಂದು ಪ್ರೀತಿಯಿಂದ ಅವಳು ಹೆಸರಿಟ್ಟಳು. ಮತ್ತು ಆ ಪ್ರತಿಮೆಯು ಬಹಳ ಅಂದವಾಗಿದ್ದ ಕಾರಣ ತನ್ನ ಬೆರಳಿನಿಂದ ಅದರ ಕೆನ್ನೆಯನ್ನು ಮುಟ್ಟಿ ಪ್ರೀತಿಯಿಂದ ಮುತ್ತಿಟ್ಟಳು. ಆ ಪ್ರತಿಮೆಯಲ್ಲಿ ಬೆರಳಿನ ಗುರುತು ಈಗಲೂ ಕಾಣುತ್ತಿರುವುದು. ಜನರೆಲ್ಲರೂ ಶಿವಭಕ್ತರನ್ನು ಪೂಜಿಸುವುದರಲ್ಲಿ ಅವಳು ಅಗ್ರಗಣ್ಯಳೆಂದು ಹೊಗಳುತ್ತಿದ್ದರು. ತನ್ನನ್ನು ಹೀಗೆ ಹೊಗಳುತ್ತಿರುವವರೆಲ್ಲರೂ ಶ್ಲಾಘನೆ ಮಾಡದಿರುವಂತೆ ಮಾಡಿದಳು. ಆ ಪ್ರತಿಮೆಯನ್ನು ಅನೇಕ ವಿಧವಾದ ಆಭರಣಗಳಿಂದ ಅಲಂಕಾರಮಾಡಿ, ಉತ್ಸವವನ್ನು ಮಾಡಿಸಿದಳು. ಬಹಳ ಆಭರಣಗಳನ್ನು ಉತ್ಸವವಿಗ್ರಹಕ್ಕೆ ಧರಿಸಲು ಕೊಟ್ಟಳು.

೪೮–೫೦. ಶಿವನು ಸತ್ಯವಾದ ಮಾರ್ಗದಿಂದ ತನ್ನನ್ನು ಸೇವಿಸುವವರಿಗೆ ಐಹಿಕಾಮುಷ್ಮಿಕ ಭೋಗಗಳನ್ನು ಉಂಟುಮಾಡುವುದರಲ್ಲಿ ಖಂಡಿತವಾಗಿಯೂ ಸಂಶಯವಿಲ್ಲವು. ತನ್ನನ್ನು ಸೇವಿಸಿದವರಿಗೆ ಆ ಕ್ಷಣದಲ್ಲಿ ಇಷ್ಟಾರ್ಥಗಳನ್ನು ಕೊಡುವ ಸೋಮಸುಂದರೇಶ್ವರನನ್ನೂ, ಅವನ ಭಕ್ತಳಾದ ಹೇಮನಾಥೆಯನ್ನೂ ಜನರೆಲ್ಲರೂ ಶ್ಲಾಘಿಸುತ್ತಿದ್ದರು. ಒಂದುಸಾರಿ ಕೇಳಿದ ಮಾತ್ರದಿಂದಲೇ ಕೇಳಿದವರಿಗೆ ಪಾಪಗಳನ್ನು

ತದ್ಭಕ್ತ್ಯಾಂ ಹೇಮನಾಥಾಂ ಚ ಸ್ತುವಂತಿ ಸತತಂ ಜನಾಃ ।
ಏವಂ ಷಟ್ತ್ರಿಂಶಿಕಾ ಲೀಲಾ ನೀಪಾರಣ್ಯನಿವಾಸಿನಃ ॥ ೫೦ ॥
ಸಕೃಚ್ಛ್ರುತಾ ಸ್ಯಾತ್ ಪಾಪಘ್ನೀ ಸರ್ವಾಭೀಷ್ಟಪ್ರದಾಯಿನೀ ।

ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ರಸವಾದಪ್ರದರ್ಶನಂ ನಾಮ
ದ್ವಿಚತ್ವಾರಿಂಶೋಽಧ್ಯಾಯಃ

---

ನಾಶಮಾಡಿ, ಎಲ್ಲಾ ವಿಧವಾದ ಇಷ್ಟಾರ್ಥಗಳನ್ನೂ ನೆರವೇರಿಸಿಕೊಡುವ ನೀಪಾಟವೀ ಪ್ರಭುವಾದ ಸುಂದರೇಶನು ಆಚರಿಸಿದ ಮೂವತ್ತಾರನೆಯ ಲೀಲೆಯನ್ನು ಹೇಳಿರುವೆನು.

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ
ರಸವಾದ ಪ್ರದರ್ಶನವೆಂಬ ಹೆಸರಿನ ನಲವತ್ತೆರಡನೆಯ
ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಹಾಲಾಸ್ಯ ಮಾಹಾತ್ಮ್ಯಂ



## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ತ್ರಿಚತ್ವಾರಿಂಶೋಽಧ್ಯಾಯಃ

|| ಅಗಸ್ತ್ಯ ಉವಾಚ ||

ಯಯಾ ತು ಲೀಲಯಾ ದೇವೋ ಭಗವಾನ್ಸೋಮಸುಂದರಃ ।
ಅಗಾಧಾಯಾಂ ಪುಷ್ಕರಿಣ್ಯಾಂ ಚೋಲಸೈನ್ಯ ಮಪಾತಯತ್ || ೧ ||

ತಾಂ ಲೀಲಾಂ ಶ್ರುತಮಾತ್ರೇಣ ಸಮಸ್ತದುರಿತಾಪಹಾಂ ।
ಸರ್ವಸಂಪತ್ಪ್ರದಾಂ ಸದ್ಯಃ ಪ್ರವಕ್ಷ್ಯಾಮಿ ಮುನೀಶ್ವರಾಃ || ೨ ||

ರಾಜೇಂದ್ರಪುತ್ರೋ ರಾಜೇಶಶ್ಚಿರಂ ಪೃಥ್ವೀಮಪಾಲಯತ್ ।
ತತ್ಪುತ್ರೋ ರಾಜಗಂಭೀರಃ ಪೃಥಿವೀ ಮನುಶಾಸ್ಯ ಚ || ೩ ||

---

### ನಲವತ್ತಮೂರನೆಯ ಅಧ್ಯಾಯವು

೧–೨. ಅಗಸ್ತ್ಯಋಷಿಯು ಹೇಳಿದನು:—ಷಡ್ಗುಣೈಶ್ವರ್ಯ ಸಂಪನ್ನನಾದ ಸೋಮಸುಂದರೇಶ್ವರನು ಆಳವಾದ ಕೊಳದಲ್ಲಿ ಚೋಳರಾಜನ ಸೇನೆಯನ್ನು ಮುಳುಗಿಸಿದ ಲೀಲೆಯನ್ನು ಹೇಳುವೆನು. ಈ ಲೀಲೆಯನ್ನು ಕೇಳಿದ ಮಾತ್ರದಿಂದಲೇ ಎಲ್ಲಾ ವಿಧವಾದ ಸಂಪತ್ತುಗಳೂ ಉಂಟಾಗುವವು. ಮತ್ತು ಪಾಪಗಳೆಲ್ಲವೂ ನಾಶ ವಾಗುವವು. ಎಲೈ ಋಷಿಗಳಿರಾ ! ನೀವು ಕೇಳಿರಿ.

೩–೭. ರಾಜೇಂದ್ರಪಾಂಡ್ಯನ ಮಗನಾದ ರಾಜೇಶಪಾಂಡ್ಯನು ಬಹಳ ಕಾಲದ ವರಿಗೂ ರಾಜ್ಯವನ್ನಾಳಿದನು. ಅವನ ಮಗನಾದ ರಾಜಗಂಭೀರನು ರಾಜ್ಯವನ್ನು

ಪ್ರತಿಗ್ರಾಮಂ ಪ್ರತಿಗೃಹ ಮಕರೋಲ್ಲಿಂಗಮೈಶ್ವರಂ ।
ಪಾಂಡ್ಯವಂಶಪ್ರದೀಪಶ್ಚ ತತ್ಪುತ್ರಃ ಪೃಥಿವೀಪತಿಃ ॥ ೪ ॥

ಚಿರಂ ಭೂಮಿಂ ಪಾಲಯಿತ್ವಾ ಪ್ರಾಪ ಸಾಯುಜ್ಯಮೈಶ್ವರಂ ।
ತತ ಸ್ತದಾತ್ಮಜಃ ಕಶ್ಚಿ ತ್ಪುರುಹೂತಂ ವಿಜಿತ್ಯ ಚ ॥ ೫ ॥

ಪುರುಹೂತವಿಜಿತ್ಯಾಖ್ಯಾಂ ಪ್ರಥಯಾಮಾಸ ಭೂತಲೇ ।
ಪಾಂಡ್ಯವಂಶಪತಾಕಾಖ್ಯ ಸ್ತತ್ಪುತ್ರಃ ಪೃಥಿವೀಶ್ವರಃ ॥ ೬ ॥

ಅಕರೋ ತ್ಪೃಥಿವೀಂ ಸರ್ವಾಂ ಶಂಭುಭಕ್ತಸಮನ್ವಿತಾಂ ।
ತದಾತ್ಮಜ ಸುಂದರೇಶಃ ಪಾದಶೇಖರ ಈಶ್ವರಃ ॥ ೭ ॥

ಶಂಭುಭಕ್ತ್ಯಾ ಮಹತ್ಯಾ ಚ ತತ್ತುಲ್ಯೋ ನಾಸ್ತಿ ಭೂತಲೇ ।
ತತ್ಕಾಲೇ ಚೋಲಭೂಪಾಲಃ ಸಹಸ್ರೈಕಚತುರಂಗಮಃ ॥ ೮ ॥

---

ಪಾಲಿಸುತ್ತಿರುವಾಗ ಪ್ರತಿಯೊಂದು ಹಳ್ಳಿಯಲ್ಲಿಯೂ ಪ್ರತಿಯೊಂದು ಮನೆಯಲ್ಲಿಯೂ ಶಿವಲಿಂಗವು ಇರುವಂತೆ ಮಾಡಿದನು. ಅವನ ಮಗನು ಪಾಂಡ್ಯವಂಶಕ್ಕೆ ಪ್ರದೀಪನಾಗಿದ್ದುಕೊಂಡು ಬಹಳ ಕಾಲದವರಿಗೂ ರಾಜ್ಯಪರಿಪಾಲನೆಯನ್ನು ಮಾಡುತ್ತಾ ಶಿವಸಾಯುಜ್ಯವನ್ನು ಹೊಂದಿದನು. ಅನಂತರದಲ್ಲಿ ಅವನ ಮಕ್ಕಳಲ್ಲಿ ಒಬ್ಬನು ಇಂದ್ರನನ್ನು ಜಯಿಸಿ ಪುರುಹೂತವಿಜೇತನೆಂದು ಭೂಮಿಯಲ್ಲಿ ಪ್ರಸಿದ್ಧನಾದನು. ಅವನ ಮಗನು ಪಾಂಡ್ಯವಂಶಪತಾಕಾ ಎಂಬ ಹೆಸರಿನಿಂದ ರಾಜನಾಗಿದ್ದನು. ಅವನ ಕಾಲದಲ್ಲಿ ಭೂಮಿಯಲ್ಲಿ ಎಲ್ಲಾ ಕಡೆಯಲ್ಲಿಯೂ ಶಿವಭಕ್ತರು ತುಂಬಿದ್ದರು. ಅವನ ಮಗನು ಸುಂದರೇಶಪಾದಶೇಖರನೆಂದು ಹೆಸರುಳ್ಳವನಾಗಿ ಶಿವನ ವಿಷಯದಲ್ಲಿರುವ ಭಕ್ತಿಯುಳ್ಳವರೆಲ್ಲರಿಗಿಂತಲೂ ಹೆಚ್ಚಾಗಿದ್ದನು. ಅವನಿಗೆ ಸಮನಾದ ಶಿವಭಕ್ತನು ಭೂಮಿಯಲ್ಲಿ ಇರಲಿಲ್ಲ.

೮–೧೨. ಅವನು ರಾಜ್ಯವನ್ನು ಆಳುತ್ತಿರುವ ಕಾಲದಲ್ಲಿ ಸಹಸ್ರೈಕಚತುರಂಗಮನೆಂದು ಹೆಸರುಳ್ಳ ಚೋಳರಾಜನು ಬಹಳವಾದ ಆನೆ, ಕುದುರೆ ಇವುಗಳಿಂದ ಕೂಡಿರುವ ಸೇನೆಯನ್ನು ಸೇರಿಸಿಕೊಂಡು ಪಾಂಡ್ಯರಾಜನನ್ನು ಗೆಲ್ಲುವುದಕ್ಕಾಗಿ ಪ್ರಯತ್ನ

ಬಹುಸ್ಯಂದನಸೇನಾಶ್ವಗಜೈಶ್ಚ ಪರಿಸೇವಿತಃ ।
ಕದಾಚಿತ್ಪಾಂಡ್ಯಭೂಪಾಲಂ ಜೇತು ಮುದ್ಯೋಗ ಮಾತನೋತ್ ॥ ೯ ॥

ಸ್ವಲ್ಪಸೇನಾದಿಸಂಯುಕ್ತಃ ಸುಂದರೇಶಾಂಘ್ರಿಶೇಖರಃ ।
ಪಾಂಡ್ಯ ಸ್ತದಾನೀಂ ಸ್ವೀಕುರ್ವನ್ ಸೇನಾರಥಗಜಾಶ್ವಕಂ ॥ ೧೦ ॥

ಸುಂದರೇಶೇ ಮಹಾದೇವೇ ಭಕ್ತಿ ಮೇವಾತನೋ ತ್ಸದಾ ।
ದೈವಮೇವ ಪರಂ ಮನ್ಯೇ ಪೌರುಷಂ ತು ನಿರರ್ಥಕಂ ॥ ೧೧ ॥

ಇತಿ ಶಂಸಂತಿ ವಿದ್ವಾಂಸಃ ಪ್ರಮಾಣಂ ತದ್ವಚೋ ಮಮ ।
ಪಾರ್ಥಿವಜ್ಞಾಪನಾರ್ಥಂ ಚ ಸ್ವೀಕಾರಾಶ್ಚ ಪರಿಚ್ಛದಾಃ ॥ ೧೨ ॥

ಪತ್ತೀನಾಂ ದಶಸಾಹಸ್ರಂ ಸಹಸ್ರಂ ವಾಜಿನಾಮಪಿ ।
ವಾರಣಾನಾಂ ಶತಮಪಿ ರಥಾನಾಂ ದಶಕಂ ತಥಾ ॥ ೧೩ ॥

ಇತೋಽಧಿಕಂ ಮಾಸ್ತು ಮಾಸ್ತು ಸಾಹಾಯ್ಯಂ ದೈವತಂ ಮಮ ।
ಏತತ್ಸಂಖ್ಯಾಸಮಾಯುಕ್ತಾಃ ಸೇನಾದ್ಯಾಶ್ಚ ಚತುರ್ವಿಧಾಃ ॥ ೧೪ ॥

---

ಪಟ್ಟನು. ಆಗ ಸುಂದರೇಶಾಂಘ್ರಿಶೇಖರರಾಜನಲ್ಲಿ ಸೇನೆಯು ಸ್ವಲ್ಪವಾಗಿತ್ತು. ಆದಾಗ್ಯೂ ಆ ರಾಜನು ತನ್ನ ಸೇನೆಯನ್ನು ಸಿದ್ಧಮಾಡಿಕೊಂಡು ಸುಂದರೇಶ್ವರನಲ್ಲಿ ಧೃಢವಾದ ಭಕ್ತಿಯುಳ್ಳವನಾಗಿದ್ದನು. ಪುರುಷಪ್ರಯತ್ನವು ವ್ಯರ್ಥವಾದದ್ದು, ದೈವ ಗತಿಯು ಪ್ರಬಲವಾದದ್ದು, ಎಂದು ತಿಳಿದವರು ಹೇಳುವ ಮಾತು ನನಗೆ ಸತ್ಯವಾಗಿ ರುವುದು. ರಾಜನೆಂದು ಹೇಳಿಸಿಕೊಳ್ಳುವ ಕಾರಣ ಸೇನೆಯೇ ಮೊದಲಾದವುಗಳನ್ನು ಸ್ವೀಕರಿಸಬೇಕಾಗಿರುವುದು.

೧೩–೧೯. ಹತ್ತು ರಥಗಳು, ನೂರು ಆನೆಗಳು, ಸಾವಿರ ಕುದುರೆಗಳು, ಹತ್ತು ಸಾವಿರ ಕಾಲಾಳುಗಳು ಇರುವ ಸೇನೆಯು ನನಗೆ ಯುದ್ಧಕ್ಕೆ ಸಾಕಾಗಿರುವುದು. ಇದಕ್ಕಿಂತ ಹೆಚ್ಚಾಗಿರುವ ಸಹಾಯವು ನನಗೆ ಬೇಕಾಗಿಲ್ಲ. ದೇವನು ನನಗೆ ಸಹಾಯ ಮಾಡುವನು. ಈ ಸಂಖ್ಯೆಯಿಂದ ಇರುವ ಸೇನೆಯವರು ನನ್ನ ಶತ್ರುವನ್ನು ಎದುರಿಸಿ

ಸಮರೇ ತು ಸಮುತ್ಪನ್ನೇ ಯೋತ್ಸ್ಯಂತೇ ತಾಂಶ್ಚ ಮುದ್ರಿಪೂನ್ ।
ಅಸಂಖ್ಯಾ ಚೋಲಸೇನಾದ್ಯ ಯೋದ್ಧುಂ ಚೇತ್ತು ಸಮಾಗತಾ ॥ ೧೫ ॥

ಯತ್ಕರಿಷ್ಯತಿ ಸಾಹಾಯ್ಯಂ ಮಮ ಹಾಲಾಸ್ಯನಾಯಕಃ ।
ತತ್ಸರ್ವಂ ಸಚಿವಾಃ ಸರ್ವೇ ಯೂಯಂ ದ್ರಕ್ಷ್ಯಥ ವಿಸ್ಮಿತಾಃ ॥ ೧೬ ॥

ಏತಾವತೀಭಿಃ ಸಂಖ್ಯಾಭಿಃ ಸಂಯುಕ್ತಾಶ್ಚ ಚತುರ್ವಿಧಾಃ ।
ಸೇನಾದ್ಯಾ ಮಮ ರಕ್ಷ್ಯಂತೇ ಯಾವತಾ ಚ ಧನೇನ ಚ ॥ ೧೭ ॥

ಧನಂ ಚ ತಾವನ್ಮಾತ್ರಂ ಚ ಕೋಶಾಗಾರೇ ನಿಧೀಯತಾಂ ।
ಅವಶಿಷ್ಟಂ ಸ್ವರ್ಣಜಾತಂ ಸುಂದರೇಶಾಯ ದೀಯತಾಂ ॥ ೧೮ ॥

ಬ್ರಾಹ್ಮಣೇಭ್ಯಶ್ಚ ವಿದ್ವದ್ಭ್ಯಃ ಇತ್ಯುಕ್ತ್ವಾ ವರ್ತತೇ ಸ್ಥಿರಃ ।
ಅನ್ವಮಂಸತ ಕೇಚಿತ್ತ್ವಪರೇ ನಾನ್ವಮಂಸತ ॥ ೧೯ ॥

ಚೋಲ ಮಾಗತ ಮಶ್ರೌಷೀತ್ಸುಂದರೇಶಾಂಘ್ರಿಶೇಖರಃ ।
ತುರಗಾಣಾಂ ಸಹಸ್ರಂ ಚ ತುರಂಗೇಣ ನಿರೋಧಕಃ ॥ ೨೦ ॥

---

ಯುದ್ಧ ಮಾಡುವರು. ಚೋಳರಾಜನ ಸೇನೆಯು ಅಸಂಖ್ಯಾತವಾಗಿ ನನ್ನ ಸಂಗಡ ಯುದ್ಧಕ್ಕಾಗಿ ಬಂದರೆ, ಆಗ ಹಾಲಾಸ್ಯೇಶ್ವರನು ಮಾಡುವ ಸಹಾಯವನ್ನು ಮಂತ್ರಿಗಳಾದ ನೀವೆಲ್ಲರೂ ಆಶ್ಚರ್ಯದಿಂದ ನೋಡುವಿರಿ. ಈಗ ನಾನು ಸಿದ್ಧಮಾಡಿರುವ ನಾಲ್ಕು ವಿಧವಾದ ಸೇನೆಗೆ ಬೇಕಾಗುವ ಧನವನ್ನು ಮಾತ್ರ ತೆಗೆದುಕೊಂಡು ಉಳಿದಿರುವ ದ್ರವ್ಯವೆಲ್ಲವನ್ನೂ ಸುಂದರೇಶ್ವರ ದೇವಾಲಯಕ್ಕೆ ದಾನಮಾಡಿರಿ. ಮತ್ತು ಬ್ರಾಹ್ಮಣರಿಗೂ ದಾನಮಾಡಿರಿ. ಎಂದು ಸುಂದರೇಶಾಂಘ್ರಿಶೇಖರರಾಜನು ಮಂತ್ರಿಗಳಿಗೆ ಹೇಳಿ ಧೈರ್ಯವಾಗಿದ್ದನು. ಅವನ ಮಾತನ್ನು ಕೆಲವರು ಒಪ್ಪಿದರು. ಕೆಲವರು ಒಪ್ಪಲಿಲ್ಲ.

೨೦–೨೫. ಜನಗಳು ಸುಂದರೇಶಾಂಘ್ರಿರಾಜಶೇಖರನಿಗೆ "ಚೋಳರಾಜನು ಹತ್ತಿರಕ್ಕೆ ಬಂದನು. ಅವನು ಸಾವಿರ ಕುದುರೆಗಳನ್ನೂ ಯುದ್ಧದಲ್ಲಿ ಒಂದು ಕುದುರೆಯಿಂದ ತಡೆಯಬಲ್ಲನು" ಎಂದು ಹೇಳಿದರು. ಅವನು ಅವರ ಮಾತನ್ನು

ಇತಿ ಶಂಸಂತಿ ಬಹವಃ ಪಾಂಡ್ಯ ಸ್ತದ ಶ್ರುಣೋತ್ಸದಾ ।
ತಥಾಪಿ ಧೀರಃ ಪಾಂಡ್ಯಸ್ತು ಪ್ರಾಪ್ಯ ನೀಪಾಟವೀಶ್ವರಂ ॥ ೨೧ ॥

ಸ್ವಸೇನಾಂ ಚೋಲಸೇನಾಂ ಚ ಸಂಖ್ಯಯಾ ಸಂಖ್ಯಾಯಾ ಯುತಾಂ ।
ಭಕ್ತಾಭೀಷ್ಟಪ್ರದೇಶಾಯ-ವಿವಿಚ್ಯಾಥ ವ್ಯಜಿಜ್ಞಪತ್ ॥ ೨೨

ಅಂತಃ ಖಿನ್ನಂ ಬಹಿರ್ಧೀರಂ ವಿಲೋಕ್ಯ ಕರುಣಾನಿಧಿಃ ।
ವಾಚಾ ಚ ದಿವ್ಯಯಾ ಪ್ರಾಹ ಸುಂದರೇಶಾಂಘ್ರಿಶೇಖರಂ ॥ ೨೩ ॥

ಯದಾ ತು ಚೋಲಭೂಪಾಲಃ ಸೇನಯಾನಂತಯಾ ಗತಃ ।
ತದಾ ತ್ವಂ ಸುದೃಢೋ ಭೂತ್ವಾ ವಿಶ್ವಸ್ಯ ವಚನಂ ಮಮ ॥ ೨೪ ॥

ಚೋಳಸ್ಯಾಭಿಮುಖಂ ಗತ್ವಾ ಸೇನಯಾ ಮಿತಯಾ ಯುತಃ ।
ತೇನಾಹವಂ ಕುರುಷ್ವ ತ್ವಂ ತುಭ್ಯಂ ದಾಸ್ಯಾಮ್ಯಹಂ ಜಯಂ ॥ ೨೫ ॥

ಇತಿ ಶ್ರುತ್ವಾಂ ಪಾಂಡ್ಯಪತಿ ರ್ವಾಚಂ ಶ್ರುತ್ವಾಽಶರೀರಿಣೀಂ ।
ಚೇಲಾಂಚಲೇನ ಬಧ್ವಾ ಚ ಯಯೌ ಪಾಂಡ್ಯ ಸ್ಸ್ವಮಂದಿರಂ ॥ ೨೬ ॥

---

ಕೇಳಿದರೂ ಧೈರ್ಯವಾಗಿದ್ದನು. ಆಗ ಅವನು ಹಾಲಾಸ್ಯೇಶ್ವರನ ಹತ್ತಿರಕ್ಕೆ ಹೋಗಿ, ತನ್ನ ಸೇನೆಯಿರುವ ಸಂಖ್ಯೆಯನ್ನೂ, ಚೋಳರಾಜನ ಸೇನಾಸಂಖ್ಯೆಯನ್ನೂ ಆ ದೇವ ದೇವನಲ್ಲಿ ವಿವರವಾಗಿ ಹೇಳಿದನು. ಭಕ್ತರ ಇಷ್ಟವನ್ನು ನೆರವೇರಿಸಿಕೊಡುವ ಆ ದೇವನು ಮನಸ್ಸಿನಿಂದ ದುಃಖವುಳ್ಳವನಾಗಿ, ಹೊರಗಡೆ ಧೈರ್ಯದಿಂದ ಇರುವ ಸುಂದರೇಶಾಂಘ್ರಿಶೇಖರರಾಜನನ್ನು ನೋಡಿ, ದಯೆಯುಳ್ಳವನಾಗಿ “ ಚೋಳರಾಜನು ಯುದ್ಧಮಾಡಲು ಬಂದಾಗ ಅವನ ಸೇನೆಯು ಬಹಳವಾಗಿರುವುದೆಂದು ಹೆದರದೆ, ಧೈರ್ಯದಿಂದ ನನ್ನ ಮಾತನ್ನು ನಂಬಿಕೊಂಡು ನೀನು ಯುದ್ಧವನ್ನು ಮಾಡು. ನಿನ್ನ ಸ್ವಲ್ಪವಾದ ಸೇನೆಯನ್ನು ಸಿದ್ಧಮಾಡಿಕೊಂಡು ಯುದ್ಧಕ್ಕೆ ಸಿದ್ಧನಾಗು. ನಾನು ನಿನಗೆ ಜಯವನ್ನು ಕೊಡುವೆನು ” ಎಂದು ದಿವ್ಯವಾದ ಧ್ವನಿಯಿಂದ ಹೇಳಿದನು.

೨೬–೩೧. ಆಕಾಶವಾಣಿಯಿಂದ ಹೇಳಿದ ಆ ಮಾತನ್ನು ಕೇಳಿದ ಪಾಂಡ್ಯ ರಾಜನಿಗೆ ಸಂತೋಷವಾಯಿತು. ಅದನ್ನು ನಂಬಿಕೊಂಡು ಮನೆಗೆ ಬಂದನು. ಕೆಲವು ದಿನಗಳು ಕಳೆದನಂತರ ಅಪರಿಮಿತವಾದ ಸೇನಾಸಮೇತನಾಗಿ ಚೋಳರಾಜನು

ಪಶ್ಚಾದ್ದಿನೇಷು ಗಚ್ಛತ್ಸು ಕೇಷುಚಿಚ್ಚೋಲಭೂಪತಿಃ ।
ಆಜಗಾಮ ಮಹಾಸೇನಃ ಕಂಪಯನ್ ಪೃಥಿವೀತಲಂ ॥ ೨೭ ॥

ಪಾಂಡ್ಯೋಽಪಿ ಧೈರ್ಯಸಂಯುಕ್ತಃ ಸ್ವಲ್ಪಸೇನಾಸಮಾವೃತಃ ।
ಜಗಾಮಾಭಿಮುಖಂ ಜನ್ಯಂ ಚಕ್ರುಃ ಸೇನಾತಯೋರಥ ॥ ೨೮ ॥

ಮಿತಾಪಿ ಸೇನಾ ಪಾಂಡ್ಯಸ್ಯ ತ್ವನತಾ ದೃಶ್ಯತೇಽರಿಭಿಃ ।
ಅಮಿತಾ ಚೋಲಸೇನಾ ಚ ಸ್ಯವರ್ತತ ಶಿವಾಜ್ಞಯಾ ॥ ೨೯ ॥

ಚೋಲ ಸ್ತದಾನೀಂ ಸಂಕ್ರುದ್ಧಃ ಸ್ವಮೂಲಬಲಸಂಯುತಃ ।
ಸಹಸ್ರಂ ಚೈಕತೋ ಹನ್ಮೀತ್ಯುಚ್ಚೈ ರ್ಜಲ್ಪನ್ ಸಮಾಗಮತ್ ॥ ೩೦ ॥

ದೃಷ್ಟ್ವಾ ವೇಗಾತ್ ಸಮಾಯಾಂತಂ ಮಹಾಶ್ವವರವಾಹನಂ ।
ಪಾಂಡ್ಯ ಸ್ತದಾನೀಂ ಕಿಂ ಕಾರ್ಯಮಿತಿ ಚಿಂತಾಪರ ಸ್ಸ್ಥಿತಃ ॥ ೩೧ ॥

---

ಭೂಮಿಯೆಲ್ಲವನ್ನೂ ನಡುಗಿಸುತ್ತಾ ಯುದ್ಧಮಾಡಲು ಬಂದನು. ಆಗ ಪಾಂಡ್ಯರಾಜನು ತನ್ನ ಕೊಂಚಸೇನೆಯನ್ನು ಸಿದ್ಧಮಾಡಿಕೊಂಡು ಧೈರ್ಯದಿಂದ ಯುದ್ಧಮಾಡಲು ಸಿದ್ಧನಾದನು. ಅನಂತರದಲ್ಲಿ ಯುದ್ಧವು ಪ್ರಾರಂಭವಾಯಿತು. ಪಾಂಡ್ಯರಾಜನ ಸೇನೆಯು ಸ್ವಲ್ಪವಾಗಿದ್ದರೂ ಹೆಚ್ಚಾಗಿರುವಂತೆ ಕಾಣಿಸುತ್ತಾ ಬಂತು. ಆಗ ಚೋಳ ರಾಜನ ಸೇನೆಯು ಬಹಳವಾಗಿದ್ದರೂ, ಶಿವನ ಅಪ್ಪಣೆಯಿಂದ ಹಿಂತಿರುಗಬೇಕಾಗಿ ಬಂತು. ಆಗ ಚೋಳರಾಜನು ತನ್ನ ಮೂಲಬಲದೊಡನೆ ಕೂಡಿದವನಾಗಿ ಕೋಪದಿಂದ " ಸಾವಿರ ಕುದುರೆಗಳನ್ನು ಒಂದು ಕುದುರೆಯಿಂದ ನಾಶಮಾಡುತ್ತೇನೆ " ಎಂದು ವೀರವಾದವನ್ನು ಮಾಡುತ್ತಾ ಬಿರುಸಾಗಿ ಬಂದನು. ಉತ್ತಮವಾದ ಕುದುರೆಯನ್ನು ಹತ್ತಿಕೊಂಡು ವೇಗದಿಂದ ಬಂದಿರುವ ಚೋಳರಾಜನನ್ನು ನೋಡಿ, ಪಾಂಡ್ಯರಾಜನಿಗೆ ಹೆದರಿಕೆಯಾಯಿತು. ಆಗ ಅವನು " ನಾನು ಈಗ ಏನು ಮಾಡಲಿ " ಎಂದು ಯೋಚಿಸುತ್ತಿದ್ದನು.

ತದಾ ಕೃಪಾಲು ರ್ಭಗವಾನ್ ಕದಂಬವನನಾಯಕಃ ।
ಅಮ್ನಾಯಮಯ ಮಶ್ವಂ ಚ ಮಹಾಂತ ಮಧಿರುಹ್ಯ ಚ ॥ ೩೨ ॥

ತಮಾಲಶ್ಯಾಮಲಾಕಾರೋ ಜ್ವಲನಾರುಣಲೋಚನಃ ।
ವಿಚಿತ್ರಕಂಚುಕೋಷ್ಣೀಷವಿಲಸದ್ಗಾತ್ರಮಸ್ತಕಃ ॥ ೩೩ ॥

ಕರ್ಣಭೂಷಾಕೃತಗಜದಂತಪತ್ರವಿರಾಜಿತಃ ।
ತಾರಮುಕ್ತಾಮಣಿಮಯಹಾರಕೇಯೂರಕಂಕಣಃ ॥ ೩೪ ॥

ಉಷ್ಣೀಷವಲಯಾ ಬದ್ಧಪಿಂಛಜಾತಸುಶೋಭಿತಃ ।
ಇತಿ ಕೈರಾತಮಾಕಾರ ಮಾಸ್ಥಾಯಾ ನಂದಸುಂದರಃ ॥ ೩೫ ॥

ಪಾಂಡ್ಯಸ್ಯ ಸೇನಾಮಧ್ಯಾತ್ತು ನಿರ್ಗತ್ಯ ಪುರತಸ್ಸ್ಥಿತಃ ।
ಅನಂತಾಂಶ್ಚೈಕದಾ ಹನ್ಮಿ ಯುದ್ಧಂ ಕುರು ಮಯಾ ಸಹ ॥ ೩೬ ॥

---

೩೨–೩೮. ಆಗ ದಯಾಶಾಲಿಯಾದ ಕದಂಬವನಾಧಿಪನು ವೇದಮಯವಾದ ದೊಡ್ಡ ಕುದುರೆಯನ್ನು ಹತ್ತಿದನು. ಕೆಂಡದಂತಿರುವ ಕಣ್ಣುಳ್ಳವನಾದನು. ಆಶ್ಚರ್ಯ ವುಂಟುಮಾಡುವ ಕವಚವನ್ನೂ, ರುಮಾಲನ್ನೂ ಹಾಕಿಕೊಂಡನು. ಹೊಂಗೆಯ ಮರದಂತೆ ಕಪ್ಪುಬಣ್ಣದ ಕಾಂತಿಯುಳ್ಳ ಶರೀರವನ್ನು ಹೊಂದಿದನು. ದಂತದಿಂದ ಮಾಡಿದ ಕಿವಿಯವಡವೆಯನ್ನು ಧರಿಸಿದನು. ದಪ್ಪವಾದ ಮುತ್ತುಗಳು, ನವರತ್ನಗಳು ಇವುಗಳಿಂದ ಮಾಡಿದ ಹಾರ, ಕಂಕಣ, ಭುಜಕೀರ್ತಿಗಳನ್ನು ಧರಿಸಿದನು. ರುಮಾಲಿನ ಮೇಲುಗಡೆಗೆ ನವಿಲುಗರಿಯನ್ನು ಸೇರಿಸಿದನು. ಆನಂದಸುಂದರೇಶ್ವರನು ಈ ಪ್ರಕಾರ ದಿಂದ ಪ್ರಕಾಶಿಸುತ್ತಿರುವ (ಬೇಡನ) ಕಿರಾತನ ವೇಷವನ್ನು ಧರಿಸಿ ಪಾಂಡ್ಯರಾಜನ ಸೇನೆಯ ಮಧ್ಯದಲ್ಲಿ ನಿಂತು, ಅಲ್ಲಿಂದ ಮುಂದುಗಡೆಗೆ ಬಂದು "ಅಸಂಖ್ಯಾತ ಸೇನೆಯೆಲ್ಲವನ್ನೂ ನಾನು ಒಬ್ಬನೇ ಒಂದೇ ಏಟಿನಿಂದ ಕೊಲ್ಲುವೆನು. ನನ್ನ ಸಂಗಡ ಯುದ್ಧವನ್ನು ಮಾಡು" ಎಂದು ಆಕಾಶದಲ್ಲಿರುವ ಮೇಘದಂತೆ, ಚೋಳರಾಜನ

ಇತಿ ಗರ್ಜನ್ಬಭೌ ಶಂಭುಃ ಕಾಲಾಂಬುದ ಇವಾಂಬರೇ ।
ಅಥ ಚೋಲೇಂದ್ರತುರಗಮುಖೇ ಶಕ್ತಿಂ ತಟಿತ್ಪ್ರಭಾಂ ॥ ೩೭ ॥

ತ್ಯಕ್ತು ಮುದ್ಯೋಗಮಕರೋ ದ್ಭ್ರಾಮಯಿತ್ವಾ ಕರೇಣ ಸಃ ।
ಚೋಲಃ ಪ್ರಹಾರಭೀತ್ಯೈವ ನಿರಾಶಶ್ಚ ನ್ಯವರ್ತತ ॥ ೩೮ ॥

ತದಾ ತಿರೋಹಿತಃ ಶಂಭುಃ ಕೈರಾತಾಕೃತಿಮಾಸ್ಥಿತಃ ।
ಚೋಲಂ ಪಲಾಯಿತಂ ದೃಷ್ಟ್ವಾ ಪಾಂಡ್ಯೇಶಃ ಪರಯಾ ಮುದಾ ॥ ೩೯ ॥

ತಮನ್ವಧಾವತ್ಪಂಚಾಸ್ಯನಾದಂ ಕುರ್ವನ್ ಜನಾನ್ವಿತಃ ।
ಚೋಲೇಶೋ ಪ್ಯನುಧಾವಂತಂ ಪಾಂಡ್ಯಮೇಕಾಶ್ವಸಾದಿನಂ ॥ ೪೦ ॥

ವೀಕ್ಷ್ಯ ಪ್ರತಿನಿವೃತ್ತ ಸ್ಸನ್ಪ್ರಹರ್ತುಂ ತಂ ಸಮಾಯಯೌ ।
ತದಾ ಪಾಂಡ್ಯಮಹೀಪಾಲಃ ಪ್ರಪಲಾಯನತತ್ಪರಃ ॥ ೪೧ ॥

---

ಎದುರಿಗೆ ಗರ್ಜಿಸಿದನು. ಮತ್ತು ಮಿಂಚಿನಂತೆ ಹೊಳೆಯುತ್ತಿರುವ ಶಕ್ತ್ಯಾಯುಧವನ್ನು ಹಸ್ತದಲ್ಲಿ ಹಿಡಿದು ತಿರುಗಿಸುತ್ತಾ ಚೋಳರಾಜನ ಕುದುರೆಯನ್ನು ಹೊಡೆಯಲು ಉದ್ಯುಕ್ತನಾದನು. ಆಗ ಚೋಳರಾಜನು ಏಟುಬೀಳುವುದೆಂದು ಹೆದರಿ ಯುದ್ಧದಿಂದ ಹಿಮ್ಮೆಟ್ಟಿದನು. ಅವನಿಗೆ ಜಯದ ಆಸೆಯು ಹೋಯಿತು.

೩೯–೪೩. ಆಗ ಕಿರಾತನವೇಷದಿಂದ ಪರಮೇಶ್ವರನು ಅದೃಶ್ಯನಾದನು. ಚೋಳರಾಜನು ಓಡಿ ಹೋದದ್ದನ್ನು ನೋಡಿ ಪಾಂಡ್ಯರಾಜನು ಬಹಳ ಸಂತೋಷದಿಂದ ಸಿಂಹನಾದ ಮಾಡುತ್ತಾ, ವೇಗದಿಂದ ಅವನನ್ನು ಹಿಂಬಾಲಿಸಿದನು. ಒಂದು ಕುದುರೆಯುಳ್ಳವನಾಗಿ ತನ್ನನ್ನು ಹಿಂಬಾಲಿಸಿ ಬರುತ್ತಿರುವ ಪಾಂಡ್ಯರಾಜನು ಒಬ್ಬಂಟಿಗನಾಗಿರುವುದನ್ನು ನೋಡಿದ ಚೋಳರಾಜನು, ಅವನನ್ನು ಹೊಡೆಯಬೇಕೆಂದು ಹಿಂತಿರಿಗಿದನು. ಆಗ ಪಾಂಡ್ಯರಾಜನು ಓಡುವುದಕ್ಕೆ ಪ್ರಾರಂಭಿಸಿದನು. ಬಹಳ ವೇಗವಾಗಿ ಓಡುತ್ತಿರುವ ಇಂದ್ರನ ಕುದುರೆಯಂತೆ ಎತ್ತರವಾದ ತನ್ನ ಕುದುರೆ

ಮನೋಜವಂ ನಿಜಾಶ್ವಂ ಚ ಮಹೇಂದ್ರಾಶ್ವಮಹೋನ್ನತಂ ।
ದರ್ಶಯಿತ್ವಾದರ್ಶಯಿತ್ವಾ ಸನ್ನಿವೃತ್ಯ ನಿವೃತ್ಯ ಚ ॥ ೪೨ ॥

ಆಕರ್ಷನ್ಚೋಲಭೂಪಾಲಂ ವಿಪರೀತವಿಧಿಂ ಜವಾತ್ ।
ಅಗಾಧಾಯಾಂ ಮಹಾವಾಪ್ಯಾಂ ಪುರೀಪಾಶ್ಚಾತ್ಯ ದೇಶಕೇ ॥ ೪೩ ॥

ಪದ್ಮಕೈರವಕಲ್ಹಾರನಿಬಿಡಾಯಾಂ ಸ ಘೋಟಕಃ ।
ಪತಿತ್ವಾ ನುಗ್ರಹಾಚ್ಛಂಭೋಃ ಪತನಕ್ಲೇಶವರ್ಜಿತಃ ॥ ೪೪ ॥

ವಾಪ್ಯಾಃ ಪಾರಂ ಪರಂ ಪ್ರಾಪ್ಯ ಸವಾಹಃ ಸಾನುಗೋ ಯಯೌ ।
ನಿಜಮೂಲಬಲೈಃ ಸರ್ವೈಃ ಸಹಿತಶ್ಚ ಸ ಘೋಟಕಃ ॥ ೪೫ ॥

ಅನ್ವದಾವನ್ಸ ಚೋಳಸ್ತಂ ವಾಪ್ಯಾಂ ಮಗ್ನೋ ಜಹಾವಸೂನ್ ।
ದೃಷ್ಟ್ವಾಂತೋ ಜನಾಃ ಸರ್ವೇ ವಿಸ್ಮಯಂ ಪರಮಂ ಗತಾಃ ॥ ೪೬ ॥

---

ಯನ್ನು ಚೋಳರಾಜನಿಗೆ ಕಾಣುವಂತೆ ಮಾಡುತ್ತಾ ಹಿಂದಕ್ಕೆ ಬಂದ ಪಾಂಡ್ಯರಾಜನು, ದುರದೃಷ್ಟವುಳ್ಳ ಚೋಳರಾಜನನ್ನು ದೂರಕ್ಕೆ ಕರೆದು ತಂದನು. ತನ್ನ ನಗರದ ಹಿಂಬಾಗದಲ್ಲಿರುವ ತಾವರೆಹೂವು, ನೈದಲೆಹೂವು ಇವುಗಳಿಂದ ತುಂಬಿರುವ ಆಳವಾದ ಹಳ್ಳದಲ್ಲಿ ಚೋಳರಾಜನು ಅವನ ಕುದುರೆಯೊಡನೆ ಬೀಳುವಂತೆ ಮಾಡಿದನು.

೪೪–೪೬. ಕುದುರೆಯು ಶಿವನ ಅನುಗ್ರಹದಿಂದ ಬಾವಿಯಲ್ಲಿ ಬಿದ್ದರೂ ಅಪಾಯವಿಲ್ಲದ್ದಾಗಿ, ಹಳ್ಳದ ಆಚೆಯ ದಡವನ್ನು ಹೊಂದಿ, ತನ್ನ ಗುಂಪಿನ ಕುದುರೆಯೊಡನೆ ಸುಖವಾಗಿ ಹೊರಟುಹೋಯಿತು. ಆ ಚೋಳರಾಜನು ಆ ಹಳ್ಳದಲ್ಲಿ ಮುಳುಗಿ ಪ್ರಾಣವನ್ನು ಕಳೆದುಕೊಂಡನು. ಇದನ್ನು ನೋಡಿದ ಜನರೆಲ್ಲರೂ ಬಹಳ ಆಶ್ಚರ್ಯಪಟ್ಟರು. ಚೋಳರಾಜನ ಸೇನೆಯೆಲ್ಲವೂ ಸುತ್ತಲೂ ಎಲ್ಲಾ ಕಡೆಯಲ್ಲಿಯೂ ಓಡಿಹೋಯಿತು.

ಪಲಾಯಂತ್ಯೇನುಯಾತಾಶ್ಚ ಚೋಲಸೇನಾಃ ಸಮಂತತಃ ।
ಕೇಚಿದ್ಗಜಾಃ ಕೇಚಿದಶ್ವಾಃ ಕೇಚಿದ್ಧುರ್ಯವೃಷಾದಯಃ ॥ ೪೭ ॥

ಕಾಶ್ಚಿದ್ವಾರವಿಲಾಸಿನ್ಯೋ ದಾಸ್ಯೋ ದಾಸಾಸ್ತ್ವನೇಕಶಃ ।
ಗೃಹೀತಾಃ ಕಂಬಲಾದ್ಯಾಶ್ಚ ಭೃಂಗಾರಪ್ರಮುಖಾ ಅಪಿ ॥ ೪೮ ॥

ಸುಂದರೇಶಪದಾಂಭೋಜಶೇಖರೇಣ ಮಹೀಭುಜಾ ।
ತಾನ್ ಸರ್ವಾನ್ ಸುಂದರೇಶಾಯ ದರ್ಶಯಿತ್ವಾ ಗಜಾದಿಕಾನ್ ॥ ೪೯ ॥

ತೇಷಾಂ ಮಧ್ಯೇ ಚೋತ್ತಮಂ ಯದ್ಗಜಾದ್ಯಂ ವಸ್ತು ತದ್ದದೌ ।
ಅಸ್ಮಾಕಂ ರಕ್ಷಿತಾ ತ್ವಂ ಚ ಶಿಕ್ಷಿತಾ ಮನು ವೈರಿಣಾಂ ॥ ೫೦ ॥

ರಕ್ಷ ರಕ್ಷ ಪುನಶ್ಚಾಸ್ಮಾನ್ ಶತ್ರೂನ್ ಶಿಕ್ಷಯ ಶಿಕ್ಷಯ ।
ಇತಿ ಸಂಪ್ರಾರ್ಥ್ಯ ದೇವೇಶಂ ಕದಂಬವನನಾಯಕಂ ॥ ೫೧ ॥

ಕೃತನೀರಾಜನವಿಧಿಃ ಪಾಂಡ್ಯಃ ಪ್ರಾಪ ಸ್ವಮಂದಿರಂ ।
ಆಜ್ಞಾದೇವ ಇತಿ ಪ್ರಾಹುಃ ಸುಂದರೇಶಮಥ ಪ್ರಜಾಃ ॥ ೫೨ ॥

---

೪೭–೫೧. ಆಗ ಪಾಂಡ್ಯರಾಜನು, ಕೆಲವು ಆನೆಗಳನ್ನೂ, ಕುದುರೆಗಳನ್ನೂ, ಹೊರೆಯನ್ನು ಎಳೆಯುವ ಎತ್ತುಗಳೇ ಮೊದಲಾದವುಗಳು, ಸೂಳೆಯರು, ದಾಸಿಯರ (ದಾಸರು) ಊಳಿಗದವರು, ಇವರುಗಳನ್ನೂ, ಕಂಬಳಿ ಮತ್ತು ಪಾತ್ರೆಗಳು ಇವೇ ಮೊದಲಾದವುಗಳನ್ನೂ, ಸಂಗ್ರಹಮಾಡಿದನು. ಅವೆಲ್ಲವನ್ನೂ ತಂದು ಸುಂದರೇಶ್ವರನಿಗೆ ತೋರಿಸಿ, ಅವುಗಳಲ್ಲಿ ಉತ್ತಮವಾದವುಗಳನ್ನು ದೇವದೇವನಿಗೆ ಒಪ್ಪಿಸಿದನು. "ಎಲೈ ದೇವನೆ, ನೀನು ನನ್ನನ್ನು ರಕ್ಷಿಸಿರುತ್ತೀಯೆ. ನನ್ನ ಶತ್ರುಗಳಿಗೆ ಶಿಕ್ಷೆಮಾಡಿರುತ್ತೀಯೆ ಹೀಗೆಯೇ ನಮ್ಮನ್ನು ರಕ್ಷಿಸು. ನಮ್ಮ ವೈರಿಗಳನ್ನು ಶಿಕ್ಷಿಸು." ಎಂದು ಅವನು ಸುಂದರೇಶ್ವರನನ್ನು ಪ್ರಾರ್ಥಿಸಿದನು. ಅನಂತರದಲ್ಲಿ ದೇವನಿಗೆ ಮಂಗಳಾರತಿಯನ್ನು ಮಾಡಿಸಿ, ತನ್ನ ಮನೆಗೆ ಹೋದನು.

೫೨–೫೪. ಅನಂತರದಲ್ಲಿ ಪ್ರಜೆಗಳು, ಸುಂದರೇಶ್ವರನನ್ನು ಆಜ್ಞಾದೇವನೆಂತಲೂ, ನೃಪಾಂಡ್ಯನೆಂತಲೂ ಹೆಸರಿನಿಂದ ಕರೆಯುತ್ತಾ, ಅವನ ಮಹಿಮೆಯನ್ನು

ನೃಪಾಂಡ್ಯ ಇತಿ ಶಂಸಂತೋ ಗಚ್ಛಂತಿ ಸ್ಮ ಮುದಾನ್ವಿತಾಃ ।
ದೇವಬ್ರಾಹ್ಮಣಭಕ್ತಾನಾಂ ಕಿಮುಸಾಧ್ಯಂ ಸದಾ ನೃಣಾಂ ॥ ೫೩ ॥

ಪ್ರಮಾಣೇ ಪೂರ್ಣಕಾಮಃ ಸ್ಯಾದಪ್ರಮಾಣೇ* ವೃಥಾ ಜನಃ ।
ಸುಂದರೇಶ್ವರಭಕ್ತಿಶ್ಚ ಸುರಾಣಾಮಪಿ ದುರ್ಲಭಾ ॥ ೫೪ ॥

ತದನುಗ್ರಹಲಬ್ಧಾ ಸಾ ಭೋಗಮೋಕ್ಷಪ್ರದಾಯಿನೀ ।
ಇತಿ ಸಪ್ತಾಧಿಕತ್ರಿಂಶಲ್ಲೀಲಾ ನೀಪಾಟವೀಪತೇಃ ॥ ೫೫ ॥

ಶ್ರುತಮಾತ್ರೇಣ ಭೂಪಾನಾ ಮಾಹವೇ ವಿಜಯಪ್ರದಾ ।

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಚೋಲಸೇನಾಪ್ರಭಂಜನಂ ನಾಮ
ತ್ರಿಚತ್ವಾರಿಂಶೋಽಧ್ಯಾಯಃ

---

ಹೊಗಳುತ್ತಾ ಸಂತೋಷದಿಂದ ಸಂಚರಿಸುತ್ತಿದ್ದರು. ದೇವತೆಗಳೂ ಮತ್ತು ಬ್ರಾಹ್ಮಣರೂ, ಇವರಲ್ಲಿ ಭಕ್ತಿಯುಳ್ಳವರಿಗೆ ಅಸಾಧ್ಯವಾದದ್ದು ಯಾವುದೂ ಇರುವುದಿಲ್ಲ. ದೇವರಲ್ಲಿ ನಂಬಿಕೆಯುಳ್ಳವನಿಗೆ ಇಷ್ಟಸಿದ್ಧಿಯಾಗುವುದು. ಮತ್ತು ಜನರು ನಂಬಿಕೆಯನ್ನು ಇಡದೆ ಅಪ್ರಾಮಾಣಿಕರಾಗುವರು ಸುಂದರೇಶ್ವರನಲ್ಲಿ ಭಕ್ತಿಯು ದೇವತೆಗಳಿಗೂ ಹುಟ್ಟುವುದು ಬಹಳ ಕಷ್ಟವಾಗಿರುವುದು.

೫೫. ಸುಂದರೇಶ್ವರನ ಅನುಗ್ರಹದಿಂದ ಆ ಪ್ರಕಾರವಾದ ಭಕ್ತಿಯು ಹುಟ್ಟಿದಾಗ ಭುಕ್ತಿ ಮುಕ್ತಿಗಳನ್ನು ಉಂಟುಮಾಡುವುದು. ಕೇಳಿದ ಮಾತ್ರದಿಂದಲೇ ರಾಜರಿಗೆ ಯುದ್ಧದಲ್ಲಿ ಜಯವನ್ನು ಉಂಟುಮಾಡುವ ನೀಪಾಟವೀಶ್ವರನಾದ ಸುಂದರೇಶನು ಆಚರಿಸಿದ ಮೂವತ್ತೇಳನೆಯ ಲೀಲೆಯು ಮುಗಿದಿರುವುದು.

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ
ಚೋಳಸೇನಾಪ್ರಭಂಜನವೆಂದು ಹೆಸರುಳ್ಳ ನಲವತ್ತಮೂರನೆಯ
ಅಧ್ಯಾಯವು ಮುಗಿದುದು.



---

* ಅಪ್ರಾಮಾಣಿಕ=ಸತ್ಯಕ್ಕೆ ತಪ್ಪುವವನು.

॥ ಶ್ರೀ ॥
॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಚತುಶ್ಚತ್ವಾರಿಂಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ವಕ್ಷ್ಯೇ ಯುಷ್ಮಾಕ ಮಾಶ್ಚರ್ಯಂ ತತ್ರತ್ಯಂ ಕಿಮಪಿ ದ್ವಿಜಾಃ ।
ಭೂತ್ವಾ ಸಮಾಹಿತಾಸ್ತ್ವೇತಚ್ಛೃಣುಧ್ವಂ ಮುನಿಪುಂಗವಾಃ ॥ ೧ ॥

ಶೂದ್ರಸ್ಯಾ ಕ್ಷತಮೂತಂ ಚ ಯಯಾ ದೇವೋ ದದೌ ಪುರಾ ।
ಸಾ ಲೀಲಾ ಶ್ರುತಮಾತ್ರೇಣ ಮನೋರಥಸುರದ್ರುಮಾ ॥ ೨ ॥

ಪುರಾಸೀ ನ್ಮಧುರಾಪುರ್ಯಾಂ ಶೂದ್ರಃ ಸದ್ಗುಣಸಂಯುತಃ ।
ಭಕ್ತಸೌಮ್ಯ ಇತಿ ಖ್ಯಾತೋ ಭಕ್ತೇಭ್ಯೋಽನ್ನಂ ದದೌ ಮುದಾ ॥ ೩ ॥

---

### ನಲವತ್ತನಾಲ್ಕನೆಯ ಅಧ್ಯಾಯವು

೧–೨. ಅಗಸ್ತ್ಯಋಷಿಯು ಹೇಳಿದನು:—"ಎಲೈ ಋಷಿಗಳಿರಾ ಕೇಳಿರಿ. ಆ ಮಧುರಾನಗರದಲ್ಲಿ ನಡದಿರುವ ಬಹಳ ಆಶ್ಚರ್ಯವನ್ನು ನಾನು ಹೇಳುವೆನು. ನೀವೆಲ್ಲರೂ ಜಾಗರೂಕರಾಗಿ ಕೇಳಿರಿ. ದೇವ ದೇವನಾದ ಸುಂದರೇಶ್ವರನು ಶೂದ್ರನಿಗೆ ಅಕ್ಷಯವಾದ ಧಾನ್ಯದ ಚೀಲವನ್ನು ಕೊಟ್ಟ ಲೀಲೆಯನ್ನು ಹೇಳುವೆನು. ಅದು ಕೇಳಿದವರಿಗೆ ಕಲ್ಪವೃಕ್ಷವಂತೆ ಇಷ್ಟಸಿದ್ಧಿಯನ್ನುಂಟುಮಾಡುವುದು.

೩–೭. ಬಹಳ ದಿನಗಳ ಹಿಂದೆ ಮಧುರಾನಗರದಲ್ಲಿ ಭಕ್ತಸೌಮ್ಯನೆಂದು ಪ್ರಸಿದ್ಧನಾದ ಒಬ್ಬ ಶೂದ್ರನು ಒಳ್ಳೆ ಗುಣಗಳುಳ್ಳವನಾಗಿ ಶಿವಭಕ್ತರಿಗೆ ಸಂತೋಷ

ಧರ್ಮಶೀಲಾ ತಸ್ಯ ಪತ್ನೀ ಪಾತಿವ್ರತ್ಯಪರಾಯಣಾ ।
ಭಕ್ತಾನಾ ಮನ್ನದಾ ನಿತ್ಯಂ ಪತಿವಾಕ್ಯಪ್ರಚೋದಿತಾ ॥ ೪ ॥

ತತಸ್ತೌ ಸದ್ಗುಣಾಸಕ್ತೌ ಶಿವಜ್ಞಾನಸಮನ್ವಿತೌ ।
ಶಿವಭಕ್ತಿಸಮಾಯುಕ್ತೌ ಶಿವಾರ್ಚನಪರಾಯಣೌ ॥ ೫ ॥

ಕೃಷಿಮೇವ ಪ್ರಕುರ್ವಾಣೌ ವರ್ತೇತೇ ಬಹುಧಾನ್ಯಕೌ ।
ಧರ್ಮಮಾರ್ಗೇ ಸಂಚರಂತೌ ಭಸ್ಮರುದ್ರಾಕ್ಷಧಾರಕೌ ॥ ೬ ॥

ಅನ್ವಹಂ ಭೋಜಯಿತ್ವಾ ತೌ ಶಿವಭಕ್ತಾನತಂದ್ರಿತೌ ।
ಪಶ್ಚಾದ್ಭುಕ್ತ್ವಾ ಚ ಹಾಲಾಸ್ಯೇ ಸುಖೇನಾವಸತಾಂ ಪುರೇ ॥ ೭ ॥

ತಯೋಃ ಕದಾಚಿದೀಶಾನೋ ಭಕ್ತಿಶೋಧನಕಾಂಕ್ಷಯಾ ।
ಬಹುಪ್ರದೇಶಜಕೃಷೇರ್ವೈಕಲ್ಯಮುದಪಾದಯತ್ ॥ ೮ ॥

---

ದಿಂದ ಅನ್ನ ದಾನವನ್ನು ಮಾಡುತ್ತಿದ್ದನು. ಅವನ ಹೆಂಡತಿಯು ಪತಿವ್ರತೆಯಾಗಿ ಧರ್ಮಾಚರಣೆಯಲ್ಲಿ ಆಸಕ್ತಳಾಗಿ ಗಂಡನ ಮಾತನ್ನು ಅನುಸರಿಸಿ, ಪ್ರತಿನಿತ್ಯವೂ ಶಿವಭಕ್ತರಿಗೆ ಅನ್ನ ದಾನವನ್ನು ಮಾಡುತ್ತಿದ್ದಳು. ಇವರಿಬ್ಬರೂ ಗುಣವಂತರಾಗಿ, ಶಿವಜ್ಞಾನವುಳ್ಳವರಾಗಿ, ಶಿವನಲ್ಲಿ ಭಕ್ತಿಯುಳ್ಳವರಾಗಿ, ಶಿವನನ್ನು ಪೂಜಿಸುತ್ತಾ ಇದ್ದರು. ವ್ಯವಸಾಯ ಮಾಡಿ ಬೆಳೆದ ಧಾನ್ಯವನ್ನು ಮನೆಯಲ್ಲಿ ತುಂಬಿಕೊಂಡು ಇರುತ್ತಿದ್ದರು. ಧರ್ಮಮಾರ್ಗದಿಂದ ಜೀವನ ಮಾಡುತ್ತಿರುವ ಇವರು ಭಸ್ಮರುದ್ರಾಕ್ಷಿಗಳನ್ನು ಧರಿಸಿ, ಕೊಂಚವೂ ಬೇಜಾರುಪಡದೆ ಪ್ರತಿದಿನವೂ ಶಿವಭಕ್ತರಿಗೆ ಅನ್ನದಾನ ಮಾಡಿದನಂತರ ತಾವಿಬ್ಬರೂ ಭೋಜನ ಮಾಡುತ್ತಾ ಮಧುರಾನಗರದಲ್ಲಿ ಸುಖವಾಗಿದ್ದರು.

೮-೧೧. ಹೀಗಿರುವಾಗ ಒಂದು ಕಾಲದಲ್ಲಿ ಪರಮೇಶ್ವರನು ಇವರ ಭಕ್ತಿಯನ್ನು ಪರೀಕ್ಷಿಸುವುದಕ್ಕಾಗಿ ಇವರು ಮಾಡಿರುವ ವ್ಯವಸಾಯದಲ್ಲಿ ಬೆಳೆಯು ಇಲ್ಲದ ಹಾಗೆ ಮಾಡಿದನು. ಆಗ ಭಕ್ತಸೌಮ್ಯನು "ಮುಂದಿನ ವರ್ಷದ ಬೆಳೆಯಲ್ಲಿ ಬಡ್ಡಿಯ ಸಹಿತವಾಗಿ ಧಾನ್ಯವನ್ನು ಕೊಡುತ್ತೇನೆ." ಎಂದು ಹೇಳಿ, ಬಡ್ಡಿಯಿಂದ ಜೀವನ

ಭವಿಷ್ಯದ್ಭೋಗಸಮಯೇ ವೃದ್ಧ್ಯಾದಾಸ್ಯಾಮ್ಯಹಂ ಧ್ರುವಂ ।
ಇತಿ ವಾರ್ಧುಷಿಕೇಭ್ಯಶ್ಚ ಧಾನ್ಯಮಾದಾಯ ಯತ್ನತಃ ॥ ೯ ॥

ಪ್ರತ್ಯಹಂ ಪ್ರೀತಿಸಂಯುಕ್ತ ಶ್ಶಿವಭಕ್ತಾ ನಭೋಜಯತ್ ।
ಋಣಮಪ್ಯಥ ಕಾಲೇನ ಸರ್ವತ್ರ ಪ್ರಾರ್ಥಿತಾಯ ಚ ॥ ೧೦ ॥

ನ ದದೌ ಪುರುಷಃ ಕಶ್ಚಿದ್ದುರ್ಭಿಕ್ಷವಶತೋ ಭುವಿ ।
ತದಾನೀಂ ಖಿನ್ನಹೃದಯಾ ವುಪವಾಸೇನ ಕರ್ಶಿತೌ ॥ ೧೧ ॥

ಸ್ನಾತ್ವಾ ತೌ ದಂಪತೀ ತೀರ್ಥೇ ಪ್ರಾಪತುಃ ಸುಂದರೇಶ್ವರಂ ।
ಪ್ರದಕ್ಷಿಣತ್ರಯೇಣಾಪಿ ನಮಸ್ಕಾರೈಶ್ಚ ಪಂಚಭಿಃ ॥ ೧೨ ॥

ಪಂಚಾಕ್ಷರಜಪೈಸ್ಸ್ತೋತ್ರೈಃ ಪ್ರೀಣಯಾಮಾಸತುಃ ಶಿವಂ ।
ಅಥ ತೌ ಸಾಂಜಲೀ ಭೂತ್ವಾ ಸಾನಂದಾಶ್ರುವಿಲೋಚನೌ ॥ ೧೩ ॥

ಪುಲಕಾಂಚಿತಸರ್ವಾಂಗೌ ಸಗದ್ಗದವಚೋಯುತೌ ।
ಶ್ರೀಹಾಲಾಸ್ಯಪತಿಂ ಶಂಭುಂ ಸಾಂಬಂ ಕಾರುಣ್ಯರೂಪಿಣಂ ॥ ೧೪ ॥

---

ಮಾಡುವವರಿಂದ ಧಾನ್ಯವನ್ನು ತಂದನು. ಅದರಿಂದ ಪ್ರತಿದಿನವೂ ಶಿವಭಕ್ತರಿಗೆ ಹಿಂದಿನಂತೆಯೇ ಅನ್ನದಾನ ಮಾಡಿದನು. ಭೂಮಿಯಲ್ಲಿ ಕ್ಷಾಮವು ಬಂದಕಾರಣ, ಇವನು ಪ್ರಯತ್ನಮಾಡಿ, ಪ್ರಾರ್ಥಿಸಿದರೂ ಎಲ್ಲಿಯೂ ಸಾಲವನ್ನು ಯಾರೂ ಇವನಿಗೆ ಕೊಡಲಿಲ್ಲ. ಆಗ (ಭಕ್ತಸೌಮ್ಯನೂ, ಇವನ ಹೆಂಡತಿಯೂ) ಇವರಿಬ್ಬರೂ ಉಪವಾಸ ಮಾಡಿದರು.

೧೨–೧೪. ಉಪವಾಸ ಮಾಡಿ ಕೃಶರಾದ ದಂಪತಿಗಳು ತೀರ್ಥದಲ್ಲಿ ಸ್ನಾನ ಮಾಡಿ, ಸುಂದರೇಶ್ವರನಿಗೆ ಮೂರು ಪ್ರದಕ್ಷಿಣೆಯನ್ನು ಮಾಡಿ, ಐದು ನಮಸ್ಕಾರಗಳನ್ನು ಹಾಕಿ, ಪಂಚಾಕ್ಷರಜಪವನ್ನು ಮಾಡಿ, ಸ್ತೋತ್ರಮಾಡಿ ಸುಂದರೇಶ್ವರನನ್ನು ಸಂತೋಷಪಡಿಸಿದರು. ಅನಂತರದಲ್ಲಿ ಅವರಿಬ್ಬರೂ, ಕಣ್ಣಿನಲ್ಲಿ ಆನಂದಾಶ್ರುಗಳನ್ನು ಸುರಿಸುತ್ತಾ, ರೋಮಾಂಚವುಳ್ಳ ಶರೀರವುಳ್ಳವರಾಗಿ, ಹರ್ಷದಿಂದುಂಟಾದ ಧ್ವನಿ ವಿಕಾರದಿಂದ ಕೂಡಿ, ಬಹಳ ದಯೆಯುಳ್ಳವನಾದ, ಪಾರ್ವತೀಸಹಿತನಾದ, ಭಕ್ತರ ಕಷ್ಟವನ್ನು ಹರಿಸುವ ಪರಮೇಶ್ವರನನ್ನು ಪ್ರಾರ್ಥಿಸಿದರು.

ಪ್ರಾರ್ಥಯಾಮಾಸತು ಶ್ಚೈವ ಮುಗ್ಧೌ ಭಕ್ತಾರ್ತಿಭಂಜನಂ ।

। ದಂಪತೀ ಊಚತುಃ ।

ಕದಂಬಕಾನನಾಧೀಶ ಕನಕಾಚಲಕಾರ್ಮುಕ ।
ಕಮಲಾಸನಸಂಸ್ತುತ್ಯ ಕಮಲಾಪತಿಪೂಜಿತ ॥ ೧೫ ॥

ಭವತ ಶ್ಚರಣಾಂಭೋಜಂ ನಿಯಮಾನ್ನಿತ್ಯಮರ್ಚ್ಯ ಚ ।
ಭವದ್ಭಕ್ತಜನಾನ್ ಪಶ್ಚಾದ್ಭಕ್ತದಾನೇನ ತೋಷ್ಯ ಚ ॥ ೧೬ ॥

ಭುಕ್ತ್ವಾ ಭಕ್ತಂ ಭುಕ್ತಶೇಷಂ ತ್ವತ್ಕಟಾಕ್ಷಪ್ರಭಾವತಃ ।
ತ್ವದ್ಭಕ್ತಜನಸಂಕೀರ್ಣೇ ತ್ವತ್ಸಾನಿಧ್ಯಾತಿಪಾವನೇ ॥ ೧೭ ॥

ಆವಾಂ ನೀಪವನೇ ಕ್ಷೇತ್ರೇ ಸುಖಂ ವರ್ತಾವಹೇ ಪುರಾ ।
ಋಣಾತ್ಪ್ರತಿಗೃಹೀತೇನ ಧಾನ್ಯೇನ ಚ ಧನೇನ ಚ ॥ ೧೮ ॥

ಇದಾನೀಂ ಪಂಚ ಷಾಮಾಸಾ ಯಾತಾಃ ಕೃಚ್ಛ್ರೇಣ ಚಾವಯೋಃ ।
ಪೂರ್ವೇದ್ಯುರಪಿ ಭಕ್ತಾಶ್ಚ ಭಕ್ತದಾನೇನ ತರ್ಪಿತಾಃ ॥ ೧೯ ॥

---

೧೫–೨೦. ಶೂದ್ರದಂಪತಿಗಳು ಹೇಳಿದರು:—ಕದಂಬ ಕಾನನಕ್ಕೆ ಪತಿಯಾಗಿ, ಮೇರುಪರ್ವತವನ್ನು ಧನುಸ್ಸಾಗಿ ಧರಿಸಿ ಇರುವ, ಬ್ರಹ್ಮನಿಂದ ಸ್ತುತಿಯನ್ನು ಹೊಂದುತ್ತಿರುವ, ವಿಷ್ಣುವಿನಿಂದ ಪೂಜೆಯನ್ನು ಕೈಗೊಳ್ಳುತ್ತಿರುವ, ಎಲೈ ಸುಂದರೇಶ್ವರನೆ, ನಾವಿಬ್ಬರೂ ನಿನ್ನ ಪಾದಪದ್ಮಗಳನ್ನು ಪ್ರತಿದಿನದಲ್ಲಿಯೂ ನಿಯಮದಿಂದ ಪೂಜಿಸುತ್ತಾ, ನಿನ್ನ ಭಕ್ತರನ್ನು ಸಂತೋಷಪಡಿಸಿ, ಉಳಿದಿರುವ ಅನ್ನದಿಂದ ಜೀವಿಸುತ್ತಿರುತ್ತೇವೆ. ನಿನ್ನ ಕಟಾಕ್ಷದ ಮಹಿಮೆಯಿಂದ ನಿನ್ನ ಭಕ್ತರು ತುಂಬಿ ಇರುವ ಪರಮಪವಿತ್ರವಾದ ಈ ನಿನ್ನ ಸನ್ನಿಧಿಯಲ್ಲಿ ಈ ನೀಪವನಪ್ರದೇಶದಲ್ಲಿ ಸುಖದಿಂದ ಇರುವೆವು. ನಾವುಗಳು ಸಾಲಮಾಡಿರುವ ಧನ ಧಾನ್ಯಗಳಿಂದ ಈ ಆರು ತಿಂಗಳ ಕಾಲವೂ ಕಷ್ಟದಿಂದ ಜೀವಿಸಿದೆವು. ನಿನ್ನೆಯ ದಿನವೂಕೂಡ ನಿನ್ನ ಭಕ್ತರನ್ನು ಸಂತೋಷಪಡಿಸಿದ್ದಾಯಿತು. ಈ ದಿವಸ ನನಗೆ ಸಾಲವನ್ನು ಕೊಡುವವರು ಯಾರೂ ಇಲ್ಲವು.

ಋಣದಾತಾ ಚ ಮೇ ನಾಸ್ತಿ ಚಾದ್ಯ ಕಿಂ ಕರವಾಣ್ಯಹಂ ।
ಋಣಪ್ರದಂ ಮೇ ತ್ವಂ ಕಂಚಿತ್ಸದ್ಯೋ ದರ್ಶಯ ಶಂಕರ　　॥ ೨೦ ॥

ನ ಚೇನ್ಮೇ ದರ್ಶಯಸ್ಯೇಕಂ ಹಾಸ್ಯಾಮ್ಯೇವ ಕ್ಷಣಾದಸೂನ್ ।
ತ್ವದ್ಭಕ್ತೇಭ್ಯೋ ಭಕ್ತದಾನಂ ಮಮ ಸತ್ಯವ್ರತಂ ಶುಭಂ　　॥ ೨೧ ॥

ತದ್ವಿನಾ ಸ್ಥಾತುಮತ್ರೈವ ನ ಶಕ್ತೋಽಹಂ ಕದಾಚನ ।
ಇತ್ಯಾರ್ತಿಯುಜಿ ವಿಜ್ಞಪ್ತಿಂ ಕುರ್ವಾಣೇಽಸ್ಮಿನ್ಪ್ರಿಯಾನ್ವಿತೇ　　॥ ೨೨ ॥

ತದಾ ದಿವ್ಯಾಭವ ದ್ವಾಣೀ ಶೈವೀ ನಿಖಿಲಕಾಮದಾ ।
ಶೂದ್ರಚೂಡಾಮಣೇ ತ್ವಂ ಹಿ ಭಕ್ತೈರ್ಭಕ್ತಾನಭೋಜಯಃ　　॥ ೨೩ ॥

ಆಸ್ತಿಕೋ ಹರ್ಷಸಂಯುಕ್ತ ಸ್ತದಾ ಕಿಂಚಿನ್ನ ದೃಷ್ಟವಾನ್ ।
ಧವಳಾಕ್ಷತಸಂಪೂರ್ಣ ಊತಸ್ತೇ ಸದನೇ ಸ್ಥಿತಃ　　॥ ೨೪ ॥

---

ನಾನು ಏನು ಮಾಡಲಿ ? ಎಲೈ ಶಂಕರನೆ, ನೀನು ನನಗೆ ಸಾಲ ಕೊಡುವವನನ್ನು ಯಾರನ್ನಾದರೂ ತೋರಿಸು. ಇಲ್ಲದಿದ್ದರೆ ಈ ಕ್ಷಣದಲ್ಲಿಯೇ ನಾನು ಪ್ರಾಣವನ್ನು ಬಿಡುವೆನು.

೨೧–೨೫. ನಿನ್ನ ಭಕ್ತರಿಗೆ ಪ್ರತಿದಿನವೂ ಅನ್ನದಾನ ಮಾಡುವುದು, ನನ್ನ ವ್ರತವಾಗಿರುವುದು. ಆ ವ್ರತವನ್ನು ನಾಶಪಡಿಸಿಕೊಂಡು ಬದುಕಿರುವುದಕ್ಕೆ ನನಗೆ ಇಷ್ಟವಿಲ್ಲವು ಎಂದು ಭಕ್ತಸೌವ್ಯನೆಂಬ ಶೂದ್ರನು ತನ್ನ ಪತ್ನೀಸಹಿತನಾಗಿ ದೇವನ ಹತ್ತಿರದಲ್ಲಿ ಸಂಕಟದಿಂದ ವಿಜ್ಞಾಪನೆಮಾಡುತ್ತಿರುವುದನ್ನು ಕೇಳಿದ ಶಂಕರನು "ಎಲೈ ಶೂದ್ರಚೂಡಾಮಣಿಯೇ, ನೀನು ಶಿವಭಕ್ತರನ್ನು ಅನ್ನದಾನದಿಂದ ಭೋಜನ ಮಾಡಿಸುತ್ತಾ ಇದ್ದೆ. ನಿನ್ನಲ್ಲಿ ಧನ ಧಾನ್ಯಗಳು ಇರುವಾಗ ನೀನು ಯಾರನ್ನೂ ಬೇಡಿದವನಲ್ಲ. ಮನೆಯಲ್ಲಿ ಚೆನ್ನಾಗಿ ನೋಡಿದವನಲ್ಲ. ಈಗ ನೀನು ಮನೆಗೆ. ಹೋಗಿ ನೋಡು. ಶುಭ್ರವಾದ ಅಕ್ಕಿಯಿಂದ ಕೂಡಿದ ಚೀಲವು ಇರುವುದು

ತಂಡುಲಂ ಬಹುಲಂ ತಸ್ಮಾದಾದಾಯ ತ್ವಂ ಕುರು ವ್ರತಂ ।
ಮತ್ಪ್ರಸಾದಾ ತ್ಕದಾಚಿನ್ನ ಕ್ಷೀಯತೇ ಪೂರ್ಣ ಏವ ಸಃ ॥ ೨೫ ॥

ಸತ್ಯಾಂ ಸ್ವರ್ಣಾದ್ಯಪೇಕ್ಷಾಯಾಮಾದಾಯ ಬಹುಲಾಕ್ಷತಂ ।
ವಿಕ್ರೀತ್ವಾಥ ಸಮಾದಾಯ ಭಕ್ತಾನ್ಪ್ರೀಣಯ ಸಾದರಂ ॥ ೨೬ ॥

ಯಾವದಿಚ್ಛಂತಿ ಮೇ ಭಕ್ತಾಸ್ತಾವದ್ದತ್ವಾ ಧನಾದಿಕಂ ।
ನಿರಾಧಿವ್ಯಾಧಿಕೋ ಜೀವ ವೇದೋಕ್ತಂ ಶರದಶ್ಶತಂ ॥ ೨೭ ॥

ಪಶ್ಚಾ ದ್ದಾಸ್ಯಾಮಿ ಯುವಯೋ ರ್ಮದೀಯಂ ಲೋಕ ಮದ್ಭುತಂ ।
ಭಕ್ತೇಭ್ಯೋ ಭಕ್ತದಾನಂ ಚ ವಿಶೇಷೇಣ ಸಮಾಚರ ॥ ೨೮ ॥

ತಸ್ಮಾ ತ್ಪರಮತೋ ಧರ್ಮೋ ನಾಸ್ತೀತಿ ಪ್ರವಿಚಾರ್ಯ ಚ ।
ಅನ್ನದಾನ ಮಹೋರಾತ್ರಂ ಕುರುನಿತ್ಯಮತಂದ್ರಿತಃ ॥ ೨೯ ॥

---

ಆದರಿಂದ ನೀನು ಬೇಕಾದಹಾಗೆ ಅಕ್ಕಿಯನ್ನು ತೆಗೆದುಕೊಂಡು ನಿನ್ನ ವ್ರತವನ್ನು ಆಚರಿಸು. ನನ್ನ ಅನುಗ್ರಹದಿಂದ ಅದು ಎಷ್ಟು ಖರ್ಚುಮಾಡಿದರೂ ಮುಗಿಯದೆ ಅಕ್ಷಯವಾಗಿ ಇರುವುದು.

೨೬-೩೦. ನಿನಗೆ ಚಿನ್ನವೇ ಮೊದಲಾದವುಗಳಲ್ಲಿ ಆಸೆಯಿದ್ದರೆ, ಅದರಿಂದ ಅಕ್ಕಿಯನ್ನು ಮಾರಿ,ಬಂದ ಧನದಿಂದ ಬೇಕಾದರೂ ಶಿವಭಕ್ತರನ್ನು ಸಂತೋಷಪಡಿಸು. ನನ್ನ ಭಕ್ತರ ಅಪೇಕ್ಷೆಗೆ ಅನುಸಾರವಾಗಿ ಅವರಿಗೆ ದಾನಮಾಡುತ್ತಾ, ನೀನು ಆಧಿ ವ್ಯಾಧಿಗಳು ಯಾವುದೂ ಇಲ್ಲದವನಾಗಿ, ವೇದದಲ್ಲಿ ಹೇಳಿರುವಂತೆ ನೂರು ವರ್ಷಗಳ ವರೆಗೂ ಸುಖವಾಗಿ ಜೀವಿಸು. ಅನಂತರದಲ್ಲಿ ನಿಮ್ಮಿಬ್ಬರಿಗೂ ನಾನು ನನ್ನ ಆಶ್ಚರ್ಯ ಕರವಾದ ಲೋಕದಲ್ಲಿರಲು ಅವಕಾಶವನ್ನು ಕೊಡುವೆನು. ನನ್ನ ಭಕ್ತರಿಗೆ ಅನ್ನದಾನ ವನ್ನು ವಿಶೇಷವಾಗಿ ಮಾಡುವುದಕ್ಕಿಂತಲೂ ಹೆಚ್ಚಿನ ಧರ್ಮವು ಯಾವುದೂ ಇಲ್ಲ ವೆಂದು ಚೆನ್ನಾಗಿ ತಿಳಿದುಕೊಂಡು, ಅಹೋರಾತ್ರಿಗಳಲ್ಲಿ ಪ್ರತಿದಿನವೂ ಆದರದಿಂದ

ತಚ್ಛ್ರುತ್ವಾ ಶಾಂಕರಂ ವಾಕ್ಯಂ ವ್ಯಕ್ತಂ ಭಾರ್ಯಾಪತೀ ಚ ತೌ ।
ವಿಸ್ಮಯಾವಿಷ್ಟಚಿತ್ತೌ ಚ ಸ್ತುತ್ವಾ ನತ್ವಾ ಪುನಶ್ಶಿವಂ ॥ ೩೦ ॥

ಸಹಸಾ ಸದನಂ ರಮ್ಯಂ ಜಗ್ಮತುಃ ಪ್ರೀತಿಸಂಯುತೌ ।
ಅಕ್ಷತಾಕ್ಷತಸಂಪೂರ್ಣಂ ಮಹಾಂತಂ ಮಹದದ್ಭುತಂ ॥ ೩೧ ॥

ದೃಷ್ಟ್ವಾ ಮಂದಿರಮಧ್ಯಸ್ಥಂ ತೌ ಸಂತುಷ್ಟಿಮವಾಪತುಃ ।
ಆಸನೇ ತಂ ಶುಭೇ ಸ್ಥಾಪ್ಯ ಗಂಧಾದ್ಯೈಃ ಪರಿಪೂಜ್ಯ ಚ ॥ ೩೨ ॥

ಭಕ್ತ್ಯಾ ಪ್ರದಕ್ಷಿಣೀಕೃತ್ಯ ನಮಸ್ಕೃತ್ಯ ತ ಮೂತಕಂ ।
ತಸ್ಮಾದಾದಾಯ ಧವಲಾ ನಕ್ಷತಾ ನಕ್ಷತಾನಪಿ ॥ ೩೩ ॥

ದೇವೇನೋಕ್ತಪ್ರಕಾರೇಣ ಸೋऽನ್ನದಾನರತ ಸ್ಸದಾ ।
ಏತದಾ ಶ್ಚರ್ಯ ಮಾಕರ್ಣ್ಯ ಜನಾಃ ಸರ್ವೇ ಸಮಾಗತಾಃ ॥ ೩೪ ॥

ವಿಲೋಕ್ಯ ವಿಸ್ಮಿತಾಃ ಶಂಭೋ ರ್ಭಕ್ತವಾತ್ಸಲ್ಯಮಸ್ತುವನ್ ।
ಗತೈಶ್ವರ್ಯಾಃ ಸಮಾಗತ್ಯ ಮಧುರಾಪುರನಾಯಕಂ ॥ ೩೫ ॥

---

ಅನ್ನದಾನಮಾಡು ” ಎಂದು ಸಕಲೇಷ್ಟಾರ್ಥಗಳನ್ನು ಕೊಡುವ ಶಿವನು ಹೇಳಿದ ಆಕಾಶವಾಣಿಯನ್ನು ಕೇಳಿದ ಆ ದಂಪತಿಗಳು ಆಶ್ಚರ್ಯಪುಳ್ಳವರಾಗಿ, ಶಿವನಿಗೆ ಪುನಃ ನಮಸ್ಕಾರಮಾಡಿ, ಸಂತೋಷದಿಂದ ತಮ್ಮ ಸುಂದರವಾದ ಮನೆಗೆ ಬಂದು ಸೇರಿದರು.

೩೧–೩೪. ಅವರು ತಮ್ಮ ಮನೆಯ ಮಧ್ಯದಲ್ಲಿ ಅಕ್ಷಯವಾದ ಅಕ್ಕಿಯಿಂದ ತುಂಬಿದ ಚೀಲವನ್ನು ನೋಡಿದರು. ದೊಡ್ಡದಾದ ಆ ಚೀಲವನ್ನು ನೋಡಿ, ಸಂತೋಷಪಟ್ಟಿರುವ ಅವರಿಬ್ಬರೂ, ಒಂದು ಶುಭವಾದ ಆಸನದಲ್ಲಿರಿಸಿ ಗಂಧಾದಿಗಳಿಂದ ಅದನ್ನು ಪೂಜಿಸಿದರು. ಭಕ್ತಿಯಿಂದ ಅದಕ್ಕೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿದರು. ಅನಂತರವಲ್ಲಿ ಅದರಿಂದ ಅಕ್ಕಿಯನ್ನು ತೆಗೆದುಕೊಂಡು, ಶಿವನ ಆಜ್ಞೆಯಂತೆ ಅನ್ನದಾನ ಮಾಡುತ್ತಿದ್ದರು. ಈ ಆಶ್ಚರ್ಯವನ್ನು ಕೇಳಿ ಜನರೆಲ್ಲರೂ ಬಂದು ಅದನ್ನು ನೋಡಿದರು. ಶಿವನಿಗೆ ಭಕ್ತರಲ್ಲಿರುವ ಪ್ರೀತಿಯನ್ನು ಕೊಂಡಾಡಿದರು.

೩೫–೩೯. ಇವರಂತೆಯೇ ಐಶ್ವರ್ಯವನ್ನು ಕಳೆದುಕೊಂಡಿದ್ದವರು ಮಧುರಾ ನಗರಕ್ಕೆ ಬಂದು, ಸುಂದರೇಶ್ವರನನ್ನು ಸೇವಿಸಿ, ಅವನ ಅನುಗ್ರಹದಿಂದ ಐಶ್ವರ್ಯ

ಭಜಮಾನಾಃ ಸುಂದರೇಶಂ ಜೀವಂತಿಸ್ಮ ಸುಸಂಪದಃ ।
ತೌ ದಂಪತೀ ಸಮಾದಾಯ ತಂಡುಲಾನ್ಪ್ರಾಂಡುರಾ ನ್ಬಹೂನ್ ॥ ೩೬ ॥

ಶಂಭುಂ ಚ ಶಂಭುಭಕ್ತಾಂಶ್ಚ ಪ್ರೀಣಯಾಮಾಸತುಶ್ಚ ತೈಃ ।
ಯಥೇಷ್ಟಂ ತಂಡುಲಾನಾಂ ತು ಕೃತ್ವಾ ವಿಕ್ರಯಮಾದರಾತ್ ॥ ೩೭ ॥

ಘೃತಕ್ಷೀರಾಪೂಪಫಲಶರ್ಕರಾಪಾಯಸಾದಿಭಿಃ ।
ಅನ್ನದಾನಮಹೋರಾತ್ರಮನ್ನಾನಿ ವಿವಿಧಾನಿ ಚ ॥ ೩೮ ॥

ಕಾಂಚನಾದೀನಿ ದಾನಾನಿ ಶ್ರದ್ಧಯಾ ಚಕ್ರತುಶ್ಚ ತೌ ।
ಭಕ್ತಾನಾಂ ಭುಕ್ತಶೇಷಸ್ಯ ಪ್ರಾಶನೇನ ಚ ದಂಪತೀ ॥ ೩೯ ॥

ಬಲಾರೋಗ್ಯಜ್ಞಾನವಂತೌ ಅಭೂತಾಮಧಿಕಶ್ರಿಯೌ ।
ಅನ್ನದಾನಾಧಿಕಂ ದಾನಂ ನ ಭೂತಂ ನ ಭವಿಷ್ಯತಿ ॥ ೪೦ ॥

---

ವನ್ನು ಹೊಂದಿ ಸುಖವಾಗಿದ್ದರು, ಶೂದ್ರದಂಪತಿಗಳು ಬಹಳ ಶುಭ್ರವಾದ ಅಕ್ಕಿಯನ್ನು ಬಹಳವಮಟ್ಟಿಗೆ ಪ್ರತಿದಿನವೂ ತೆಗದುಕೊಂಡು ಅದರಿಂದ ಶಿವನನ್ನೂ, ಶಿವಭಕ್ತರನ್ನೂ ಸಂತೋಷಪಡಿಸುತ್ತಿದ್ದರು. ತಮ್ಮ ಇಷ್ಟಬಂದ ಹಾಗೆ ಅಕ್ಕಿಯನ್ನು ಮಾರಿ, ಅದರಿಂದ ಬಂದ ದುಡ್ಡಿನಿಂದ, ಹಾಲು, ಮೊಸರು, ತುಪ್ಪ ಇವುಗಳನ್ನು ತಂದು ಶಿವಭಕ್ತರಿಗೆ ಬೇಕಾದಹಾಗೆ ಭಕ್ಷ್ಯಗಳನ್ನು ಮಾಡಿ ಅನ್ನದಾನ ಮಾಡಿದರು. ಸುವರ್ಣದಾನವೇ ಮೊದಲಾದ ದಾನಗಳನ್ನು ಮಾಡಿದರು. ಶಿವಭಕ್ತರು ಭೋಜನ ಮಾಡಿದನಂತರ ಉಳಿದಿರುವ ಪದಾರ್ಥಗಳನ್ನು ಸೇವಿಸುವುದರಿಂದ ಆ ದಂಪತಿಗಳು ಬಲ, ಆರೋಗ್ಯ, ಜ್ಞಾನ ಇವುಗಳನ್ನು ಹೊಂದಿ ಬಹಳ ಕಾಂತಿವಂತರಾದರು.

೪೦–೪೧. ಅವರು ಅನ್ನದಾನಕ್ಕಿಂತಲೂ ಹೆಚ್ಚಾದ ದಾನವು ಹಿಂದೆಯೂ ಇರಲಿಲ್ಲ. ಮುಂದೆಯೂ ಇರುವುದಿಲ್ಲವೆಂದು ಇರುವ ಶಾಸ್ತ್ರದ ನಿಶ್ಚಯವನ್ನು ತಿಳಿದು,

ಇತಿ ನಿಶ್ಚಿತ್ಯ ಶಾಸ್ತ್ರಾರ್ಥಂ ತದ್ಧ್ಯಾನನಿರತೌ ಚ ತೌ ।
ಇಹ ಭುಕ್ತ್ವಾ ಚಿರಂ ಭೋಗಾನ್ಪುತ್ರೈಃ ಪೌತ್ರೈಃ ಸುಹೃದ್ಗಣೈಃ ॥ ೪೧ ॥
ಭೃತ್ಯೈಃ ಪರಿವೃತೋ ಭೂತ್ವಾ ಸಾಂಬಸಾರೂಪ್ಯಮಾಪತುಃ ।

ದೃಷ್ಟ್ವಾತಿಮಾತ್ರವಿಹಿತಾಂ ವೃಷಲೇನ ಭಕ್ತಿಂ-
ಕೃತ್ವಾ ತಮಾಧಿರಹಿತಂ ದೃಢಭಕ್ತಿಯುಕ್ತಂ ॥
ಕಾರುಣ್ಯದತ್ತಸಿತತಂಡುಲಮೂತಕಾಯ-
ಹಾಲಾಸ್ಯಮಧ್ಯನಿಲಯಾಯ ನಮಶ್ಶಿವಾಯ ॥ ೪೨ ॥

ಇತ್ಯಷ್ಟತ್ರಿಂಶಿಕೀ ಲೀಲಾ ಹಾಲಾಸ್ಯೇಶಸ್ಯ ಕೀರ್ತಿತಾ ।
ಸರ್ವದುರ್ಗತಿಸಂಹರ್ತ್ರೀ ಸರ್ವಸಂಪತ್ಪ್ರದಾಯಿನೀ ॥ ೪೩ ॥

---

ಅನ್ನದಾನ ಮಾಡುವುದರಲ್ಲಿ ಆಸಕ್ತರಾಗಿದ್ದರು. ಅವರು ಬಹಳ ಕಾಲದವರಿಗೂ ಭೋಗಗಳನ್ನು ಮಕ್ಕಳು, ಮೊಮ್ಮಕ್ಕಳು, ಸ್ನೇಹಿತರು ಭೃತ್ಯರು, ಇವರೊಡನೆ ಅನುಭವಿಸಿದನಂತರ ಶಿವಸಾರೂಪ್ಯವನ್ನು ಹೊಂದಿದರು.

೪೨–೪೩. ಹಾಲಾಸ್ಯಕ್ಷೇತ್ರದ ಮಧ್ಯದಲ್ಲಿ ವಾಸಮಾಡುತ್ತಿರುವ ಸುಂದರೇಶ್ವರನು ಶೂದ್ರನು ಆಚರಿಸಿದ ಅತಿಶಯವಾದ ಭಕ್ತಿಯಿಂದ ಸಂತೋಷವನ್ನು ಹೊಂದಿ, ಅವನಿಗೆ ದಯೆಯಿಂದ ಅಕ್ಕಿ ತುಂಬಿದ ಚೀಲವನ್ನು ಕೊಟ್ಟು ಅವನನ್ನು ಆಧಿ ವ್ಯಾಧಿಗಳಿಲ್ಲದಂತೆ ಮಾಡಿ, ತನ್ನಲ್ಲಿ ದೃಢವಾದ ಭಕ್ತಿಯುಳ್ಳವನನ್ನಾಗಿ ಮಾಡಿದನು. ಇಷ್ಟುಮಟ್ಟಿನ ಕರುಣೆಯುಳ್ಳ ಶಿವನಿಗೆ ನಮಸ್ಕಾರವು. ಎಲ್ಲಾ ವಿಧವಾದ ದುರ್ಗತಿಯನ್ನೂ ಹಾಳುಮಾಡಿ, ಎಲ್ಲಾ ವಿಧವಾದ ಐಶ್ವರ್ಯವನ್ನೂ ಕೊಡುವ, ಹಾಲಾಸ್ಯೇಶ್ವರನು ಆಚರಿಸಿದ ಮೂವತ್ತೆಂಟನೆಯ ಲೀಲೆಯನ್ನು ಹೇಳಿರುವೆನು.

**ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಅಕ್ಷಯತಂಡುಲಮೂತಪ್ರದಾನಂ ನಾಮ ಚತುಶ್ಚತ್ವಾರಿಂಶೋಽಧ್ಯಾಯಃ**

---

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ (ಅಕ್ಷಯವಾದ ಅಕ್ಕಿಯಿಂದ ತುಂಬಿದ ಪಾತ್ರೆಯನ್ನು ಅನುಗ್ರಹಿಸಿದ) ಅಕ್ಷಯತಂಡುಲ ಮೂತಪ್ರದಾನವೆಂದು ಹೆಸರುಳ್ಳ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥
॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯಮಾಹಾತ್ಮ್ಯಂ



## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಪಂಚಚತ್ವಾರಿಂಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ವಿಶಸ್ತು ಮಾತುಲೋ ಭೂತ್ವಾ ಶ್ರೀಹಾಲಾಸ್ಯಪತಿಃ ಪ್ರಭುಃ ।
ವಿಜಿತ್ಯ ವ್ಯವಹಾರೇಣ ತದ್ ಜ್ಞಾತೀನ್ನೀತಿವರ್ಜಿತಾನ್ ॥ ೧ ॥

ಭವನಕ್ಷೇತ್ರವಿತ್ತಾದ್ಯಂ ವಿಶೇ ತಸ್ಮೈ ಯಯಾ ದದೌ ।
ತಾಂ ಲೀಲಾ ಮದ್ಯ ವಕ್ಷ್ಯೇಽಹಂ ಶೃಣುಧ್ವಂ ಮುನಿಪುಂಗವಾಃ ॥ ೨ ॥

ಪುರಾಸ್ತಿ ಮಧುರಾಪುರ್ಯಾಂ ಕಶ್ಚಿದ್ವೈಶ್ಯಃ ಸಮೃದ್ಧಿಮಾನ್ ।
ಸಂಪದಾಸನ್ನಬಂಧು ಸ್ಸನ್ನಾಮ್ನಾ ಚಾರ್ಥಪತಿ ಸ್ಸ ತು ॥ ೩ ॥

---

### ನಲವತ್ತೈದನೆಯ ಅಧ್ಯಾಯವು

೧–೨. ಅಗಸ್ತ್ಯಋಷಿಯು ಹೇಳಿದನು:—"ಹಾಲಾಸ್ಯೇಶ್ವರನು ವೈಶ್ಯಬಾಲಕನಿಗೆ ಸೋದರಮಾವನಾಗಿ ನ್ಯಾಯಾಸ್ಥಾನದ ವ್ಯವಹಾರದಲ್ಲಿ ಅವನಿಗೆ ಬರಬೇಕಾದ ಮನೆ, ಹೊಲ, ದ್ರವ್ಯ ಇವೇ ಮೊದಲಾದವುಗಳನ್ನು ಕೊಡಿಸಿ, ಅವನಿಗೆ ಅನ್ಯಾಯ ಮಾಡಿರುವ ನ್ಯಾಯಪರರಲ್ಲದ ಅವನ ಜ್ಞಾತಿಗಳನ್ನು ಸೋಲಿಸಿದನು. ಈ ಲೀಲೆಯನ್ನು ನಿಮಗೆ ಹೇಳುವೆನು ! ಕೇಳಿರಿ.

೩–೪. ಮಧುರಾನಗರದಲ್ಲಿ ಬಹಳ ಐಶ್ವರ್ಯವಂತನಾದ ಒಬ್ಬ ವೈಶ್ಯನಿದ್ದನು. ಅವನಿಗೆ ಬಹಳ ಬಂಧುಗಳಿದ್ದರು. ಅವನಿಗೆ ಅರ್ಥಪತಿ ಎಂದು ಹೆಸರು ಪ್ರಸಿದ್ಧವಾಗಿ

ವಾಣಿಜ್ಯೇತಿಪ್ರವೀಣಶ್ಚ ಧರ್ಮಮಾರ್ಗಮಲಂಘಯನ್ ।
ಪತ್ನ್ಯಾ ಸುಶೀಲಯಾ ಸಾರ್ಧಂ ಸುಖಂ ಜೀವತಿ ಸತ್ಯವಾಕ್ ॥ ೪ ॥

ಅಪತ್ಯಂ ತಸ್ಯ ನೈವಾಸೀ ಜ್ಜನ್ಮಾಂತರಕೃತಾಂಹಸಾ ।
ಸ್ವಸ್ರೀಯಂ ಕಂಚಿದಾದಾಯ ಪುತ್ರತ್ವೇನ ಸ ವಿಡ್ವರಃ ॥ ೫ ॥

ಶಿಶುಂ ಸರ್ವಗುಣೋಪೇತಂ ತಮೇವಾವರ್ಧಯನ್ಮುದಾ ।
ಕದಾಚಿತ್ಕ್ರುದ್ಧಯಾ ಸ್ವಸ್ರಾ ಭರ್ತ್ಸಿತ ಶ್ಚೋರುಸಂಭವಃ ॥ ೬ ॥

ಅಪುತ್ರತ್ವಾ ದ್ಭಾಗ್ಯಹೀನೋ ಮಯಾ ತ್ವಂ ಪುತ್ರವಾನಿತಿ ।
ಆಕರ್ಣ್ಯ ಕರ್ಣಶಲ್ಯಂ ತದ್ವಾಕ್ಯಂ ಶ್ರುತ್ವಾ ತಿದುಃಖಿತಃ ॥ ೭ ॥

ಜನ್ಮಾಂತರೇ ವಾ ಪುತ್ರಾರ್ಥಂ ತಪಸ್ತಪ್ತುಂ ಸಮುದ್ಯತಃ ।
ಭಾಗಿನೇಯಾಯ ಶಿಶವೇ ದತ್ವಾ ಗೇಹಾದಿಕಂ ಧನಂ ॥ ೮ ॥

---

ರುವುದು. ಅವನು ಧರ್ಮದಿಂದ ವ್ಯಾಪಾರ ಮಾಡುತ್ತಾ ಬುದ್ಧಿವಂತನಾಗಿದ್ದನು. ಅವನು ನಿಜವನ್ನು ಯಾವಾಗಲೂ ಹೇಳುತ್ತಾ ಪತ್ನಿಯಾದ ಸುಶೀಲೆಯೊಡನೆ ಸುಖವಾಗಿದ್ದನು.

೫-೮. ಅವನು ಜನ್ಮಾಂತರದಲ್ಲಿ ಮಾಡಿದ ಪಾಪಕರ್ಮದಿಂದ ಅವನಿಗೆ ಮಕ್ಕಳು ಇರಲಿಲ್ಲ. ಆದಕಾರಣ ಅವನು ತನ್ನ ತಂಗಿಯ ಮಗನೊಬ್ಬನನ್ನು ಮಗನಂತೆ ಭಾವಿಸಿ, ಅವನನ್ನು ಸಂತೋಷದಿಂದ ರಕ್ಷಿಸುತ್ತಾ ಬಂದನು. ಹೀಗೆ ಇರುವಾಗ ಅವನ ತಂಗಿಯು ಕೋಪಗೊಂಡು " ನೀನು ಪುತ್ರವಂತನಲ್ಲದ ಕಾರಣ ಅದೃಷ್ಟಹೀನನಾಗಿರುತ್ತೀಯೆ. ನನ್ನ ಮಗನಿಂದಲೇ ನೀನು ಪುತ್ರವಂತನಾಗಬೇಕು. " ಎಂದು ಕ್ರೂರವಾದ ಮಾತನಾಡಿದಳು. ವೈಶ್ಯನು ಬಹಳ ಕಠೋರವಾದ ಆ ಮಾತನ್ನು ಕೇಳಿ, ದುಃಖವುಳ್ಳವನಾಗಿ, ಮುಂದಿನ ಜನ್ಮದಲ್ಲಿಯಾದರೂ ಮಕ್ಕಳು ಉಂಟಾಗಲಿ ಎಂದು ತಪಸ್ಸನ್ನು ಮಾಡುವ ಉದ್ದೇಶವುಳ್ಳವನಾಗಿ, ತಾನು ಪೋಷಿಸುತ್ತಿದ್ದ ತನ್ನ ತಂಗಿಯ ಮಗನಿಗೆ ತನ್ನ ಮನೆಯೇ ಮೊದಲಾದ ದ್ರವ್ಯವೆಲ್ಲವನ್ನೂ ಕೊಟ್ಟು ತನ್ನ ಪತ್ನಿಯೊಡನೆ ತಪಸ್ಸನ್ನು ಮಾಡಲು ತಪೋವನಕ್ಕೆ ಹೋದನು.

ವೈಶ್ಯೋऽತಿವೃದ್ಧಃ ಪತ್ನ್ಯಾ ಚ ತಪೋವನಮಗಾದಥ ।
ತಸ್ಮಿನ್ಗತೇ ಜ್ಞಾತಯೋऽಸ್ಯ ಸಮಗೃಹ್ಣನ್ ಗೃಹಾದಿಕಂ । ॥ ೯ ॥

ಭಗಿನೀಭಾಗಿನೇಯಾಭ್ಯಾಂ ತೇ ದದು ನೈ೯ವ ಜೀವನಂ ।
ಸಾ ಸಪುತ್ರಾ ಸತೀ ಜ್ಞಾತೀ ನರೋಧಯದಥ ಕ್ರುಧಾ ॥ ೧೦

ತಾಂ ಪ್ರಭರ್ತ್ಸ್ಯ೯ ಪ್ರಕೃತ್ಯಾಥ ಪ್ರಬಲಾಶ್ರಯಸಂಯುತಾಃ ।
ಗೃಹಕೇದಾರಗೋರತ್ನಕನಕಾದಿಷು ವಸ್ತುಷು ॥ ೧೧ ॥

ಸಪುತ್ರಾಯೈ ತದ್ಭಗಿನ್ಯೈ ನ ಕಿಂಚಿದಪಿ ತೇ ದದುಃ ।
ಸಾಥ ದೇವಸಹಾಯೇನ ಜೇತವ್ಯಾಃ ಜ್ಞಾತಯೋऽಧುನಾ ॥ ೧೨ ॥

ಇತಿ ನಿಶ್ಚಿತ್ಯ ಮನಸಾ ಸುಂದರೇಶಾಲಯಂ ಯಯೌ ।
ಸಂಸ್ನಾಪ್ಯ ತನಯಂ ತೀರ್ಥೇ೯ ಸ್ವಯಂ ಸ್ನಾತ್ವಾ ದರೇಣ ಚ ॥ ೧೩ ॥

---

೯–೧೨. ಅವನು ಹೊರಟುಹೋದ ನಂತರ ಅವನ ಜ್ಞಾತಿಗಳು ಅವನ ಮನೆಯೇ ಮೊದಲಾದವುಗಳನ್ನು ಆಕ್ರಮಿಸಿಕೊಂಡರು. ಈ ವೈಶ್ಯನ ತಂಗಿಗೂ, ತಂಗಿಯ ಮಗನಿಗೂ ಕೊಂಚವೂ ಕೊಡಲಿಲ್ಲ. ಆಗ ಅವಳು ತನ್ನ ಮಗನೊಡನೆ ಜ್ಞಾತಿಗಳನ್ನು ಬಹಳ ಸಿಟ್ಟಿನಿಂದ ತಡೆದಳು. ಬಲವಾದ ಆಶ್ರಯವುಳ್ಳ ಜ್ಞಾತಿಗಳು ಅವಳನ್ನು ಬೆದರಿಸಿ, ಹೊಡೆದರು. ಅವರು ಮನೆ, ಗದ್ದೆ, ಗೋವು, ರತ್ನ, ಚಿನ್ನ ಇವುಗಳಲ್ಲಿ ಅವರಿಗೆ ಸ್ವಲ್ಪವನ್ನೂ ಕೊಡಲಿಲ್ಲ. ಆಗ ಅವಳು ದೇವರ ಸಹಾಯದಿಂದ ಇವರನ್ನು ಗೆಲ್ಲಬೇಕೆಂದು, ನಿಶ್ಚಯಿಸಿ ಸುಂದರೇಶ್ವರನ ದೇವಾಲಯಕ್ಕೆ ಬಂದಳು.

೧೩–೧೬. ಅವಳು ಮಗನನ್ನು ತೀರ್ಥದಲ್ಲಿ ಸ್ನಾನಮಾಡಿಸಿ, ತಾನೂ ಸ್ನಾನ ಮಾಡಿ, ಶುಭ್ರವಾದ ವಸ್ತ್ರಗಳನ್ನು ಉಟ್ಟು, ಭಸ್ಮೋದ್ಧೂಳನೆ ಮಾಡಿಕೊಂಡು, ಸುಂದರೇಶ್ವರನಲ್ಲಿ ಭಕ್ತಿಯುಳ್ಳವಳಾಗಿ, ಶ್ರೇಷ್ಠವಾದ ಪಂಚಾಕ್ಷರೀ ಮಂತ್ರವನ್ನು ಜಪಮಾಡುತ್ತಾ, ಸುಂದರೇಶ್ವರನ ಮೂಲಲಿಂಗದ ಮುಂದುಗಡೆಯಲ್ಲಿ ಮಗನನ್ನು ಕರೆದುಕೊಂಡು ಬಂದು ನಮಸ್ಕಾರ ಮಾಡಿಸಿದಳು. “ ಎಲೈ, ದೇವದೇವನಾದ

ಪರಿಧಾಯಾಂಬರಂ ಧೌತಂ ಭಸ್ಮನಾ ಪಾಂಡರೀಕೃತಾ ।
ಸುಂದರೇಶಪದಾಂಭೋಜೇ ಭಕ್ತ್ಯಾ ಪರಮಯಾ ಯುತಾ ॥ ೧೪ ॥

ಪಂಚಾಕ್ಷರಂ ಪರಂ ಮಂತ್ರ ಮುಚ್ಚರಂತೀ ಮುಹುರ್ಮುಹುಃ ।
ಸುಂದರೇಶ್ವರಲಿಂಗಸ್ಯ ಪುರಃ ಪುತ್ರಂ ನಿಪಾತ್ಯ ಚ ॥ ೧೫ ॥

ದೇವದೇವ ಕೃಪಾರಾಶೇ ಧರ್ಮಮಾರ್ಗಪ್ರವರ್ತಕ ।
ಕ್ಷೇಮಂ ಕುರ್ವಿತಿ ಶಂಸಂತೀ ಪ್ರಣನಾಮ ತಲೇsವಶಾ ॥ ೧೬ ॥

ತಸ್ಯಾ ಸ್ತದಾನೀಂ ಸ್ವಪ್ನೋs ಭೂತ್ ಸ್ವಪ್ನೇ ಶಂಭು ರಥಾಬ್ರವೀತ್ ।
ಉತ್ತಿಷ್ಠಾದ್ಯಗೃಹಂ ಗಚ್ಛ ಬಾಲೇನ ತ್ವಂ ಸಹಾಬಲೇ ॥ ೧೭ ॥

ನಯ ಧರ್ಮಾಸನಂ ಜ್ಞಾತೀನ್ ರುಧ್ವಾ ಪಾಕಾಲಯಂ ದೃಢಂ ।
ಗೃಹಾದಿಕಂ ತವ ಭ್ರಾತು ರ್ಜ್ಞಾತ್ಯಾಹೃತ ಮಹಂ ಧ್ರುವಂ ॥ ೧೮ ॥

ವ್ಯವಹಾರೇಣ ನಿರ್ಜಿತ್ಯ ತುಭ್ಯಂ ದಾಸ್ಯಾಮ್ಯ ಯತ್ನತಃ ।
ಇತ್ಯುಕ್ತ್ವಾ ವಿಪ್ರವೇಷಶ್ಚ ಶಂಕರಃ ಸುಂದರೇಶ್ವರಃ ॥ ೧೯ ॥

---

ಸುಂದರೇಶ್ವರನೆ, ಎಲೈ ದಯಾಶಾಲಿಯೆ, ಧರ್ಮಮಾರ್ಗವನ್ನು ತೋರಿಸುವ ನೀನು ನಮ್ಮನ್ನು ಕ್ಷೇಮದಿಂದ ರಕ್ಷಿಸು" ಎಂದು ಹೇಳುತ್ತಾ ಅವಳು ನೆಲದ ಮೇಲೆ ಬಹಳ ದುಃಖವುಳ್ಳವಳಾಗಿ ಬಿದ್ದುಕೊಂಡಳು.

೧೭-೧೯. ಆಗ ಅವಳಿಗೆ ಸ್ವಪ್ನವಾಯಿತು. ಸ್ವಪ್ನದಲ್ಲಿ ಶಿವನು "ಎಲೈ ಬಾಲೆಯೆ, ಮೇಲಕ್ಕೆ ಏಳು. ನಿನ್ನ ಮಗನನ್ನು ಕರೆದುಕೊಂಡು ಮನೆಗೆ ಹೋಗು, ನೀನು ಅಡಿಗೆಯ ಮನೆಯನ್ನು ಭದ್ರಪಡಿಸಿಕೊಂಡು, ಜ್ಞಾತಿಗಳನ್ನು ತಡೆದು, ಅವರು ನ್ಯಾಯಸ್ಥಾನಕ್ಕೆ ಹೋಗುವಂತೆ ಮಾಡು. ನಿನ್ನ ಸಹೋದರನ ಮನೆಯೇ ಮೊದಲಾದ ವೆಲ್ಲವನ್ನೂ ಜ್ಞಾತಿಗಳು ಅಪಹರಿಸಿರುವರೆಂಬುದನ್ನು ನಾನು ನಿಜವಾಗಿಯೂ ತಿಳಿದಿರುವೆನು. ನಾನು ಅವರನ್ನು ವ್ಯವಹಾರದಿಂದ ಜಯಿಸಿ ಸ್ವಲ್ಪವೂ ಶ್ರಮವಿಲ್ಲದಂತೆ ನಿನಗೆ ಕೊಡಿಸುತ್ತೇನೆ." ಎಂದು ಬ್ರಾಹ್ಮಣನ ವೇಷದಿಂದ ಹೇಳಿದನು. ಹೀಗೆ ಅವಳಿಗೆ ಸ್ವಪ್ನಗೋಚರನಾಗಿ ಹೇಳಿದ ಕೂಡಲೆ ಭಕ್ತರಿಗೆ ಧೈರ್ಯವನ್ನು ಕೊಡುವ ಅವನು ಅದೃಶ್ಯನಾದನು.

ಕ್ಷಣೇನಾ ದೃಶ್ಯತಾ ಮಾಪ ಭಕ್ತಾನಾ ಮಭಯಪ್ರದಃ ।
ಯೋಷಾ ಸಾ ಸಹಸೋದ್ಬುಧ್ಯ ವಿಸ್ಮಿತಾ ಪುಲಕಾಂಚಿತಾ ॥ ೨೦ ॥

ಚಿಂತಯತ್ಯದ್ಭುತಂ ಸ್ವಪ್ನಂ ಸಾನಂದಜಲಲೋಚನಾ ।
ಪುನಃ ಪುನಃ ಪ್ರಣಮ್ಯೇಶಂ ಭಕ್ತ್ಯಾ ಸಾ ಭಕ್ತವತ್ಸಲಂ ॥ ೨೧ ॥

ಆಧಾಯ ಸ್ವಾತ್ಮಜಂ ಸಾಧ್ವೀ ಪ್ರಾರ್ಥ್ಯ ಕಾಂಕ್ಷಿತಸಿದ್ಧಯೇ ।
ಸ್ವಗೇಹ ಮಥ ಸಂಪ್ರಾಪ್ಯ ಭುಕ್ತ್ವಾ ಚಾಸ್ತೇ ಸುಖೇನ ವೈ ॥ ೨೨ ॥

ಶ್ವೋಭೂತೇ ಪ್ರಾತರುತ್ಥಾಯ ಪುತ್ರೇಣ ಸಹಿತಾ ಸತೀ ।
ದೇವೀದೇವೌ ಕ್ರಮಾನ್ನತ್ವಾ ಜ್ಞಾತೀನಾಂ ಪ್ರಾಪ್ಯ ಸಾಲಯಾನ್ ॥ ೨೩ ॥

ಯಥೋಕ್ತಂ ಸುಂದರೇಶೇನ ಪಾಕಶಾಲಾನಿರೋಧನಂ ।
ಅಕರೋತ್ ನಿರ್ಭಯಾ ಸಾಪಿ ಸ್ಮರಂತೀ ಸುಂದರೇಶ್ವರಂ ॥ ೨೪ ॥

---

೨೦-೨೨. ಆ ಹೆಂಗಸು ಬೇಗನೆ ಎಚ್ಚರಗೊಂಡು, ಆಶ್ಚರ್ಯದಿಂದ ರೋಮಾಂಚವುಳ್ಳ ಶರೀರವುಳ್ಳವಳಾದಳು. ಆಶ್ಚರ್ಯವನ್ನುಂಟುಮಾಡುವ ಸ್ವಪ್ನವನ್ನು ಯೋಚಿಸಿಕೊಂಡು, ಆನಂದ ಬಾಷ್ಪವನ್ನು ಸುರಿಸುತ್ತಾ, ಭಕ್ತರಲ್ಲಿ ಪ್ರೀತಿಯಿಂದ ಇರುವ ಪರಮೇಶ್ವರನಲ್ಲಿ ಭಕ್ತಿಯುಳ್ಳವಳಾಗಿ, ಪದೇ ಪದೇ ಶಿವನಿಗೆ ನಮಸ್ಕಾರ ಮಾಡಿದಳು. ಅನಂತರದಲ್ಲಿ ಪತಿವ್ರತೆಯಾದ ಅವಳು ಮಗನನ್ನು ಕರೆದುಕೊಂಡು, ತನ್ನ ಕಾರ್ಯವನ್ನು ಸಾಧಿಸುವುದಕ್ಕಾಗಿ ಮನೆಗೆ ಬಂದು, ಭೋಜನ ಮಾಡಿಕೊಂಡು ಸುಖವಾಗಿದ್ದಳು.

೨೩-೨೬. ಬೆಳಗಾದಕೂಡಲೆ ಅವಳು ಎದ್ದು, ಮಗನನ್ನು ಜೊತೆಯಲ್ಲಿ ಕರದುಕೊಂಡು, ಸುಂದರೇಶ್ವರನ ದೇವಾಲಯಕ್ಕೆ ಬಂದು, ಮೀನಾಕ್ಷೀದೇವಿಯನ್ನೂ ಸುಂದರೇಶ್ವರನನ್ನೂ ನಮಸ್ಕರಿಸಿದನಂತರ ಮನೆಗೆ ಬಂದು ಜ್ಞಾತಿಗಳು ಆಕ್ರಮಿಸಿದ್ದ ಮನೆಯಲ್ಲಿ ಹೆದರದೆ, ಸುಂದರೇಶ್ವರನು ಹೇಳಿದಂತೆ ಪಾಕಶಾಲೆಗೆ ನುಗ್ಗಿ ಸುಂದರೇಶ್ವರನನ್ನು ಸ್ಮರಿಸುತ್ತಾ, ಅದನ್ನು ವಶಮಾಡಿಕೊಂಡಳು. ಬಹಳಜನ ಜ್ಞಾತಿಗಳೆಲ್ಲರೂ

ಜ್ಞಾತಯೋ ಬಹವಃ ಸರ್ವೇ ಸಂಭೂಯ ಧನಿನಾಂ ವರಾಃ ।
ಸಸುತಾಂ ಭೂತಲೇ ಕ್ಷಿಪ್ತ್ವಾ ಭರ್ತ್ಸಯಿತ್ವಾಬಲಾಂ ಚ ತಾಂ ॥ ೨೫ ॥

ಧರ್ಮಾಸನಾಂತಿಕೇ ನೀತ್ವಾ ಕುರ್ವಂತೋಽಸ್ಯಾಃ ಪರಾಭವಂ ।
ವಾಗ್ಭಿಃ ಪಾರುಷ್ಯಯುಕ್ತಾಭಿಃ ಪಾಣಿಭಿ ಶ್ಚರಣ್ಯೈ ರಪಿ । ॥ ೨೬ ॥

ಭಕ್ತಾರ್ತಿಭಂಜನಪರಃ ಪರಿಪೂರ್ಣಃ ಪರಾತ್ಪರಃ ।
ನೀಪಾಟವೀನೀಲಕಂಠಃ ಕಾರುಣ್ಯಾತಿಶಯಾನ್ವಿತಃ ॥ ೨೭ ॥

ದೇವೋ ಮಾತುಲವೇಷಃ ಸ್ತತದ್ಬಾಲಸ್ಯಾಬಲಸ್ಯ ಚ ।
ಅಯಯೌ ವೈಶ್ಯರೂಪೀ ಚ ವೃದ್ಧತ್ವಾತಿಪ್ರಕಂಪಿತಃ ॥ ೨೮ ॥

ಭಗಿನೀಭಾಗಿನೇಯೌ ಚ ಯತ್ರಾಸ್ತಾಂ ತತ್ರ ಚಾಗತಃ ।
ಆಲಿಂಗ್ಯ ತೌ ರೋದತಿ ಸ್ಮ ದ್ರಾವಯನ್ಸರ್ವಮಾನಸಂ ॥ ೨೯ ॥

ಸ ಬಾಲೋ ಮಾತುಲಂ ದೃಷ್ಟ್ವಾ ಸಾಶ್ರುಪಾತಂ ನನಾಮ ಚ ।
ತದ್‌ಜ್ಞಾತಿಚರಿತಂ ಭ್ರಾತ್ರೇ ಸ್ವಸಾ ವೋಚತ್ಸವಿಸ್ತರಂ ॥ ೩೦ ॥

---

ಒಟ್ಟಾಗಿಸೇರಿ, ಅವಳನ್ನು ಭೂಮಿಯಲ್ಲಿ ಅವಳ ಮಗನೊಡನೆ ಕೆಡವಿ ಬಹಳ ನಿಂದಿಸಿದರು. ಅನಂತರದಲ್ಲಿ ಅವಳನ್ನೂ, ಅವಳ ಮಗನನ್ನೂ ನ್ಯಾಯಾಧಿಪತಿಯ ಹತ್ತಿರಕ್ಕೆ ಕರತಂದು, ಅವಳನ್ನು ಬಾಯಿಗೆ ಬಂದ ಹಾಗೆ ನಿಂದಿಸಿ, ಹೊಡೆದರು ಮತ್ತು ಒದೆದರು.

೨೭-೩೦. ಭಕ್ತರ ವಿಪತ್ತನ್ನು ಪರಿಹರಿಸುವ, ಪರಿಪೂರ್ಣನಾಗಿರುವ, ಎಲ್ಲಕ್ಕಿಂತಲೂ ಶ್ರೇಷ್ಠನಾದ ನೀಪವನಾಧೀಶನಾದ ಪರಮೇಶ್ವರನು ಬಹಳ ದಯೆಯುಳ್ಳವನಾಗಿ ದಿಕ್ಕಿಲ್ಲದ ಆ ಹುಡುಗನ ಸೋದರಮಾವನ ವೇಷವನ್ನು ಧರಿಸಿ, ಬಹಳ ಮುದುಕನಾಗಿ ನಡುಗುತ್ತಾ ಬಂದನು. ಅವನು ತಂಗಿಯೂ, ಆ ಹುಡುಗನೂ ಇದ್ದ ಕಡೆಗೆ ಬಂದು ನೋಡಿ, ನೋಡುವವರಿಗೂ ಮನಸ್ಸು ಕರಗುವಂತೆ ಅತ್ತನು. ಆ ಹುಡುಗನು ತನ್ನ ಸೋದರಮಾವನನ್ನು ನೋಡಿ, ಕಣ್ಣೀರು ಹಾಕುತ್ತಾ, ನಮಸ್ಕಾರಮಾಡಿದನು. ತಂಗಿಯು ಜ್ಞಾತಿಗಳು ಮಾಡಿರುವ ಕಾರ್ಯವೆಲ್ಲವನ್ನೂ ವಿಸ್ತಾರವಾಗಿ ಹೇಳಿದಳು.

ಖೇದೋ ಮಾಸ್ತ್ವಿತಿ ತೌ ಕೋಪ್ಯ ಪ್ರಾಪ್ತೋ ಸ್ಮ್ಯಹ ಮಿಮಾ ನ್ನನಾನ್ ।
ನಿರ್ಜಿತ್ಯ ಸದಸಿ ಕ್ರುದ್ಧಾನ್ ಕರಿಷ್ಯೇ ಯುವಯೋರ್ಜಯಂ ॥ ೩೧ ॥

ಇತ್ಯುಕ್ತ್ವಾ ಮಾತುಲಾಕಾರಂ ದಧ ನ್ನೀಪಾಟವೀಶ್ವರಃ ।
ಭಗಿನೀಭಾಗಿನೇಯಾಭ್ಯಾಂ ಪ್ರಾಪ ಧರ್ಮಾಸನಂ ತತಃ ॥ ೩೨ ॥

ತಂ ದೃಷ್ಟ್ವಾ ಜ್ಞಾತಯಃ ಸರ್ವೇ ತ್ವಂತರ್ಭೀತಾ ಬಹಿರ್ದೃಢಾಃ ।
ಅಯಂ ನ ಜ್ಞಾತಿರಸ್ಮಾಕಮಿತ್ಯೂಚು ರಥ ತೇ ವಿಶಃ ॥ ೩೩ ॥

ತಚ್ಛ್ರುತ್ವಾ ಪ್ರಾಡ್ವಿವಾಕಸ್ತು ಮಾತುಲತ್ವಂ ಭಣಾದ್ಯ ನಃ ।
ವ್ಯವಹಾರಪದಂ ಕೃತ್ಸ್ನಂ ಪ್ರವಕ್ಷ್ಯಾಮ ಸ್ತತೋಽಬ್ರವೀತ್ ॥ ೩೪ ॥

ತಥೇತಿ ಮಾತುಲಾಕಾರಃ ಸುಂದರೇಶೋ ದಯಾನಿಧಿಃ ।
ಗೃಹಾಣಾಂ ಕ್ಷೇತ್ರಜಾಲಸ್ಯ ದಾಸೀದಾಸಾದಿಕಸ್ಯ ಚ ॥ ೩೫ ॥

---

೩೧–೩೩. ನೀವು ವ್ಯಸನಪಡಬೇಡಿ, ಎಂದು ಅವರನ್ನು ಸಮಾಧಾನಮಾಡಿ, ಕೋಪದಿಂದ ಇರುವ ಅವರನ್ನು ನಾನು ನ್ಯಾಯಸ್ಥಾನದಲ್ಲಿ ಗೆದ್ದು, ನಿಮಗೆ ಜಯವನ್ನು ಕೊಡಿಸುವುದಕ್ಕಾಗಿ ಬಂದಿದ್ದೇನೆ, ಎಂದು ಹೇಳಿ ತಂಗಿಯು ಮತ್ತು ಸೋದರ ಅಳಿಯನೂ, ಇವರೊಡನೆ ನ್ಯಾಯಸ್ಥಾನಕ್ಕೆ ಅವನು ಬಂದನು. ಜ್ಞಾತಿಗಳೆಲ್ಲರೂ ಅವನನ್ನು ನೋಡಿ, ಮನಸ್ಸಿನಲ್ಲಿ ಹೆದರುತ್ತಾ ಹೊರಗಡೆಯಲ್ಲಿ ಮಾತ್ರ ಧೈರ್ಯವುಳ್ಳವರಾಗಿದ್ದರು. ಆ ವೈಶ್ಯರು ಇವನು ನಮಗೆ ಜ್ಞಾತಿಯೇ ಅಲ್ಲ, ಎಂದು ಹೇಳಿದರು.

೩೪–೩೭. ನ್ಯಾಯಾಧಿಪತಿಯು ನೀನು ಸೋದರಮಾವನೆಂದು ಹೇಳುತ್ತೀಯೆ ಇವರು ನೀನು ಜ್ಞಾತಿಯೇ ಅಲ್ಲವೆಂದು ಹೇಳುತ್ತಾರೆ. ಆದ್ದರಿಂದ ನೀನು ಎಲ್ಲವನ್ನೂ ನಮಗೆ ತಿಳಿಸಬೇಕು. ಇದು ನಿಜವಾದನಂತರ ನ್ಯಾಯದ ತೀರ್ಪೆಲ್ಲವನ್ನೂ ನಾನು ವ್ಯವಸ್ಥೆ ಮಾಡುತ್ತೇನೆ, ಎಂದು ಹೇಳಿದನು. ದಯಾಳುವಾದ ಸುಂದರೇಶನು ಅದನ್ನು ಕೇಳಿ ಹಾಗೆಯೇ ಆಗಲಿ, ಎಂದು ಮನೆಗಳು, ಇತರ ಭೂಮಿಗಳು ಮತ್ತು ದಾಸಿ, ದಾಸರು ಇವರುಗಳ ಹೆಸರು, ಗುರುತು ಇವುಗಳೆಲ್ಲವನ್ನೂ

ನಾಮಾನ್ಯಪಿ ಚ ಚಿಹ್ನಾದಿ ಜ್ಞಾತಿಪ್ರಾತ್ಯಯಿಕಂ ಯಥಾ ।
ತಥಾ ಸರ್ವಾಣ್ಯ ಕಥಯತ್ ಸರ್ವಜ್ಞಃ ಸರ್ವಸಂಪದಃ ॥ ೩೬ ॥

ಆಕರ್ಣ್ಯ ಸರ್ವಂ ತತ್ಪ್ರೋಕ್ತಂ ನಾಮಚಿಹ್ನಾದಿಕಂ ಕ್ರಮಾತ್ ।
ರಾಜದಂಡಭಯಾತ್ಸದ್ಯೋ ಜ್ಞಾತಯೋಽಂತರ್ಧಿ ಮಾಪ್ನುಯುಃ ॥ ೩೭ ॥

ಅಥ ಸುಂದರನಾಥಶ್ಚ ಲೀಲಯಾ ವೈಶ್ಯವೇಷಭಾಕ್ ।
ಪ್ರಾಹ ಧರ್ಮಾಸನಾಧ್ಯಕ್ಷಾನ್ ವಚಸಾ ಮಧುರೇಣ ಚ ॥ ೩೮ ॥

ಪಶ್ಯಂತು ಪ್ರಾಡ್ವಿವಾಕಾಶ್ಚ ಜ್ಞಾತೀನ ನ್ಯಾಯತತ್ಪರಾನ್ ।
ಪುತ್ರತ್ವೇನ ಗೃಹೀತೋಽಯಂ ಭಾಗಿನೇಯಂ ಪುರಾ ಮಯಾ ॥ ೩೯ ॥

ತದಾನೀಂ ದೃಷ್ಟವಂತ ಸ್ತೇ ಜ್ಞಾತಯಸ್ತದ್ವಿಧಾನಕಂ ।
ತಥಾಪ್ಯೇವಂ ವಿಧಂ ಚಕ್ರುಃ ಲೋಭಾ ದ್ದುರ್ವ್ಯವಹಾರಕಂ ॥ ೪೦ ॥

ತೇಷಾಂ ಚರಿತ್ರಂ ಜಾನಂತು ಭವಂತಃ ಪಂಡಿತೋತ್ತಮಾಃ ।

---

ನ್ಯಾಯಾಧಿಪತಿಗೆ ನಂಬಿಕೆ ಹುಟ್ಟುವಂತೆ ತಿಳಿಸಿದನು. ಸರ್ವಜ್ಞನಾದ, ಸರ್ವಸಮೃತನಾದ ಸುಂದರೇಶನಾವನು ಹೇಳಿದ, ಸರಿಯಾದ ಹೆಸರು, ಚಿಹ್ನೆ ಇವುಗಳನ್ನು ಕೇಳಿದ ಜ್ಞಾತಿಗಳೆಲ್ಲರೂ ರಾಜನಿಂದ ಶಿಕ್ಷೆಯಾಗುವುದೆಂದು ಹೆದರಿಕೆಯಿಂದ ಮರೆಯಾದರು.

೩೮–೪೦. ಆನಂತರದಲ್ಲಿ ತನ್ನ ಲೀಲೆಯಿಂದ ವೈಶ್ಯವೇಷವನ್ನು ಧರಿಸಿರುವ ಸುಂದರೇಶ್ವರನು "ನ್ಯಾಯಾಧಿಪತಿಗಳಾದ ನೀವು ಅನ್ಯಾಯಮಾಡುವುದರಲ್ಲಿ ಆಸಕ್ತರಾದ ಜ್ಞಾತಿಗಳ ಕೆಲಸವನ್ನು ನೋಡಿರಿ, ನಾನು ನನ್ನ ತಂಗಿಯ ಮಗನನ್ನು ಪುತ್ರನನ್ನಾಗಿ ಸ್ವೀಕರಿಸಿದ್ದನ್ನು ಈ ಜ್ಞಾತಿಗಳೆಲ್ಲರೂ ನೋಡಿದ್ದರು. ಆಗ ನಾನು ಇದ್ದ ಕ್ರಮವೆಲ್ಲವನ್ನೂ ಇವರು ತಿಳಿದಿದ್ದರೂ, ಅತಿ ಆಸೆಯಿಂದ ಈ ವಿಧವಾದ ಕೆಟ್ಟ ವ್ಯವಹಾರವನ್ನು ಮಾಡಿರುವರು. ನ್ಯಾಯವನ್ನು ಚೆನ್ನಾಗಿ ತಿಳಿದಿರುವ ನೀವು ಅವರ ನಡತೆಯಲ್ಲವನ್ನೂ ತಿಳಿದುಕೊಳ್ಳಿರಿ" ಎಂದು ಮೃದುವಾಗಿ ಹೇಳಿದನು.

ಇತ್ಯಾಕರ್ಣ್ಯ ವಚಸ್ತಸ್ಯ ಶಂಭೋರ್ವೈಶ್ಯಸ್ವರೂಪಿಣಃ ॥ ೪೧ ॥

ವಿಸ್ಮಿತಾ ಶ್ಚಾಭವನ್ ಸರ್ವೇ ತೇಷಾಂ ದೃಷ್ಟ್ವಾ ಪಲಾಯನಂ ।
ಅಥ ಧರ್ಮಾಸನಸ್ಥಾಶ್ಚ ಸರ್ವೇ ಪ್ರಾಹು ರ್ವಿಚಕ್ಷಣಾಃ ॥ ೪೨ ॥

ಕ್ಷಮ್ಯತಾಮಪರಾಧಸ್ತೈಃ ಕೃತೋ ಯೋ ಜ್ಞಾತಿಭಿ ಸ್ತ್ವಯಾ ।
ಭಗಿನೀಭಾಗಿನೇಯಾಭ್ಯಾಂ ತ್ವಂ ಗಚ್ಛಾತ್ಮೀಯಮಂದಿರಂ ॥ ೪೩ ॥

ಪುತ್ರಸ್ವೀಕಾರವಿಧಿನಾ ಗೃಹೀತಾಯಾರ್ಭಕಾಯ ಚ ।
ಪ್ರಯಚ್ಛದ್ಗೃಹಕೇದಾರರತ್ನಹೇಮಾದಿವಸ್ತು ಚ ॥ ೪೪ ॥

ಪ್ರಾರ್ಥಿತ ಸ್ತ್ವಿತಿ ಧರ್ಮಜ್ಞೈರ್ವೈಶ್ಯೇಶೋ ವೃದ್ಧತಾಂ ಗತಃ ।
ಸ್ವಸ್ರೀಯಂ ತಂ ಸ್ವಸಾರಂ ತಾಮಾದಾಯ ಶನಕೈ ರ್ವ್ರಜನ್ ॥ ೪೫ ॥

ವೇಶ್ಮ ಪ್ರವಿಶ್ಯ ಸರ್ವಾಭಿಃ ಸಂಪದ್ಭಿಃ ಪರಿಪೂರಿತಂ ।
ತತ್ರ ತೌ ಸ್ಥಾಪಯಿತ್ವಾಥ ವೈಶ್ಯಃ ಸದ್ಯ ಸ್ತಿರೋದಧೇ ॥ ೪೬ ॥

---

೪೧–೪೬. ವೈಶ್ಯನ ರೂಪದಿಂದ ಇರುವ ಶಿವನು ಹೇಳಿದ ಮಾತನ್ನು ನ್ಯಾಯಾಧಿಪತಿಯು ಕೇಳಿದನು. ಅದಕ್ಕನುಸಾರವಾಗಿ ಜ್ಞಾತಿಗಳೆಲ್ಲರೂ ಓಡಿಹೋಗಿರುವುದನ್ನು ನೋಡಿ, ನ್ಯಾಯಸ್ಥಾನದಲ್ಲಿದ್ದವರೆಲ್ಲರೂ ಆಶ್ಚರ್ಯಪಟ್ಟರು. ಅನಂತರದಲ್ಲಿ ನ್ಯಾಯಸ್ಥಾನದಲ್ಲಿರುವವರೆಲ್ಲರೂ, ಬುದ್ಧಿವಂತರಾದ ಕಾರಣ "ನೀನು ನಿನ್ನ ಜ್ಞಾತಿಗಳು ಮಾಡಿರುವ ಅಪರಾಧವನ್ನು ಕ್ಷಮಿಸು. ನಿನ್ನ ತಂಗಿ ಮತ್ತು ಸೋದರಳಿಯನ ಸಂಗಡ ನಿನ್ನ ಮನೆಗೆ ಹೋಗು" ಎಂದು ಹೇಳಿದರು. ವೃದ್ಧವೈಶ್ಯನು ಸ್ವೀಕಾರಮಾಡಿಕೊಂಡಿದ್ದ ಪುತ್ರನಿಗೆ ಅವನು ಸಂಪಾದಿಸಿದ್ದ ಮನೆ, ಗದ್ದೆ, ರತ್ನ, ಚಿನ್ನ, ಇವೆಲ್ಲವನ್ನೂ ಕೊಟ್ಟರು. ಅನಂತರದಲ್ಲಿ ನ್ಯಾಯಾಧೀಶನೇ ಮೊದಲಾದವರು ಆ ವೃದ್ಧವೈಶ್ಯನನ್ನು "ನೀನು ಮನೆಗೆ ಹೋಗು" ಎಂದು ಪ್ರಾರ್ಥಿಸಿದರು. ಆಗ ಅವನು ತನ್ನ ತಂಗಿಯು ಮತ್ತು ಸೋದರಳಿಯ ಇವರನ್ನು ಕರೆದುಕೊಂಡು ಮನೆಗೆ ಮೆಲ್ಲಗೆ ಬಂದನು. ಎಲ್ಲಾ ವಿಧವಾದ ಐಶ್ವರ್ಯದಿಂದ ತುಂಬಿರುವ ಮನೆಯಲ್ಲಿ ಅವರನ್ನು ನಿಲ್ಲಿಸಿ ವೃದ್ಧವೈಶ್ಯನು ಅದೃಶ್ಯನಾದನು.

ಇತಿ ಮಾತುಲವೇಷ ಸ್ಸರ್ವಜ್ಞಾತೀರ್ಜಿತ್ವಾಥ ದುರ್ಮದಾನ್ ।
ವೈಶ್ಯಾರ್ಭಕಾಯ ಪ್ರದದೌ ಗೇಹಾದ್ಯಂ ಸುಂದರೇಶ್ವರಃ ॥ ೪೭ ॥

ತಿರೋಧಾನಾನಂತರಂ ತು ವಿಶ ಸ್ತಸ್ಯಾಖಿಲಾ ಜನಾಃ ।
ಸುಂದರೇಶ್ವರ ಏವಾಯ ಮಿತ್ಯಜಾನನ್ ತಮೂರುಜಂ ॥ ೪೮ ॥

ತಮುದಂತಂ ನೃಪ ಶ್ಶ್ರುತ್ವಾ ಸುಂದರೇಶಾಂಘ್ರಿಶೇಖರಃ ।
ಶಂಭುವತ್ತಾ ಚ ಸಂಪೂಜ್ಯ ತಾಭ್ಯಾಂ ಗ್ರಾಮಾದಿಕಂ ದದೌ ॥ ೪೯ ॥

ಸುಂದರೇಶ್ವರದೇವಸ್ಯ ಭಕ್ತವಾತ್ಸಲ್ಯ ಮುದ್ಭುತಂ ।
ದೃಷ್ಟ್ವಾತು ವಿಸ್ಮಿತಾ ಸ್ಸರ್ವೇ ತಸ್ಮಿನ್ಭಕ್ತಿಂ ಜನಾ ವ್ಯಧುಃ ॥ ೫೦ ॥

ಸುಂದರೇಶ್ವರಪಾದಾಯ ಸುಂದರೇಶಾಂಘ್ರಿಶೇಖರಃ ।
ಅತ್ಯಂತಭಕ್ತಿಮಾ ನ್ಭೂತ್ವಾ ಪ್ರಾಸಾದಂ ಗೋಪುರಾದಿಕಂ ॥ ೫೧ ॥

ಸರ್ವರತ್ನಮಯಂ ಸರ್ವಂ ಕಾರಯಿತ್ವಾ ವಿಶೇಷತಃ ।
ಪ್ರಾತಃ ಸಾಯಂ ಪ್ರತಿದಿನಂ ತತ್ಸೇವಾ ಮಕರೋ ನ್ಮುದಾ ॥ ೫೨ ॥

---

೪೭-೫೨. ಆ ವೃದ್ಧವೈಶ್ಯನು ಅದೃಶ್ಯನಾದದ್ದನ್ನು ನೋಡಿ, ಅಲ್ಲಿರುವ ಜನರೆಲ್ಲರೂ ಸುಂದರೇಶ್ವರನು ಹೀಗೆ ಬಂದಿದ್ದನು ಎಂದು ತಿಳಿದುಕೊಂಡರು. ಸುಂದರೇಶಾಂಘ್ರಿಶೇಖರರಾಜನು ಅವರ ವೃತ್ತಾಂತವೆಲ್ಲವನ್ನೂ ಕೇಳಿ, ಶಿವಭಕ್ತರೆಂದು ಅವರನ್ನು ತಿಳಿದು, ಶಿವನನ್ನು ಪೂಜಿಸುವಂತೆ ಅವರಿಬ್ಬರಿಗೂ ಗೌರವವನ್ನು ಕೊಟ್ಟು ಗ್ರಾಮವೇ ಮೊದಲಾದದ್ದನ್ನು ಅವರಿಗೆ ಕೊಟ್ಟನು. ಸುಂದರೇಶ್ವರನಿಗೆ ಭಕ್ತರಲ್ಲಿ ಇರುವ ಪ್ರೀತಿಯನ್ನು ನೋಡಿ, ಜನರೆಲ್ಲರೂ ದೇವನಲ್ಲಿ ಬಹಳ ಭಕ್ತಿಯುಳ್ಳವರಾದರು. ಸುಂದರೇಶಾಂಘ್ರಿಶೇಖರನು ಪೂಜ್ಯನಾದ ಸುಂದರೇಶ್ವರನಲ್ಲಿ ಬಹಳ ಭಕ್ತಿಯುಳ್ಳವನಾಗಿ, ಗೋಪುರ, ದೇವಾಲಯ ಇವುಗಳೆಲ್ಲಕ್ಕೂ ಚಿನ್ನ ಮತ್ತು ರತ್ನಗಳಿಂದ ಅಲಂಕರಿಸಿದನು. ಮತ್ತು ಪ್ರತಿದಿನವೂ ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿಯೂ ವಿಶೇಷವಾಗಿ ಸುಂದರೇಶ್ವರನ ಸೇವೆಯನ್ನು ಮಾಡುತ್ತಾ ಬಂದನು.

ಸೇವಾಪ್ರಿಯಃ ಸುಂದರೇಶಃ ತಸ್ಮೈ ದತ್ವಾಧಿಕಂ ಶ್ರಿಯಂ ।
ಪುತ್ರಂ ವರಗುಣಾಖ್ಯಂ ಚ ಸಾರ್ಥನಾಮಾನ ಮರ್ಪಯತ್ ॥ ೫೩ ॥

ಪುತ್ರಲಾಭಾದಿಸಂತುಷ್ಟ ಶ್ಶೀಮಾರ್ ಪಾಂಡ್ಯಮಹೀಪತಿಃ ।
ಪರಿಪಾಲ್ಯ ಚಿರಂ ಪೃಥ್ವೀಂ ಶೈವೀಂ ತನು ಮಥಾಗಮತ್ ॥ ೫೪ ॥

ಸುಂದರೇಶಿತುರೇಕೋನಾ ಯಾ ಚತ್ವಾರಿಂಶಿಕಾ ಮತಾ ।
ಸಾ ಲೀಲಾ ಚ ಮಯಾ ಪ್ರೋಕ್ತಾ ಸರ್ವದುಃಖವಿನಾಶಿನೀ ॥ ೫೫ ॥

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ವೈಶ್ಯಶಿಶೋರ್ಮಾತುಲಭಾವೋನಾಮ
ಪಂಚಚತ್ವಾರಿಂಶೋಽಧ್ಯಾಯಃ

---

೫೩-೫೪. ಸೇವೆಯನ್ನು ಮಾಡಿಸಿಕೊಳ್ಳುವುದರಲ್ಲಿ ಪ್ರೀತಿಯುಳ್ಳವನಾದ ದೇವದೇವನು ಆ ರಾಜನ ಸೇವೆಗೆ ಮೆಚ್ಚಿದವನಾಗಿ, ಅವನಿಗೆ ಹೆಚ್ಚಾದ ಐಶ್ವರ್ಯವನ್ನು ಕೊಟ್ಟು, ಆ ಹೆಸರಿಗೆ ಅನುಸಾರವಾಗಿರುವ ವರಗುಣನೆಂಬ ಮಗನು ಅವನಿಗೆ ಹುಟ್ಟುವಂತೆ ಅನುಗ್ರಹಿಸಿದನು, ಪುತ್ರಲಾಭವೇ ಮೊದಲಾದ ಸಕಲೇಷ್ಟಾರ್ಥಗಳನ್ನು ಹೊಂದಿದ ಪಾಂಡ್ಯರಾಜನು ಬಹಳ ಕಾಲ ರಾಜ್ಯವನ್ನು ಪಾಲನೆಮಾಡಿದನಂತರ ಶಿವಭಾವವನ್ನು ಹೊಂದಿದನು.

೫೫. ಎಲ್ಲಾ ವಿಧವಾದ ದುಃಖಗಳನ್ನು ಪರಿಹಾರಮಾಡುವ ಸುಂದರೇಶ್ವರನು ಆಚರಿಸಿರುವ ಮೂವತ್ತೊಂಭತ್ತನೆಯ ಲೀಲೆಯನ್ನು ನಿಮಗೆ ಹೇಳಿರುವೆನು.

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ
ವೈಶ್ಯ ಶಿಶೋರ್ಮಾತುಲ ಭಾವವೆಂದು ಹೆಸರುಳ್ಳ ನಲವತ್ತೈದನೆಯ
ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಹಾಲಾಸ್ಯಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಷಟ್‌ಚತ್ವಾರಿಂಶೋಽಧ್ಯಾಯಃ



|| ಅಗಸ್ತ್ಯ ಉವಾಚ ||

ಯಯಾ ತು ಲೀಲಯಾ ದೇವೋ ಬ್ರಹ್ಮಹತ್ಯಾರ್ತಿನಾಶನಂ ।
ಅಕರೋತ್ ಪಾಂಡ್ಯಭೂಪಸ್ಯ ತಾಂ ಶೃಣ್ವಂತು ಮುನೀಶ್ವರಾಃ || ೧ ||

ಶ್ರೀಮಾನ್ವರಗುಣಃ ಪಾಂಡ್ಯಃ ಪಿತ್ರಾ ದತ್ತಾಂ ವಸುಂಧರಾಂ ।
ರಾಜ್ಯಲಕ್ಷ್ಮೀಮನುಪ್ರಾಪ್ಯ ಬಭೌ ವಿಷ್ಣುಂ ರಿವಾ ಪರಃ || ೨ ||

ಕಂದರ್ಪೇಣ ನಿಭಃ ಕಾಂತ್ಯಾ ಭಾಸಾ ಭಾಸ್ಕರಸನ್ನಿಭಃ ।
ರಥೈರ್ಗಜೈಶ್ಚ ತುರಗೈರನಂತೈಶ್ಚ ಬಲೈರ್ಯುತಃ || ೩ ||

---

### ನಲವತ್ತಾರನೆಯ ಅಧ್ಯಾಯವು

೧–೩. ಅಗಸ್ತ್ಯಋಷಿಯು ಹೇಳಿದನು:-- ಪಾಂಡ್ಯರಾಜನಿಗೆ ಸಂಭವಿಸಿದ ಬ್ರಹ್ಮಹತ್ಯಾಪಾತಕವನ್ನು ಸುಂದರೇಶ್ವರನು ಪರಿಹಾರಮಾಡಿದ ಲೀಲೆಯನ್ನು ವಿವರಿಸಿ ಹೇಳುವೆನು, ಮುನಿಗಳೇ ! ನೀವೆಲ್ಲರೂ ಕೇಳಿರಿ. ವರಗುಣಪಾಂಡ್ಯರಾಜನು ತನ್ನ ತಂದೆಯು ತನಗೆ ಕೊಟ್ಟ ರಾಜ್ಯವನ್ನೂ, ಐಶ್ವರ್ಯವನ್ನೂ ಅನುಭವಿಸುತ್ತಾ ವಿಷ್ಣುವಿನಂತೆ ಪ್ರಕಾಶಿಸುತ್ತಿದ್ದನು. ಅವನು ಮನ್ಮಥನಿಗೆ ಸಮನಾಗಿಯೂ, ಕಾಂತಿಯಿಂದ ಸೂರ್ಯನಂತೆಯೂ ಇರುತ್ತಾ, ಆನೆ, ಕುದುರೆ ಮೊದಲಾದ ಎಣಿಕೆಯಿಲ್ಲದಿರುವಷ್ಟು ಮಟ್ಟಿನ ಸೇನೆಯಿಂದ ಕೂಡಿದವನಾಗಿ ಇದ್ದನು.

ಸತ್ಯೇ ನ ಸರ್ವಜ್ಞತಯಾ ಜಿತೇಂದ್ರಿಯತಯಾ ನಿಶಂ ।
ಅಪರಶ್ಶಂಕರ ಇವ ರಾಜತೇ ರಾಜನಂದಿತಃ ॥ ೪ ॥

ಬಿಡೌಜಸಾ ವಿಕ್ರಮೇಣ ರಾಜರಾಜೇನ ಸಂಪದಾ ।
ಮಹದೈಶ್ವರ್ಯಸಂಯುಕ್ತೋ ರಾಜ್ಯಂ ಚಕ್ರೇ ಸನೀತಿಕಂ ॥ ೫ ॥

ದೇವಚೂಡಾಮಣಿಂ ದೇವಂ ಶಂಕರಂ ಸುಂದರೇಶ್ವರಂ ।
ಸರ್ವಸಂಪತ್ಪ್ರದಂ ಸದ್ಯ ಸ್ಸಮಸ್ತಾರ್ತಿಹರಂ ಪರಂ ॥ ೬ ॥

ಪುರಾ ವರಗುಣಾಭಿಖ್ಯಃ ಪಾಂಡ್ಯವಂಶಶಿಖಾಮಣಿಃ ।
ಸಂಸೇವ್ಯಾನುದಿನಂ ಪಶ್ಚಾ ತ್ಸ್ವಕೃತ್ಯಾನಿ ಮುದಾ ಕರೋತ್ ॥ ೭ ॥

ಏಕದಾ ಮೃಗಯಾಹೇತೋಃ ಸನ್ನದ್ಧಃ ಪ್ರಾವಿಶ ದ್ವನಂ ।
ಇತಸ್ತತಃ ಪರಿಭ್ರಾಮ್ಯ ನಿನ್ಯೇ ತತ್ರೈವ ವಾಸರಂ ॥ ೮ ॥

---

೪–೭. ವರಗುಣಪಾಂಡ್ಯನು ಎಲ್ಲಾ ವಿಧವಾದ ಜ್ಞಾನವುಳ್ಳವನಾಗಿ, ಇಂದ್ರಿಯ ಗಳನ್ನು ತನ್ನ ಅಧೀನದಲ್ಲಿ ಇರಿಸಿಕೊಂಡು ಇದ್ದದ್ದರಕಾರಣ, ಇವನನ್ನು ಇತರ ರಾಜರು ಪ್ರತ್ಯಕ್ಷನಾದ ಶಿವನೆಂದು ತಿಳಿದು ಇವನಿಗೆ ಬಹಳ ಗೌರವವನ್ನು ಮಾಡು ತ್ತಿದ್ದರು. ಇವನು ಪರಾಕ್ರಮದಿಂದ ಇಂದ್ರನಿಗೆ ಸಮನಾಗಿ, ಐಶ್ವರ್ಯದಲ್ಲಿ ಕುಬೇರ ನಿಗೆ ಸಮನಾಗಿ ಇದ್ದುಕೊಂಡು, ನೀತಿಗೆ ಅನುಸಾರವಾಗಿ ರಾಜ್ಯವನ್ನು ಆಳುತ್ತಿದ್ದನು ದೇವತೆಗಳಲ್ಲಿ ಎಲ್ಲರಿಗಿಂತಲೂ ಶ್ರೇಷ್ಠನಾದ, ಸರ್ವ ಸಂಪತ್ತುಗಳನ್ನೂ ಕೊಡುವ, ಭಕ್ತರ ವಿಪತ್ತುಗಳನ್ನು ಆ ಕ್ಷಣದಲ್ಲಿ ಪರಿಹರಿಸುವ, ಸುಂದರೇಶ್ವರನ ರೂಪಿನಿಂದ ಇರುವ ಶಿವನನ್ನು ವರಗುಣಪಾಂಡ್ಯರಾಜನು ಪ್ರತಿದಿನವೂ ಸಂತೋಷದಿಂದ ಸೇವಿಸಿದ ನಂತರ ತನ್ನ ಕಾರ್ಯಗಳನ್ನು ಮಾಡುತ್ತಿದ್ದನು.

೮–೧೦. ಹೀಗೆ ಇರುವಾಗ ಒಂದು ಸಾರಿ ಅವನು ಬೇಟೆಯಾಡಲು ಕಾಡಿಗೆ ಹೋದನು. ಅಲ್ಲಲ್ಲಿಯೇ ಕಾಡಿನಲ್ಲಿ ಸುತ್ತುತ್ತಾ ಒಂದು ದಿನವು ಕಳೆದುಹೋಯಿತು ರಾತ್ರಿಯಲ್ಲಿ ಹಿಂತಿರುಗಿ ಬರುತ್ತಿರುವಾಗ ದಾರಿಯಲ್ಲಿ ಮಲಗಿದ್ದ ಒಬ್ಬ ಬ್ರಾಹ್ಮಣನನ್ನು

ರಾತ್ರೌ ವಿವೃತ್ಯ ಸ್ವಪುರಂ ಮೃಗಯಾಭ್ರಾಂತಿಮೋಹಿತಃ ।
ಮಧ್ಯೇ ಮಾರ್ಗಂ ಶಯಾಲುಂ ಚ ದ್ವಿಜಂ ಕಂಚಿದ್ವಿಲಂಘಯನ್ ॥ ೯ ॥

ತುರಂಗಮಪದಾಕ್ರಾಂತ್ಯಾ ಕ್ರಂದನ್ಸದ್ಯೋ ಜಹಾ ವಸೂನ್ ।
ಅಜಾನಂಸ್ತದ್ವಧಂ ರಾಜಾ ಸದ್ಮ ಪ್ರಾಪ್ಯ ಸುಖಂ ಸ್ಥಿತಃ ॥ ೧೦ ॥

ಪ್ರಭಾತೇ ಭೂಸುರಾ ಸ್ಸರ್ವೇ ಸಂಭೂಯ ದ್ವಾರಿ ಭೂಪತೇಃ ।
ಅಕುರ್ವನ್ನ ಭಯಾಕ್ರೋಶಂ ಪ್ರೇತಮಾಸ್ಥಾಯ ತತ್ರ ತು ॥ ೧೧ ॥

ಅಥ ಶ್ರುತ್ವಾ ಮಹಾಘೋಷಂ ವಿಪ್ರಾಣಾಂ ಪಾಂಡ್ಯಭೂಪತಿಃ ।
ಸಮೀಪಸ್ಥಾಂಶ್ಚ ಸಚಿವಾ ನ್ಕಿಮೇತದಿತಿ ಸೋಬ್ರವೀತ್ ॥ ೧೨ ॥

ತೇ ಸರ್ವೇ ಶೀಘ್ರ ಮಾಗತ್ಯ ಶ್ರುತ್ವಾ ವಿಪ್ರವಚಾಂಸಿ ಚ ।
ಸಾಂತ್ವವಾದೇನ ಸಂತೋಷ್ಯ ದ್ರವ್ಯೈ ರ್ವಸ್ತ್ರಾದಿಭಿಶ್ಚ ತಾನ್ ॥ ೧೩ ॥

---

ಬೇಟೆಗಾಗಿ ಸಿಕ್ಕಿದ ಪ್ರಾಣಿ ಎಂಬ ಭ್ರಾಂತಿಯಿಂದ ಅವನ ಕುದುರೆಯು ತುಳಿಯಿತು ಅದರಿಂದ ಆ ಬ್ರಾಹ್ಮಣನು ಕೂಗಿಕೊಂಡು ಪ್ರಾಣವನ್ನು ಬಿಟ್ಟನು. ರಾಜನಿಗೆ ಅವನು ಮೃತನಾದ ಸಂಗತಿಯು ತಿಳಿಯದೆ ಇರುವ ಕಾರಣ, ರಾಜನು ತನ್ನ ಮನೆಯನ್ನು ಹೊಂದಿ ಸುಖವಾಗಿದ್ದನು. ಬೆಳಗಾದಕೂಡಲೆ ಬ್ರಾಹ್ಮಣರು ಎಲ್ಲರೂ ಸೇರಿ, ಅರಮನೆಯ ಬಾಗಿಲಿನಹತ್ತಿರಕ್ಕೆ ಬಂದು ಅಲ್ಲಿ ಆ ಶವವನ್ನು ಹಾಕಿಕೊಂಡು ಧೀನಧ್ವನಿಯಿಂದ ಕೂಗಿಕೊಂಡರು.

೧೧–೧೪. ಆ ಧ್ವನಿಯನ್ನು ಕೇಳಿದಕೂಡಲೆ, ರಾಜನು ಹತ್ತಿರದಲ್ಲಿದ್ದ ತನ್ನ ಮಂತ್ರಿಗಳನ್ನು ಅದನ್ನು ವಿಚಾರಿಸಲು ಕಳುಹಿಸಿದನು. ಅವರೆಲ್ಲರೂ ಬಂದು ಆ ಬ್ರಾಹ್ಮಣರನ್ನು ವಿಚಾರಿಸಿ, ಮೃದುವಾದ ಮಾತುಗಳಿಂದ ಸಮಾಧಾನಮಾಡಿ, ವಸ್ತ್ರ ಮತ್ತು ದುಡ್ಡು ಇವುಗಳನ್ನು ಅವರಿಗೆ ಕೊಟ್ಟು, ಅದನ್ನು ಸಂಸ್ಕಾರಮಾಡಲು

ೀಷಯಿತ್ವಾಥ ಸಂಸ್ಕರ್ತುಂ ತಂ ಪ್ರೇತಂ ಭೂಸುರಾ ದ್ರುತಂ ।
ಥಿತಾ ಸ್ಸಹಸಾ ಗತ್ವಾ ರಾಜ್ಞೇ ವೃತ್ತಾಂತ ಮಬ್ರುವನ್ ॥ ೧೪ ॥

ತ್ವಾ ತು ದುಃಖಿತೋ ರಾಜಾ ಕಿಂ ಕರ್ತವ್ಯ ಮತಃಪರಂ ।
ಚಿಂತಾನ್ವಿತಶ್ಚಾಸೀ ಚ್ಚಿಂತಾತಸ್ತಾಶ್ಚ ಮಂತ್ರಿಣಃ ॥ ೧೫ ॥

ರೋಹಿತಮುಖಾಃ ಸರ್ವೇ ಸಮಾಗತ್ಯ ವಿಚಕ್ಷಣಾಃ ।
ಶ್ಯವೋಚ ಹಿತಾಸಕ್ತಾಃ ಪಾಂಡ್ಯರಾಜಾಘಶಾಂತಯೇ ॥ ೧೬ ॥

ಂ ಭೂಸ್ವರ್ಣಾದಿದಾನಾನಿ ದಾತವ್ಯಾನ್ಯವಿಲಂಬಿತಂ ।
ಘಮರ್ಷಣಮಂತ್ರಾದ್ಯೈಃ ಹೋಮಃ ಕಾರ್ಯಸ್ತಿಲಾಜ್ಯತಃ ॥ ೧೭ ॥

ೀತೀರೇ ಪ್ರಪಾಂ ಕೃತ್ವಾ ಭೋಜ್ಯಂತಾಂ ಭೂಮಿದೇವತಾಃ ।
ಭ್ಯೋ ದೂರ್ವಾಪ್ರದಾನಂ ಚ ತಚ್ಛೃಂಗಾ ದಾತ್ಮಸೇವನಂ ॥ ೧೮ ॥

ಚಗವ್ಯಪ್ರಾಶನಂ ಚ ವೃಕ್ಷರಾಜಪ್ರದಕ್ಷಿಣಂ ।
ರ್ವ್ಯಂ ಭವತಾ ಸರ್ವ ಮೇತತ್ಕರ್ಮ ಮಹೀಪತೇ ॥ ೧೯ ॥

---

ಹ್ಮಣರನ್ನು ಬೇಗನೆ ಕಳುಹಿಸಿದರು. ಅನಂತರ ಅವರು ಕೊಂಚ ಖಿನ್ನವಾದ ಮನ ಳ್ಳವರಾಗಿ ಬೇಗ ದೊರೆಯ ಹತ್ತಿರಕ್ಕೆ ಹೋಗಿ ರಾಜನಿಗೆ ಆ ವೃತ್ತಾಂತವನ್ನು ಸಿದರು.

೧೫-೧೯. ಮಂತ್ರಿಗಳು ಹೇಳಿದ ಮಾತನ್ನು ಕೇಳಿದ ರಾಜನು "ಇನ್ನು ಂದೆ ಏನು ಮಾಡತಕ್ಕದ್ದು" ಎಂದು ಯೋಚನೆ ಮಾಡುತ್ತಿದ್ದನು. ಮಂತ್ರಿಗಳಿಗೂ ಾಚನೆಯಾಯಿತು. ಪಾಂಡ್ಯರಾಜನ ಪುರೋಹಿತರು ಮೊದಲಾದವರು ಎಲ್ಲರೂ ಜನ ಹಿತಾಕಾಂಕ್ಷಿಗಳಾಗಿ "ಆ ಪಾತಕವು ನಾಶವಾಗುವುದಕ್ಕಾಗಿ, ನೀನು ಬೇಗನೆ ೀ, ಭೂ, ಹಿರಣ್ಯವೇ ಮೊದಲಾದ ದಾನಗಳನ್ನು ಮಾಡಬೇಕು. ಮರ್ಷಣಮಂತ್ರವೇ ಮೊದಲಾದ ಮಂತ್ರಗಳಿಂದ ತಿಲಾಜ್ಯ (ಯಳ್ಳು, ತುಪ್ಪ) ನ್ನು ಹೋಮಮಾಡಬೇಕು. ನದೀತೀರದಲ್ಲಿ ಚಪ್ಪರವನ್ನು ಹಾಕಿಸಿ, ಬ್ರಾಹ್ಮಣರ ಾರಾಧನೆಯನ್ನು ಮಾಡಿಸಬೇಕು. ಗೋವುಗಳಿಗೆ ಹುಲ್ಲನ್ನು ಹಾಕಬೇಕು. ೀವುಗಳನ್ನು ಸೇವಿಸಿ, ಪಂಚಗವ್ಯ ಪ್ರಾಶನೆಯನ್ನು ಮಾಡಿ, ಅಶ್ವತ್ಥವೃಕ್ಷದ ಪ್ರದ ಿಯನ್ನು ನೀನು ಮಾಡಬೇಕು." ಎಂದು ರಾಜನಿಗೆ ತಿಳಿಸಿದರು.

ವಿನಶ್ಯೇದ್ಬ್ರಹ್ಮಹತ್ಯಾ ಚ ಪ್ರಮಾದಾ ಪತಿತಾ ನೃಪ ।
ಇತ್ಯುಕ್ತವತ್ಸು ವಿಪ್ರೇಷು ಶಾಸ್ತ್ರಜ್ಞೇಷು ತಪಸ್ವಿಷು ॥ ೨೦ ॥

ತಥೇತಿ ಸಹಸಾ ಸರ್ವಾ ನ್ಪ್ರಾಯಶ್ಚಿತ್ತಾ ನಕಾರಯತ್ ।
ಏವಂ ಹಿ ಕುರ್ವತೋsಪ್ಯಸ್ಯ ಮಾಯಾ ಛಾಯಾ ತು ಕಾ ಚನ ॥ ೨೧ ॥

ಕೃಷ್ಣಾಂಗೀ ಪಾರ್ಶ್ವ ಮಭ್ಯೇತ್ಯ ಸರ್ವದಾ ಸಹ ವರ್ತತೇ ।
ಶ್ರೀಮಾ ನ್ವರಗುಣಾಭಿಖ್ಯಃ ಶೀಲವಾ ನ್ಪಾಂಡ್ಯಭೂಪತಿಃ ॥ ೨೨ ॥

ಭೀತಭೀತಃ ಕಿಂ ವಿಧೇಯ ಮಿತಿ ಚಿಂತಾಪರೋsಭವತ್ ।

॥ ಋಷಯ ಊಚುಃ ॥

ಪುರಾ ಪ್ರೋಕ್ತಾ ವೃತ್ರಹತ್ಯಾ ಪ್ರಣಷ್ಟಾ ಸೀದ್ಬಿಡೌಜಸಃ ॥ ೨೩ ॥

---

೨೦–೨೨. ಪ್ರಮಾದದಿಂದ ಉಂಟಾದ ಬ್ರಹ್ಮಹತ್ಯೆಯು ಹೀಗೆ ಮಾಡಿದಲ್ಲಿ ನಾಶವಾಗುವುದು, ಎಂದು ಶಾಸ್ತ್ರಜ್ಞರಾದ, ಮತ್ತು ತಪಸ್ವಿಗಳಾದ ಪುರೋಹಿತರು ಹೇಳಿದ ಮಾತಿನಂತೆ, ಎಲ್ಲಾ ವಿಧವಾದ ಪ್ರಾಯಶ್ಚಿತ್ತಗಳನ್ನೂ ಮಾಡಿಸಿದನು. ಹೀಗೆ ಎಲ್ಲವನ್ನೂ ಮಾಡಿದಾಗ್ಯೂ, ಕಪ್ಪಾಗಿರುವ ಆಕಾರವನ್ನು ಧರಿಸಿರುವ ಒಂದು ನೆರಳು ಯಾವಾಗಲೂ ಅವನ ಪಕ್ಕದಲ್ಲಿ ಅವನ ಜೊತೆಯಲ್ಲಿಯೇ ಕಾಣಿಸುತ್ತಾ ಇತ್ತು. ಸದಾಚಾರ ಸಂಪನ್ನನಾದ ವರಗುಣಪಾಂಡ್ಯರಾಜನು ಅದನ್ನು ನೋಡಿ ಹೆದರಿದವನಾಗಿ "ಇದು ಪರಿಹಾರವಾಗಲು ಏನು ಮಾಡಬೇಕು" ಎಂದು ಯೋಚನೆಯುಳ್ಳವನಾದನು.

೨೩–೨೪. ಋಷಿಗಳುಹೇಳಿದರು:—ಈ ಹಾಲಾಸ್ಯಕ್ಷೇತ್ರವನ್ನು ಪ್ರವೇಶಿಸಿದ ಕೂಡಲೆ ಇಂದ್ರನಿಗೆ ಬಂದಿದ್ದ ಬ್ರಹ್ಮಹತ್ಯೆಯು ನಾಶವಾಯಿತು. ಮತ್ತು ಇಂದ್ರನಿಗೆ ಬಂದಿದ್ದ ಎಲ್ಲಾ ವಿಧವಾದ ಪಾಪಗಳೆಲ್ಲವೂ ಹೋದವು. ಯಾವಾಗಲೂ ಆ ಕ್ಷೇತ್ರದಲ್ಲಿಯೇ ವಾಸಮಾಡುತ್ತಿರುವ ವರಗುಣಪಾಂಡ್ಯರಾಜನಿಗೆ ಪ್ರಾಪ್ತವಾದ ಬ್ರಹ್ಮಹತ್ಯೆಯು ಯಾವ ಕಾರಣದಿಂದ ಹೋಗಲಿಲ್ಲ. ಎಲೈ ಅಗಸ್ತ್ಯಋಷಿಯೆ, ಈ ಸಂಶಯವನ್ನು ನಮಗೆ ಹೋಗಲಾಡಿಸು.

ಕ್ಷೇತ್ರಪ್ರವಿಷ್ಟಮಾತ್ರೇಣ ಸಂಚಿತೈ ರಘಸಂಚಯೈಃ ।
ರಾಜ್ಞೋ ವರಗುಣಾಖ್ಯಸ್ಯ ಸದಾ ತತ್ಕ್ಷೇತ್ರವಾಸಿನಃ ॥ ೧೪ ॥

ಕಥ ಮಾಸೀನ್ನ ನಷ್ಟಾ ಸಾ ವಿಪ್ರಹತ್ಯಾ ಘಟೋದ್ಭವ ।

॥ ಅಗಸ್ತ್ಯ ಉವಾಚ ॥

ಸಾಧು ಪೃಷ್ಟಂ ಹಿ ಯುಷ್ಮಾಭಿಃ ಪ್ರಶ್ನಂ ಪ್ರಶ್ನವಿದಾಂ ವರಾಃ ॥ ೧೫ ॥

ಕೃತಂ ಸರ್ವತ್ರ ಕಲುಷಂ ಪುಣ್ಯತೀರ್ಥೇ ವಿನಶ್ಯತಿ ।
ಪುಣ್ಯತೀರ್ಥೇ ಕೃತಂ ಪಾಪಂ ಶಿವಕ್ಷೇತ್ರೇ ವಿನಶ್ಯತಿ ॥ ೧೬ ॥

ಶಿವಕ್ಷೇತ್ರೇ ಕೃತಂ ಪಾಪಂ ಶ್ರೀಹಾಲಾಸ್ಯೇ ವಿನಶ್ಯತಿ ।
ಶ್ರೀಹಾಲಾಸ್ಯೇ ಕೃತಂ ಪಾಪಂ ವಿನಾ ಭೋಗಂ ನ ನಶ್ಯತಿ ॥ ೧೭ ॥

ಹಾಲಾಸ್ಯೇ ದ್ವಾದಶಾಂತಸ್ಥೇ ಶಿವಕ್ಷೇತ್ರೋತ್ತಮೋತ್ತಮೇ ।
ಕೃತಸ್ಯ ಸುಕೃತಸ್ಯಾಪಿ ದುಷ್ಕೃತಸ್ಯ ಚ ಜಂತುಭಿಃ ॥ ೧೮ ॥

---

೧೫-೨೦. ಅಗಸ್ತ್ಯ ಋಷಿಯು ಹೇಳಿದನು:- ಪ್ರಶ್ನೆ ಮಾಡುವುದರಲ್ಲಿ ಬುದ್ಧಿವಂತರಾದ ನೀವು ಕೇಳಿದ ಪ್ರಶ್ನೆಯು ಬಹಳ ಉತ್ತಮವಾದದ್ದು. ಎಲ್ಲಾ ಕಡೆಯಲ್ಲಿಯೂ ಮಾಡಿದ ಪಾಪವು ಪುಣ್ಯಕ್ಷೇತ್ರದಲ್ಲಿ ನಾಶವಾಗುವುದು. ಪುಣ್ಯಕ್ಷೇತ್ರದಲ್ಲಿ ಮಾಡಿದ ಪಾಪವು ಶಿವಕ್ಷೇತ್ರದಲ್ಲಿ ಹೋಗುವುದು. ಶಿವಕ್ಷೇತ್ರದಲ್ಲಿ ಮಾಡಿದ ಪಾಪವು ಹಾಲಾಸ್ಯಕ್ಷೇತ್ರದಲ್ಲಿ ನಾಶವಾಗುವುದು. ಹಾಲಾಸ್ಯಕ್ಷೇತ್ರದಲ್ಲಿ ಮಾಡಿದ ಪಾಪವು ಅದರ ಫಲವನ್ನು ಕೊಡದೆ ಹೋಗುವುದಿಲ್ಲ. ಶಿವಕ್ಷೇತ್ರಗಳಲ್ಲಿ ಬಹಳ ಉತ್ತಮವಾದ ದ್ವಾದಶಾಂತಸ್ಥವಾದ ಹಾಲಾಸ್ಯಕ್ಷೇತ್ರದಲ್ಲಿ ಮಾಡಿದ ಪುಣ್ಯಕಾರ್ಯವಾಗಲಿ, ಪಾಪ ಕೆಲಸವಾಗಲಿ, ಬಹಳ ಫಲವನ್ನು ಕೊಡುವಕಾರಣ, ಪ್ರಾಣಿಗಳು ಅದನ್ನು ಅನುಭವಿಸಲೇ ಬೇಕು. ಸತ್ಯವಾದ ಮಾತನ್ನು ಹೇಳಿರುವೆನು. ತತ್ತ್ವಸ್ಥಿತಿಯು ಹೀಗೆ ಇದ್ದಾಗ್ಯೂ ದಯಾನಿಧಿಯಾದ ಹಾಲಾಸ್ಯೇಶ್ವರನ ಅನುಗ್ರಹದಿಂದ ವರಗುಣಪಾಂಡ್ಯ

ಅಂತೋ ನಾಸ್ತಿ ಮುನಿಶ್ರೇಷ್ಠಾಃ ಸತ್ಯಮೇವ ಮಯೋದಿತಂ ।
ತಥಾಪಿ ಕರುಣಾಮೂರ್ತೇಃ ಶ್ರೀಹಾಲಾಸ್ಯಪತೇಃ ಪ್ರಭೋಃ ॥ ೨೯ ॥

ಪ್ರಸಾದೇನ ವಿನಷ್ಟಾ ಸಾ ಹತ್ಯಾ ವರಗುಣಸ್ಯ ಚ ।
ಶಿವಪ್ರಸಾದಯುಕ್ತಾನಾಂ ಕಿಮಸಾಧ್ಯಂ ಜಗತ್ತ್ರಯೇ ॥ ೩೦ ॥

ತಸ್ಮಾತ್ತತ್ಪ್ರಸಾದಲಾಭಾಯ ಸುಂದರೇಶಂ ಸಮಾಶ್ರಯೇತ್ ।
ಸುಂದರೇಶಪ್ರಸಾದೇನ ಸರ್ವಾಃ ಸಿಧ್ಯಂತಿ ಸಿದ್ಧಯಃ ॥ ೩೧ ॥

ಅನ್ಯತ್ರ ಚಿರಕಾಲೇನ ಸಾಧ್ಯಾಯಾ ಸ್ತಪಸೋ ಬಲಾತ್ ।
ಸದ್ಯಃ ಸಿದ್ಧ್ಯಂತಿ ತೇ ಕಾಮಾ ಹಾಲಾಸ್ಯೇಽಲ್ಪತಪೋಬಲಾತ್ ॥ ೩೨ ॥

ಪುರೋಹಿತಾದ್ಯೈ ರುಕ್ತೇ ಚ ಪ್ರಾಯಶ್ಚಿತ್ತೇ ಕೃತೇ ಸತಿ ।
ಶ್ರೀಹಾಲಾಸ್ಯೇ ತು ಕೃತಾ ವಿಪ್ರಹತ್ಯಾ ತಸ್ಯ ನ ನಶ್ಯತಿ ॥ ೩೩ ॥

ತದಾನೀಂ ಶಿವಭಕ್ತೇನ ಕೇನಚಿ ತ್ಕರುಣಾವಶಾತ್ ।
ಬೋಧಿತ ಸ್ಸುಂದರೇಶಸ್ಯ ಪ್ರದಕ್ಷಿಣಪರೋಽಭವತ್ ॥ ೩೪ ॥

---

ರಾಜನಿಗೆ ಪ್ರಾಪ್ತವಾಗಿದ್ದ ಬ್ರಹ್ಮಹತ್ಯೆಯು ನಾಶವಾಯಿತು. ಶಿವನ ಅನುಗ್ರಹಕ್ಕೆ ಪಾತ್ರರಾದವರಿಗೆ ಮೂರು ಲೋಕದಲ್ಲಿಯೂ ಅಸಾಧ್ಯವಾದದ್ದು ಯಾವುದು ತಾನೇ ಇರುವುದು.

೩೧–೩೬. ಆದ್ದರಿಂದ ಶಿವನ ಅನುಗ್ರಹವನ್ನು ಸಂಪಾದಿಸುವುದಕ್ಕಾಗಿ ಸುಂದರೇಶ್ವರನನ್ನು ಸೇವಿಸಬೇಕು. ಸುಂದರೇಶ್ವರನ ಅನುಗ್ರಹದಿಂದ ಎಲ್ಲಾ ವಿಧವಾದ ಸಿದ್ಧಿಗಳೂ ಉಂಟಾಗುವವು. ಇತರ ಕ್ಷೇತ್ರಗಳಲ್ಲಿ ಬಹಳಕಾಲ ತಪಸ್ಸು ಮಾಡಿ, ಪಡೆಯಬೇಕಾದ ಸಿದ್ಧಿಗಳೆಲ್ಲವೂ, ಈ ಹಾಲಾಸ್ಯಕ್ಷೇತ್ರದಲ್ಲಿ ಸ್ವಲ್ಪತಪಸ್ಸನ್ನು ಮಾಡಿದ ಮಾತ್ರದಿಂದಲೇ ಸಿದ್ಧವಾಗುವವು. ಪುರೋಹಿತರೇ ಮೊದಲಾದವರು ಹೇಳಿದ ಪ್ರಾಯಶ್ಚಿತ್ತಗಳನ್ನು ಮಾಡಿದಾಗ್ಯೂ ಆ ರಾಜನಿಗೆ ಬ್ರಹ್ಮಹತ್ಯೆಯು ನಾಶವಾಗಲಿಲ್ಲ. ಆಗ ಶಿವಭಕ್ತನಾದವನೊಬ್ಬನು ಸುಂದರೇಶ್ವರನಿಗೆ ಪ್ರದಕ್ಷಿಣೆಯನ್ನು ಮಾಡು, ಎಂದು

ದಶಭಿ ರ್ದಿವಸೈ ಶ್ಚೈವ ಪ್ರದಕ್ಷಿಣ ಮಹರ್ನಿಶಂ ।
ಅಷ್ಟೋತ್ತರಸಹಸ್ರಂ ಚ ಕೃತಂ ವರಗುಣೇನ ಚ　　　　॥ ೩೫ ॥

ನಮಸ್ಕೃತ್ಯ ಚ ಸಂಸೇವ್ಯ ಸ್ತುತಿಭಿಃ ಸುಂದರೇಶ್ವರಂ ।
ಸ್ಥಿತೇ ತಸ್ಮಿ ನ್ವರಗುಣೇ ಸುಂದರೇಶೋ ನುಕಂಪಯಾ　　　　॥ ೩೬ ॥

ವಾಣ್ಯಾ ಚ ದಿವ್ಯಯಾ ಪ್ರಾಹ ಭಕ್ತಾಪದ್ಭಂಜನೋದ್ಯತಃ ।
ರಾಜನ್ವರಗುಣ ಶ್ರೀಮನ್ಪುಣ್ಯಪಾಪಫಲಂ ಶೃಣು　　　　॥ ೩೭ ॥

ಕೃತಾಯಾಃ ವಿಪ್ರಹತ್ಯಾಯಾಃ ಫಲಸ್ಯಾಂತೋ ನ ವಿದ್ಯತೇ ।
ಮದೀಯಸ್ಯಾಸ್ಯ ಲಿಂಗಸ್ಯ ಪ್ರದಕ್ಷಿಣಫಲಂ ತಥಾ　　　　॥ ೩೮ ॥

ಪದೇ ಪದೇಽಶ್ವಮೇಧಾನಾಂ ಫಲಂ ದಾನರತಸ್ಯ ಚ ।
ಪ್ರದಕ್ಷಿಣಸ್ಯ ತುಲ್ಯಾನಿ ಫಲಾನಿ ನ ಹಿ ನಿಶ್ಚಯಃ　　　　॥ ೩೯ ॥

---

ರಾಜನಿಗೆ ಹೇಳಿದ ಮಾತಿನಂತೆ, ಅವನು ಪ್ರದಕ್ಷಿಣೆಯನ್ನು ಮಾಡಲು ಉದ್ಯುಕ್ತನಾದನು. ವರಗುಣಪಾಂಡ್ಯರಾಜನು ಹತ್ತು ದಿನಗಳಲ್ಲಿ ಒಂದುಸಾವಿರದ ಎಂಟು ಪ್ರದಕ್ಷಿಣೆಯನ್ನು ಮಾಡಿದನು. ಸುಂದರೇಶ್ವರನಿಗೆ ನಮಸ್ಕರಿಸಿ, ಸ್ತೋತ್ರಗಳನ್ನು ಹೇಳಿ ಸೇವೆ ಮಾಡಿದನು. ವರಗುಣಪಾಂಡ್ಯರಾಜನು ಹೀಗೆ ಮಾಡಿದನಂತರ ಸುಂದರೇಶ್ವರನಿಗೆ ರಾಜನಲ್ಲಿ ದಯೆಯು ಉಂಟಾಯಿತು.

೩೭-೩೯. ಆಗ ಭಕ್ತರ ಸಂಕಟವನ್ನು ಪರಿಹರಿಸುವುದರಲ್ಲಿ ಸಿದ್ಧನಾಗಿರುವ ಸುಂದರೇಶ್ವರನು " ಶ್ರೀಮಂತನಾದ ವರಗುಣಪಾಂಡ್ಯರಾಜನೆ, ಕೇಳು. ನಾನು ಪಾಪ ಮತ್ತು ಪುಣ್ಯ ಇವುಗಳ ಫಲವನ್ನು ಹೇಳುವೆನು. ಬ್ರಹ್ಮಹತ್ಯೆಯನ್ನು ಮಾಡಿದ್ದಕ್ಕೆ ಉಂಟಾಗುವ ಪಾಪವು ಬಹಳವಾಗಿರುವುದು. ಸುಂದರೇಶ್ವರನ ಶಿವಲಿಂಗಕ್ಕೆ ಪ್ರದಕ್ಷಿಣೆಯನ್ನು ಮಾಡಿದ್ದಕ್ಕೆ ಫಲವೂ ಬಹಳವಾಗಿರುವುದು. ಆಗಾಗ್ಯೆ ಅಶ್ವಮೇಧಯಾಗವನ್ನು ಮಾಡಿದವನಿಗೆ ಉಂಟಾಗುವ ಫಲವೂ, ಯಾವಾಗಲೂ ದಾನಮಾಡುವವನಿಗೆ ಉಂಟಾಗುವ ಫಲವೂ, ನನ್ನನ್ನು ಪ್ರದಕ್ಷಿಣೆಯನ್ನು ಮಾಡುವ ಫಲಕ್ಕೆ ಸಮನಾಗಿರುವುದಿಲ್ಲ.

ಮೇರುಮಂದರಕೈಲಾಸಕಾಶೀ ಶ್ರೀಪರ್ವತಾದಿಷು ।
ಶಿವಕ್ಷೇತ್ರೇಷು ಸರ್ವೇಷು ಚಿದಂಬರಮುಖೇಷು ಚ ॥ ೪೦ ॥

ಯಾನಿ ಲಿಂಗಾನಿ ವಿದ್ಯಂತೇ ತೇಷ್ವಹಂ ಸನ್ನಿಧಾನಕೃತ್ ।
ತಸ್ಮಾನ್ಮದೀಯಲಿಂಗಾನಿ ಸರ್ವಾಣೀಹ ನ ಸಂಶಯಃ ॥ ೪೧ ॥

ಮದೀಯೇಷು ಚ ಲಿಂಗೇಷು ಮಧ್ಯಾರ್ಜುನಮಹೇಶ್ವರಂ ।
ಲಿಂಗಂ ಮಹಾಪಾಪಹರಂ ಸದ್ಯಃ ಪುಣ್ಯಫಲಪ್ರದಂ ॥ ೪೨ ॥

ತತ್ರೈವ ಮೋಚಯಿಷ್ಯಾಮಿ ಬ್ರಹ್ಮಹತ್ಯಾಂ ತ್ವಯಾ ಕೃತಾಂ ।
ವಿದ್ಯತೇ ಯತ್ರ ಮಲ್ಲಿಂಗಂ ಮಧ್ಯಾರ್ಜುನಮಹೇಶ್ವರಂ ॥ ೪೩ ॥

ಮತ್ಪ್ರಸಾದೇನ ಯುದ್ಧೇ ತು ಚೋಳಂ ಜಿತ್ವಾ ಸಮಾಗತಂ ।
ಮಧ್ಯಾರ್ಜುನಪ್ರವೇಶಶ್ಚ ಭವತೋ ಭವತು ಧ್ರುವಂ ॥ ೪೪ ॥

ಇತ್ಯುಕ್ತ್ವಾ ವಿರತೇ ಶಂಭೌ ವಿಸ್ಮಿತಃ ಪಾಂಡ್ಯಭೂಪತಿಃ ।
ಪಂಚಾಕ್ಷರೇಣ ಮಂತ್ರೇಣ ನಮಸ್ಕೃತ್ಯ ಪುನಃ ಪುನಃ ॥ ೪೫ ॥

---

೪೦–೪೪. ಮೇರುಪರ್ವತ, ಮಂದರಪರ್ವತ, ವಾರಾಣಸೀನಗರೀ, ಶ್ರೀಪರ್ವತ ಚಿದಂಬರ, ಇವೇ ಮೊದಲಾದ ಶಿವಕ್ಷೇತ್ರಗಳಲ್ಲಿ ಇರುವ ಶಿವಲಿಂಗಗಳಲ್ಲಿ ಎಲ್ಲದರಲ್ಲಿಯೂ ನಾನು ನನ್ನ ಸಾನ್ನಿಧ್ಯವನ್ನು ಉಂಟುಮಾಡಿರುವೆನು. ಆದ್ದರಿಂದ ಅವೆಲ್ಲವೂ ನಾನು ವಾಸಮಾಡುವ ಶಿವಲಿಂಗಗಳೇ ಆದಾಗ್ಯೂ ಮಧ್ಯಾರ್ಜುನಮಹೇಶ್ವರನೆಂದು ಹೆಸರುಳ್ಳ ಶಿವಲಿಂಗವು ಬಹಳಮಟ್ಟಿಗೆ ಪಾಪನಾಶಕವಾಗಿ ಆ ಕ್ಷಣದಲ್ಲಿಯೇ ಪುಣ್ಯಫಲವನ್ನು ಕೊಡುವುದಾಗಿ ಇರುವುದು. ನಾನು, ನೀನು ಮಾಡಿರುವ ಬ್ರಹ್ಮಹತ್ಯೆಯಿಂದ ನಿನ್ನನ್ನು ಅಲ್ಲಿ ಬಿಡುಗಡೆ ಮಾಡುವೆನು. ಮಧ್ಯಾರ್ಜುನಮಹೇಶ್ವರಲಿಂಗವು ಇರುವ ಪ್ರದೇಶದಲ್ಲಿ ನೀನು ಚೋಳರಾಜನನ್ನು ಜಯಿಸುತ್ತೀಯೆ. ಆದ್ದರಿಂದ ನೀನು ಅಲ್ಲಿಗೆ ಹೋಗು " ಎಂದು ಮೃದುವಾದ ಆಕಾಶವಾಣಿಯಿಂದ ಹೇಳಿದನು.

೪೫–೪೭. ಶಿವನು ಹೀಗೆ ಹೇಳಿ ಸುಮ್ಮನಾದದ್ದನ್ನು ಕೇಳಿ, ಪಾಂಡ್ಯರಾಜನು ಆಶ್ಚರ್ಯವುಳ್ಳವನಾಗಿ, ಪಂಚಾಕ್ಷರಮಂತ್ರವನ್ನು ಹೇಳುತ್ತಾ ಪದೇ ಪದೇ ನಮಸ್ಕಾರ

ಆನಂದಸಾಗರೇ ಮಗ್ನಃ ಸ್ವಾಲಯಂ ಪಾಂಡ್ಯಪೋ ಯಯೌ ।
ಚೋಳಾಗಮನ ಮನ್ವೀಕ್ಷ್ಯ ಯದಾ ವರಗುಣಃ ಸ್ಥಿತಃ ॥ ೪೬ ॥

ತದಾ ಕಾಂಚೀಸ್ಥಿತ ಶ್ಚೋಲೋ ಯೋದ್ಧು ಮಾಯಾತ್ಸ ಸೈನಿಕಃ ।
ಧೈರ್ಯವಾ ನ್ಭಕ್ತಿಮಾಂಶ್ಚೈವ ಸುಂದರೇಶ್ವರ ಈಶ್ವರೇ ॥ ೪೭ ॥

ಚೋಲಸ್ಯ ಸಮ್ಮುಖಂ ಗತ್ವಾ ಜಿಗ್ಯೇ ತಂ ಪಾಂಡ್ಯಭೂಪತಿಃ ।
ಚೋಲಶ್ಚಾ ಸ್ಯಾಹವಂ ದೃಷ್ಟ್ವಾ ಪ್ರಶಂಸ ಸ್ಸುಂದರೇಶ್ವರಂ ॥ ೪೮ ॥

ಸೇನಾಭಿ ರತಿವೇಗೇನ ಯಯೌ ಕಾಂಚೀಪುರಂ ಪ್ರತಿ ।
ಚೋಲಾನುಧಾವನವ್ಯಾಜಾ ತ್ಪಾಂಡ್ಯೋ ವರಗುಣಪ್ರಭುಃ ॥ ೪೯ ॥

ಮಧ್ಯಾರ್ಜುನಂ ಮಹಾಸ್ಥಾನಂ ಶಾಂಕರಂ ಪ್ರಾಪ ಶಾಂತಿದಂ ।
ತದಾ ಪೌಷೀ ಪೌರ್ಣಮಾಸೀ ದೈವಯೋಗಾ ತ್ಸಮಾಗತಾ ॥ ೫೦ ॥

---

ವನ್ನು ಮಾಡಿ, ಬಹಳ ಸಂತೋಷದಿಂದ ತನ್ನ ಮನೆಗೆ ಬಂದನು. ಚೋಳರಾಜನು ಯುದ್ಧಕ್ಕೆ ಬರುವುದನ್ನು ವರಗುಣಪಾಂಡ್ಯರಾಜನು ನಿರೀಕ್ಷಿಸುತ್ತಾ ಇದ್ದನು. ಆ ಸಮಯಕ್ಕೆ ಸರಿಯಾಗಿ ಅವನು ಸೇನಾಸಮೇತನಾಗಿ ಕಾಂಚೀನಗರದಿಂದ ಯುದ್ಧಕ್ಕಾಗಿ ಬಂದನು. ಸುಂದರೇಶ್ವರನಲ್ಲಿ ಭಕ್ತಿಯುಳ್ಳವನಾಗಿಯೂ ಧೈರ್ಯಶಾಲಿಯಾಗಿಯೂ ಇರುವ ಪಾಂಡ್ಯರಾಜನು ಅವನಿಗೆ ಎದುರಾಗಿ ಯುದ್ಧಮಾಡಿ ಅವನನ್ನು ಗೆದ್ದನು.

೪೮–೫೦. ಚೋಳರಾಜನು, ವರಗುಣಪಾಂಡ್ಯರಾಜನು ಯುದ್ಧಮಾಡುವ ಕ್ರಮವನ್ನು ನೋಡಿ, ಸುಂದರೇಶ್ವರನನ್ನು ಶ್ಲಾಘಿಸುತ್ತಾ, ತನ್ನ ಸೇನೆಯೊಡನೆ ವೇಗವಾಗಿ ಹಿಂದಕ್ಕೆ ತನ್ನ ಕಾಂಚೀನಗರಕ್ಕೆ ಹೋದನು. ವರಗುಣಪಾಂಡ್ಯರಾಜನು ಅವನನ್ನು ಹಿಂಬಾಲಿಸಿ ಹೋಗುವ ನೆಪದಿಂದ ಪಾಪಶಾಂತಿಯನ್ನುಂಟುಮಾಡುವ ಮಧ್ಯಾರ್ಜುನಶಿವಕ್ಷೇತ್ರವನ್ನು ಹೊಂದಿದನು. ದೈವಗತಿಯಿಂದ ಪುಷ್ಯಮಾಸದ ಪೂರ್ಣಿಮೆಯ ದಿವಸವೇ ಆಗಿ ಪಾಂಡ್ಯರಾಜನಿಗೆ ಪುಣ್ಯಕ್ಷೇತ್ರಕ್ಕೆ ಹೋಗಿ ಸೇರುವುದಕ್ಕೆ ತಕ್ಕಂತೆ ಪುಣ್ಯಕಾಲವೂ ಸೇರಿತು. ಆಗ ಪಾಂಡ್ಯರಾಜನು ಸಮಾಧಾನವಾದ

ಪುಣ್ಯದೇಶಃ ಪುಣ್ಯಕಾಲಃ ಸಂಯುಕ್ತಃ ಪಾಂಡ್ಯಭೂಪತೇಃ ।
ಕವೇರಜಾನದೀತೋಯೇ ಸ್ನಾತ್ವಾ ಪಾಂಡ್ಯಃ ಸಮಾಹಿತಃ ॥ ೫೧ ॥

ಮಧ್ಯಾರ್ಜುನಮಹೇಶಾನಂ ದ್ರಷ್ಟುಂ ಮಾಲಯಮಾಯಯೌ ।
ಛಾಯಾ ತು ಮುಕ್ತ್ವಾ ತಂ ಭೂಪಂ ಬಹಿಸ್ಸಾಲಸ್ಯ ತಸ್ಥುಷಿ ॥ ೫೨ ॥

ಲಘ್ವಂಗೋ ಹೃಷ್ಟಹೃದಯಶ್ಶಂಕರಂ ಪ್ರಣನಾಮ ಸಃ ।
ಉಮಾಪತೇ ಕೃಪಾರಾಶೇ ರಕ್ಷ ಮಾಂ ಭಯಪೀಡಿತಂ ॥ ೫೩ ॥

ತ್ವಮೇವ ಶರಣಂ ನಾನ್ಯ ಇತ್ಯುಕ್ತವತಿ ಭೂಭುಜಿ ।
ವಾಣೀ ಖಾದಭವದ್ರಮ್ಯಾ ಭೂಪಾಲಾರ್ತಿಪ್ರಶೋಷಿಣೀ ॥ ೫೪ ॥

ಪಾಂಡ್ಯ ಮದ್ಭಕ್ತ ಏವಾಸಿ ದ್ವಿಜನ್ಮನ್ಯಪಿ ಭಕ್ತಿಮಾನ್ ।
ತಥಾಪಿ ಪ್ರಾಕ್ಕರ್ಮವಶಾದ್ಬ್ರಹ್ಮಹತ್ಯಾ ಭವತ್ತ್ವ ॥ ೫೫ ॥

---

ಮನಸ್ಸಿನಿಂದ ಕಾವೇರೀನದಿಯಲ್ಲಿ ಸ್ನಾನಮಾಡಿ, ಮಧ್ಯಾರ್ಜುನೇಶ್ವರನನ್ನು ದರ್ಶನ ಮಾಡುವುದಕ್ಕಾಗಿ ದೇವಾಲಯಕ್ಕೆ ಬಂದನು. ಆಗ ಅವನ ಸಂಗಡ ಇದ್ದ ಛಾಯೆಯು ಆ ರಾಜನನ್ನು ಬಿಟ್ಟು ದೇವಾಲಯದ ಹತ್ತಿರವಿರುವ ಮತ್ತಿಯಮರದ ಹತ್ತಿರದಲ್ಲಿ ನಿಂತುಕೊಂಡಿತು. ಅದರಿಂದ ರಾಜನ ಶರೀರದಲ್ಲಿ ಭಾರವು ತಪ್ಪಿ ಲವಲವಿಕೆಯುಂಟಾಯಿತು. ರಾಜನು ಸಂತೋಷವುಳ್ಳ ಮನಸ್ಸಿನಿಂದ ಮಧ್ಯಾರ್ಜುನೇಶ್ವರನಿಗೆ ನಮಸ್ಕಾರ ಮಾಡಿದನು.

೫೩–೫೭. ದಯಾಶಾಲಿಯಾಗಿರುವ ಪರಮೇಶ್ವರನೆ, ಭಯದಿಂದ ಸಂಕಟಪಡುತ್ತಿರುವ ನನ್ನನ್ನು ನೀನು ರಕ್ಷಿಸು. ನನಗೆ ನೀನು ಹೊರತು ಬೇರೆ ರಕ್ಷಕರು ಇಲ್ಲವು, ಎಂದು ವರಗುಣಪಾಂಡ್ಯರಾಜನು ಬೇಡಿಕೊಂಡನು. ಆಗ ರಾಜನ ಸಂಕಟವನ್ನು ಪರಿಹಾರಮಾಡುವ ಮನೋಹರವಾದ ಆಕಾಶವಾಣಿಯು ರಾಜನಿಗೆ ಕೇಳಿಸಿತು. " ಎಲೈ ಪಾಂಡ್ಯರಾಜನೆ, ನೀನು ನನ್ನಲ್ಲಿ ಎರಡು ಜನ್ಮಗಳಿಂದಲೂ ಭಕ್ತನಾಗಿರುತ್ತೀಯೆ. ಆದಾಗ್ಯೂ ನಿನ್ನ ಜನ್ಮಾಂತರದ ಕರ್ಮದ ದೆಸೆಯಿಂದ ಬ್ರಹ್ಮಹತ್ಯೆಯು

ಸಾಪ್ಯದ್ಯೈವ ಪ್ರಣಷ್ಟಾ ಭೂನ್ನಾತ್ರ ಕಾರ್ಯಾ ವಿಚಾರಣಾ ।
ತಾಂ ವಾಚಂ ಪಾಂಡ್ಯರಾಟ್ಛ್ರುತ್ವಾ ಶಂಭುಂ ನತ್ವಾ ಪುನಃ ಪುನಃ ॥ ೫೬ ॥

ನಿರ್ಗತ್ಯ ಪಶ್ಚಿಮದ್ವಾರಾ ಚ್ಛಾಯಾಕ್ರಾಂತಿವಿವರ್ಜಿತಃ ।
ಶಿಲಾಭಿ ಸ್ಸಹಸಾ ಸಾಲಂ ಸಗೋಪುರ ಮಕಾರಯತ್ ॥ ೫೭ ॥

ಮಧ್ಯಾರ್ಜುನಮಹೇಶಸ್ಯ ಭಕ್ತಾಭೀಷ್ಟಪ್ರದಸ್ಯ ಸಃ ।
ಸ್ವರ್ಣರತ್ನೈ ರಲಂಕೃತ್ಯ ಪ್ರಾಸಾದಮಖಿಲಂ ಮುದಾ ॥ ೫೮ ॥

ಮಧುರಾನಗರೀಂ ಪ್ರಾಪ್ಯ ಮಂಡಿತಾಂ ಧ್ವಜತೋರಣೈಃ ।
ನಾಥಾಯಾ ನಾಥನಾಥಾಯ ಸ್ವನಾಥಾಯ ಚಿದಾತ್ಮನೇ ॥ ೫೯ ॥

ಜಗನ್ನಾಥಾಯ ಹಾಲಾಸ್ಯ ನಾಥಾಯಾ ನಂದಮೂರ್ತಯೇ ।
ಮೌಕ್ತಿಕಂ ಚ ಪತಾಕಂ ಚ ಛತ್ರಾಣ್ಯಾ ತ್ಯದ್ಭುತಾನಿ ಚ ॥ ೬೦ ॥

---

ನಿನಗೆ ಒದಗಿತು. ಅದು ಈಗ ನಾಶವಾಯಿತು. ಈ ವಿಷಯದಲ್ಲಿ ನೀನು ಯೋಚನೆಯನ್ನು ಮಾಡಬೇಡ" ಎಂದು ಹೇಳಿದ ಆಕಾಶವಾಣಿಯನ್ನು ಕೇಳಿದ ಪಾಂಡ್ಯರಾಜನು ಶಿವನಿಗೆ ಅನೇಕಸಾರಿ ನಮಸ್ಕಾರ ಮಾಡಿ, ಪಶ್ಚಿಮದಿಕ್ಕಿನ ಬಾಗಿಲಿನಿಂದ ಹೊರಟು, ಬ್ರಹ್ಮಹತ್ಯಾಸಂಬಂಧವಾದ ನೆರಳಿಲ್ಲದವನಾಗಿ, ಆ ದೇವಸ್ಥಾನದ ಪ್ರಾಕಾರವನ್ನೂ ಗೋಪುರವನ್ನೂ ಕಲ್ಲಿನಿಂದ ಮಾಡಿಸಿದನು.

೫೮–೬೩. ಅನಂತರ ಪಾಂಡ್ಯರಾಜನು ಭಕ್ತರಿಗೆ ಇಷ್ಟಾರ್ಥಗಳನ್ನು ಕೊಡುವ ಮಧ್ಯಾರ್ಜುನೇಶ್ವರ ದೇವಾಲಯವನ್ನು ಚಿನ್ನ ಮುತ್ತು ರತ್ನಗಳಿಂದ ಅಲಂಕಾರಮಾಡಿ, ಸಂತೋಷದಿಂದ ತೋರಣಾದಿಗಳಿಂದ ಅಲಂಕೃತವಾದ ಮಧುರಾನಗರಕ್ಕೆ ಬಂದು, ಪ್ರಪಂಚಕ್ಕೆಲ್ಲಕ್ಕೂ ಒಡೆಯನಾಗಿಯೂ, (ಅನಾಥರಿಗೆ) ದಿಕ್ಕಿಲ್ಲದವರಿಗೆ ರಕ್ಷಕನಾಗಿ, ತನ್ನನ್ನು ರಕ್ಷಿಸುತ್ತಿರುವ ಚಿದ್ರೂಪನಾದ ಸುಂದರೇಶ್ವರನಿಗೆ ಮುತ್ತುಗಳು, ಬಾವುಟ, ಆಶ್ಚರ್ಯಕರವಾದ ಛತ್ರಿಗಳು, ರತ್ನಖಚಿತವಾದ ಕೊಳಗ, ಇವೆಲ್ಲವನ್ನೂ ಒಪ್ಪಿಸಿ,

ರತ್ನಾಲಂಕೃತದಂಡಾನಿ ಚಾಮರಾಣಿ ಬಹೂನಿ ಚ ।
ದುಕೂಲಾನಿ ವಿಚಿತ್ರಾಣಿ ಶ್ರೀಮದಾಭರಣಾನಿ ಚ ॥ ೬೧ ॥

ಗೋಲಕಾಂ ಚ ಪ್ರಭಾಂ ದತ್ವಾ ನವರತ್ನವಿಚಿತ್ರಿತಾಂ ।
ಸ್ತುತ್ವಾ ನಾನಾವಿಧೈ ಸ್ತೋತ್ರೈಃ ಪ್ರಣಿಪತ್ಯ ಶಿವಂ ನೃಪಃ ॥ ೬೨ ॥

ಕೃತಾರ್ಥ ಸ್ಸ ತು ನಿರ್ಗತ್ಯ ಸುಖ ಮಾಸ್ತೇ ನಿರಾಧಿಕಃ ।
ಶೃಣ್ವ ನ್ಸದಾ ಪುರಾಣಾನಿ ಕಾಲಂ ನಿನ್ಯೇ ಸ ಭೂಪತಿಃ ॥ ೬೩ ॥

ಸರ್ವದಾ ಸರ್ವಲೋಕೇಭ್ಯಃ ಶಿವಲೋಕೋ ಮಹಾನಿತಿ ।
ವೇದಶಾಸ್ತ್ರ ಪುರಾಣೇಷು ಶ್ರುತ್ವಾ ವರಗುಣೋ ನೃಪಃ ॥ ೬೪ ॥

ಇಹೈವ ದ್ರಷ್ಟುಮುದ್ಯುಕ್ತಃ ಸುಂದರೇಶಶಿವಾಜ್ಞಯಾ ।
ಅತ್ಯದ್ಭುತ ಮನೌಪಮ್ಯಂ ಶಿವಲೋಕಂ ಪರಾತ್ಪರಂ ॥ ೬೫ ॥

ಕದಾಚಿ ಚ್ಛಿವರಾತ್ರ್ಯಾಂ ತು ಶಿವಲೋಕದಿದೃಕ್ಷಯಾ ।
ಶಿವಂ ಸಂಪ್ರಾರ್ಥಯಾಮಾಸ ಶಿವಭಕ್ತಶಿರೋಮಣಿಃ ॥ ೬೬ ॥

---

ಅನೇಕ ವಿಧವಾದ ಸ್ತುತಿಗಳಿಂದ ಸ್ತೋತ್ರಮಾಡಿ, ಕೃತಾರ್ಥನಾಗಿ, ಮನೋವ್ಯಥೆಯು ಯಾವುದೂ ಇಲ್ಲದವನಾಗಿ ಸುಖದಿಂದ ಇದ್ದನು. ಆ ರಾಜನು ಯಾವಾಗಲೂ ಪುರಾಣವನ್ನು ಕೇಳುತ್ತಾ ಸುಖದಿಂದ ಕಾಲವನ್ನು ಕಳೆಯುತ್ತಾ ಇದ್ದನು.

೬೪–೬೮. ವೇದಶಾಸ್ತ್ರಪುರಾಣಗಳಲ್ಲಿ ಎಲ್ಲಾ ಲೋಕಗಳಿಗಿಂತಲೂ ಶಿವಲೋಕವು ಹೆಚ್ಚು ಮಹಿಮೆಯುಳ್ಳದ್ದಾಗಿರುವುದು, ಎಂದು ಹೇಳುವುದನ್ನು ಕೇಳಿ, ವರಗುಣರಾಜನು ಭೂಲೋಕದಲ್ಲಿರುವಾಗಲೇ ಬಹಳ ಆಶ್ಚರ್ಯಕರವಾದ, ಉತ್ತಮೋತ್ತಮವಾದ, ಯಾವ ಹೋಲಿಕೆಯೂ ಇಲ್ಲದೆ ಇರುವ, ಅದನ್ನು ಸುಂದರೇಶ್ವರನ ಆಜ್ಞೆಯಿಂದ ನೋಡಬೇಕೆಂದು ಉದ್ದೇಶವುಳ್ಳವನಾದನು. ಒಂದು ಶಿವರಾತ್ರಿಯ ದಿವಸ ಶಿವಲೋಕವನ್ನು ನೋಡಬೇಕೆಂಬ ಉದ್ದೇಶದಿಂದ ಶಿವಭಕ್ತಶ್ರೇಷ್ಠನಾದ ವರಗುಣರಾಜನು "ಅಪಾರ ಕರುಣಾನಿಧಿಯಾದ, ಸತ್ಯಜ್ಞಾನಾನಂದರೂಪದಿಂದ ಇರುತ್ತಾ

ಕದಂಬಕಾನನಾಧೀಶ ಕರುಣಾವರುಣಾಲಯ ।
ಸತ್ಯಜ್ಞಾನಾನಂದಮಯ ಲಿಂಗಮೂರ್ತೇ ಸದಾಶಿವ ॥ ೬೭ ॥

ಬ್ರಹ್ಮಾಂಡೋರ್ಧ್ವಗತಂ ನಿತ್ಯಂ ತ್ವದೀಯಂ ಲೋಕ ಮಿಷ್ಟದಂ ।
ಪ್ರದರ್ಶಯ ಮಮಾತ್ರೈವ ಪ್ರಮಥಾದಿಗಣಾವೃತಂ ॥ ೬೮ ॥

ಏವಂ ವಿಜ್ಞಾಪಿತಃ ಶಂಭುರ್ಭಕ್ತಭಕ್ತ್ಯಾದ್ರ್ರಮಾನಸಃ ।
ಅದರ್ಶಯ ದ್ಭೂತಲೇ ತಂ ಲೋಕಂ ಸರ್ವಾದ್ಭುತಾಲಯಂ ॥ ೬೯ ॥

ಸೋsಪಿ ರಾಜಾ ವರಗುಣ ಸ್ತಲ್ಲೋಕೇತ್ಯದ್ಭುತಾನಿ ಚ ।
ಅನೇಕಾನಿ ವಿಮಾನಾನಿ ಹ್ಯಪ್ಸರೋಭೂಷಿತಾನಿ ಚ ॥ ೭೦ ॥

ವನಾನಿ ಕಲ್ಪವೃಕ್ಷಾಣಾಂ ಕಾಮಧೇನು ವ್ರಜಾನಪಿ ।
ಚಿಂತಾಮಣಿಮಯಾನ್ ಶೈಲಾಂಶ್ಚ ಸುಧಾ ಪೂರ್ಣಸರಾಂಸಿ ಚ ॥ ೭೧ ॥

ವೇಶ್ಮಾನಿ ಗಣನಾಥಾನಾಂ ಮೇರುಣಾಪ್ಯರ್ಚಿತಾನಿ ಚ ।
ಸಗೋಪುರಾಂಶ್ಚ ಪ್ರಾಕಾರಾನ್ರತ್ನಹೇಮವಿಚಿತ್ರಿತಾನ್ ॥ ೭೨ ॥

---

ಲಿಂಗರೂಪದಿಂದ ಇರುವ, ನೀಪಾಟವೀಪತಿಯಾದ ಸುಂದರೇಶ್ವರನೇ, ಬ್ರಹ್ಮಾಂಡಕ್ಕಿಂತಲೂ ಮೇಲುಭಾಗದಲ್ಲಿರುವ, ಪ್ರಮಥಗಣಗಳಿಂದ ತುಂಬಿರುವ, ಇಷ್ಟಾರ್ಥವನ್ನು ಕೊಡುವ ನಿನ್ನ ಲೋಕವನ್ನು ನನಗೆ ಇಲ್ಲಿಯೇ ತೋರಿಸು " ಎಂದು ಸುಂದರೇಶ್ವರನಿಗೆ ಪ್ರಾರ್ಥನೆ ಮಾಡಿದನು.

೬೯–೭೨. ಈ ಪ್ರಕಾರವಾದ ವಿಜ್ಞಾಪನೆಯನ್ನು ಕೇಳಿ, ಸುಂದರೇಶ್ವರನ ಭಕ್ತಿಗೆ ಮೆಚ್ಚಿದವನಾಗಿ, ಎಲ್ಲಾ ವಿಧವಾದ ಆಶ್ಚರ್ಯಗಳಿಂದಲೂ ಕೂಡಿರುವ ತನ್ನ ಲೋಕವನ್ನು ಭೂಮಿಯಲ್ಲಿರುವ ಅವನು ನೋಡುವಂತೆ ಅನುಗ್ರಹಮಾಡಿದನು. ಆಗ ವರಗುಣಪಾಂಡ್ಯರಾಜನು ಆ ಲೋಕದಲ್ಲಿ ಅಲಂಕೃತವಾದ ಬಹಳ ವಿಮಾನಗಳನ್ನೂ, ಕಲ್ಪವೃಕ್ಷಗಳಿಂದ ತುಂಬಿರುವ ವನವನ್ನೂ, ಕಾಮಧೇನುಗಳ ಗುಂಪನ್ನೂ, ಚಿಂತಾಮಣಿರತ್ನಗಳ ಬೆಟ್ಟಗಳನ್ನೂ, ಅಮೃತದ ಕೊಳಗಳನ್ನೂ ಮೇರುಪರ್ವತಕ್ಕಿಂತಲೂ ಅತಿಶಯವಾಗಿ ಇರುವ ಪ್ರಮಥಗಣಾಧಿಪರ ಮನೆಗಳನ್ನೂ, ಶಿವಲೋಕದಲ್ಲಿ ನೋಡಿದನು.

ದೃಷ್ಟ್ವಾ ಧ್ವಾಂತಃ ಪ್ರವಿಷ್ಟಶ್ಚ ತೇಜೋರಾಶಿವಿರಾಜಿತೇ ।
ವಿಮಾನಂ ಶಾಂಭವಂ ಪಶ್ಯಂಸ್ತತ್ರಸ್ಥೋ ವಿಸ್ಮಿತಮಾನಸಃ ॥ ೭೩ ॥

ತದಾ ನಂದೀ ಸಮಾಗತ್ಯ ಹಸ್ತೇನ ಪರಿಗೃಹ್ಯ ತಂ ।
ದೇವೇಶಂ ದರ್ಶಯಾಮಾಸ ತಸ್ಮೈ ವಿಸ್ಮಿತಮಾನಸೇ ॥ ೭೪ ॥

ತೇಜೋಮಯವಿಮಾನಸ್ಥಸಿಂಹಾಸನನಿವಾಸಿನಂ ।
ಹಾರಕೇಯೂರಮುಕುಟಕಟಕಾದ್ಯೈರಲಂಕೃತಂ ॥ ೭೫ ॥

ದೇವೀಂ ಚ ವಾಮಭಾಗಸ್ಥಾಂ ಸಮಾಲೋಕ್ಯ ಸ್ಮಿತಾನ್ವಿತಾಂ ।
ಪಾರ್ಶ್ವಯೋರ್ಗಜವಕ್ತ್ರೇಣ ಷಡ್ವಕ್ತ್ರೇಣ ಚ ಶೋಭಿತಂ ॥ ೭೬ ॥

ಬ್ರಹ್ಮವಿಷ್ಣ್ವಾದಿದೇವೈಶ್ಚ ಗಣನಾಥೈಶ್ಚ ಸೇವಿತಂ ।
ದೃಷ್ಟ್ವಾ ವರಗುಣಃ ಪಾಂಡ್ಯೋ ಭಕ್ತ್ಯಾ ಪರವಶೀಕೃತಃ ॥ ೭೭ ॥

---

೭೩–೭೪. ಅವುಗಳೆಲ್ಲವನ್ನೂ ನೋಡಿದನಂತರ, ತಾನು ಆ ಲೋಕದ ಒಳಗಡೆಗೆ ಪ್ರವೇಶಿಸಿದನು. ಅಲ್ಲಿ ಇದ್ದ ತೇಜಸ್ಸಿನ ರಾಶಿಯಾಗಿರುವ ಶಿವನ ವಿಮಾನವನ್ನು ನೋಡಿ, ಬಹಳ ಆಶ್ಚರ್ಯಪಡುತ್ತಾ ನಿಂತಿದ್ದನು. ಆಗ ನಂದಿಕೇಶ್ವರನು ಬಂದು ವರಗುಣರಾಜನ ಹಸ್ತವನ್ನು ಹಿಡಿದು ಕರದುಕೊಂಡು ಹೋಗಿ, ದೇವದೇವನನ್ನು ದರ್ಶನಮಾಡಿಸಿದನು.

೭೫–೮೦. ಆಗ ದೇವದೇವನು ತೇಜೋಮಯವಾದ ವಿಮಾನದಲ್ಲಿರುವ ಸಿಂಹಾಸನದಲ್ಲಿ ಎಲ್ಲಾ ವಿಧವಾದ ಆಭರಣಗಳನ್ನೂ ಧರಿಸಿದ್ದನು. ದೇವಿಯಾದ ಪಾರ್ವತಿಯು, ದೇವದೇವನ ಎಡಭಾಗದಲ್ಲಿ ಮಂದಹಾಸದಿಂದ ಪ್ರಕಾಶಿಸುತ್ತಿದ್ದಳು. ಪಕ್ಕದಲ್ಲಿ ಗಣೇಶನೂ, ಷಣ್ಮುಖನೂ ಇದ್ದರು. ಬ್ರಹ್ಮ, ವಿಷ್ಣು ಇವರೇ ಮೊದಲಾದ ದೇವತೆಗಳೂ, ಪ್ರಮಥಗಣೇಶ್ವರರೂ ದೇವದೇವನಾದ ಶಿವನನ್ನು ಸೇವಿಸುತ್ತಿದ್ದರು. ಈ ಪ್ರಕಾರವಾದ ವೈಭವದಿಂದ ಇರುವ ಶಿವನನ್ನು ವರಗುಣಪಾಂಡ್ಯರಾಜನು ನೋಡಿ, ಭಕ್ತಿಪರವಶನಾಗಿ, ಶಿವನಿಗೆ ನಮಸ್ಕಾರಗಳನ್ನು ಮಾಡಿ, ಸ್ತೋತ್ರ

ಪ್ರಸ್ತುತ್ಯ ಪ್ರಣಿಪತ್ಯಾಥ ಪ್ರಾರ್ಥಯಾಮಾಸ ಶಂಕರಂ ।
ಕೃತಾರ್ಥೋಽಸ್ಮಿ ಕೃತಾರ್ಥೋಽಸ್ಮಿ ಕೃತಾರ್ಥೋಽಸ್ಮಿ ಪುನಃ ಪುನಃ ॥ ೭೮ ॥

ಅನಂತಪುಣ್ಯಸುಲಭಾ ತ್ತ್ವವ ಲೋಕಸ್ಯ ದರ್ಶನಾತ್ ।
ಏತತ್ಸರ್ವಂ ಮಯಾ ದೃಷ್ಟಂ ತ್ವಲ್ಲಿಂಗಾರಾಧನೇನ ಚ ॥ ೭೯

ತ್ವಲ್ಲಿಂಗಾರಾಧನಂ ಕರ್ತುಂ ಪ್ರಸೀದಾನಂದಸುಂದರ ।
ಇತ್ಯುಕ್ತೆ ಮಾತ್ರೇ ಪಾಂಡ್ಯೇಶೇ ಶಿವಲೋಕ ಸ್ತಿರೋಹಿತಃ ॥ ೮೦ ॥

ರಾಜಾಪಿ ವಿಸ್ಮಿತೋ ಭೂತ್ವಾ ಲಿಂಗಸ್ಥಂ ತಮಪೂಜಯತ್ ।
ರಾಜ್ಞಾಥ ಜ್ಞಾಪಿತಾ ಸ್ತತ್ರ ಸಂಗತಾ ಭಕ್ತಿಮಜ್ಜನಾಃ ॥ ೮೧ ॥

ತೇ ಸರ್ವೇ ವಿಸ್ಮಿತಾ ಸ್ಸಂತಃ ಪ್ರಾಶಂಸುಸ್ಸುಂದರೇಶ್ವರಂ ।
ತಮುದಂತಂ ಜನಾ ಸ್ಸರ್ವೇ ಶ್ರುತ್ವಾ ವಿಸ್ಮಿತಮಾನಸಾಃ ॥ ೮೨ ॥

---

ಗಳನ್ನು ಹೇಳಿ, ಬಹಳ ಪುಣ್ಯಗಳಿಂದ ದರ್ಶನಮಾಡುವ ಯೋಗ್ಯತೆಯನ್ನು ಹೊಂದಿ ನಿನ್ನ ಲೋಕವನ್ನು ನೋಡಿದ್ದರಿಂದ ನಾನು ಬಹಳವುಟ್ಟಿಗೆ ಕೃತಾರ್ಥನಾದೆನು. ಶಿವ ಲಿಂಗರೂಪದಿಂದ ಇರುವ ನಿನ್ನ ಸೇವೆಯಿಂದ ಇವೆಲ್ಲವನ್ನೂ ನಾನು ನೋಡಿದೆನು. ಎಲೈ ಸುಂದರೇಶ್ವರನೆ, ನಿನ್ನ ಸೇವೆಯನ್ನು ನಾನು ಮಾಡುವಂತೆ ಅನುಗ್ರಹವನ್ನು ಮಾಡು, ಎಂದು ವರಗುಣರಾಜನು ಪ್ರಾರ್ಥನೆ ಮಾಡಿದನಂತರ ಶಿವಲೋಕವು ಅದೃಶ್ಯವಾಯಿತು.

೮೧–೮೪. ವರಗುಣಪಾಂಡ್ಯರಾಜನು ಆಶ್ಚರ್ಯವುಳ್ಳವನಾಗಿ ಲಿಂಗರೂಪ ದಿಂದ ಇರುವ ಶಿವನನ್ನು ಪೂಜಿಸಿದನು. ಅನಂತರದಲ್ಲಿ ಭಕ್ತಿಯುಳ್ಳ ಜನರಿಗೆ ತಾನು ನೋಡಿದ ಆಶ್ಚರ್ಯವನ್ನು ತಿಳಿಸಿದನು ಅವರೆಲ್ಲರೂ ಅದನ್ನು ಕೇಳಿ, ಆಶ್ಚರ್ಯದಿಂದ ಸುಂದರೇಶ್ವರನನ್ನು ಶ್ಲಾಘಿಸಿದರು. ಆ ವರ್ತಮಾನವೆಲ್ಲವನ್ನೂ ಕೇಳಿದ ಜನರೆಲ್ಲರೂ ತನ್ನ ಲೋಕವನ್ನು ತೋರಿಸಿದ ಸುಂದರೇಶ್ವರನನ್ನೂ, ಶಿವಲೋಕವನ್ನು ಪ್ರತ್ಯಕ್ಷ

ಲೋಕಂ ದರ್ಶಯಿತಾರಂ ಸ್ವಂ ಸಂಕರಂ ಸುಂದರಪ್ರಭುಂ ।
ತಂ ಪಶ್ಯಂತಂ ಪಾಂಡ್ಯಭೂಪಂ ಪ್ರಶಂಸಂತಿ ಜಗತ್ತ್ರಯೇ ॥ ೮೩ ॥

ತದಾ ಪ್ರಭೃತಿ ಹಾಲಾಸ್ಯಂ ಶಿವಕ್ಷೇತ್ರಂ ಪರಾತ್ಪರಂ ।
ಭೂಲೋಕಶಿವಲೋಕಾಖ್ಯಾಂ ಬಿಭರ್ತಿ ಪರದುರ್ಲಭಾಂ ॥ ೮೪ ॥

ಭೂದೇವತಾವಧವಶಾದುದಿತಂ ಚ ಭೂರಿ ।
ಪಾಪಂ ವಿಮೃಜ್ಯ ನಿಜಲೋಕನಿದರ್ಶಯಿತ್ರೇ ।
ಪೃಥ್ವೀಪತೇರ್ವರಗುಣಸ್ಯ ಮುದಾಯುತಾಯ-
ಹಾಲಾಸ್ಯಮಧ್ಯನಿಲಯಾಯ ನಮಃ ಶಿವಾಯ ॥ ೮೫ ॥

ಲೀಲಾ ಚತ್ವಾರಿಂಶಿಕೇಯಂ ನೀಪಾರಣ್ಯನಿವಾಸಿನಃ ।
ಶ್ರುತಮಾತ್ರೇಣ ಸರ್ವೇಷಾಂ ಬ್ರಹ್ಮಹತ್ಯಾರ್ತಿನಾಶಿನೀ ॥ ೮೬ ॥

ಮಹಾಪಾಪಪ್ರಶಮಿನೀ ಮಹಾಪುಣ್ಯಪ್ರದಾಯಿನೀ ।
ಮಹಾವಿಜಯಕರ್ತ್ರೀ ಚ ಸರ್ವಸಂಪತ್ಕರೀ ಸದಾ ॥ ೮೭ ॥

---

ವಾಗಿ ನೋಡಿದ ಪಾಂಡ್ಯರಾಜನನ್ನೂ ಹೊಗಳುತ್ತಿದ್ದರು. ಆ ಕಾಲವೊದಲುಗೊಂಡು ಬಹಳ ಶ್ರೇಷ್ಠವಾದ ಹಾಲಾಸ್ಯಕ್ಷೇತ್ರವು ಇತರ ಕ್ಷೇತ್ರಗಳಿಗೆ ದುರ್ಲಭವಾದ ಭೂಲೋಕ, ಶಿವಲೋಕ ಎಂಬ ಪ್ರಸಿದ್ಧಿಯನ್ನು ಹೊಂದಿರುವುದು.

೮೫–೮೮. ಭೂಮಿಯಲ್ಲಿ ದೇವತೆ ಎಂದು ಹೆಸರನ್ನು ಹೊಂದಿರುವ ಬ್ರಾಹ್ಮಣನನ್ನು ವಧಿಸಿದ ಕಾರಣ ಪ್ರಾಪ್ತವಾದ ದೊಡ್ಡ ಪಾಪವನ್ನು ರಾಜನಿಗೆ ಇಲ್ಲದಂತೆ ಮಾಡಿ, ಸಂತೋಷದಿಂದ ತನ್ನ ಲೋಕವನ್ನು ತೋರಿಸಿ ಇರುವ, ಹಾಲಾಸ್ಯಕ್ಷೇತ್ರ ಮಧ್ಯದಲ್ಲಿರುವ ಶಿವನಿಗೆ ನಮಸ್ಕಾರವು. ನೀಪಾಟವೀಪತಿಯಾದ ಸುಂದರೇಶ್ವರನು ಆಚರಿಸಿದ ನಲವತ್ತನೆಯ ಲೀಲೆಯು, ಕೇಳಿದ ಮಾತ್ರದಿಂದಲೇ ಬ್ರಹ್ಮಹತ್ಯೆಯಿಂದ ಉಂಟಾದ ದುಃಖವನ್ನು ನಾಶಪಡಿಸುವುದು. ಈ ಲೀಲೆಯು ಬಹಳ ದೊಡ್ಡ ಪಾಪವನ್ನು ಹಾಳುಮಾಡಿ, ಬಹಳ ಪುಣ್ಯವನ್ನು ಉಂಟುಮಾಡುವುದು. ಜಯವನ್ನು ಉಂಟುಮಾಡಿ, ಎಲ್ಲಾ ವಿಧವಾದ ಐಶ್ವರ್ಯವನ್ನೂ ಎಲ್ಲಾ ಕಾಲದಲ್ಲಿಯೂ ಕೊಡುವುದು.

**ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ವರಗುಣಪಾಂಡ್ಯಬ್ರಹ್ಮಹತ್ಯಾರ್ತಿಶಮನಂ ನಾಮ ಷಟ್ಚತ್ವಾರಿಂಶೋಽಧ್ಯಾಯಃ**

---

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ ವರಗುಣಪಾಂಡ್ಯ ಬ್ರಹ್ಮಹತ್ಯಾರ್ತಿಶಮನವೆಂದು ಹೆಸರುಳ್ಳ ನಲವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥
॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಸಪ್ತಚತ್ವಾರಿಂಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಶಿರಸಾ ಕಾಷ್ಠಭಾರಂ ಚ ಯಯಾ ಧತ್ತೇ ಮಹೇಶ್ವರಃ ।
ತಾಂ ಲೀಲಾಂ ಸಂಪ್ರವಕ್ಷ್ಯಾಮಿ ಶೃಣುಧ್ವಂ ಮುನಿಪುಂಗವಾಃ ॥ ೧ ॥

ತಸ್ಮಿನ್ವರಗುಣೇ ಪಾಂಡ್ಯೇ ನೀತ್ಯಾ ರಾಜ್ಯಂ ಪ್ರಶಾಸತಿ ।
ಚೋಳೇಶಾದ್ಗಾಯಕಃ ಕಶ್ಚಿತ್ತ್ಯಾಗದಾನಾರ್ಥಮಾಯಯೌ ॥ ೨ ॥

ಸಢಕ್ಕಾಕೋಶಮಾಲೋಕ್ಯ ತಂ ಸರ್ವೇ ವಿಸ್ಮಿತಾ ಜನಾಃ ।
ಸ ರಾಜಾನಂ ಸಮಾಲೋಕ್ಯ ಜಗೌ ಮಧುರಮದ್ಭುತಂ ॥ ೩ ॥

---

### ನಲವತ್ತೇಳನೆಯ ಅಧ್ಯಾಯವು

೧–೪. ಅಗಸ್ತ್ಯಋಷಿಯು ಹೇಳಿದನು:—ಮಹೇಶ್ವರನು ಕಟ್ಟಿಗೆಯ ಹೊರೆಯನ್ನು ತಲೆಯಿಂದ ಹೊತ್ತುಕೊಂಡು ಬಂದ ಲೀಲೆಯನ್ನು ನಾನು ಹೇಳುವೆನು! ಋಷಿಗಳೆಲ್ಲರೂ ಕೇಳಿರಿ. ವರಗುಣಪಾಂಡ್ಯರಾಜನು ನೀತಿಯಿಂದ ರಾಜ್ಯವನ್ನಾಳುತ್ತಿರುವಾಗ ಚೋಳರಾಜನ ಕಡೆಯಿಂದ ಒಬ್ಬ ಸಂಗೀತಗಾರನು ದ್ರವ್ಯಾರ್ಥಿಯಾಗಿ ಬಂದನು. ಅವನ ಮದ್ದಲೆಯ ಧ್ವನಿಯನ್ನು ಕೇಳಿ, ಎಲ್ಲರೂ ಆಶ್ಚರ್ಯಪಟ್ಟರು. ಅವನು ರಾಜನನ್ನು ನೋಡಿ, ಮಧುರವಾಗಿರುವಂತೆಯೂ, ಆಶ್ಚರ್ಯವುಂಟಾಗುವಂತೆಯೂ

ಗಾನಂ ಶ್ರುತ್ವಾ ನೃಪಃ ಪ್ರೀತ ಸ್ತಂ ಸಂಭಾವ್ಯಾಂಬರಾದಿಭಿಃ ।
ಅವದ ತ್ಕುತ್ರಚಿದ್ದೇಶೇ ನಿವಾಸಃ ಕ್ರಿಯತಾಮಿತಿ ॥ ೪ ॥

ತಥೇತಿ ಚ ನೃಪಾದೇಶಾತ್ ಢಕ್ಕಾಧ್ವನಿಸಮನ್ವಿತಃ ।
ಗಾಯಕಃ ಪ್ರತಿ ಸಂದೇಶಂ ಯಯೌ ಸ್ವೈರುಪಗಾಯಕೈಃ ॥ ೫ ॥

ಹೇಮವೇತ್ರಕರೈ ರ್ವಾಃಸ್ಥೈರಾಜ್ಞಾಕಾರಿಭಿ ರಾಕು ಚ ।
ಆಹೂಯ ಗಾಯಕಂ ಭದ್ರಂ ಪೃಚ್ಛತಿ ಸ್ಮ ನಿಜಂ ನೃಪಃ ॥ ೬ ॥

ವರಿಷ್ಠಃ ಕಶ್ಚಿದಾಯಾತೋ ಗಾಯಕೋ ಢಕ್ಕಯಾನ್ವಿತಃ ।
ಜೇತುಂ ಶಕ್ತಿಃ ಕಿಂ ತವಾಸ್ತಿ ವಿಚಾರ್ಯ ವದ ಮಾಶು ಚ ॥ ೭ ॥

॥ ಭದ್ರ ಉವಾಚ ॥

ಜೇತುಂ ಶಕ್ತೋ ವಾ ನ ವೇತಿ ನಾಥ ಕಿಂ ಪೃಷ್ಟವಾನಸಿ ।
ಸುಂದರೇಶೋ ಮಮಾ ಪ್ಯಸ್ತಿ ಭಕ್ತಾಭೀಷ್ಟಪ್ರದಾಯಕಃ ॥ ೮ ॥

---

ಸಂಗೀತವನ್ನು ಹಾಡಿದನು. ರಾಜನು ಅವನ ಗಾನವನ್ನು ಕೇಳಿ, ಸಂತೋಷದಿಂದ ಅವನಿಗೆ ಬಹಳಮಟ್ಟಿಗೆ ವಸ್ತ್ರಾಭರಣಗಳನ್ನು ಕೊಟ್ಟು ಈ ನಗರದಲ್ಲಿ ನೀನು ಎಲ್ಲಿಯಾದರೂ ವಾಸಮಾಡು, ಎಂದು ಅವನಿಗೆ ಹೇಳಿದನು.

೫-೭. ರಾಜನ ಅಪ್ಪಣೆಯಂತೆ ಆ ಸಂಗೀತಗಾರನು ಢಕ್ಕಾವಾದ್ಯವನ್ನು ಧ್ವನಿಮಾಡುತ್ತಾ ತನ್ನ ಜೊತೆಯ ಸಂಗೀತಗಾರರೊಡನೆ ಆ ನಗರದಲ್ಲಿ ಒಂದು ಕಡೆಗೆ ಹೋಗಿ ವಾಸವಾಗಿದ್ದನು. ಅನಂತರದಲ್ಲಿ ರಾಜನು ಚಿನ್ನದ ಬೆತ್ತವನ್ನು ಹಿಡಿದುಕೊಂಡು ಬಾಗಿಲನ್ನು ಕಾಯುತ್ತಿರುವ ತನ್ನ ಸೇವಕರ ಮೂಲಕ ಪ್ರತಿದಿನವೂ ತನ್ನ ಹತ್ತಿರದಲ್ಲಿ ಸಂಗೀತವನ್ನು ಹೇಳುವ ಭದ್ರನೆಂಬುವನನ್ನು ಕರೆಸಿ "ಢಕ್ಕಾವಾದ್ಯದಿಂದ ಕೂಡಿರುವ ಒಬ್ಬ ಸಂಗೀತಗಾರನು ಬಂದಿರುವನು. ಅವನು ಪ್ರವೀಣನಾಗಿರುವನು. ನೀನು ಅವನನ್ನು ಗೆಲ್ಲಲು ನಿನಗೆ ಶಕ್ತಿಯು ಇರುವುದೆ? ವಿಚಾರಮಾಡಿ ನನಗೆ ಹೇಳು. ಯೋಚನೆಯನ್ನು ಮಾಡಬೇಡ" ಎಂದು ಹೇಳಿದನು.

೮-೯. ಭದ್ರನು ಹೇಳಿದನು :- ಎಲೈ ರಾಜನೇ! ನನಗೆ ಅವನನ್ನು ಜಯಿಸುವ ಶಕ್ತಿಯು ಇದೆಯೋ? ಇಲ್ಲವೋ? ಎಂದು ನನ್ನನ್ನು ನೀನು ಕೇಳುತ್ತೀಯೆ

ತಂ ಜಿತ್ವೋತ್ಸಾರಯಿಷ್ಯಾಮಿ ಗರ್ವಿತಂ ಗಾನವಿದ್ಯಯಾ ।
ಢಕ್ಕಾವಾದ್ಯಂ ತದೀಯಂ ಚ ಭಗ್ನೀಕೃತ್ಯ ಸಭಾಂತರೇ ॥ ೯ ॥

ರಾಜಾ ತಸ್ಯ ವಚಃ ಶ್ರುತ್ವಾ ಸಂತುಷ್ಟ್ಯಾ ಪರಯಾನ್ವಿತಃ ।
ಅದ್ಯ ಪೃಚ್ಛೇತಿ ತಂ ಭದ್ರಂ ಪ್ರೇಷಯಾಮಾಸ ಗೂಢಧೀಃ ॥ ೧೦ ॥

ಆತ್ತವೀಣಾ ಧೃತೋಷ್ಣೀಷಾಃ ಕಂಚುಕಾಂಚಿತವಿಗ್ರಹಾಃ ।
ಗಾಯಂತೋ ಮಧುರಾವೀಥ್ಯಾಂ ಚೇರುಸ್ತದುಪಗಾಯಕಾಃ ॥ ೧೧ ॥

ತಾಂ ದೃಷ್ಟ್ವಾ ಭೀತಹೃದಯೋ ಗಾಯಕೋ ಭದ್ರಸಂಜ್ಞಿತಃ ।
ಕಿಂ ಕರ್ತವ್ಯಮಿತಿ ಕ್ಷೀಣಃ ಸುಂದರೇಶೇ ಮನೋ ದಧೌ ॥ ೧೨ ॥

ಶ್ರೀಹಾಲಾಸ್ಯಪತಿಂ ಶಂಭುಂ ನಿತ್ಯಂ ಭಕ್ತಾರ್ತಿಭಂಜನಂ ।
ಸದ್ಯಸ್ಸರ್ವೇಷ್ಟದಾತಾರಂ ಪ್ರಣಮ್ಯ ಸಮಯಾಚತ ॥ ೧೩ ॥

---

ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸಿಕೊಡುವ ಸುಂದರೇಶ್ವರನು ನನ್ನನ್ನು ರಕ್ಷಿಸು ತ್ತಿರುವನು. ಸಂಗೀತ ವಿದ್ಯೆಯಲ್ಲಿ ಹೆಮ್ಮೆಪಡುತ್ತಿರುವ ಅವನನ್ನು ಗೆದ್ದು ಓಡಿಸು ತ್ತೇನೆ. ಸಭೆಯ ಮಧ್ಯದಲ್ಲಿ ಅವನ ಢಕ್ಕಾವಾದ್ಯವನ್ನು ಮುರಿದುಹಾಕುವೆನು.

೧೦-೧೪. ವರಗುಣ ಪಾಂಡ್ಯರಾಜನು ಅವನ ಮಾತನ್ನು ಕೇಳಿ, ಬಹಳ ಸಂತೋಷವುಳ್ಳವನಾಗಿ " ಈಗ ನೀನು ಮನೆಗೆ ಹೋಗು ". ಎಂದು ಗೂಢವಾಗಿ ಹೇಳಿ ಕಳುಹಿಸಿದನು. ಹೊಸದಾಗಿ ಬಂದಿದ್ದ ಸಂಗೀತಗಾರನ ಕಡೆಯವರು ವೀಣೆ ಯನ್ನು ಬಾರಿಸುತ್ತಾ, ಮಧುರವಾಗಿ ಸಂಗೀತವನ್ನು ಹೇಳುತ್ತಾ ಮಧುರಾನಗರದ ಬೀದಿಯಲ್ಲಿ ಸಂಚರಿಸುತ್ತಿದ್ದರು. ಭದ್ರನೆಂಬುವನು ಅವರನ್ನು ನೋಡಿದನು. ಆದರಿಂದ ಅವನಿಗೆ ಹೆದರಿಕೆಯು ಉಂಟಾಯಿತು " ಈಗ ನಾನು ಏನು ಮಾಡಲಿ " ಎಂದು ಯೋಚಿಸುತ್ತಾ ಸುಂದರೇಶ್ವರನನ್ನು ಧ್ಯಾನಮಾಡಿದನು. ಯಾವಾಗಲೂ ಭಕ್ತರ ವಿಪತ್ತನ್ನು ಪರಿಹರಿಸುವ, ಇಷ್ಟಸಿದ್ಧಿಗಳನ್ನು ಕೊಡುವ, ಸುಂದರೇಶ್ವರನ ಹತ್ತಿರಕ್ಕೆ ಬಂದು ನಮಸ್ಕರಿಸಿ, ಭಕ್ತರ ಇಷ್ಟವನ್ನು ನೆರವೇರಿಸಿಕೊಡುವ ದಯಾ

ದೇವದೇವ ಕೃಪಾರಾಶೇ ಭಕ್ತಾಭೀಷ್ಟಪ್ರದಾಯಕ ।
ಇಮಾ ಮಾಪದ ಮಾಪನ್ನಾಂ ಮದೀಯಾಂ ನಾಶಯ ಪ್ರಭೋ ॥ ೧೪ ॥

ಪ್ರಾರ್ಥಯಿತ್ವೈವ ಮಗಮ ದ್ಭದ್ರಾಖ್ಯೋ ಭಕ್ತವತ್ಸಲಂ ।
ಶುಭ ಮಾತ್ಮೀಯಭವನಂ ಸರ್ವಸಂಪತ್ಸಮನ್ವಿತಂ ॥ ೧೫ ॥

ಆಪನ್ನಾರ್ತಿಹರೋ ದೇವ ಶ್ಶಂಕರಃ ಸುಂದರೇಶ್ವರಃ ।
ಕದಂಬವನನಾಥಶ್ಚ ಕಾರುಣ್ಯಾತ್ತಕಲೇಬರಃ ॥ ೧೬ ॥

ಕಾಷ್ಠಭಾರಂ ಚ ಶಿರಸಾ ವಹನ್ನಂಸೇನ ವಲ್ಲಕೀಂ ।
ಜೀರ್ಣೋಷ್ಣೀಷಾಂಬರಧರೋ ಜೀರ್ಣಕುಂತಲದಂತವಾನ್ ॥ ೧೭ ॥

ಕಾಷ್ಠಂ ಕಾಷ್ಠಮಿತಿ ಪ್ರೋಚ್ಯ ಕಾಷ್ಠಭಾರಂ ದಧನ್ವಿಭೌ ।
ಅಥಾ ಗಂತೋರ್ಗಾಯಕಸ್ಯ ಭವನದ್ವಾರಮಾಗತಃ ॥ ೧೮ ॥

---

ಶಾಲಿಯಾದ ದೇವದೇವನೆ, ಎಲೈ ಪ್ರಭುವೆ! ನನಗೆ ಉಂಟಾಗಿರುವ ಈ ವಿಪತ್ತನ್ನು ಪರಿಹರಿಸು" ಎಂದು ಪ್ರಾರ್ಥನೆಯನ್ನು ಮಾಡಿ, ಎಲ್ಲಾ ವಿಧವಾದ ಸಂಪತ್ತಿನಿಂದ ಕೂಡಿರುವ ತನ್ನ ಮನೆಗೆ ಹೋದನು.

೧೫-೧೯. ವಿಪತ್ತುಳ್ಳವರ ಸಂಕಟವನ್ನು ಪರಿಹರಿಸುವ ಸುಂದರೇಶ್ವರನು, ಅವನಲ್ಲಿ ದಯೆಯಿಂದ, ಕಟ್ಟಿಗೆಯನ್ನು ಹೊರುವವನ ಆಕಾರವನ್ನು ಧರಿಸಿದನು. ಹರಕುಬಟ್ಟೆಯ ರುಮಾಲನ್ನು ಹಾಕಿಕೊಂಡು, ನರತಕೂದಲು, ಮುರಿದ ಹಲ್ಲುಗಳು ಉಳ್ಳವನಾಗಿ, ಹೆಗಲಮೇಲೆ ವೀಣೆಯನ್ನೂ, ತಲೆಯಮೇಲೆ ಕಟ್ಟಿಗೆಯ ಹೊರೆಯನ್ನೂ ಇರಿಸಿಕೊಂಡು ಮಧುರಾನಗರದ ಬೀದಿಯಲ್ಲಿ ಸೌದೆಯನ್ನು ಮಾರುವುದಕ್ಕಾಗಿ ಕೂಗಿಕೊಂಡು ಬಂದನು. ಪೂರ್ಣಿಮೆಯ ಚಂದ್ರನಂತೆ ಮುಖವುಳ್ಳ ಅಲ್ಲಲ್ಲಿ ತಿರುಗುತ್ತಾ ಹೊಸದಾಗಿ ಬಂದ ಸಂಗೀತಗಾರನ ಮನೆಯ ಬಾಗಿಲಿನಲ್ಲಿ ಸೌದೆಯ

ಕಾಷ್ಠಭಾರಂ ಚ ಸಂಸ್ಥಾಪ್ಯ ರಾಕಾಚಂದ್ರನಿಭಾನನಃ ।
ಸಾರ್ಧಂ ರಾಗವಿಶೇಷೈಶ್ಚ ನಾರದಾ ತ್ತುಂಬುರೋರಪಿ ॥ ೧೯ ॥

ಅತಿರಮ್ಯ ಮನೌಪಮ್ಯಂ ರಾಗಂ ಗಾಂಧಾರಿಕಂ ಜಗೌ ।
ಮಂಚಸ್ಥೋ ವನಿತಾಯುಕ್ತೋ ಹೇಮನಾಥಃ ಸ ನಾಮತಃ ॥ ೨೦ ॥

ಶ್ರುತ್ವಾ ಧ್ವನಿಂ ಕೋಯ ಮಿತಿ ಜಿಜ್ಞಾಸು ರ್ಗಾಯಕೋ ಜವಾತ್ ।
ಬಹಿರ್ನಿರ್ಗತ್ಯ ತಂ ವೀಕ್ಷ್ಯ ಕೃಶಂ ಕಾಷ್ಠಭರೋದ್ವಹಾತ್ ॥ ೨೧ ॥

ಅಪೃಚ್ಛತ್ ಕಸ್ತ್ವಮಿತಿ ಚ ವಚೋಭಿ ರ್ವಿನಯಾನ್ವಿತೈಃ ।
ಸೋಽಬ್ರವೀ ದಾರ್ತವದ್ಭೂತ್ವಾ ನಾಥ ಕಿಂ ಮಾದ್ಯ ಪೃಚ್ಛಸಿ ॥ ೨೨ ॥

ದಾಸೋಽಹಂ ಗಾಯಕೇಂದ್ರಸ್ಯ ಭದ್ರಾಖ್ಯಸ್ಯ ಮಹಾಪ್ರಭೋಃ ।
ಏತಚ್ಛ್ರುತ್ವಾ ಖಿನ್ನಮನಾಃ ಶಿವೇತ್ಯುಕ್ತ್ವಾಂತರಂ ಗತಃ ॥ ೨೩ ॥

---

ಹೊರೆಯನ್ನು ಇಳಿಸಿ, ನಾರದ, ತುಂಬುರು, ಎಂಬ ದೇವಗಾಯಕರನ್ನೂ ಮೆಚ್ಚಿಸು ವಂತೆ ಬಹಳ ಇಂಪಾಗಿ ಗಾಂಧಾರರಾಗವನ್ನು ಅದರ ಜೊತೆಗೆ ಸೇರುವ ರಾಗದೊಡನೆ ಸೇರಿಸಿ, ಬಹಳ ಚೆನ್ನಾಗಿ ಗಾನಮಾಡಿದನು.

೨೦–೨೩. ಹೇಮನಾಥನೆಂದು ಹೆಸರುಳ್ಳ ಆ ಸಂಗೀತಗಾರನು ಮಂಚದ ಮೇಲೆ ಸ್ತ್ರೀಯರ ಜೊತೆಯಲ್ಲಿದ್ದವನು, ಹೊರಗಡೆಯಲ್ಲಿ ಹೇಳುತ್ತಿದ್ದ ಸಂಗೀತ ವನ್ನು ಕೇಳುವುದಕ್ಕಾಗಿ ಹೊರಗಡೆಗೆ ಬಂದು, ಕಟ್ಟಿಗೆಯನ್ನು ಹೊರುವುದರಿಂದ ಕೃಶನಾಗಿದ್ದ ಅವನನ್ನು ನೋಡಿ, ನೀನು ಯಾರು ? ಎಂದು ಕೇಳಿದನು. ನಮ್ರತೆ ಯಿಂದ ಪ್ರಶ್ನೆಮಾಡಿದ ಅವನ ಮಾತನ್ನು ಕೇಳಿ, ಸಂಕಟವುಳ್ಳವನಂತೆ ಕಟ್ಟಿಗೆಯ ಹೊರೆಯನ್ನು ತಂದವನು "ಎಲೈ ಪ್ರಭುವೆ! ನೀನು ನನ್ನನ್ನು ಪ್ರಶ್ನೆ ಮಾಡುವೆ ಯಾದರೆ, ನಾನು ಈ ರಾಜನ ಸಭೆಯಲ್ಲಿ ಗಾಯಕಶ್ರೇಷ್ಠನಾಗಿರುವ ಮಹಾಪ್ರಭು ವಾದ ಭದ್ರನ ದಾಸನಾಗಿ ಇರುವೆನು." ಎಂದು ಹೇಮನಾಥನಿಗೆ ಉತ್ತರವನ್ನು ಹೇಳಿ ದನು. ಈ ಮಾತನ್ನು ಕೇಳಿದಕೂಡಲೆ, ಹೇಮನಾಥನು ಖೇದವುಳ್ಳ ಮನಸ್ಸಿನಿಂದ ಶಿವ. ಶಿವ, ಎಂದು ಹೇಳುತ್ತಾ ಮನೆಯ ಒಳಗಡೆಗೆ ಬಂದನು.

ಬುಧ್ವಾ ವಿಚಾರ್ಯ ಕರ್ತವ್ಯಂ ನಿಶ್ಚಯಾಮಾಸ ಮಾನಸೇ ।
ಭೃತ್ಯಸ್ಯ ಗಾನ ಮತುಲ ಮೇತ ಧ್ಧರ್ತುಃ ಕಿಮುಚ್ಯತೇ ॥ ೨೪ ॥

ಸದ್ಯೋ ಗಂತವ್ಯ ಮಸ್ಮಾಭಿರಿತಿನಿಶ್ಚಿತ್ಯ ಬಂಧುಭಿಃ ।
ಸಂಹೃತ್ಯ ಸ್ವೀಯ ಮಖಿಲ ಮಜ್ಞಾತಃ ಪ್ರಪಲಾಯಿತಃ ॥ ೨೫ ॥

ಅಕರೋತ್ಸುಂದರೇಶಶ್ಚ ಗಮನಂ ಗಾಯಕಸ್ಯ ಚ ।
ಜ್ಞಾತಾರ್ಥ ಮಥ ತಂ ಸ್ವಪ್ನೇ ಭದ್ರಂ ಭಕ್ತಾಜನಾರ್ತಿಹಾ ॥ ೨೬ ॥

ಭದ್ರಃ ಪ್ರಾತಃ ಸಮುತ್ಥಾಯ ನತ್ವಾ ಸುಂದರನಾಯಕಂ ।
ರಾಜ್ಞೋ ನಿಕಟಮಾಸಾದ್ಯ ಪ್ರಾಹಾತ್ಯಂತಸಮುದ್ಧತಃ ॥ ೨೭ ॥

ಆಗಂತುರ್ಗಾಯಕೋ ರಾಜ ನ್ನೀಘ್ರಮಾನೀಯತಾಂ ತ್ವಯಾ ।
ಇತ್ಯುಕ್ತೇ ಸತಿ ಭದ್ರೇ ತು ಶಂಭುಭಕ್ತೇ ಚ ಗಾಯಕೇ ॥ ೨೮ ॥

ತದಾಹ್ವಾನಾಯ ಭೂಪಾಲಃ ಕಾಂಶ್ಚಿದ್ದೂತಾನ ಯುಂಕ್ತ ಸಃ ।
ತೇಚ ಗತ್ವಾ ತಮ ಪಶ್ಯಂತಃ ಸಮಾಗತ್ಯಾಬ್ರುವನ್ನೃಪಾತ್ ॥ ೨೯ ॥

---

೨೪-೨೬. ಅನಂತರದಲ್ಲಿ ಅವನು " ಭೃತ್ಯನು ಹೇಳಿದ ಸಂಗೀತವು ಇಷ್ಟರ ಮಟ್ಟಿಗೆ ಇರುವಾಗ, ಪ್ರಭುವಿನ ಗಾನವು ಹೇಗೆ ಇರಬಹುದು. ನಾವು ಈಗಲೆ ಈ ಪ್ರದೇಶವನ್ನು ಬಿಡುವುದು ಉತ್ತಮವು. " ಎಂದು ತನ್ನ ಆಪ್ತರೊಡನೆ ಯೋಚಿಸಿ ಹೊರಡಲು ನಿಶ್ಚಯಮಾಡಿದನು. ಅದರಂತೆಯೇ ತನ್ನ ಪದಾರ್ಥಗಳೆಲ್ಲವನ್ನೂ ಭದ್ರ ಮಾಡಿಕೊಂಡು ಯಾರಿಗೂ ತಿಳಿಸದೆ ಹೊರಟುಹೋದನು. ಸುಂದರೇಶನು ಭದ್ರನ ಸ್ವಪ್ನದಲ್ಲಿ ಬಂದು ಸಂಗೀತಗಾರನು ಓಡಿಹೋದದ್ದನ್ನು ತಿಳಿಸಿದನು.

೨೭-೩೦. ಬೆಳಗಾದನಂತರ ಭದ್ರನು ಸುಂದರೇಶ್ವರನಿಗೆ ನಮಸ್ಕಾರ ಮಾಡಿ ದೊರೆಯ ಹತ್ತಿರಕ್ಕೆ ಬಂದು ಬಹಳ ಹೆಮ್ಮೆಯಿಂದ, " ಹೊಸದಾಗಿ ಬಂದಿರುವ ಸಂಗೀತಗಾರನನ್ನು ಬೇಗನೆ ಕರೆಯಿಸು " ಎಂದು ಹೇಳಿದನು. ರಾಜನು ಭದ್ರನ

ಸ ಗಾಯಕೋ ಬಂಧುಭಿಶ್ಚ ಸಮಸ್ತೈ ರುಪಗಾಯಕೈಃ ।
ಅತ್ಯಂತಕಾತರೋ ಭೂತ್ವಾ ಚಾಜ್ಞಾತಃ ಪ್ರಪಲಾಯಿತಃ ॥ ೩೦ ॥

ಇತ್ಯು ಕ್ತೇಷು ಚ ದೂತೇಷು ಸಂತೋಷಾತಿಶಯೇನ ಚ ।
ಸ್ವಕೀಯಂ ಗಾಯಕಂ ಭದ್ರಂ ವರಾಂಬರವಿಭೂಷಣೈಃ ॥ ೩೧ ॥

ಅಲಂಕೃತ್ಯ ಗಜಸ್ಕಂಧ ಮಧಿರೋಪ್ಯಾಂಬರಾಸ್ತೃತಂ ।
ಪ್ರದಕ್ಷಿಣಂ ಕಾರಯಿತ್ವಾ ಮಹತೀಂ ಮಧುರಾಪುರೀಂ ॥ ೩೨ ॥

ಸ್ವಕೀಯ ಕೋಶಮಧ್ಯಸ್ಥಂ ಧನಂ ಸರ್ವಂ ದದೌ ನೃಪಃ ।
ಗಜಸ್ಕಂಧಾಧಿರೂಢಸ್ಸೋಽಪಿ ಸ್ವಾಲಯ ಮಾಯಯೌ ॥ ೩೩ ॥

ಕೃತನೀರಾಜನವಿಧಿ ರ್ವಂದಿಭಿಶ್ಚ ಕೃತಸ್ತುತಿಃ ।
ಸೌಭಾಗ್ಯಂ ಗಾಯಕೇಂದ್ರಸ್ಯ ಕೋ ವಾ ವರ್ಣಯಿತುಂ ಕ್ಷಮಃ ॥ ೩೪ ॥

---

ಮಾತನ್ನು ಕೇಳಿ, ಅವನನ್ನು ಕರತರುವುದಕ್ಕಾಗಿ ದೂತರನ್ನು ಕಳುಹಿಸಿದನು. ಅವರು ಅವನನ್ನು ಕಾಣದೆ ಬೇಗನೆ ಹಿಂದಿರುಗಿ ಬಂದು " ಆ ಸಂಗೀತಗಾರನು ತನ್ನ ಜೊತೆಯವರೊಡನೆ, ಯಾರಿಗೂ ತಿಳಿಸದೆ ಯೋಚನೆಮಾಡುತ್ತಾ ಓಡಿಹೋದನು. " ಎಂದು ಹೇಳಿದರು.

೩೧–೩೪. ರಾಜನು ಆ ಮಾತನ್ನು ಕೇಳಿ, ಬಹಳ ಸಂತೋಷದಿಂದ ತನ್ನ ಸಂಗೀತಗಾರನಿಗೆ ಉತ್ತಮವಾದ ವಸ್ತ್ರಾಭರಣಗಳಿಂದ ಅಲಂಕಾರಮಾಡಿಸಿ, ಆನೆಯ ಮೇಲೆ ಕೂರಿಸಿ, ದೊಡ್ಡದಾದ ಮಧುರಾನಗರದ ಬೀದಿಗಳಲ್ಲಿ ಎಲ್ಲಾ ಕಡೆಯಲ್ಲಿಯೂ ಮೆರವಣಿಗೆ ಮಾಡಿಸಿದನು. ಮತ್ತು ಅವನಿಗೆ ತನ್ನ ಭಂಡಾರದಲ್ಲಿದ್ದ ದ್ರವ್ಯವೆಲ್ಲವನ್ನೂ ಬಹುಮಾನವಾಗಿ ಕೊಟ್ಟನು. ಭದ್ರನು ಆನೆಯನ್ನು ಹತ್ತಿಕೊಂಡು ತನ್ನ ಮನೆಗೆ ಬಂದನು. ಹೊಗಳುಭಟ್ಟರು ಅವನನ್ನು ಹೊಗಳುತ್ತಿದ್ದರು. ಗಾಯಕಶ್ರೇಷ್ಠನಾದ ಭದ್ರನಿಗೆ ನೀರಾಜನವನ್ನು ಮಾಡಿದರು. ಅವನ ಮಹಿಮೆಯನ್ನು ವರ್ಣನೆಮಾಡಲು ಯಾರಿಗೂ ಆಗುವುದಿಲ್ಲ.

ತಸ್ಮಾಲ್ಲಬ್ಧಂ ಧನಂ ಸರ್ವಮಂಬರಾಭರಣಾದಿಕಂ ।
ಶ್ರೀಹಾಲಾಸ್ಯೇಶ್ವರ ಸ್ಯಾರ್ಧಂ ದತ್ವಾ ತತ್ಸನ್ನಿಧೌ ಸ್ಥಿತಃ ॥ ೩೫ ॥

ಅರ್ಥಿಭ್ಯಶ್ಚಾ ವಶಿಷ್ಟಂ ಚ ವಿಪ್ರಾದಿಭ್ಯಃ ಪ್ರದಾಯ ಚ ।
ಭೂಯಃ ಸಂವ್ಯಾತನೋ ತ್ಯಾಗಂ ಸ್ವಶಕ್ತಿಮನಪೇಕ್ಷ್ಯ ಸಃ ॥ ೩೬ ॥

ಭದ್ರಾನುಗ್ರಹಕರ್ತಾರಂ ಪರಮೇಶಂ ಪರಾತ್ಪರಂ ।
ಸ್ತುವಂತಿ ಚ ಜನಾಃ ಸರ್ವೇ ವಿಸ್ಮಯಾತಿಶಯಾನ್ವಿತಾಃ ॥ ೩೭ ॥

ಏಕಚತ್ವಾರಿಂಶಿಕೇಯಂ ಲೀಲೋಕ್ತಾ ಸುಂದರಪ್ರಭೋಃ ।
ಆಪತ್ಸಮುದ್ರಕಲ್ಪಾಂತದ್ವಾದಶಾದಿತ್ಯಸನ್ನಿಭಾ ॥ ೩೮ ॥

ಸಂಪತ್ಸಮುದ್ರಸಂವೃದ್ಧೌ ರಾಕಾಕುಮುದಬಾಂಧವಾ ।

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಕಾಷ್ಠಭಾರವಿಕ್ರಯಂ ನಾಮ
ಸಪ್ತಚತ್ವಾರಿಂಶೋಽಧ್ಯಾಯಃ

---

೩೫–೩೭. ಭದ್ರನು, ತನಗೆ ರಾಜನು ಕೊಟ್ಟ ವಸ್ತ್ರಾಭರಣಾದಿಗಳಲ್ಲಿ ಅರ್ಧವನ್ನು ಹಾಲಾಸ್ಯೇಶ್ವರನಿಗೆ ಕೊಟ್ಟು, ದೇವನ ಸನ್ನಿಧಿಯಲ್ಲಿ ಇರುತ್ತಾ, ಉಳಿದದ್ದನ್ನು ಯಾಚಕರಿಗೂ, ಬ್ರಾಹ್ಮಣರೇ ಮೊದಲಾದವರಿಗೂ ದಾನ ಮಾಡಿದನು. ಅನಂತರದಲ್ಲಿ ತನ್ನ ಸಾಮರ್ಥ್ಯವನ್ನು ಎಣಿಸದೆ, ಪುನಃ ದಾನಮಾಡಿದನು. ಭದ್ರನಿಗೆ ಅನುಗ್ರಹವನ್ನು ಮಾಡಿದ ಪರಮೇಶ್ವರನನ್ನು ಎಲ್ಲರೂ ಆಶ್ಚರ್ಯದಿಂದ ಬಹಳಮಟ್ಟಿಗೆ ಶ್ಲಾಘಿಸುತ್ತಿದ್ದರು.

೩೮. ವಿಪತ್ತುಗಳನ್ನು ನಾಶಮಾಡಿ, ಐಶ್ವರ್ಯವನ್ನು ಹೆಚ್ಚಿಸುವ, ಸುಂದರೇಶ್ವರನ ನಲವತ್ತೊಂದನೆಯ ಲೀಲೆಯು ಮುಗಿದಿರುವುದು.

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ
ಕಾಷ್ಠಭಾರವಿಕ್ರಯವೆಂದು ಹೆಸರುಳ್ಳ ನಲವತ್ತೇಳನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಅಷ್ಟಚತ್ವಾರಿಂಶೋಽಧ್ಯಾಯಃ



॥ ಅಗಸ್ತ್ಯ ಉವಾಚ ॥

ಪತ್ರಿಕಾಲೇಖನಂ ಪಶ್ಚಾ ದ್ಭಕ್ತಾನುಗ್ರಹತತ್ಪರಃ ।
ಚೇರಂ ಪ್ರತ್ಯಕರೋಚ್ಛಂಭು ಸ್ತಾಂ ಲೀಲಾಂ ಶ್ರುಣುತ ದ್ವಿಜಾಃ ॥ ೧ ॥

ಭದ್ರಾಭಿಧಾನೋ ಭಾಣಸ್ತು ಸದಾ ಶಂಕರಸಕ್ತಧೀಃ ।
ಭೂಪಾಲದರ್ಶನಂ ತ್ಯಕ್ತ್ವಾ ಸದಾ ಗಾಯತಿ ಶಂಕರಂ ॥ ೨ ॥

ಗಾನರೂಪೀ ಗಾನರತೋ ಗಾಯಕಾಗ್ರೇಸರೋಪಿ ಯಃ ।
ಸುಂದರೇಶೋಽಸ್ಯ ಕಂಠೋತ್ಥರಾಗೇ ಹ್ಯಾಕೃಷ್ಟಮಾನಸಃ ॥ ೩ ॥

---

## ನಲವತ್ತೆಂಟನೆಯ ಅಧ್ಯಾಯವು

೧-೩. ಅಗಸ್ತ್ಯಋಷಿಯು ಹೇಳಿದನು:- ಭಕ್ತರು ಸೇವೆಮಾಡಿದ ಕೂಡಲೆ, ಅನುಗ್ರಹವನ್ನು ಮಾಡುವುದರಲ್ಲಿ ಆಸಕ್ತಿಯಿಂದ ಇರುವ ಪರಮೇಶ್ವರನು ಚೇರರಾಜನಿಗೆ ಪತ್ರಿಕೆಯನ್ನು (ಕಾಗದವನ್ನು) ಬರೆದು ಕಳುಹಿಸಿದ ಲೀಲೆಯನ್ನು ನಿಮಗೆ ವಿವರದಿಂದ ಹೇಳುವೆನು. ಭದ್ರನೆಂದು ಹೆಸರುಳ್ಳ ನೀಚಜಾತಿಯವನಾದ ಒಬ್ಬ ಸಂಗೀತಗಾರನು ಶಿವನಲ್ಲಿ ಅನುರಕ್ತವಾದ ಬುದ್ಧಿಯುಳ್ಳವನಾಗಿ, ರಾಜನನ್ನು ನೋಡದೆ, ಯಾವಾಗಲೂ ಶಿವನ ಗುಣಗಳನ್ನು ಗಾನಮಾಡುತ್ತಿದ್ದನು. ಸುಂದರೇಶ್ವರನು ಗಾನರೂಪದಿಂದ ಇರುವವನು. ಗಾನವಿದ್ಯೆಯನ್ನು ಬಲ್ಲವರಲ್ಲಿ ನಿಪುಣನು. ಗಾನಮಾಡುವುದರಲ್ಲಿ ಶ್ರೇಷ್ಠನಾದವನು. ಆದ್ದರಿಂದ ಭದ್ರನು ಪ್ರತಿದಿನವೂ ಸಂಗೀತವನ್ನು ಹೇಳುವಾಗ ಇವನ ಕಂಠಧ್ವನಿಯನ್ನು ಕೇಳಿ, ಸಂತೋಷದಿಂದ ಇರುತ್ತಿದ್ದನು.

ಭವೋ ಭಕ್ತಪರಾಧೀನೋ ಭಗವಾನ್ಪಾರ್ವತೀಪತಿಃ ।
ಶಂಭುಸ್ತನ್ನಿಕಟಂ ಪ್ರಾಪ್ಯ ಶೃಣ್ವನ್ನಾಸ್ತೇ ಸದಾ ಮುದಾ ॥ ೪ ॥

ಸಂತೋಷಯಿತ್ವಾ ಸರ್ವೇಶಂ ಗಾಯಕೋ ಗಾನವಿದ್ಯಯಾ ।
ಯದಾ ಚ ಗಂತುಮುದ್ಯುಕ್ತೋ ತದಾ ದೇವೋ ಮಹೇಶ್ವರಃ ॥ ೫ ॥

ಕದಾಚಿತ್ ನ್ಯದಧದತ್ ತಸ್ಯ ಪುರೋಭಾಗೇ ಬಹೂನ್ಪಣಾನ್ ।
ಕದಾಚಿತ್ದ್ಭೂಪತೇಃ ಸ್ಫೀತಂ ನ್ಯಧದ್ಭೂಷಣಂ ಬಹು ॥ ೬ ॥

ಪ್ರಾದಾಚ್ಚ ಜಾತುಚಿದ್ರತ್ನಂ ಹಾರಂ ವಾ ಕನಕಂ ತು ವಾ ।
ಸೌವರ್ಣಂ ಚಷಕಂ ವಾಪಿ ರತ್ನಚಿತ್ರಿತದರ್ಪಣಂ ॥ ೭ ॥

ಭದ್ರಾಸನಂ ಸ ಪಟ್ಟಂ ಚ ಹೇಮರತ್ನಸಮಾಯುತಂ ।
ದಂಡಂ ಚ ಚಾಮರಸ್ಯಾಪಿ ನವರತ್ನವಿಚಿತ್ರಿತಂ ॥ ೮ ॥

ರಾಜತಂ ವಾಪಿ ತಾಮ್ರಂ ವಾ ಸಮಸ್ತಂ ವಸ್ತುಜಾತಕಂ ।
ಯಾನಿ ಯಾನಿ ಚ ದತ್ತಾನಿ ಶಂಭುನಾ ತಾನಿ ತಾನಿ ಚ ॥ ೯ ॥

---

೪–೯. ಭಕ್ತರ ಪರವಾಗಿ ಇರುವ ಪೂಜ್ಯನಾದ ಪಾರ್ವತೀಪತಿಯಾದ ಶಂಭುವೂ ಸಂಗೀತಗಾರನಾದ ಭದ್ರನ ಹತ್ತಿರದಲ್ಲಿದ್ದುಕೊಂಡು ಸಂಗೀತವನ್ನು ಕೇಳಿ, ಅವನು ಗಾನವಿದ್ಯೆಯಿಂದ ತನ್ನನ್ನು ಸಂತೋಷಪಡಿಸಿ, ಮನೆಗೆ ಹೋಗಲು ಉದ್ಯುಕ್ತನಾದಾಗ ಭದ್ರನ ಮುಂದುಗಡೆಯಲ್ಲಿ ಬಹಳಷ್ಟು ಪಾರಿತೋಷಿಕವನ್ನು ಇರಿಸುತ್ತಿದ್ದನು. ಒಂದು ಸಾರಿ ರಾಜನು ತಂದುಕೊಟ್ಟಿದ್ದ ಬೆಲೆಬಾಳುವ ಆಭರಣಗಳನ್ನು ಕೊಟ್ಟನು. ಒಂದೊಂದು ಸಾರಿ ಒಂದೊಂದರಂತೆ, ರತ್ನಖಚಿತವಾದ ಹಾರ, ಮುತ್ತಿನ ಹಾರ, ಚಿನ್ನದ ಪಾನಪಾತ್ರೆ, ರತ್ನದ ಕನ್ನಡಿ, ಭದ್ರಪೀಠ, ಅದರ ಮೇಲುಗಡೆಯಲ್ಲಿ ಹಾಸುವ ಚಿನ್ನ ಮತ್ತು ರತ್ನದ ಕೆಲಸಗಳನ್ನು ಮಾಡಿರುವ ಪಟ್ಟವಸ್ತ್ರ, ನವರತ್ನದ ಕೆಲಸದಿಂದ ಪ್ರಕಾಶಿಸುತ್ತಿರುವ ದಂಡಗಳುಳ್ಳದ್ದಾದ ಚಾಮರ, ಮತ್ತು ಬೆಳ್ಳಿ, ತಾಮ್ರ ಇವೇ ಮೊದಲಾದ ಲೋಹಗಳ ಪದಾರ್ಥಗಳು, ಇವೆಲ್ಲವನ್ನೂ ಶಿವನು ಭದ್ರನಿಗೆ ಕೊಟ್ಟನು.

ಲಬ್ಧ್ವಾ ಸ ಮುದಿತೋ ಭೂತ್ವಾ ಗಾಯಕಶ್ಚ ಗೃಹಂ ಗತಃ ।
ಭಿತ್ವಾಭಿತ್ವಾ ಗಾಯಕೇಭ್ಯ ಸ್ತಾನಿ ಸರ್ವಾಣ್ಯಸೌ ದದೌ ॥ ೧೦ ॥

ಏವಂ ಗಚ್ಛತಿ ಕಾಲೇ ತು ಕದಾಚಿ ದ್ಭದ್ರಸಂಜ್ಞಿತಃ
ರಿಕ್ತ್ಯೋಽಭವತ್ತದಾಭೂಪಮುಖ್ಯಾಯ ಚ ಕದಾಚನ ॥ ೧೧ ॥

ನೋಪಗಾಯ ತ್ಸುಂದರೇಶಂ ಸದಾ ಗಾನ್ಯೈ ರಪೂಜಯತ್ ।
ತಥಾ ಭೂಪಂ ಸ್ತುವಂತ್ಯೇನಮುಪಗಾಯಕಪಂಕ್ತಯಃ ॥ ೧೨ ॥

ದಾತವ್ಯವಸ್ತ್ವಭಾವೇನ ಖಿನ್ನಶ್ಚಿಶ್ಯೇ ಕದಾಚನ ।
ದಾತೃತ್ವಮಾತ್ಮಭಕ್ತಿಂ ಚ ದೃಷ್ಟ್ವಾ ಭದ್ರಸ್ಯ ಶಂಕರಃ ॥ ೧೩ ॥

ತತ್ಸ್ವಪ್ನೇ ಸ್ವಯ ಮಭ್ಯೇತ್ಯ ಭಕ್ತಾಧೀನೋಽವದಚ್ಚ ತಂ ।
ಭದ್ರ ತ್ವಮತಿದಾತೃತ್ವೇ ದೀಕ್ಷಿತೋಽಸಿ ನಿರಂತರಂ ॥ ೧೪ ॥

ರಾಜಮಂದಿರಮಧ್ಯಸ್ಥಂ ರಹಸ್ತುಭ್ಯಂ ದದಾಮ್ಯಹಂ ।
ಸರ್ವಂ ವಸ್ತು ಮಹಾರತ್ನಸ್ವರ್ಣರೂಪ್ಯಾದಿಕಾನಹಂ ॥ ೧೫ ॥

---

೧೦–೧೫. ಸಂಗೀತಗಾರನು, ಶಿವನು ಕೊಟ್ಟ ಪದಾರ್ಥವೆಲ್ಲವನ್ನೂ ತೆಗೆದುಕೊಂಡು ಮನೆಗೆ ಬಂದು, ಅವೆಲ್ಲವನ್ನೂ ಸಂಗೀತಗಾರರಾದ ಇತರರಿಗೆ ಹಂಚಿಕೊಡುತ್ತಿದ್ದನು. ಕೆಲವುಕಾಲ ಕಳೆದನಂತರ ಭದ್ರನು ದರಿದ್ರನಾದನು, ರಾಜನ ಮುಂದುಗಡೆಯಲ್ಲಿ ಹಿಂದಿನಂತೆಯೇ ಸಂಗೀತವನ್ನು ಹೇಳಲಿಲ್ಲ, ಇವನು ಮಾತ್ರ ಹೀಗೆ ಇದ್ದರೂ, ಇವನನ್ನು ಅನುಸರಿಸಿ ಗಾನಮಾಡುವವರು ರಾಜನನ್ನೇ ಹೊಗಳುತ್ತಿದ್ದರು. ಇವರಿಗೆ ಕೊಡುವುದಕ್ಕೆ ಭದ್ರನ ಹತ್ತಿರ ಏನೂ ಇರಲಿಲ್ಲ. ಶಿವನು ಭದ್ರನ ಔದಾರ್ಯವನ್ನೂ ತನ್ನಲ್ಲಿರುವ ಭಕ್ತಿಯನ್ನೂ ನೋಡಿ, ಅವನ ಸ್ವಪ್ನದಲ್ಲಿ ಪ್ರತ್ಯಕ್ಷವಾಗಿ "ಎಲೈ ಭದ್ರನೆ, ನೀನು ಬಹಳ ದಾನಶೀಲನಾಗಿರುತ್ತೀಯೆ. ಅರಮನೆಯ ಮಧ್ಯದಲ್ಲಿರುವುದನ್ನೂ ನಿನಗೆ ರಹಸ್ಯವಾಗಿ ಕೊಟ್ಟಿರುತ್ತೇನೆ. ಚಿನ್ನ, ಬೆಳ್ಳಿ, ಬೆಲೆಬಾಳುವ ರತ್ನಗಳು ಇವೆಲ್ಲವನ್ನೂ ಕೊಟ್ಟದ್ದಾಯಿತು.

ಕೋಶಾಧ್ಯಕ್ಷಾಸ್ತು ಪಾಂಡ್ಯಸ್ಯ ಸದಾ ಕ್ರೋಶಂತಿ ಭೂಯಸಾ ।
ಘಣಾಶ್ಚ ನೈವ ದೃಶ್ಯಂತೇ ಸ್ಥಾಪಿತಾಃ ಕೋಶಸದ್ಮನಿ ॥ ೧೬ ॥

ಭೂಷಾಶ್ಚ ರತ್ನಚಿತ್ರಾಶ್ಚ ಹೈಮಾನಿ ಚಷಕಾನಿ ಚ ।
ಪ್ರದುಷ್ಟಶ್ಚೋರಿತಾ ಕೋsನ್ಯು ಚೋರಯಿತ್ವಾ ಗತೋsಭವತ್ ॥ ೧೭ ॥

ನೋದ್ಘಾಟಿತಕವಾಟಂ ಚ ಜ್ಞಾತಾ ಚೇತ್ಸುಂದರೇಶ್ವರಃ ।
ಏವಂ ಕ್ರೋಶತ್ಸು ಬಹುಧಾ ಕೋಶಾಧ್ಯಕ್ಷೇಷು ರಂತ ತೇ ॥ ೧೮ ॥

ಪುನಶ್ಚ ಕಿಂಚಿದ್ದದ್ಯಾಚ್ಚೇದ್ದೃಷ್ಟ್ವಾ ತ್ವಾಂ ಬಾಧತೇ ಜನಃ ।
ಪ್ರಾಯಶಶ್ಚೋರ ಏವಾದ್ಯ ಸತ್ಕರೋತಿ ಶಿವಾಶ್ರಿತಾನ್ ॥ ೧೯ ॥

ಶೀಘ್ರಂ ಗತ್ವಾ ದರ್ಶಯಾಮುಂ ಪತ್ರಿಕಾಂ ಚೇರಭೂಪತೇಃ ।
ಇತ್ಯುಕ್ತ್ವಾ ರಮ್ಯಯಾ ಯುಕ್ತಾಮಾರ್ಯಯಾ ಪತ್ರಿಕಾ ಮದಾತ್ ॥ ೨೦ ॥

---

೧೬–೨೦ ಪಾಂಡ್ಯರಾಜನ ಭಂಡಾರದಲ್ಲಿರುವ ಅಧಿಕಾರಿಗಳು, ಭಂಡಾರದಲ್ಲಿ ಭದ್ರಪಡಿಸಿರುವ ದುಡ್ಡಿನ ಚೀಲಗಳು, ಆಭರಣಗಳು, ರತ್ನಖಚಿತವಾದ ಪಾನಪಾತ್ರೆಗಳು, ಮತ್ತು ಚಿನ್ನದ ಪದಾರ್ಥಗಳು, ಇವೆಲ್ಲವೂ ಕಳ್ಳರಿಂದ ಅಪಹೃತವಾಗಿರುತ್ತವೆ. ಕಳ್ಳನು ಮಾತ್ರ ಗೊತ್ತಾಗುವುದಿಲ್ಲ. ಮತ್ತು ಕದವನ್ನು ತೆಗೆದು ಇರುವುದಿಲ್ಲ. ಈ ಪ್ರಕಾರವಾದ ಕಳ್ಳರನ್ನು ಸುಂದರೇಶ್ವರನು ತಿಳಿದಿರುವನು. ಎಂದು ಆ ಅಧಿಕಾರಿಗಳು ಬಹಳವಾಗಿ ಕೂಗುತ್ತಿರುವರು. ಅದನ್ನು ನೋಡಿ, ಅವರನ್ನು ಬೇಡಿದರೆ, ಅಧಿಕಾರಿಗಳು ನಿನಗೆ ತೊಂದರೆಯನ್ನು ಉಂಟುಮಾಡುವರು. ಶಿವನನ್ನು ಆಶ್ರಯಿಸಿದವರಿಗೆ ಯಾವನೋ ಒಬ್ಬ ಕಳ್ಳನು ಸತ್ಕಾರ ಮಾಡುತ್ತಿರುವನು, ಎಂದು ಅವರು ತಿಳಿಯುವರು. ಆದ್ದರಿಂದ ನೀನು ಈ ಕಾಗದವನ್ನು ತೆಗೆದುಕೊಂಡು ಹೋಗಿ ಚೇರರಾಜನಿಗೆ ತೋರಿಸು, ” ಎಂದು ಹೇಳಿ, ಮರ್ಯಾದೆಯಿಂದ ಬರದಿರುವ ಒಂದು ಕಾಗದವನ್ನು ಚೇರರಾಜನಿಗೆ ಕೊಡಲು, ಶಿವನು ಕೊಟ್ಟನು.

ಯುಷ್ಮತ್ಸೇವಾಂ ತು ಹಿತ್ವಾಹಂ ಗಮಿಷ್ಯಾಮೀತಿ ಸೋಽಬ್ರವೀತ್ ।
ಮಯೋಚ್ಯಮಾನೋ ಹಿ ಭವಾನ್ಗಚ್ಛೇತಿ ಚ ಶಿವೋಽಬ್ರವೀತ್ ॥ ೨೧ ॥

ಸ್ವಾಮಿನ್ಯಾಜ್ಞಾವಿಕರಣಂ ಪಾಪಾಯೇತಿ ವಿಚಿಂತಯನ್ ।
ಸರ್ವೈ ರಜ್ಞಾತ ಏವ ದ್ರಾಕ್‌ಚೇರಂ ಪ್ರತಿ ಯಯೌ ನೃಪಂ ॥ ೨೨ ॥

ದಿನೈಃ ಕತಿಪಯೈಃ ಪ್ರಾಪ್ಯ ಚೇರಸ್ಯ ಪುರ ಮುದ್ಭುತಂ ।
ಭಸ್ಮಾಂಕಿತಲಲಾಟಾದಿ ರಾಸ್ತೇ ಕೋಣೇ ಪ್ರಪಾಂತರೇ ॥ ೨೩ ॥

ಭಸ್ಮಭೂಯಿಷ್ಠಸರ್ವಾಂಗಂ ತತ್ರತ್ಯಾ ದದೃಶುರ್ಜನಾಃ ।
ಚೇರಂ ಸ್ವಪ್ನೇ ಸುಂದರೇಶೋ ಗತ್ವಾ ಪ್ರಾಹ ಸುವಿಸ್ತರಂ ॥ ೨೪ ॥

ಮದ್ಭಕ್ತಃ ಕಶ್ಚಿದಾಯಾತ ಸ್ತಮನ್ವೀಕ್ಷ್ಯ ಮಹೀಪತೇ ।
ಪ್ರೀಣಯೇತಿ ವಚಃ ಸ್ವಪ್ನೇ ಶೃಣೋತಿ ಸ್ಮ ಸ ಚೇರಪಃ ॥ ೨೫ ॥

---

೨೧-೨೫ ನಿಮ್ಮ ಸೇವೆಯನ್ನು ಬಿಟ್ಟು ನಾನು ಚೇರರಾಜನ ಹತ್ತಿರಕ್ಕೆ ಹೋಗುವುದಿಲ್ಲವೆಂದು ಭದ್ರನು ಶಿವನ ಸಂಗಡ ಹೇಳಿದನು. ನಾನು ಹೇಳುತ್ತಿರುವುದರಿಂದ ನೀನು ಚೇರರಾಜನ ಹತ್ತಿರಕ್ಕೆ ಹೋಗು, ಎಂದು ಶಿವನು ಭದ್ರನಿಗೆ ಹೇಳಿದನು. ಪ್ರಭುವಿನ ಅಪ್ಪಣೆಯನ್ನು ಮೀರುವುದರಿಂದ ಪಾಪವುಂಟಾಗುವುದೆಂದು ಭದ್ರನು ಆಲೋಚಿಸಿ, ಯಾರಿಗೂ ತಿಳಿಯದಂತೆ ಭದ್ರನು ಚೇರರಾಜನ ಹತ್ತಿರಕ್ಕೆ ಹೋದನು. ಕೆಲವು ದಿನಗಳು ಕಳೆದನಂತರ ಆಶ್ಚರ್ಯಕರವಾದ ಚೇರರಾಜನ ನಗರದ ಧರ್ಮಶಾಲೆಯಲ್ಲಿ ಲಲಾಟದಲ್ಲಿಯೂ, ಶರೀರದ ಎಲ್ಲಾ ಕಡೆಯಲ್ಲಿಯೂ ಭಸ್ಮವನ್ನು ಧರಿಸಿರುವನೊಬ್ಬನನ್ನು ಜನರು ನೋಡಿದರು. ಸುಂದರೇಶ್ವರನು ಚೇರರಾಜನ ಸ್ವಪ್ನದಲ್ಲಿ ಪ್ರತ್ಯಕ್ಷನಾಗಿ, " ನನ್ನ ಭಕ್ತನೊಬ್ಬನು ನಿನ್ನ ಪಟ್ಟಣಕ್ಕೆ ಬಂದಿರುವನು. ಅವನನ್ನು ನೀನು ಸಂತೋಷಪಡಿಸು " ಎಂದು ಹೇಳಿದನು.

ಸ ಚ ಶೀಘ್ರಂ ಸಮುತ್ಥಾಯ ಸಚಿವಾನಾಹ್ವಯತ್ ।
ಸ್ವಪ್ನೇ ಶ್ರುತಂ ವಚಃ ಪ್ರೋಚ್ಯ ಸಮಾಲೋಕ್ಯ ಜವಾದಮೂನ್ ॥ ೨೬ ॥

ತಥೇತಿ ತೇ ಜವಾದ್ಗತ್ವಾನ್ವೇಷಯಂತಃ ಪ್ರಪಾಂತಿಕೇ ।

ಆಗಂತು ಶ್ಶಿವಭಕ್ತಃ ಕಃ ಪುರೇ ಕಶ್ಚಿತ್ಸಮಾಗತಃ ।
ಇತಿ ಪೃಷ್ಟ್ವಾ ಜನಾನ್ ಪ್ರಾಹ ದೃಷ್ಟಶ್ಚೇನ್ನಯತಾಂತಿಕಂ ॥ ೨೭ ॥

ನಿಕೃಷ್ಟವೇಷಂ ತೇ ದೃಷ್ಟ್ವಾ ಗತ್ವಾ ರಾಜ್ಞೇ ನ್ಯವೇದಯನ್ ॥ ೨೮ ॥

ತತಶ್ಚೇರೋ ಜವಾ ದ್ಗತ್ವಾ ಪದ್ಭ್ಯಾಮೇವ ತಮೀಕ್ಷತೇ ।
ಅಕ್ಷಿಣೀ ಮೀಲಯನ್ ಶಂಭುಂ ಗಾಯನ್ ಪುಳಕಸಂಯುತಃ ॥ ೨೯ ॥

ಪುರಸ್ಥಮಪಿ ಭೂಪಾಲಂ ನಾಪಶ್ಯದ್ಧರ್ಷಬಾಷ್ಪಯುಕ್ ।
ವ್ಯಾಧಿತೋಽಪಿ ದರಿದ್ರೋಽಪಿ ಕ್ಷುಧಿತೋಽಪಿ ಯ ಈಶ್ವರಂ ॥ ೩೦ ॥

---

೨೬–೩೦. ಚೇರರಾಜನು ಅದನ್ನು ಕೇಳಿ, ಬೇಗನೆ ಎದ್ದು, ಮಂತ್ರಿಗಳನ್ನು ಕರಸಿದನು. ಅವರಿಗೆ ಸ್ವಪ್ನದಲ್ಲಿ ಶಿವನು ಹೇಳಿದ ಮಾತನ್ನು ತಿಳಿಸಿ, “ ನೀವು ಈ ನಗರದಲ್ಲಿ ಬಂದಿರುವ ಶಿವಭಕ್ತನೊಬ್ಬನನ್ನು ವಿಚಾರಿಸಿ, ಶೀಘ್ರವಾಗಿ ಕರದುಕೊಂಡು ಬನ್ನಿರಿ ” ಎಂದು ಅಪ್ಪಣೆ ಮಾಡಿದನು. ಅವರು “ ಹಾಗೇ ಆಗಲಿ ” ಎಂದು ಧರ್ಮಶಾಲೆಯ ಹತ್ತಿರಕ್ಕೆ ಹೋಗಿ ಹುಡುಕುತ್ತಿದ್ದರು. ನೀಚನ ವೇಷದಲ್ಲಿರುವ ಒಬ್ಬನನ್ನು ನೋಡಿದರು. ಕೂಡಲೆ ರಾಜನಿಗೆ ತಿಳಿಸಿದರು. ಆಗ ರಾಜನು ತಾನೇ ಕಾಲುನಡಗೆಯಿಂದ ಹೋಗಿ ಅವನನ್ನು ನೋಡಿದನು. ಆಗ ಸಂಗೀತಗಾರನಾದ ಭದ್ರನು ಕಣ್ಣು ಮುಚ್ಚಿಕೊಂಡು ರೋಮಾಂಚಿತ ಶರೀರನಾಗಿ ಶಿವನಲ್ಲಿ ಭಕ್ತಿಯಿಂದ ಗಾನಮಾಡುತ್ತಿದ್ದನು. ಅವನು ಆನಂದ ಬಾಷ್ಪವುಳ್ಳವನಾಗಿ ತನ್ನ ಮುಂದೆ ನಿಂತಿರುವ ರಾಜನನ್ನೂ ನೋಡಲಿಲ್ಲ.

ಭಕ್ತ್ಯಾ ಭಾವಿತಚಿತ್ತಸ್ಸ ವರ್ತತೇ ಭಾಗ್ಯವಾನ್ಧ್ರುವಂ ।
ಇತಿ ಪ್ರಶಸ್ಯ ಮನಸಾ ಪೃಚ್ಛತಿ ಸ್ಮ ತಮೀಶ್ವರಂ ॥ ೩೧ ॥

ಭಸ್ಮೋದ್ಧೂಳಿತಸರ್ವಾಂಗ ಶಂಕರಪ್ರಿಯ ಶಂಸ ಮೇ ।
ಕುತೋ ಭವಾನ್ಸಮಾಯಾತ ಇತ್ಯುಕ್ತೆ ಸೋಽಬ್ರವೀನ್ನೃಪಂ ॥ ೩೨ ॥

ಮಧುರಾಯಾಸ್ಸಮಾಯಾತ ಸ್ತ್ವಾಂ ದ್ರಷ್ಟುಂ ಶಂಕರಪ್ರಿಯಂ ।
ಪಶ್ಯಾತ್ರಪತ್ರಿಕಾಂ ರಾಜನ್ನಿತಿ ತಾಂ ಪ್ರದದೌ ಚ ಸಃ ॥ ೩೩ ॥

ನಮಸ್ಕೃತ್ಯ ಸಮಾದಾಯ ತಾಮುವಾಚ ಯತಾತ್ಮವಾನ್ ।
'ನಾನಾಶ್ಚರ್ಯಯುತಾಯಾಂ ಮಧುರಾಯಾಂ ಭದ್ರ ಇತಿ ನಾಮ್ನಾ ॥ ೩೪ ॥

ಮಯಿ ಭಕ್ತೋ ದತ್ವಾಸ್ಮೈ ಪ್ರೇಷಯ ವಸು ಭೂರಿ ಶೀಘ್ರತರಂ ।'
ಗೌರವಾತಿಶಯಂ ಸ್ವಸ್ಮಿನ್ಸುಂದರೇಶಸ್ಯ ಚಿಂತಯನ್ ॥ ೩೫ ॥

---

೩೧-೩೭. ದರಿದ್ರನಾಗಲಿ, ರೋಗಿಯಾಗಲಿ, ಹೊಟ್ಟೆಗಿಲ್ಲದೆ ಸಂಕಟಪಡು ತ್ತಿರುವವನಾಗಲಿ, ಭಕ್ತಿಯಿಂದ ಶಿವನನ್ನು ಧ್ಯಾನಮಾಡುವವನಿಗೆ, ಶಿವನ ಅನುಗ್ರಹದಿಂದ ಐಶ್ವರ್ಯವು ಸತ್ಯವಾಗಿಯೂ ಉಂಟಾಗುವುದು. ಆಗ ರಾಜನು " ಭಸ್ಮದಿಂದ ಆಲೇಪಿತವಾದ ಶರೀರವುಳ್ಳ ಶಿವಭಕ್ತನೆ, ನೀನು ಯಾರು ? ಎಲ್ಲಿಂದ ಬಂದಿದ್ದೀಯೆ ? " ಎಂದು ಭದ್ರನನ್ನು ಪ್ರಶ್ನೆಮಾಡಿದನು ಆಗ ಅವನು "ನಾನು ಶಿವನ ಭಕ್ತನಾದ ನಿನ್ನನ್ನು ನೋಡುವುದಕ್ಕೆ ಬಂದಿರುತ್ತೇನೆ." ಎಂದು ಹೇಳಿ, ಶಿವನು ತನಗೆ ಕೊಟ್ಟಿದ್ದ ಕಾಗದವನ್ನು ರಾಜನಿಗೆ ಕೊಟ್ಟನು. ಚೇರರಾಜನು ಅದನ್ನು ತೆಗೆದುಕೊಂಡು ನಮಸ್ಕಾರಮಾಡಿ, ಓದಿದನು. ಅದರಲ್ಲಿ ಅನೇಕ ವಿಧವಾದ ಆಶ್ಚರ್ಯಗಳಿಗೆ ಆಸ್ಪದವಾದ ಮಧುರಾನಗರದಿಂದ ಭದ್ರನೆಂಬುವನು ನಿನ್ನ ಸಮೀಪಕ್ಕೆ ಬರುವನು. ಅವನು ನನ್ನ ಭಕ್ತನು. ಅವನಿಗೆ ಬಹಳ ದ್ರವ್ಯವನ್ನು ಕೊಟ್ಟು ಬೇಗನೆ ಕಳುಹಿಸು ಎಂದು ಬರದಿತ್ತು. ಆಗ ಚೇರರಾಜನು ಶಿವನು

ಸ ಚೇರ ಸ್ತಂ ಗಜಸ್ಕಂಧಮಾರೋಪ್ಯ ಪ್ರಾಪಯನ್ಪುರೀಂ ।
ತೈಲೇನಾಭ್ಯಕ್ತಗಾತ್ರಂ ತಂ ಕೃತ್ವಾ ಸ್ನಾಪ್ಯ ಶುಭೈ ರ್ಜಲೈಃ ॥ ೩೬ ॥

ಶಿವರೂಪಂ ಸ್ಮರನ್ಭದ್ರಂ ಷಡ್ರಸಂ ಸಮಭೋಜಯತ್ ।
ವಾಸಾಂಸ್ಯದಾ ನ್ಮಹಾರ್ಹಾಣಿ ಚಂದನಾದಿ ಸುವಸ್ತು ಚ ॥ ೩೭ ॥

ಯಾವದಾಯುಶ್ಚ ಪರ್ಯಾಪ್ತಂ ತಾವಚ್ಚ ವ್ಯತರದ್ಧನಂ ।
ಅದ್ಯೈವಾಹಂ ಕೃತಾರ್ಥೋಽಸ್ಮಿ ಯುಷ್ಮದಾಗಮನಾ ನ್ನೃಪಃ ॥ ೩೮ ॥

ಇತ್ಯಾಹ ಭದ್ರಃ ಪ್ರಾಹೈನಂ ಭಾಣೋಽಹಂ ಹಿ ಮಹೀಪತೇ ।
ಮಹಾನುಭಾವ ಏವ ತ್ವಮವದತ್ಸ ಪುನಃ ಪುನಃ ॥ ೩೯ ॥

ಬ್ರಹ್ಮಾದಿಸ್ತಂಬಪರ್ಯಂತಂ ಜೀವಾಖ್ಯ ಸ್ತಿಷ್ಠತೀಶ್ವರಃ ।
ನ ಜಾತಿಭೇದಸ್ತತ್ರಾಸ್ತಿ ಕಿಮರ್ಥಂ ತೂಚ್ಯತೇ ತ್ವಯಾ ॥ ೪೦ ॥

---

ತನ್ನಲ್ಲಿ ಇರಿಸಿರುವ ಅನುಗ್ರಹವನ್ನೂ ಸುಂದರೇಶ್ವರನನ್ನೂ ಧ್ಯಾನಮಾಡುತ್ತಾ, ಭದ್ರನನ್ನು ಆನೆಯಮೇಲೆ ಕೂರಿಸಿ, ನಗರಕ್ಕೆ ಕರದುತಂದು, ಪರಿಶುದ್ಧವಾದ ನೀರಿನಿಂದ ಅವನಿಗೆ ಅಭ್ಯಂಜನವನ್ನುಮಾಡಿಸಿ, ಅವನೇ ಶಿವನೆಂದು ತಿಳಿದು, ಅವನಿಗೆ ಷಡ್ರಸೋಪೇತವಾದ ಅನ್ನವನ್ನು ಭೋಜನಮಾಡಿಸಿದನು.

೩೮-೪೨. ಅನಂತರದಲ್ಲಿ ಚೇರರಾಜನು "ಈಗ ನಾನು ಕೃತಾರ್ಥನಾಗಿರುವೆನು." ಎಂದು ಹೇಳಿ ಅವನು ಬದುಕಿರುವವರಿಗೂ ಅನುಭವಿಸಬೇಕಾಗುವಷ್ಟು ದ್ರವ್ಯವನ್ನು ಕೊಟ್ಟನು. ಆಗ ಭದ್ರನು ಎಲೈ ರಾಜನೆ, "ನಾನು ನೀಚಜಾತಿಯ ಸಂಗೀತಗಾರನು. ನೀನು ಬಹಳ ಮಹಿಮೆಯುಳ್ಳವನಾಗಿರುತ್ತೀಯೆ" ಎಂದನು. "ಬ್ರಹ್ಮನೇ ಮೊದಲಾಗಿ ಹುಲ್ಲುಕಡ್ಡಿಯವರಿಗೂ ಪರಬ್ರಹ್ಮನು ಜೀವರೂಪದಿಂದ ಇರುವನು. ಜಾತಿಭೇದವನ್ನು ಎಣಿಸಬಾರದು. ಪರಬ್ರಹ್ಮಸ್ವರೂಪದಲ್ಲಿ ಜಾತಿ ಭೇದವು ಇರುವುದಿಲ್ಲವಾದ್ದರಿಂದ ನೀನು ಹೀಗೆ ಹೇಳಬೇಡ" ಎಂದು ಮೊದಲಾಗಿ

ಏವ ಮಾದಿವಚಃ ಪ್ರೋಚ್ಯ ವಿಲಂಬನಭಯಾ ನ್ನೃಪಃ ।
ಶಕ್ನೋಮಿ ತ್ವಾಂ ನ ನಿರ್ಬದ್ಧುಂ ಗಾಯಕೇಶಾಜ್ಞಯಾ ವ್ರಜ　॥ ೪೧ ॥

ಇತ್ಯುಕ್ತ್ವಾ ರಕ್ಷಿಭಿ ಸ್ಸಾರ್ಧಂ ಧನಭಾರವಹೈ ರಪಿ ।
ಪ್ರೇಷಯಾಮಾಸ ಭದ್ರಂ ತಂ ಚೇರರಾಟ್ಸ ಮುದಾನ್ವಿತಃ　॥ ೪೨ ॥

ಭದ್ರಶ್ಚ ಸುಖ ಮಾಗತ್ಯ ನೀರೋಗ ಸ್ಸೌಮ್ಯವೇಷಧೃಕ್ ।
ಪ್ರಸ್ತುತ್ಯಾಭೀಷ್ಟದಂ ಶಂಭುಂ ಗಾನೈ ಸ್ತದಪದಾನಕೈಃ　॥ ೪೩ ॥

ಸರ್ವೈಃ ಪ್ರಶಸ್ಯಮಾನ ಸ್ಸನ್ಸ್ವವರ್ಗೈ ರಿತರೈರಪಿ ।
ಅರ್ಥತ್ಯಾಗವಿನೋದೇನ ಹೃಷ್ಟಃ ಪ್ರಾಪ ಸ್ವಮಂದಿರಂ　॥ ೪೪ ॥

ಉಪಾಸ್ಯ ಪೂರ್ವವಚ್ಛಂಭುಂ ದತ್ವಾ ವಸು ಚ ಪೂರ್ವವತ್ ।
ಮೋದಮಾನ ಶ್ಚಿರಂ ಕಾಲಂ ಮಧುರಾಯಾಮುಸೌ ಸ್ಥಿತಃ　॥ ೪೫ ॥

---

ಮಾತುಗಳನ್ನು ರಾಜನು ಭದ್ರನಿಗೆ ಹೇಳಿದನು. ಅನಂತರದಲ್ಲಿ ಅವನನ್ನು ಕಳುಹಿಸುವುದರಲ್ಲಿ ಸಾವಕಾಶವಾದೀತೆಂದು ಹೆದರಿದ ಚೇರರಾಜನು "ನೀನು ಸಂಗೀತಗಾರರಿಗೆ ಪ್ರಭುವಾದ ಶಿವನ ಅಪ್ಪಣೆಯಂತೆ ಬೇಗ ಇಲ್ಲಿಂದ ಹೊರಡು." ಎಂದು ಹೇಳಿ ಸಂತೋಷದಿಂದ ಅವನ ಸಂಗಡ ಧನವನ್ನೂ, ಅದನ್ನು ರಕ್ಷಿಸುವುದಕ್ಕೆ ಜನಗಳನ್ನೂ ಕಳುಹಿಸಿಕೊಟ್ಟನು.

೪೩-೪೬. ಭದ್ರನು ಯಾವ ತೊಂದರೆಯೂ ಇಲ್ಲದಂತೆ ಊರಿಗೆ ಬಂದು, ಚೆನ್ನಾಗಿ ಅಲಂಕಾರಮಾಡಿಕೊಂಡು, ಆರೋಗ್ಯವುಳ್ಳವನಾಗಿ, ಶಿವನ ಯಶಸ್ಕರವಾದ ಕಾರ್ಯಗಳನ್ನು ಶ್ಲಾಘಿಸುತ್ತಾ, ಶಿವನನ್ನು ಸ್ತುತಿಮಾಡುತ್ತಿದ್ದನು. ಎಲ್ಲರೂ ಭದ್ರನನ್ನು ಶ್ಲಾಘಿಸುತ್ತಿದ್ದರು. ಅವನು ಯಾಚಕನಾದ ತನಗೆ ದಾನಮಾಡಿರುವ ದ್ರವ್ಯವನ್ನು ಇತರರಿಗೆ ತಾನೂ ದಾನಮಾಡುತ್ತಾ, ತನ್ನ ಮನೆಗೆ ಬಂದನು. ಶಿವನನ್ನು ಪೂಜಿಸುತ್ತಾ ಮೊದಲಿನಂತೆಯೇ ಎಲ್ಲರಿಗೂ ದಾನಮಾಡುತ್ತಾ ಮಧುರಾ

ದ್ವಿಚತ್ವಾರಿಂಶಿಕಾ ಲೀಲಾ ಸುಂದರೇಶಸ್ಯ ವರ್ಣಿತಾ ।
ಸಕೃಚ್ಛ್ರವಣತಃ ಪುಂಸಾಂ ಸರ್ವಸಂಪತ್ಪ್ರದಾಯಿನೀ　　　॥ ೪೩ ॥

ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಚೇರಾಯಪತ್ರಿಕಾಲೇಖನಂ ನಾಮ
ಅಷ್ಟಚತ್ವಾರಿಂಶೋಽಧ್ಯಾಯ

---

ನಗರದಲ್ಲಿ ಸುಖವಾಗಿದ್ದನು. ಒಂದುಸಾರಿ ಕೇಳಿದ ಮಾತ್ರದಿಂದಲೇ ಎಲ್ಲಾ ವಿಧವಾದ ಐಶ್ವರ್ಯವನ್ನೂ ಕೊಡುವ ನಲವತ್ತೆರಡನೆಯ ಈ ಲೀಲೆಯನ್ನು ನಾನು ವರ್ಣಿಸಿ ಹೇಳಿರುವೆನು.

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ
ಚೇರರಾಜಪತ್ರಿಕಾಲೇಖನವೆಂದು ಹೆಸರುಳ್ಳ ನಲವತ್ತೆಂಟನೆಯ
ಅಧ್ಯಾಯವು ಮುಗಿದುದು



॥ ಶ್ರೀ ॥

॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಏಕೋನಪಂಚಾಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಭದ್ರಾಯ ಫಲಕಾದಾನಂ ಚಿತ್ರಯಾ ಚ ಯಯ್ಯಾಕರೋತ್।
ಶಂಕರ ಸ್ತಸ್ಯ ತಾಂ ಲೀಲಾಂ ವಕ್ಷ್ಯಾಮಿ ಮುನಿಪುಂಗವಾಃ ॥ ೧ ॥

ಭದ್ರಸ್ಯ ವೈಭವಂ ದೃಷ್ಟ್ವಾ ಘಾಣಾಃ ಸರ್ವೇ ಸಮತ್ಸರಾಃ ।
ಕದಾಸ್ಯೈಶ್ವರ್ಯಭಂಗ ಸ್ಸ್ಯಾದಿತಿ ಪ್ರಾಹುಃ ಸಮಂತತಃ ॥ ೨ ॥

---

### ನಲವತ್ತೊಂಬತ್ತನೆಯ ಅಧ್ಯಾಯವು

೧-೨. ಅಗಸ್ತ್ಯರುಷಿಯು ಹೇಳಿದನು:—ಶಿವನು ಭದ್ರನಿಗೆ (ರತ್ನಖಚಿತವಾದ) ಪೀಠವನ್ನು ಉಚಿತವಾಗಿ ಕೊಟ್ಟ ಲೀಲೆಯನ್ನು ನಾನು ವಿಸ್ತರಿಸಿ ಹೇಳುವೆನು! ಅದನ್ನು ಕೇಳಿರಿ. ಭದ್ರನ ಐಶ್ವರ್ಯವನ್ನು ನೋಡಿ, ಇತರ ಸಂಗೀತಗಾರರು ಎಲ್ಲರೂ ಇವನಲ್ಲಿ ಅಸೂಯೆಯಿಂದ ಇವನ ಐಶ್ವರ್ಯಕ್ಕೆ ಚ್ಯುತಿಯು ಯಾವಾಗ ಆಗುವುದು, ಎಂದು ಎಲ್ಲಾ ಕಡೆಯಲ್ಲಿಯೂ ಹೇಳುತ್ತಿದ್ದರು. ಅವರ ಅಭಿಪ್ರಾಯವನ್ನು ಭದ್ರನು ತಿಳಿದುಕೊಂಡು ಸರಿಯಾದ ಮಾರ್ಗದಲ್ಲಿರುವ (ಶಿಷ್ಟರ) ಬಹಳ ನಿಯಮವಂತರ ವ್ರತವನ್ನು ಆಚರಿಸುವುದಕ್ಕೆ ಪ್ರಾರಂಭಿಸಿದನು. ಭದ್ರನು ಶಿವನನ್ನು ಮೊದಲಿಗಿಂತಲೂ ಹೆಚ್ಚಾಗಿ ಸೇವಿಸಲುಪಕ್ರಮಿಸಿದನು.

ಜ್ಞಾತ್ವಾ ತದಾಶಯಂ ಭದ್ರೋ೽ತಿಶಿಷ್ಟ ವ್ರತಂ ದಧೌ ।
ಪ್ರಾತಃಕಾಲೇ ಚ ಮಧ್ಯಾಹ್ನೇ ಸಾಯಾಹ್ನೇ ಸುಂದರೇಶ್ವರಂ ॥ ೩ ॥

ಸೇವಾಮಹೇ ವಯಂ ಪೂರ್ವ ಮರ್ಧಯಾಮೇ೽ಪ್ಯಭೀಷ್ಟದೇ ।
ಭೋಗಸ್ವರ್ಗಾಪವರ್ಗಾಂಶ್ಚ ದಾತುಂ ಶಕ್ತೇ೽ತಿ ಪುಣ್ಯದೇ ॥ ೪ ॥

ಆಧಿವ್ಯಾಧಿಹರೇ ಸರ್ವದುರಿತಧ್ವಂಸದೀಕ್ಷಿತೇ ।
ಅದ್ಯಾರಭ್ಯ ಚ ತತ್ಕಾಲೇ ಕರಿಷ್ಯೇ ಶಂಭುದರ್ಶನಂ ॥ ೫ ॥

ಸಂಕಲ್ಪ್ಯ ಸೇವಾಂ ತತ್ಕಾಲೇ ಕುರ್ವನ್ಪೂರ್ಣಮನೋರಥಃ।
ಶ್ಲಾಘ್ಯಮಾನೋ ಜನೈರ್ಭಕ್ತೈರರ್ಥಿಭಿ ಶ್ಚಾವಸತ್ಸುಖಂ ॥ ೬ ॥

ಭೋಗಾಂಗಪೂಜಾವಸರೇ ಶಂಕರಂ ಸುಂದರೇಶ್ವರಂ ।
ಸಕೃತ್ಸಂಸೇವ್ಯ ಸರ್ವಾಘೈ ರ್ಮುಕ್ತ ಸ್ಸೌಖ್ಯಂ ಲಭೇನ್ನರಃ ॥ ೭ ॥

---

೩–೬. ಆಗ ಭದ್ರನಿಗೆ ನಾನು ಭೋಗ, ಸ್ವರ್ಗ, ಮುಕ್ತಿಗಳನ್ನು ಕೊಡುವ ಆಧಿ, ವ್ಯಾಧಿಗಳನ್ನು ಪರಿಹರಿಸುವ, ಪಾಪಗಳನ್ನು ಪರಿಹಾರಮಾಡುವುದರಲ್ಲಿ ಸಮರ್ಥನಾದ ಶಿವನನ್ನು ಪ್ರಾತಃಕಾಲ, ಮಧ್ಯಾಹ್ನಕಾಲ, ಸಾಯಂಕಾಲ ಎಂಬ ಮೂರು ಕಾಲಗಳಲ್ಲಿಯೂ ಮತ್ತು ಅರ್ಧಯಾಮದಲ್ಲಿಯೂ ಸೇವಿಸುವೆನು" ಎಂದು ಮನಸ್ಸಿನಲ್ಲಿ ನಿಶ್ಚಯವುಂಟಾಯಿತು. ಅದರಂತೆ ಅವನು ಶಿವನ ಸೇವೆಯನ್ನು ಮಾಡುತ್ತಾ, ಸಂತೋಷದಿಂದ ಇದ್ದನು. ಜನಗಳು ಹೀಗೆ ಇರುವ ಇವನನ್ನು ಹೊಗಳುತ್ತಿದ್ದರು. ಇವನೂ ಸುಖದಿಂದ ಇದ್ದನು.

೭–೧೨. ಸುಂದರೇಶ್ವರನ ಭೋಗಾಂಗಪೂಜಾಸಮಯದಲ್ಲಿ ಒಂದು ಸಾರಿ ಸೇವಿಸಿದರೂ ಅಷ್ಟುಮಾತ್ರದಿಂದಲೇ ಪಾಪನಾಶವು ಉಂಟಾಗಿ ಮನುಷ್ಯನು ಸುಖವನ್ನು ಹೊಂದುವನು. ಆದ್ದರಿಂದ ಭದ್ರನು ಆ ವೇಳೆಯಲ್ಲಿ ಶಿವನನ್ನು ಗಾನಮಾಡಿ,

ತಸ್ಮಿನ್ನವಸರೇ ಭದ್ರೋ ಗಾನೇನಾ ಪೂಜಯಚ್ಛಿವಂ ।
ತತ್ಪುಣ್ಯಸ್ಯಾನುಭಾವೇನ ತಸ್ಯ ಸಿಧ್ಯಂತಿ ಸಿದ್ಧಯಃ ॥ ೮ ॥

ಲೀಲಾರಸಪ್ರಿಯೋ ದೇವೋ ಹಾಲಾಸ್ಯೇಶಃ ಕದಾಚನ ।
ಐಶ್ವರ್ಯಾರ್ಥ ಮಮುಂ ಭದ್ರಂ ಶೋಧಿತುಂ ವಿದಧೇ ಕ್ರಿಯಾಂ ॥ ೯ ॥

ಆಕಾಶ ಮಾವೃತಂ ಕೃತ್ವಾ ನಿಶೀಥಿನ್ಯಾಂ ಪಯೋಮುಚೈಃ ।
ಪ್ರಾವರ್ತಯ ದ್ವರ್ಷಧಾರಾಂ ಭೋಗಿಭೋಗನಿಭಾಂ ಭೃಶಂ ॥ ೧೦ ॥

ಚಚಾಲಗೇಹಾನ್ನೋ ಕಶ್ಚಿತ್ತಿರ್ಯಂಚೋಽಪಿ ನ ನಿರ್ಗತಾಃ ।
ಭದ್ರಸ್ತು ವರ್ಷಧಾರಾಸ್ತಾಃ ಪುಷ್ಪವೃಷ್ಟೀರಿವ ಸ್ಮರನ್ ॥ ೧೧ ॥

ಭೋಗಾಂಗಪೂಜಾವಸರೇ ಸಾಂಬಿಕಂ ಸುಂದರೇಶ್ವರಂ ।
ಭಕ್ತೋ ಭದ್ರಃ ಸಮಭ್ಯೇತ್ಯ ಸಮಗಾಯನ್ಮಹಾದ್ಭುತಂ ॥ ೧೨ ॥

---

ಸಂತೋಷಪಡಿಸಿದನು. ಆ ಪುಣ್ಯದಿಂದ ಅವನಿಗೆ ಅಷ್ಟಸಿದ್ಧಿಗಳುಂಟಾದವು. ಸಂತೋಷದಿಂದ ಲೀಲೆಯನ್ನು ಮಾಡುವುದರಲ್ಲಿ ಇಷ್ಟವುಳ್ಳ ಹಾಲಾಸ್ಯೇಶ್ವರನು ಭದ್ರನಿಗೆ ಐಶ್ವರ್ಯವನ್ನು ಕೊಡುವುದಕ್ಕಾಗಿ ಒಂದು ಕೆಲಸವನ್ನು ಮಾಡಿದನು. ಆಗ ಅಂತರಿಕ್ಷದಿಂದ ಅರ್ಧರಾತ್ರಿಯಲ್ಲಿಯೂ ಕೂಡ ಮೋಡಗಳು ಮುಚ್ಚಿಕೊಂಡು ಅವುಗಳಿಂದ ಮಳೆಯು ಒಂದೇ ಸಮನಾಗಿ ಬೀಳುತ್ತಿತ್ತು. ಹಾವಿನ ಶರೀರದಷ್ಟು ಗಾತ್ರವಾಗಿ ಬೀಳುತ್ತಿರುವ ಮಳೆಯ ಹನಿಗಳನ್ನು ನೋಡಿ, ಜನರು ಯಾರೂ ಬೀದಿಯಲ್ಲಿ ತಿರುಗಾಡುತ್ತಿರಲಿಲ್ಲ. ಪಶುಗಳೂ ಕೂಡ ತಿರುಗಾಡದೆ ಇರುವ ಆ ಕಾಲದಲ್ಲಿ ಭದ್ರನು ಮಳೆಯ ಹನಿಗಳನ್ನು ಎಣಿಸದೆ, ಹೂವಿನ ಮಳೆಯಂತೆ ಅದನ್ನು ತಿಳಿದುಕೊಂಡು, ಭೋಗಾಂಗಪೂಜಾಸಮಯಕ್ಕೆ ಸರಿಯಾಗಿ ಸುಂದರೇಶ್ವರನ ಸಮೀಪಕ್ಕೆ ಬಂದು ಆಶ್ಚರ್ಯಕರವಾಗಿರುವಂತೆ ಗಾನಮಾಡಿದನು.

ವರ್ಷಂ ತ್ವತಿಭೃಶಂ ಮೇಘಾ ಇತಿ ಶಾಸ್ತಾ ಮಹೇಶ್ವರಃ ।
ಅಚೋದಯದ್ಭೃಶಂ ಮೇಘಾ ಸ್ಸರ್ವಾಧ್ಯಕ್ಷಃ ಸದಾಶಿವಃ ॥ ೧೩ ॥

ಘುಂ ಘುಂ ಘುಮಿತಿ ಗರ್ಜಂತಃ ಪವಮಾನಯುತಾ ಭೃಶಂ ।
ಧಾರಾ ಶ್ಶಿಲಾಮುಚೋ ಮುಂಚ ನ್ನುಜ್ವಲಾಂಶ್ಚ ನಿಶಾಂತರೇ ॥ ೧೪ ॥

ಭದ್ರೋಽಪಿ ವೃಷದೇವಸ್ಯ ಪಶ್ಚಾದ್ಭಾಗೇ ದೃಢಂ ಸ್ಥಿತಃ ।
ಪೂರ್ವಸ್ಮಾದಧಿಕಂ ಗಾನಮಗಾಯಚ್ಛಿವಸಕ್ತಧೀಃ ॥ ೧೫ ॥

ತಂತ್ರ್ಯಸಕ್ತನಖಾ ಆರ್ದ್ರಾ ಅಂಗುಲ್ಯಶ್ಚ ಚಕಂಪಿರೇ ।
ಅಪಾರಮನ್ಮಹಾಪಂಕಃ ಸಂಜಾತ ಸ್ತತ್ರ ದೇಶಕೇ ॥ ೧೬ ॥

ಭದ್ರೋಽಪಿ ವರ್ಷಧಾರಾರ್ತ ಅಸಿಕ್ತ್ವಾ ತತ್ರ ಪಂಕಿಲೇ ।
ಗಾತು ಮುದ್ಯೋಗ ಮಕರೋ ತ್ಪಂಕಾಕ್ರಾಂತೋಽಭವತ್ತದಾ ॥ ೧೭ ॥

ಸಮುತ್ಪನ್ನೇತಿ ವೈಕಲೇ ತಂತ್ರ್ಯಾದೀನಾಮಯಂ ದೃಢಃ ।
ಜಗೌ ಭದ್ರಸ್ತು ಮಧುರಂ ಭಕ್ತಿಭಾವಸಮನ್ವಿತಃ । ॥ ೧೮ ॥

---

೧೩-೧೮. ಎಲ್ಲಕ್ಕೂ ಅಧಿಪತಿಯಾದ ಶಿವನು "ಮಳೆಯು ಹೆಚ್ಚಾಗಿ ಹುಯ್ಯಲಿ" ಎಂದು ಮೇಘಗಳಿಗೆ ಆಜ್ಞೆಮಾಡಿದನು. ಆದ್ದರಿಂದ ಆ ರಾತ್ರಿಯಲ್ಲಿ ಮೇಘಗಳು ಬಹಳವಾಗಿ ಮಳೆಯನ್ನು ಹುಯ್ಯುತ್ತಿದ್ದವು. ಗಾಳಿಯು ಬಹಳವಾಗಿ ಬೀಸುತ್ತಿತ್ತು. ಕಲ್ಲಿನಂತೆ ದಪ್ಪನಾಗಿ ಧಾರಾಕಾರವಾಗಿ ಮಳೆಯು ಹುಯ್ಯುತ್ತಿದ್ದರೂ, ಭದ್ರನು ವೃಷಭದ ಹಿಂಭಾಗದಲ್ಲಿ ಸ್ಥಿರವಾಗಿ ನಿಂತುಕೊಂಡು, ಶಿವನನ್ನು ಧೃಢವಾದ ಮನಸ್ಸಿನಿಂದ ಮೊದಲಿಗಿಂತಲೂ ಹೆಚ್ಚಾಗಿ ಗಾನಮಾಡುತ್ತಿದ್ದನು. ಬೆರಳುಗಳು ನೀರಿನಿಂದ ನೆನೆದು ನಡುಗುತ್ತಿದ್ದವು. ವೀಣೆ ಅಥವಾ ತಂಬೂರಿಯ ತಂತಿಯಲ್ಲಿ ನೀರು ಬಂದು ಕೆಸರಾಯಿತು. ಹಾಗಿದ್ದರೂ ಅವನು ಸಂಗೀತವನ್ನು ಹಾಡುತ್ತಿದ್ದನು. ಆದರ ಮುಂದೆ ವಾದ್ಯಗಳನ್ನು ನುಡಿಸಲು ಆಗದಿರುವಕಾರಣ, ಭಕ್ತಿಯಿಂದ ಮಧುರವಾದ ಸ್ವರವುಳ್ಳವನಾಗಿ ಅವನು ಗಾನಮಾಡಿದನು.

ದೃಷ್ಟ್ವಾ ಗಾಯಂತ ಮಧಿಕಂ ಭದ್ರಂ ತಂ ಭಕ್ತವತ್ಸಲಃ ।
ಅನುಗ್ರಹಪರಃ ಶಂಭುಃ ಸುಂದರೇಶ್ವರ ಈಶ್ವರಃ ॥ ೧೯ ॥

ಪಂಕಾಸೀನಸ್ಯ ಭಕ್ತಸ್ಯ ಭದ್ರಸ್ಯಾಧಃ ಪ್ರದೇಶಕೇ ।
ಸ್ಥಾಪಯಾಮಾಸ ಫಲಕಾಂ ಹೇಮರತ್ನವಿಚಿತ್ರಿತಾಂ ॥ ೨೦ ॥

ಇಯಂ ಕುತಃ ಸಮಾಯಾತೇ ತ್ಯಯಂ ವಿಸ್ಮಿತಮಾನಸಃ ।
ರತ್ನಪ್ರಭಾರಂಜಿತಾಂ ತಾಂ ಫಲಕಾ ಮಧಿತಿಷ್ಠತಿ ॥ ೨೧ ॥

ಗಾನಂ ಭದ್ರೇ ಸಮಾಪ್ಯಾಥ ತಸ್ಮಿನ್ಗಂತುಂ ಸಮುದ್ಯತೇ ।
ವಿಮಲಂ ದ್ಯಾಗ್ವಿಯದಭೂನ್ನಕ್ಷತ್ರಾಣಿ ಚಕಾಶಿರೇ ॥ ೨೨ ॥

ಕೇನೇಯಂ ಫಲಕಾ ದತ್ತಾ ಮಹ್ಯಮಿತ್ಯಥ ಚಿಂತಯನ್ ।
ಭದ್ರಃ ಪರಮಧರ್ಮಾತ್ಮಾ ಫಲಕಾಂ ಪರಿಗೃಹ್ಯ ತಾಂ ॥ ೨೩ ॥

---

೧೯–೨೨. ಭದ್ರನು ಕೆಸರಿನಲ್ಲಿ ಕೂತುಕೊಂಡು ಬಹಳಮಟ್ಟಿಗೆ ಗಾನಮಾಡುತ್ತಿರುವದನ್ನು ನೋಡಿ, ಅವನಿಗೆ ಅನುಗ್ರಹವನ್ನು ಮಾಡಲು ಇಚ್ಛೆಯುಳ್ಳ ಸುಂದರೇಶ್ವರನು, ಭದ್ರನು ಕೂತುಕೊಂಡಿದ್ದ ಪ್ರದೇಶದಲ್ಲಿ ನವರತ್ನಖಚಿತವಾದ ಚಿನ್ನದ ಒಂದು (ಮಣೆಯು) ಹಲಗೆಯು ಇರುವಂತೆ ಮಾಡಿದನು. ಈ ಹಲಗೆಯು ಎಲ್ಲಿಂದ ಬಂದಿತು? ಎಂದು ಆಶ್ಚರ್ಯಪಡುತ್ತಾ ಭದ್ರನು ಅದರ ಮೇಲೆ ಕೂತುಕೊಂಡು, ಸಂಗೀತವನ್ನು ಮುಗಿಸಿ, ಮನೆಗೆ ಹೊರಡುವ ಹೊತ್ತಿಗೆ ಸರಿಯಾಗಿ ಮಳೆಯು ನಿಂತು, ಆಕಾಶವು ನಿರ್ಮಲವಾಗಿ ನಕ್ಷತ್ರಗಳು ಪ್ರಕಾಶಿಸುತ್ತಿದ್ದವು.

೨೩–೨೭. ಆಗ ಧರ್ಮಶೀಲನಾದ ಭದ್ರನು ಈ ಹಲಗೆಯನ್ನು (ಮಣೆಯನ್ನು) "ನನಗ ಯಾರು ಕೊಟ್ಟರು" ಎಂದು ಯೋಚಿಸುತ್ತಾ ಅದನ್ನು ತೆಗೆದುಕೊಂಡು ಮನೆಗೆ ಬಂದು, ತನ್ನ ಬಂಧುಗಳಿಗೆ ಆ ವರ್ತಮಾನವನ್ನು ಹೇಳಿದನು.

ಗೇಹಂ ಗತ್ವಾಥ ಬಂಧುಭ್ಯ ಆಚಖ್ಯೌ ತಮುದಂತಕಂ ।
ತೇ ಸರ್ವೇ ಫಲಕಾಂ ವೀಕ್ಷ್ಯ ವಿಸ್ಮಯಾವಿಷ್ಟಚೇತಸಃ ॥ ೨೪ ॥

ಶ್ರೀಹಾಲಾಸ್ಯಪ್ರಭುಃ ಶಂಭು ರ್ಭಕ್ತಾಭೀಷ್ಟಪ್ರದೋಽನಿಶಂ ।
ಸ ಏವ ಫಲಕಾಂ ತುಭ್ಯಂ ದತ್ತವಾನ್ನಾನ್ಯ ಏವ ಹಿ ॥ ೨೫ ॥

ನಿರೂಪ್ಯ ಬಾಂಧವೈ ರೇವ ಮುಕ್ತೇ ಸತಿ ಸ ಗಾಯಕಃ ।
ಅತ್ಯಂತಪ್ರೀತಹೃದಯ ಸ್ತಥೈವೇತಿ ಸುನಿಶ್ಚಿತಃ ॥ ೨೬ ॥

ಜೀವನ್ಮುಕ್ತಿಪುರೇಶಾನಶ್ರೀಮಚ್ಚರಣಪಂಕಜೇ ।
ಮನೋನಿಶ್ಚಲಮಾಧಾಯ ಸುಖೇನಾಸ್ತೇ ಸ್ವವೇಶ್ಮನಿ ॥ ೨೭ ॥

ಭದ್ರವೃತ್ತಾಂತಮಾಕರ್ಣ್ಯ ಪ್ರಭಾತೇ ಪಾಂಡ್ಯಭೂಪತಿಃ ।
ತಮಾಹೂಯ ಚ ಸಂವೀಕ್ಷ್ಯ ಫಲಕಾಂ ದೇವನಿರ್ಮಿತಾಂ ॥ ೨೮ ॥

---

ಅವರೆಲ್ಲರೂ ಅದನ್ನು ನೋಡಿ, ಆಶ್ಚರ್ಯಪಡುತ್ತಾ, "ಭಕ್ತರ ಇಷ್ಟಗಳನ್ನು ಅನುಗ್ರಹಿಸುವ ಹಾಲಾಸ್ಯೇಶ್ವರನೇ ನಿನಗೆ ಇದನ್ನು ಕೊಟ್ಟಿರುವನು" ಎಂದು ಹೇಳಿದರು. ಭದ್ರನು ಅವರ ಮಾತನ್ನು ಕೇಳಿ, ಹಾಗೆಯೇ ಇರಬೇಕೆಂದು ನಿಶ್ಚಯಿಸಿ, ಬಹಳ ಸಂತೋಷದಿಂದ ಜೀವನ್ಮುಕ್ತಿಪುರೀಶ್ವರನಾದ ಸುಂದರೇಶ್ವರನ ಚರಣಗಳಲ್ಲಿ ಮನಸ್ಸನ್ನು ದೃಢವಾಗಿ ಇರಿಸಿ, ತನ್ನ ಮನೆಯಲ್ಲಿ ಸುಖವಾಗಿ ಇದ್ದನು.

೨೮–೩೩. ಬೆಳಗಾದಮೇಲೆ ಪಾಂಡ್ಯರಾಜನು ಭದ್ರನ ಸಮಾಚಾರವನ್ನು ಕೇಳಿ, ಭದ್ರನನ್ನು ಕರಸಿಕೊಂಡು, ದೇವನಿರ್ಮಿತವಾದ ಆ ಮಣೆಯನ್ನು ನೋಡಿ, ಅದರಮೇಲೆ ಅವನನ್ನು ಕೂರಿಸಿ, ಪ್ರತ್ಯಕ್ಷನಾದ ಶಿವನನ್ನು ಪೂಜಿಸುವಂತೆ ಅವನನ್ನು ಪೂಜಿಸಿ, ಧನಧಾನ್ಯ ಸಮೃದ್ಧವಾದ ಗ್ರಾಮಗಳನ್ನು ಅವನಿಗೆ ಉಚಿತವಾಗಿ ಕೊಟ್ಟನು. ಅನಂತರದಲ್ಲಿ ವರಗುಣ ಪಾಂಡ್ಯರಾಜನು "ಹಸುವು ಕರುವನ್ನು

ತತ್ರ ಸ್ನಾತ್ವಾ ಚ ಸಂಪೂಜ್ಯ ಶಂಭುಂ ಪ್ರತ್ಯಕ್ಷಿತಂ ಯಥಾ ।
ಪ್ರದಾಯ ತಸ್ಮೈ ಸದ್ಗ್ರಾಮಾನ್ ಸಂಪೂರ್ಣಾನ್ ಧನಧಾನ್ಯಕೈಃ ॥ ೨೯ ॥

ಪ್ರಾಹ ರಾಜಾ ವರಗುಣೋ ಭದ್ರಂ ಪ್ರತ್ಯೇವಮಾದರಾತ್ ।
ವತ್ಸಂ ದೃಷ್ಟ್ವಾ ಯಥಾ ಧೇನುಸ್ತಂ ಪ್ರತ್ಯೇವಾನುಧಾವತಿ ॥ ೩೦ ॥

ತಥಾ ತ್ವಾಮಪಿ ದೃಷ್ಟ್ವೇಶಃ ಸುಂದರೇಶೋಽನುಧಾವತಿ ।
ಸುಂದರೇಶಕೃಪಾಪಾತ್ರಂ ತ್ವತ್ತಃ ಪರತರೋ ನ ಹಿ ॥ ೩೧ ॥

ದಿವ್ಯಾ ಚ ಫಲಕಾ ಚೈವಂ ತ್ವಾಂ ವಿನಾ ಕೇನ ಲಭ್ಯತೇ ।
ಯೇ ಭಕ್ತಾಸ್ತೇ ಶಿವಾಃ ಪ್ರೋಕ್ತಾಃ ಸರ್ವವೇದಾಗಮೇಷು ಚ ॥ ೩೨ ॥

ಪಾಪಿನೋಽಪಿ ಹಿ ತಾನ್ಪೂಜ್ಯ ಮುಚ್ಯಂತೇ ಸರ್ವಕಿಲ್ಬಿಷೈಃ ।
ತಸ್ಮಾತ್ತ್ವತ್ಪೂಜನಂ ಲೋಕೇ ಶಿವಪೂಜಾಫಲೈಃ ಸಮಂ ॥ ೩೩ ॥

---

ನೋಡಿ, ಪ್ರೀತಿಯಿಂದ ಅದರ ಹತ್ತಿರಕ್ಕೆ ಬಂದು ಅದನ್ನು ಪೋಷಿಸುವಂತೆ, ನಿನ್ನನ್ನು ಹುಡುಕಿ, ಸುಂದರೇಶ್ವರನು ರಕ್ಷಿಸುತ್ತಿರುವನು. ಸುಂದರೇಶ್ವರನ ದಯೆಗೆ ಪಾತ್ರನಾದವನು, ನಿನ್ನಂತೆ ಇರುವವನು ಮತ್ತೊಬ್ಬನು ಇಲ್ಲವು. ಈ ಮಣೆಯು ನಿನಗೆ ಸಿಕ್ಕಿರುವುದೇ ಇದಕ್ಕೆ ನಿದರ್ಶನವಾಗಿರುವುದು. ಶಿವಭಕ್ತರೇ ಶಿವರೂಪದಿಂದ ಇರುವರು ಎಂದು ವೇದಗಳಲ್ಲಿಯೂ ಮತ್ತು ಆಗಮಗಳಲ್ಲಿಯೂ ಹೇಳಿರುವುದು. ಪಾಪಿಗಳು ಶಿವರೂಪದಿಂದ ಇರುವ ಶಿವಭಕ್ತರ ಪೂಜೆಯಿಂದಲೇ ಕೃತಕೃತ್ಯರಾಗುವರು. ಆದ್ದರಿಂದ ನಿನ್ನ ಪೂಜೆಯು ಶಿವಪೂಜೆಗೆ ಸಮನಾಗಿರುವುದು, ಎಂದು, ಹೇಳಿಭದ್ರನನ್ನು ಕಳುಹಿಸಿ ಕೊಟ್ಟನು.

ಇತ್ಯುಕ್ತ್ವಾ ಪ್ರೇಷಯಾಮಾಸ ಭದ್ರಂ ವರಗುಣಃ ಪ್ರಭುಃ ।
ಸೋऽಪ್ಯೇತಿ ಪ್ರೀತಹೃದಯಸ್ಸ್ತುತೋ ಮಾಗಧವಂದಿಭಿಃ ॥ ೩೪ ॥

ಅತಿಥೀನಾಮಲಂಕುರ್ವನ್ನಾಶಾ ಮಾಲಯಮಾಯಯೌ ।
ತದ್ಭಕ್ತ್ಯತಿಶಯಂ ಚಾಪಿ ಭಕ್ತವಾತ್ಸಲ್ಯಮೀಶಿತುಃ ॥ ೩೫ ॥

ಭವಭಕ್ತಜನಾಃ ಸರ್ವೇ ಪ್ರಶಶಂಸುಃ ಪ್ರಿಯಾನ್ವಿತಾಃ ।
ಅಜಸ್ರಂ ತ್ಯಾಗಶೀಲಸ್ಯ ಭದ್ರಸ್ಯ ಚ ಮಹಾತ್ಮನಃ ॥ ೩೬ ॥

ಚಂದ್ರೋದಯೇ ಚಾಬ್ಧಿರಿವ ವರ್ಧಂತೇ ತಸ್ಯ ಸಂಪದಃ ।
ಶ್ರದ್ದಧಾನಾಸ್ಸುಂದರೇಶಂ ಯೇ ಚ ಸ್ಯಾಂತೇ ದೃಢವ್ರತಾಃ ॥ ೩೭ ॥

ಆಯುರಾರೋಗ್ಯಸಂಪದ್ಭಿಃ ಸಂಪೂರ್ಣಾಸ್ಸ್ಯುರ್ನ ಸಂಶಯಃ ।
ತ್ರಿಚತ್ವಾರಿಂಶಿಕಾ ಲೀಲಾ ಶ್ರೀಹಾಸ್ಯಪ್ರಭೋರಿಯಂ ॥ ೩೮ ॥

ಶ್ರೋತವ್ಯಾ ಶಿವಭಕ್ತೈಶ್ಚ ಶಿವಾನುಗ್ರಹಹೇತವೇ ॥ ೩೯ ॥

---

೩೪-೩೬. ಚಂದ್ರನು ಉದಯಿಸಿದಾಗ ಸಮುದ್ರವು ವೃದ್ಧಿಯಾಗುವಂತೆ, ವೃದ್ಧಿಹೊಂದುತ್ತಿದ್ದವು. ಭದ್ರನನ್ನು ವಂದಿಮಾಗಧರು ಹೊಗಳುತ್ತಿದ್ದರು. ಇದರಿಂದ ಅವನ ಕೀರ್ತಿಯು ಎಲ್ಲಾ ಕಡೆಯಲ್ಲಿಯೂ ಹರಡಿತು. ಅವನು ಯಾಚಕರ ಇಷ್ಟಗಳನ್ನು ನೆರವೇರಿಸಿದ ನಂತರ ತನ್ನ ಮನೆಗೆ ಬಂದನು. ಶಿವಭಕ್ತರೆಲ್ಲರೂ ಅವನಿಗೆ ಶಿವನಲ್ಲಿರುವ ಭಕ್ತಿಯನ್ನು ಹೊಗಳುತ್ತಿದ್ದರು. ಮತ್ತು ಅವರು ಶಿವನಿಗೆ ತನ್ನ ಭಕ್ತನಲ್ಲಿರುವ ಪ್ರೀತಿಯನ್ನು ಶ್ಲಾಘಿಸುತ್ತಿದ್ದರು. ಭದ್ರನು ದಾನಶೀಲನಾಗಿ ಬಹಳ ಮಹಿಮೆಯುಳ್ಳವನಾಗಿದ್ದಕಾರಣ ಅವನ ಸಂಪತ್ತುಗಳು ಪೂರ್ಣಚಂದ್ರನು ಉದಯಿಸಿದಾಗ ಸಮುದ್ರವು ಹೆಚ್ಚುವಹಾಗೆ ಪ್ರತಿದಿನವೂ ಹೆಚ್ಚುತ್ತಿದ್ದವು.

೩೭-೩೯ ದೃಢವಾದ ವ್ರತವುಳ್ಳವರಾಗಿ, ಸುಂದರೇಶ್ವರನಲ್ಲಿ ನಂಬಿಕೆಯನ್ನು ಇರಿಸಿರುವವರು ಆಯುರಾರೋಗ್ಯೈಶ್ವರ್ಯಗಳನ್ನು ಪೂರ್ಣವಾಗಿ ಹೊಂದುವುದರಲ್ಲಿ ಸಂಶಯವಿಲ್ಲವು

ಹಾಲಾಸ್ಯಪ್ರಭುವಾದ ಸುಂದರೇಶ್ವರನು ಆಚರಿಸಿದ ನಲವತ್ತಮೂರನೆಯ ಈ ಲೀಲೆಯನ್ನು ಶಿವಭಕ್ತರಾದವರು ಶಿವನ ಅನುಗ್ರಹವನ್ನು ಪಡೆಯಲು ಅವಶ್ಯವಾಗಿ ಕೇಳಬೇಕು. ಇತರರೂ ಕೇಳಿ ಶಿವನ ಅನುಗ್ರಹವನ್ನು ಹೊಂದಬೇಕು.

**ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಭದ್ರಸ್ಯಫಲಕಾದಾನಂ ನಾಮ
ಏಕೋನಪಂಚಾಶೋಽಧ್ಯಾಯಃ**

---

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆಯಲ್ಲಿ
ಭದ್ರಫಲಕಾದಾನವೆಂದು ಹೆಸರುಳ್ಳ ನಲವತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥
॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಪಂಚಾಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ದ್ರಸ್ಯ ವನಿತಾಯಾಶ್ಚ ಯಯಾ ವಿಜಯದಃ ಶಿವಃ ।
ಾ ಲೀಲಾ ಸಕಲೈ ಸ್ಸದ್ಭಿಃ ಶ್ರೋತವ್ಯಾ ಶೋಭನಾರ್ಥಿಭಿಃ ॥ ೧ ॥

ಸ್ಮಿನ್ವರಗುಣೇ ಪಾಂಡ್ಯೇ ಪರಿಪಾಲ್ಯ ಚಿರಂ ಮಹೀಂ ।
ಂಪ್ರಾಪ್ತೇ ಶಂಭುಸಾರೂಪ್ಯಂ ದುರ್ಲಭಂ ಯೋಗಿನಾ ಮಪಿ ॥ ೨ ॥

ಾಜರಾಜಶ್ಚ ತತ್ಪುತ್ರೋ ರಾಜರಾಜನಿಭಃ ಶ್ರಿಯಾ ।
ಾಜಾ ಭವತಿ ರಾಜ್ಯಸ್ಯ ರಾಜಭಿಃ ಪರಿಮಂಡಿತಃ ॥ ೩ ॥

---

### ಐವತ್ತನೆಯ ಅಧ್ಯಾಯವು

೧-೫. ಅಗಸ್ತ್ಯರುಷಿಯು ಹೇಳಿದನು :— ಭದ್ರನ ಪತ್ನಿಗೆ ವಿವಾದದಲ್ಲಿ ಯವನ್ನು ಹಾಲಾಸ್ಯೇಶ್ವರನು ಅನುಗ್ರಹಿಸಿದ ಲೀಲೆಯನ್ನು, ಶ್ರೇಯಸ್ಸನ್ನೂ ಪೇಕ್ಷಿಸುವವರು ಕೇಳಬೇಕಾಗಿರುವುದು, ಅದನ್ನು ನಿಮಗೆ ಹೇಳುವೆನು ! ಕೇಳಿರಿ. ರಗುಣ ಪಾಂಡ್ಯರಾಜನು ಬಹಳ ಕಾಲದವರೆಗೆ ರಾಜ್ಯವನ್ನು ಪರಿಪಾಲನೆಮಾಡಿ, ಯೋಗಿಗಳೂ ಹೊಂದಲು ಅಸಾಧ್ಯವಾದ ಶಿವಸಾರೂಪ್ಯವನ್ನು ಹೊಂದಿದನಂತರ, ಶ್ವರ್ಯದಿಂದ ಕುಬೇರನಿಗೆ ಸಮನಾದ ರಾಜರಾಜನೆಂದು ಹೆಸರುಳ್ಳ ಅವನ ಮಗನು

ಭದ್ರಸ್ಯ ವನಿತಾ ಭದ್ರಾ ಭವಭಕ್ತಾ ಚ ಭದ್ರವತ್ ।
ಕಾಂತಿಗಾನವಿಲಾಸೈಶ್ಚ ತತ್ತುಲ್ಯಾ ನ ಜಗತ್ತ್ರಯೇ ॥ ೪ ॥

ಸಾ ಕದಾಚಿದ್ರಾಜರಾಜಪತ್ನೀದರ್ಶನಲಾಲಸಾ ।
ಸಂಪ್ರಾಪ್ತಾ ರಾಜಭವನಂ ಗಾನವಿದ್ಯಾವಿಚಕ್ಷಣಾ । ೫ ॥

ಭೂಪಸ್ಯ ಭೋಗಿನೀನಾಂ ಚ ಮಧ್ಯೇ ರಾಜವಿನೋದಿನೀ ।
ಗಾನವಿದ್ಯಾತಿಕುಶಲಾ ಕಾಚಿದ್ವಾರವಿಲಾಸಿನೀ ॥ ೬ ॥

ತಯಾ ಸಾರ್ಧಂ ಭದ್ರಪತ್ನ್ಯಾ ಭದ್ರಾಯಾಃ ಕಲಹೋಽಭವತ್ ।
ಕೌಶಲಂ ಗಾನವಿದ್ಯಾಯಾಂ ಮಮ್ಯೈವಾಸ್ತೀತಿ ಮತ್ತಯಾ ॥ ೭ ॥

ತತಃ ಪಾಂಡ್ಯಮಹೀಪಾಲಃ ಸ್ತ್ರೀವಾರ್ತಾಮವಲಂಬ್ಯ ಚ ।
ಭಗ್ನಾಂ ಕರ್ತುಂ ಭದ್ರಪತ್ನೀಂಜಯೋಪಾಯ ಮಚಿಂತಯತ್ ॥ ೮ ॥

---

ಸಾಮಂತರಾಜರಿಂದ ಪೂಜಿತನಾಗಿ ರಾಜ್ಯಕ್ಕೆ ಅಧಿಪತಿಯಾದನು. ಭದ್ರನ ಹೆಂಡತಿಯು ಭದ್ರಾ, ಎಂದು ಹೆಸರುಳ್ಳವಳು, ಭದ್ರನಂತೆಯೇ ಶಿವನಲ್ಲಿ ಭಕ್ತಿಯುಳ್ಳವಳಾಗಿದ್ದಳು. ಸೌಂದರ್ಯವೂ, ಗಾನಮಾಡುವುದೂ ಇವುಗಳಲ್ಲಿ ಮೂರು ಲೋಕದಲ್ಲಿಯೂ ಇವಳಿಗೆ ಸಮನಾದವರು ಯಾರೂ ಇರಲಿಲ್ಲ. ಸಂಗೀತದಲ್ಲಿ ನಿಪುಣಳಾದ ಅವಳು ರಾಜನ ಪತ್ನಿಯನ್ನು ನೋಡಬೇಕೆಂದು ಅರಮನೆಗೆ ಬಂದಳು.

೬-೮. ಆಗ ರಾಜಸ್ತ್ರೀಯರ ಮಧ್ಯದಲ್ಲಿ ಒಬ್ಬ ಸೂಳೆಯು ಗಾನಮಾಡುತ್ತಿದ್ದಳು. ಆಗ ಆ ಸೂಳೆಗೂ, ಭದ್ರನ ಹೆಂಡತಿಗೂ ಸಂಗೀತದ ವಿಷಯದಲ್ಲಿ ಕೊಂಚ ವಿವಾದವುಂಟಾಯಿತು. ಗಾನವಿದ್ಯೆಯಲ್ಲಿ ಒಬ್ಬರಿಗಿಂತ ಒಬ್ಬರು ಅಧಿಕರು ಎಂದು ನಿರ್ಣಯವಾಗಬೇಕಾಗಿತ್ತು. ಪಾಂಡ್ಯರಾಜನು ಹೆಂಗಸರ ಮಾತನ್ನು ಕೇಳಿ, ಭದ್ರನ ಹೆಂಡತಿಯು ಅಪಜಯವನ್ನು (ಅವಮಾನ) ಹೊಂದುವುದಕ್ಕಾಗಿ ತಕ್ಕ ಉಪಾಯವನ್ನು ಯೋಚಿಸಿದನು.

ಗಾನ ವಿದ್ಯಾತಿಕುಶಲಾ ಕುತ್ರಾಸ್ತೀತಿ ವಿಚಾರ್ಯ ಚ ।
ಆಹೂತಾ ಗಾಯಿಕಾ ಕಾಚಿನ್ನೃಪಾಪ್ತೈರ್ದ್ವೀಪಮಧ್ಯತಃ ॥ ೯ ॥

ರಹಸ್ಯಾಪ್ತಸಮಾಹೂತಾಂ ಸಮಾಲೋಕ್ಯ ಮಹೀಪತಿಃ ।
ಆಹೂಯ ಭದ್ರಪತ್ನೀಂ ಚ ಗೂಢಧೀರೇವಮಬ್ರವೀತ್ ॥ ೧೦ ॥

ಗಾಯಿಕಾಂ ಕಾಂಚಿದಾಯಾತಾಂ ಜೇತುಂ ಶಕ್ತಿಸ್ತವಾಸ್ತಿ ಕಿಂ ।
ಇತೀಂಗಿತೇನ ಪಪ್ರಚ್ಛ ಸಾಪ್ಯಸ್ತೀತಿ ತಮಬ್ರವೀತ್ ॥ ೧೧ ॥

ದ್ವೀಪಾಂತರಾದಾಗತಾಯೈ ಗಾಯಿಕಾಯೈ ವರಾಣಿ ಚ ।
ವಸ್ತ್ರಾಣಿ ವರಭೂಷಾಶ್ಚ ದದೌ ಸೋಲ್ಲಾಸಮಾನಸಃ ॥ ೧೨ ॥

ರಮ್ಯ ಮಾವಸಥಂ ದತ್ವಾ ತಸ್ಯೈ ಕುತ್ರ ಚಿದಾದರಾತ್ ।
ತಾಂ ಗಚ್ಛೇತಿ ಸಮಾದಿಶ್ಯ ಭದ್ರಪತ್ನೀಂ ನೃಪೋಽಬ್ರವೀತ್ ॥ ೧೩ ॥

ಭಗ್ನಾಯಾಂ ತ್ವಯಿ ಮೇ ಭಂಗೋ ಭದ್ರಪತ್ನಿ ನ ಸಂಶಯಃ ।
ತಸ್ಮಾತ್ತಾಂ ಸಹಸಾ ಜೇತು ಮುಪಾಯ ಶ್ಚಿಂತ್ಯತಾ ಮಿತಿ ॥ ೧೪ ॥

---

೯–೧೪. ರಾಜನು ದ್ವೀಪಾಂತರದಿಂದ ಬಹಳ ಬುದ್ಧಿವಂತೆಯಾದ ಸಂಗೀತಗಾರಳೊಬ್ಬಳನ್ನು ಆಪ್ತರಿಂದ ಕರಸಿದನು." ಅನಂತರದಲ್ಲಿ ಭದ್ರನಹೆಂಡತಿಯನ್ನು ಗುಟ್ಟಾಗಿ ಕರಸಿ, "ನೀನು ಸಭೆಯಲ್ಲಿ ಇತರರನ್ನು ಜಯಿಸಬಲ್ಲೆಯಾ" ಎಂದು ಸಂಜ್ಞೆಯಿಂದಲೇ ಪ್ರಶ್ನೆ ಮಾಡಿದನು. ಅವಳು "ನಾನು ಗೆಲ್ಲುತ್ತೇನೆ" ಎಂದು ರಾಜನಿಗೆ ಉತ್ತರವನ್ನು ಹೇಳಿದಳು. ಅನಂತರದಲ್ಲಿ ರಾಜನು, ದ್ವೀಪಾಂತರದಿಂದ ಬಂದಿರುವ ಗಾಯಕಳಿಗೆ ಉತ್ತಮವಾದ ವಸ್ತ್ರಾಭರಣಗಳನ್ನು ಕೊಟ್ಟು, ಅವಳನ್ನು ಸುಂದರವಾದ ಮನೆಯಲ್ಲಿರಿಸಿದನು. ಅವಳನ್ನು ರಾಜನು ಕರಸಿ, "ನೀನು ಗೆಲ್ಲದಿದ್ದರೆ ನನಗೆ ಅವಮಾನವಾಗುವುದು ಆದ್ದರಿಂದ ನೀನು ಜಯವನ್ನು ಹೊಂದುವುದಕ್ಕೆ ತಕ್ಕ ಉಪಾಯವನ್ನು ಬೇಗ ಯೋಚಿಸು" ಎಂದು ಭದ್ರನ ಹೆಂಡತಿಗೆ ಹೇಳಿದನು.

ಇತ್ಯುಕ್ತೇ ಪಾಂಡ್ಯಭೂಪಾಲೇ ಪ್ರಾಹೈನಂ ಭದ್ರವಲ್ಲಭಾ ।
ಪತಿವ್ರತಾಹಂ ಪಾಂಡ್ಯೇಶ ಪಾತಿವ್ರತ್ಯಂ ಹಿ ರಕ್ಷತಿ ॥ ೧೫ ॥

ಭಕ್ತಾಧೀನಃ ಪರಶಿವಃ ಸುಂದರೇಶೋಽಪಿ ವರ್ತತೇ ।
ಅತೋ ಮದ್ಭಂಗವಾರ್ತಾಪಿ ನ ಸ್ಯಾ ತ್ತಸ್ಯಾಃ ಸಕಾಶತಃ ॥ ೧೬ ॥

ಏವ ಮನ್ಯೋನ್ಯ ಮಾಭಾಷ್ಯ ರಾಜರಾಜೋಽಪಿ ಗಾಯಿಕಾಂ ।
ಅಥ ರಾಜ್ಞಃ ಸಮಾದೇಶಾದ್ಗಾಯಿಕಾ ಸ್ವಾಲಯಂ ಯಯೌ ॥ ೧೭ ॥

ಅತಿಮಾತ್ರೇರ್ಷ್ಯಯಾ ಭೂಪೋಽಪ್ಯಂತಃ ಕೌಟಿಲ್ಯಸಂಯುತಃ ।
ದ್ವೀಪಾಂತರಾದಾಗತಾಂ ತಾಮಾಹೂಯೋ ಪಹ್ವರೇಽಬ್ರವೀತ್ ॥ ೧೮ ॥

ಭೃಶಂ ಭದ್ರಸ್ಯ ವನಿತಾಂ ಭರ್ತ್ಸಯ ತ್ವಮಶಂಕಿತಾ ।
ಸಭಾಂತರೇ ಮಯಾ ಪ್ರೋಕ್ತೇ ಭರ್ತ್ಸನಂ ಮಾಸ್ತು ಮಾಸ್ತ್ವಿತಿ ॥ ೧೯ ॥

---

೧೫–೧೭. ಭದ್ರನ ಹೆಂಡತಿಯು ರಾಜನ ಮಾತನ್ನು ಕೇಳಿ, ನಾನು ಪತಿವ್ರತೆಯಾಗಿರುತ್ತೇನೆ. ನನ್ನ ಪಾತಿವ್ರತ್ಯವು ನನ್ನನ್ನು ಕಾಪಾಡುತ್ತದೆ. ಭಕ್ತರಿಗೆ ಇಷ್ಟವನ್ನು ನೆರವೇರಿಸಿಕೊಡುವ ಸುಂದರೇಶ್ವರನು ನನಗೆ ಸಹಾಯವನ್ನು ಮಾಡುತ್ತಾನೆ. ನಾನು ಸೋಲುತ್ತೇನೆಂಬ ಮಾತನ್ನು ಹೇಳಲು ಅವಕಾಶವಿಲ್ಲ ಎಂದು ಹೇಳಿದಳು. ಇವರಿಬ್ಬರಿಗೂ ಹೀಗೆ ಮಾತುಗಳು ನಡೆದಿದ್ದವು. ಅನಂತರದಲ್ಲಿ ಗಾನಮಾಡುವವಳು ತನ್ನ ಮನೆಗೆ ಹೋದಳು.

೧೮. ಅನಂತರದಲ್ಲಿ ರಾಜನು ಬಹಳ ಅಸೂಯೆಯನ್ನು ಹೊಂದಿದವನಾಗಿ ದ್ವೀಪಾಂತರದಿಂದ ಕರಸಿರುವ ಗಾಯಕಿಯನ್ನು ಕರಸಿ, ಕುಟಿಲವಾದ ಅಭಿಪ್ರಾಯದಿಂದ ಮಾತನಾಡಿದನು.

೧೯–೨೦. “ನೀನು ಸಭೆಯಲ್ಲಿ ಭದ್ರನ ಹೆಂಡತಿಯನ್ನು ನನ್ನ ಸಂಗಡ ವಿವಾದವನ್ನು ಮಾಡಬೇಡ ಎಂದು ಕೊಂಚವೂ ಹೆದರದೆ ಬೆದರಿಸು.” ನಾನು

ಇತ್ಯುಕ್ತ್ವಾ ರಾಜರಾಜೇನ ಗಾಯಿಕಾ ನೂತನಾ ತದಾ ।
ಜ್ಞಾತಭೂಪಾಶಯಾ ಭೂತ್ವಾ ಭರ್ತ್ಸಿತುಂ ತಾಂ ಪ್ರಚಕ್ರಮೇ ॥ ೨೦ ॥

ರಾಜಾ ಚಾನ್ಯೇದ್ಯುರಾಹೂತಾ ಗಾಯಿಕಾ ಭದ್ರವಲ್ಲಭಾಂ ।
ಭವಿಷ್ಯತ್ಕಾರ್ಯ ಮಜ್ಞಾಯ ಭರ್ತ್ಸಯಾಮಾಸ ನೂತನಾ ॥ ೨೧ ॥

ಮಾ ಭರ್ತ್ಸಯ ಮದೀಯಾಂ ತ್ವಮಿತ್ಯುಕ್ತೇಽಪಿ ಮಹೀಪತೌ ।
ದೇಶಾಂತರಾದಾಗತಾ ತು ಭದ್ರಪತ್ನೀ ಮಭರ್ತ್ಸಯತ್ ॥ ೨೨ ॥

ತದಾ ಮಧ್ಯಸ್ಥವದ್ರಾಜಾ ಪ್ರಾಹ ತೇ ಗಾಯಿಕೇ ಪ್ರತಿ ।
ದಾಸೀಭಾವಂ ಪ್ರತಿಜ್ಞಾಯ ಯುವಾಭ್ಯಾಂ ಗಾಯತಾ ಮಿಹ ॥ ೨೩ ॥

ಗಾನಂ ಗಾನವಿದೋ ಯಸ್ಯಾಃ ಪ್ರಶಂಸಂತಿ ಸಭಾಂತರೇ ।
ಸಾ ನಾಯಿಕಾ ಭವತ್ವದ್ಯ ದಾಸೀ ತ್ವನ್ಯಾ ಭವಿಷ್ಯತಿ ॥ ೨೪ ॥

---

ಸಭೆಯಲ್ಲಿ ನಿಂದೆಯನ್ನು ಮಾಡತಕ್ಕದ್ದಲ್ಲವೆಂದು ಹೇಳುವೆನು." ಎಂದು ರಾಜನು ಗೂಢವಾಗಿ ಹೇಳಿದನು. ರಾಜರಾಜಪಾಂಡ್ಯರಾಜನ ಮಾತನ್ನು ಕೇಳಿ, ಹೊಸದಾಗಿ ಬಂದ ಗಾಯಕಿಯು, ರಾಜನ ಅಭಿಪ್ರಾಯದಂತೆ ಭದ್ರನ ಹೆಂಡತಿಯನ್ನು ನಿಂದಿಸುವುದಕ್ಕೆ ಪ್ರಾರಂಭಿಸಿದಳು.

೨೧–೨೫. ಮಾರನೆಯ ದಿನ ರಾಜನು ಭದ್ರನ ಹೆಂಡತಿಯನ್ನೂ ಹೊಸದಾಗಿ ಬಂದಿರುವ ಗಾಯಕಿಯನ್ನೂ ಕರಸಿದನು. ಮುಂದೆ ಉಂಟಾಗುವ ಕೆಲಸವನ್ನು ತಿಳಿಯದೆ, ಹೊಸಬಳಾದ ಗಾಯಕಿಯು "ನೀನು ನಿಂದೆಮಾಡಬೇಡ" ಎಂದು ರಾಜನು ಹೇಳಿದರೂ ಕೇಳದೆ, ಭದ್ರನ ಹೆಂಡತಿಯನ್ನು ನಿಂದಿಸಿದಳು. ಆಗ ರಾಜನು ಮಧ್ಯಸ್ಥನಾಗಿ ನಿಂತು " ಈ ಸಭೆಯಲ್ಲಿ ಗಾನವಿದ್ಯೆಯನ್ನು ಬಲ್ಲವರು ಗಾನಮಾಡಿದವರ ಗಾನವನ್ನು ಕೇಳಿ ನಿರ್ಣಯಮಾಡುವರು. ಚೆನ್ನಾಗಿ ಗಾನಮಾಡಿದವರನ್ನು ಸಭೆಯವರು ನಿರ್ಣಯಮಾಡಿದನಂತರ, ಇನ್ನೊಬ್ಬರು ಗೆದ್ದವರಿಗೆ ದಾಸಿಯಾಗಿರ

ತಥೇತಿ ಕೃತಸನ್ನಾಹಾ ನೂತನಾ್ಯಗಾಯದದ್ಭುತಂ ।
ಪಶ್ಚಾದ್ಭದ್ರಸ್ಯ ವನಿತಾಪ್ಯಗಾಯತ್ಕೋಕಿಲಸ್ವನಾ ॥ ೨೫ ॥

ತದಾ ಸಭಾಗತಾಃ ಸರ್ವೇ ಜನಾ ಸ್ತಾಮೇವ ಚಾ ಸ್ತುವನ್ ।
ತಥಾಪಿ ರಾಜಾ ಪಕ್ಷಸ್ಥಃ ಪ್ರಶಶಂಸ ವಿಪರ್ಯಯಾತ್ ॥ ೨೬ ॥

ರಾಜಾನುಗುಣಮೇವಾಥ ಸರ್ವೇ ತುಷ್ಟುವು ರಾಗತಾಂ
ಸದ್ವಾಸದ್ವಾ ರಾಜವಚಃ ಕಃ ಕ್ಷಮಃ ಕರ್ತು ಮನ್ಯಥಾ ॥ ೨೭ ॥

ಸ್ಯಾತಾಂ ಹಿ ವಿದ್ಯಾವಿಷಯೇ ಲೋಕೇ ಜಯಪರಾಜಯೌ ।
ತ್ವಂ ಗಚ್ಛ ತ್ವಂ ಚ ಗಚ್ಛೇತಿ ಶಂಕಿತ ಸ್ತೇ ನೃಪೋऽಬ್ರವೀತ್ ॥ ೨೮ ॥

---

ಬೇಕು. ಈ ನಿರ್ಬಂಧವನ್ನು ಒಪ್ಪಿಕೊಂಡು ಗಾನಮಾಡಿರಿ" ಎಂದು ಇಬ್ಬರಿಗೂ ಹೇಳಿದನು. ಹೊಸದಾಗಿ ಬಂದಿರುವ ಗಾಯಕಿಯು ರಾಜನು ಹೇಳಿರುವ ನಿರ್ಬಂಧವನ್ನು ಒಪ್ಪಿಕೊಂಡು, ಎಲ್ಲರಿಗೂ ಆಶ್ಚರ್ಯವು ಉಂಟಾಗುವಂತೆ, ಗಾನಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು ಸಂಗೀತವನ್ನು ಮೊದಲು ಹಾಡಿದಳು. ಅನಂತರದಲ್ಲಿ ಭದ್ರನ ಹೆಂಡತಿಯು ಕೋಗಿಲೆಯ ಸ್ವರದಿಂದ ಗಾನಮಾಡಿದಳು.

೨೬-೨೯. ಇಬ್ಬರ ಸಂಗೀತವನ್ನೂ ಕೇಳಿದ ಸಭಿಕರು "ಭದ್ರನ ಹೆಂಡತಿಯು ಚೆನ್ನಾಗಿ ಗಾನಮಾಡಿರುವಳು" ಎಂದು ಅವಳನ್ನು ಶ್ಲಾಘಿಸಿದರು. ರಾಜನು ಮಾತ್ರ ಇವಳಿಗೆ ವಿರುದ್ಧವಾದ ಪಕ್ಷವನ್ನು ಅವಲಂಬಿಸಿ, ಹೊಸದಾಗಿ ಬಂದು ಗಾನಮಾಡಿದವಳನ್ನು ಹೊಗಳಿದನು. ರಾಜನ ಮಾತನ್ನು ಕೇಳಿದ ಸಭಿಕರೆಲ್ಲರೂ ರಾಜನ ಅಭಿಪ್ರಾಯಾನುಗುಣವಾಗಿ ನಿರ್ಣಯಮಾಡಿದರು. ನಿಜಸ್ಥಿತಿಯು ಹ್ಯಾಗೆ ಆದರೂ ಇರಲಿ, ರಾಜನ ಅಭಿಪ್ರಾಯಕ್ಕೆ ವಿರೋಧವಾದ ರೀತಿಯಿಂದ ಯಾರೂ ಇರುವುದಕ್ಕಾಗುವುದಿಲ್ಲ. ವಿದ್ಯಾವಿಷಯದಲ್ಲಿ ಜಯವಾಗಲಿ, ಅಪಜಯವಾಗಲಿ, ಆಗತಕ್ಕದ್ದು ನಿಯತವು. ರಾಜನು ಗಾಯಕಿಯರಿಬ್ಬರನ್ನೂ "ನೀನೂ ಹೋಗು" ನೀನೂ

ನೂತನಾ ಗಾಯಿಕಾ ಹೃಷ್ಟಾ ನಿಮಗ್ನ್ಯಾನಂದಸಾಗರೇ ।
ಸ್ವವಾಸಸ್ಥಲಮಾಸಾದ್ಯ ಮಂಚಮಧ್ಯೇ ನಿಷೇದುಷೀ ॥ ೨೯ ॥

ಪಾಂಡ್ಯೇಶಪಕ್ಷಪಾತೇನ ಭದ್ರಪತ್ನ್ಯತಿದುಃಖಿತಾ ।
ಸುಂದರೇಶಾಂತಿಕಂ ಪ್ರಾಪ್ಯ ಯಯಾಚೇ ಸಾಶ್ರುಲೋಚನಾ ॥ ೩೦ ॥

ಮನ್ನಾಥನಾಥ ಮಧುರಾನಾಥ ನೀಪಾಟವೀಶ್ವರ ।
ನಾಥ ಸ್ತ್ವಮೇವ ಸರ್ವೇಷಾಂ ವಿಶೇಷಾನ್ನಃ ಕೃಪಾನಿಧೇ ॥ ೩೧ ॥

ಪಾಕ್ಷಪಾತೀ ಪಾಂಡ್ಯಭೂಪ ಶ್ಚಾನ್ಯಾಯೇನ ಪರಾಜಯಂ ।
ಮಮ ಕರ್ತುಂ ಸಮುದ್ಯುಕ್ತೋ ರಕ್ಷ ರಕ್ಷ ಕೃಪಾನಿಧೇ ॥ ೩೨ ॥

ಇತ್ಯುಕ್ತ್ವಾ ಖಿನ್ನಹೃದಯಾ ಪ್ರಣನಾಮ ಮಹೀತಲೇ ।
ಭೀತಿ ರ್ಮಾಸ್ತ್ವಿತಿ ಖೇ ವಾಚಂ ಶ್ರುತ್ವಾತಿಮುದಿತಾಶಯಾ ॥ ೩೩ ॥

---

ಹೋಗು" ಎಂದು ಹೇಳಿ ಕಳುಹಿಸಿದನು. ಹೊಸಬಳಾದ ಗಾಯಕಿಯು ಬಹಳ ಸಂತೋಷವುಳ್ಳವಳಾಗಿ ತನ್ನ ಮನೆಗೆ ಬಂದು, ಮಂಚದಲ್ಲಿ ಕೂತುಕೊಂಡು ವಿಶ್ರಾಂತಿಯನ್ನು ಹೊಂದುತ್ತಿದ್ದಳು.

೩೦-೩೫. ಭದ್ರನ ಹೆಂಡತಿಯು, ಪಾಂಡ್ಯರಾಜನು ಪಕ್ಷಪಾತಮಾಡಿದ್ದರಿಂದ ಸಂಕಟವುಳ್ಳವಳಾಗಿ, ಸುಂದರೇಶ್ವರನ ಹತ್ತಿರಕ್ಕೆ ಬಂದಳು. "ಎಲೈ ಮಧುರಾ ನಗರೀ ಅಧೀಶ್ವರನೇ, ನನ್ನ ಪತಿಯಾದ ಭದ್ರನನ್ನು ರಕ್ಷಿಸುತ್ತಿರುವ ಪ್ರಭುವೆ, ಕದಂಬವನಾಧಿಪನೆ, ನೀನು ಎಲ್ಲರಿಗೂ ಅಧಿಪನಾಗಿ ಇರುತ್ತೀಯೆ. ಆದರೆ ನನ್ನಂತೆ ದುಃಖವುಳ್ಳವರ ವಿಷಯದಲ್ಲಿ ಮಾತ್ರ ಹೆಚ್ಚಾದ ಪ್ರೀತಿಯಿಂದ ಇರುತ್ತೀಯೆ. ನೀನು ಬಹಳ ದಯೆಯುಳ್ಳವನು. ಪಾಂಡ್ಯರಾಜನು ಪಕ್ಷಪಾತಮಾಡುತ್ತಾ ಸಭೆಯಲ್ಲಿ ನನ್ನನ್ನು ಅವಮಾನಪಡಿಸುವವನಾಗಿರುವನು. ನೀನು ನನ್ನನ್ನು ರಕ್ಷಿಸಬೇಕು" ಎಂದು ದುಃಖವುಳ್ಳ ಮನಸ್ಸಿನಿಂದ ದೇವನಲ್ಲಿ ವಿಜ್ಞಾಪನೆಯನ್ನು ಮಾಡಿಕೊಂಡು ನಮಸ್ಕಾರಮಾಡಿದಳು. "ನೀನು ಹೆದರಬೇಡ" ಎಂದು ಆಕಾಶವಾಣಿಯು

ನಿಜಂ ಚ ನಿಲಯಂ ಪ್ರಾಪ್ಯ ನಿನ್ಯೇ ತಮಪಿ ವಾಸರಂ ।
ಪರೇದ್ಯುಶ್ಚ ತಯೋರ್ಗಾನಂ ಶೃಣೋತಿ ಸ್ಮ ಸ ಭೂಪತಿಃ ॥ ೩೪ ॥

ಬುಧಾಃ ಪೂರ್ವವದಾಹುಸ್ತೇ ಪ್ರಾಹ ರಾಜಾಪಿ ಪೂರ್ವವತ್ ।
ಏವಂ ಬಹುಶ ಆಹೂಯ ಭದ್ರಪತ್ನೀಂ ಮಹೀಪತಿಃ ॥ ೩೫ ॥

ಅವಮೇನೇ ಸಾ ತು ಪುನರಿತಿ ರಾಜಾನ ಮಬ್ರವೀತ್ ।
ಪಕ್ಷಾರೂಢೋ ಭವಾನ್ಸತ್ಯಂ ಜಾನಂತ್ಯೇತೇ ಸಭಾಗತಾಃ ॥ ೩೬ ॥

ಸುಂದರೇಶಪುರೋಭಾಗೇ ರಮ್ಯೇ ಮಹತಿ ಮಂಟಪೇ
ಆವಾಂ ತತ್ರ ಪ್ರಗಾಸ್ಯಾವ ಸ್ತದಾ ತನ್ಮಂಟಪಸ್ಥಿತಾಃ ॥ ೩೭ ॥

ಶೋಷ್ಯಂತಿ ಯಾಂ ಮುದಾ ಸರ್ವೇ ಸಾ ಭವಿಷ್ಯತಿ ನಾಯಿಕಾ ।
ತಥೇತ್ಯುಕ್ತ್ವಾ ನೃಪಃ ಪ್ರಾಹ ತಥಾಸ್ತ್ವಿತಿ ಕೃದಾ ವಿನಾ ॥ ೩೮ ॥

---

ಕೇಳಿಸಿತು. ಅದರಿಂದ ಅವಳು ಸಂತೋಷವುಳ್ಳವಳಾಗಿ ತನ್ನ ಮನೆಗೆ ಬಂದು ಆ ದಿನವನ್ನು ಕಳೆದಳು. ಮಾರನೆಯ ದಿನ ರಾಜನು ಇವರಿಬ್ಬರನ್ನೂ ಕರೆಸಿ ಸಂಗೀತ ವನ್ನು ಕೇಳಿದನು. ಸಭಿಕರು ಎಲ್ಲರೂ ಹಿಂದಿನ ಹಾಗೆಯೇ ಹೇಳಿದರು. ರಾಜನೂ ಹಿಂದಿನಂತೆಯೇ ಪಕ್ಷಪಾತಿಯಾಗಿದ್ದನು. ರಾಜನು ಹೀಗೆಯೇ ಭದ್ರನ ಹೆಂಡತಿ ಯನ್ನು ಕರಸಿ, ಸಂಗೀತ ಹೇಳಿಸಿ, ಅವಮಾನಮಾಡುತ್ತಿದ್ದನು.

೩೬–೪೦. ಭದ್ರನ ಹೆಂಡತಿಯು ತನಗೆ ರಾಜನು ಅವಮಾನಮಾಡುತ್ತಿರು ವುದನ್ನು ನೋಡಿ, “ಎಲೈ ರಾಜನೆ, ನೀನು ಪಕ್ಷಪಾತಿಯಾಗಿರುತ್ತೀಯೆ. ಇದು ಸತ್ಯವಾದದ್ದು. ಸಭಿಕರೆಲ್ಲರಿಗೂ ಇದು ತಿಳಿದಿರುವುದು. ಆದ್ದರಿಂದ ನಾನು ಸುಂದರೇಶ್ವರನ ಮುಂದುಗಡೆಯಲ್ಲಿರುವ ಸುಂದರವಾದ ಮಂಟಪದಲ್ಲಿ ಗಾನಮಾಡು ತ್ತೇನೆ. ಅಲ್ಲಿ ಇರುವವರು ನಿರ್ಣಯಮಾಡಿದಂತೆ ಜಯಪರಾಜಯಗಳು ಗೊತ್ತಾಗು ವುವು ಗೆದ್ದವರಿಗೆ ಸೋತವರು ದಾಸಿಯಾಗಿರತಕ್ಕದ್ದು, ಎಂದು ಹೇಳಿದಳು. ರಾಜನು ಹಾಗೆ ಆಗಲಿ ಎಂದು ಒಪ್ಪಿಕೊಂಡನು. ರಾಜನಿಗೆ ಇಷ್ಟವಿಲ್ಲದಿದ್ದರೂ ಒಪ್ಪಬೇಕಾಯಿತು.

ಸಾಧು ಸಾಧ್ವಿತಿ ಲೋಕಾಶ್ಚ ಪ್ರಶಶಂಸು ರ್ಮಹೀಪತಿಂ ।
ಅನ್ಯೇದ್ಯುಃ ಸುಂದರೇಶಸ್ಯ ಮಹಾಮಂಟಪಮಧ್ಯಮೇ ॥ ೩೯ ॥

ಆಸ್ಥಾನೀಂ ಮಹತೀಂ ಕೃತ್ವಾ ತತ್ರೈವಾ ವಸ್ಥಿತೋ ನೃಪಃ ।
ಭದ್ರಪತ್ನೀ ಚ ಮೇ ದಾಸೀ ಭವಿಷ್ಯತಿ ನ ಸಂಶಯಃ ॥ ೪೦ ॥

ಇತಿ ನಿಶ್ಚಿತ್ಯ ಮನಸಾ ಯಯೌ ಸಾ ನೂತನಾ ಜವಾತ್ ।
ಭದ್ರಸ್ಯ ವನಿತಾವಾ ಕ್ಯಂ ಸ್ಮರಂತೀ ಸುಂದರಪ್ರಭೋಃ ॥ ೪೧ ॥

ಮಂದಂ ಮಂದಂ ಸಮಾಯಾತಾ ಮಹಾಂತಂ ಮಂಟಪಂ ಪ್ರತಿ ।
ಕಾರುಣ್ಯಮೂರ್ತಿ ರ್ಭಗವಾ ಕವಿವೇಷಧರೋ ಹರಃ ॥ ೪೨ ॥

ಅಸ್ಥಾನೀಮಧ್ಯಗ ಸ್ತಸ್ಥೌ ಸುಂದರೇಶ ಸ್ತಿರೋಹಿತಃ ।
ನೂತನ್ಯಾದೌ ಗಾಯತಿ ಸ್ಮ ಸ್ವಶಕ್ತ್ಯನುಗುಣಂ ಚಿರಂ ॥ ೪೩ ॥

---

ಸಭಿಕರೆಲ್ಲರೂ ರಾಜನನ್ನು ಬಹಳವಾಗಿ ಹೊಗಳಿದರು. ಮಾರನೆಯದಿನ ರಾಜನು ಸುಂದರೇಶ್ವರನ ಮಂಟಪದ ಮಧ್ಯದಲ್ಲಿ ದೊಡ್ಡ ಸಭೆಯನ್ನು ಮಾಡಿಸಿದನು. ಆ ಸಭೆಯಲ್ಲಿ ರಾಜನೂ ಇದ್ದನು. ಹೊಸದಾಗಿ ಬಂದಿದ್ದ ಗಾಯಕಿಯು "ಭದ್ರನ ಹೆಂಡತಿಯು ನನಗೆ ದಾಸಿಯಾಗುವಳು. ಇದರಲ್ಲಿ ಸಂದೇಹವಿಲ್ಲ," ಎಂದು ಬೇಗನೆ ಸಭೆಗೆ ಬಂದಳು.

೪೧—೪೫. ಭದ್ರನ ಹೆಂಡತಿಯು ಸುಂದರೇಶ್ವರನ ಮಾತನ್ನು ಸ್ಮರಿಸುತ್ತಾ, ಮೆಲ್ಲ ಮೆಲ್ಲಗೆ ಆ ಮಹಾಸಭೆಗೆ ಬಂದಳು. ಕರುಣಾಳುವಾದ ಸುಂದರೇಶ್ವರನು ಕವಿಯ ಆಕಾರವನ್ನೂ, ವೇಷವನ್ನೂ ಧರಿಸಿಕೊಂಡು, ಆ ಸಭೆಯಲ್ಲಿ ಯಾರಿಗೂ ಕಾಣದಂತೆ ಇದ್ದನು. ಮೊದಲು ಹೊಸಬಳು ಬಹಳ ಹೊತ್ತಿನವರಿಗೂ ತನ್ನ ಶಕ್ತಿಗನುಗುಣವಾಗಿ ಗಾನಮಾಡಿದಳು. ರಾಜನು ಮೊದಲುಗೊಂಡು ಸಭೆಯವರೆಲ್ಲರೂ ಆ ಗಾನವನ್ನು ಕೇಳಿ, ಚಿತ್ರದಲ್ಲಿ ಬರದಂತೆ ಇದ್ದರು. ಅನಂತರದಲ್ಲಿ ಭದ್ರನ ಹೆಂಡತಿಯು (ಸುಂದರೇಶ್ವರನನ್ನು) ಸದಾಶಿವನನ್ನು ಧ್ಯಾನಮಾಡುತ್ತಾ, ಗಾನಮಾಡಿ

ಗಾನಂ ಶ್ರುತ್ವಾ ಮಹೀಪಾದ್ಯಾಃ ಸ್ತಿಮಿತಾ ಅಭವಂ ಜನಾಃ ।
ಜಗೌ ಪಶ್ಚಾ ದ್ಭದ್ರಪತ್ನೀ ಚಿಂತಯಂತೀ ಸದಾಶಿವಂ ॥ ೪೪ ॥

ಹಾ ಹಾ ಚಿತ್ರಂ ಗಾನ ಮಿದಮಿತಿ ಭೂಪೋಽವದತ್ಪುರಾ ।
ತದೇವ ಸಚಿವಾದ್ಯಾಶ್ಚ ಪ್ರಶಶಂಸು ರ್ಜನಸ್ಸುಖಾಃ ॥ ೪೫ ॥

ತಸ್ಯಾಃ ಸ್ಕಂಧಂ ಭದ್ರಭಾರ್ಯಾ ಧಿರುಹ್ಯ ಕ್ಷ್ವೇಲಿಕಾಂ ವ್ಯಧಾತ್ ।
ರಾಜಾಪ್ಯಬುದ್ಧಿಪೂರ್ವಂ ತತ್ಸಾಧು ಸಾಧ್ವಿತಿ ಸೋಽಬ್ರವೀತ್ ॥ ೪೬ ॥

ಕವಿವೇಷಧರ ಸ್ಯಾರ್ಸಾತ್ಸುಂದರೇಶಸ್ಯ ಚಾಜ್ಞಯಾ ।
ಇಚ್ಛಾಧಿಕಾರ್ಥದಾತಾರ ಮಿಚ್ಛಾವೇದಿನ ಮೀಶ್ವರಂ ॥ ೪೭ ॥

ಸ್ತುವಂತಿ ಸುಂದರೇಶಾನಂ ಸರ್ವೇ ಸಂಭೂಯ ಸಜ್ಜನಾಃ ।
ಇಷ್ಟಕಾಮಪ್ರದಾನಾಂ ಚ ದೇವತಾನಾಂ ಚ ಮಧ್ಯಮೇ ॥ ೪೮ ॥

---

ದಳು. ಅದನ್ನು ಕೇಳಿ ರಾಜನು " ಈ ಗಾನವು ಬಹಳ ಆಶ್ಚರ್ಯಕರವಾಗಿರುವುದು" ಎಂದು ತಾನೇ ಮೊದಲು ಹೇಳಿದನು. ಮಂತ್ರಿಯೇ ಮೊದಲಾದವರು ಎಲ್ಲರೂ ಅದನ್ನು ಕೇಳಿ ಸಂತೋಷದಿಂದ ರಾಜನ ಮಾತನ್ನು ಅನುಸರಿಸಿ, ಶ್ಲಾಘಿಸಿದರು.

೪೬–೫೦. ಆಗ ಭದ್ರನ ಹೆಂಡತಿಯು ತಾನು ಜಯವನ್ನು ಹೊಂದಿರುವದ ಕ್ಕಾಗಿ ಹೊಸದಾಗಿ ಬಂದಿರುವ ಗಾಯಕಿಯನ್ನು ದಾಸಿಯಾಗಿ ಮಾಡಿಕೊಂಡು ಹೆಮ್ಮೆ ಪಡುತ್ತಿದ್ದಳು. ರಾಜನು ಕವಿವೇಷವನ್ನು ಧರಿಸಿರುವ ಸುಂದರೇಶ್ವರನ ಅಪ್ಪಣೆಯಂತೆ ಆದಕ್ಕೆ ಸಮ್ಮತಿಯನ್ನು ಕೊಟ್ಟನು. ರಾಜನ ಇಷ್ಟವಿಲ್ಲದಿದ್ದರೂ ಭಕ್ತರ ಅಭಿಪ್ರಾಯ ವನ್ನು ತಿಳಿದು ಅದಕ್ಕಧಿಕವಾಗಿ ಇಷ್ಟಾರ್ಥಗಳನ್ನು ಕೊಡುತ್ತಿರುವ ಸುಂದರೇಶ್ವರ ನನ್ನು ಸತ್ಪುರುಷರೆಲ್ಲರೂ ಕೊಂಡಾಡುತ್ತಿದ್ದರು. ಅಲ್ಲಿಸೇರಿದ್ದ ಜನರೆಲ್ಲರೂ, "ಇಷ್ಟಾರ್ಥ ಗಳನ್ನು ಕೊಡುವ ದೇವತೆಗಳಲ್ಲಿ ಸುಂದರೇಶ್ವರನ ಸೇವೆಯನ್ನು ಅವಶ್ಯಕವಾಗಿ ಮಾಡ ಬೇಕು." ಎಂದು ಹೇಳಿ ಆಶ್ಚರ್ಯಪಡುತ್ತಾ, ಸುಂದರೇಶ್ವರನಿಗೆ ಪ್ರದಕ್ಷಿಣೆ ನಮ

ಸುಂದರೇಶ್ವರ ಏವಾಯ ಮುಪಾಸ್ಯೋ ನ್ಯೋ ನಹಿ ಧ್ರುವಂ ।
ಅನ್ಯೋನ್ಯಮೇವಂ ಶಂಸಂತೋ ಜನಾ ವಿಸ್ಮಯಸಂಯುತಾಃ　　॥ ೪೯ ॥

ನತ್ವಾ ಪ್ರದಕ್ಷಿಣೀಕೃತ್ಯ ಜಗ್ಮುಃ ಸರ್ವೇ ಮುದಾನ್ವಿತಾಃ
ಸುಂದರೇಶಾಶ್ರಯೋ ಭದ್ರ ಸ್ತತ್ಪತ್ನೀಂ ತಾಂ ತು ಗಾಯಿಕಾಂ　　॥ ೫೦ ॥

ಜಿತವತ್ಯೇತದಾಶ್ಚರ್ಯಂ ಕಿಮಿತ್ಯಾಹ ತದಾ ನೃಪಃ ।
ತಸ್ಯಾಃ ಸ್ಕಂಧಾದ್ಭದ್ರಪತ್ನೀಮವರೋಪ್ಯ ಮಹೀಪತಿಃ　　॥ ೫೧ ॥

ದದೌ ತಸ್ಯೈ ಸುವರ್ಣಾನಿ ಭೂಷಣಾನಿ ಮಹಾಂತಿ ಚ ।
ತಾಂ ವಿಸೃಜ್ಯಾ ಥಾಪರಾಯ್ಯೈ ಗಾಯಂತ್ಯೈ ಚಾಂಬರಾದಿಕಂ　　॥ ೫೨ ॥

ಪ್ರದಾಯ ಪ್ರೇಷಯಾಮಾಸ ಸ್ವದೇಶಗಮನಾಯ ತಾಂ ।
ದೈವಮೇವ ಪರಂ ಮನ್ಯೇ ಪೌರುಷಂ ತು ನಿರರ್ಥಕಂ　　॥ ೫೩ ॥

---

ಸ್ಕಾರಗಳನ್ನು ಮಾಡಿ, ಸಂತೋಷದಿಂದ ಅವರವರ ಮನೆಗಳಿಗೆ ಹೋದರು. ಆಗ ರಾಜನು ಸುಂದರೇಶ್ವರನ ಆಶ್ರಯದಲ್ಲಿರುವ ಭದ್ರನ ಹೆಂಡತಿಯು ಹೊಸಬಳಾದ ಗಾಯಕಿಯನ್ನು ಜಯಿಸಿರುವುದು ಆಶ್ಚರ್ಯಕರವಲ್ಲವೆಂದು ಹೇಳಿದನು.

೫೧–೫೬. ಅನಂತರದಲ್ಲಿ ರಾಜನು ಭದ್ರನ ಹೆಂಡತಿಯನ್ನು ದಾಸಿಯ ಹೆಗಲಿನಿಂದ ಇಳಿಸಿ, ಅವಳಿಗೆ ಆಭರಣಗಳು, ಚಿನ್ನ ಇವುಗಳನ್ನು ಬಹಳವಾಗಿ ಕೊಟ್ಟು ಕಳುಹಿಸಿ, ಸೋತವಳಿಗೂ ವಸ್ತ್ರಾದಿಗಳನ್ನು ಕೊಟ್ಟು, ಅವಳನ್ನು ಅವಳ ದೇಶಕ್ಕೆ ಕಳುಹಿಸಿದನು. ಪುರುಷಪ್ರಯತ್ನವು ವ್ಯರ್ಥವಾದದ್ದು. ದೈವಗತಿಯೇ ಉತ್ತಮವಾದದ್ದು ಈಶ್ವರನನ್ನು ಸೇವಿಸುವುದರಿಂದ ಇಷ್ಟಾರ್ಥಗಳು ಸಿದ್ಧಿಸುವವು. ಇತರ ದೇವತೆಗಳ ಸೇವೆಯು ಪ್ರಯೋಜನಕಾರಿಯಲ್ಲವು. ಎಂಬ ಇವೇ ಮೊದಲಾದ ಮಾತುಗಳನ್ನು ರಾಜನು ಹೇಳುತ್ತಾ, ಸ್ವಯಂಭುಲಿಂಗರೂಪಿಯಾದ ಶಿವನಿಗೆ ಉತ್ತಮವಾದ ವಸ್ತ್ರಗಳು ಮುತ್ತಿನ ಆಭರಣಗಳು, ಇವುಗಳನ್ನು ಒಪ್ಪಿಸಿ, ಪ್ರದಕ್ಷಿಣ ನಮಸ್ಕಾರಗಳನ್ನು

ಈಶೋಽಪಾಸ್ತಿಸ್ತು ಫಲದಾ ಚಾನ್ಯೋಽಪಾಸ್ತಿಸ್ತು ನಿಷ್ಫಲಾ ।
ಏವಮಾದೀನಿ ವಾಕ್ಯಾನಿ ಕಥಯಿತ್ವಾಥ ಶಂಭವೇ ॥ ೪೪ ॥

ದತ್ವಾ ಪಟ್ಟಾತಿವಸ್ತ್ರಾಣಿ ಮೌಕ್ತಿಕಾಭರಣಾನಿ ಚ ।
ನತ್ವಾ ಪ್ರದಕ್ಷಿಣೀಕೃತ್ಯ ಲಿಂಗಂ ಸ್ವಾಯಂಭುವಂ ಮಹತ್ ॥ ೪೫ ॥

ಕಾಹಲಾದಿಸುವಾದ್ಯಾನಾಂ ಘೋಷೈ ರಂತಃಪುರಂ ಯಯೌ ।
ಸುಂದರೇಶ್ವರಪಾದಾಬ್ಜಭಕ್ತ್ಯಾ ಪರಮಯಾ ಯುತಃ ॥ ೪೬ ॥

ಸಂಪದಾ ರಾಜರಾಜಶ್ಚ ರಾಜತೇ ರಾಜರಾಜವತ್ ।
ಲಬ್ಧ್ವಾಥಾನುಗುಣಾಖ್ಯಂ ಚ ತನಯಂ ಸುಗುಣೈರ್ಯುತಂ ॥ ೪೭ ॥

ರಾಜಾರಾಜೋ ಬಭೌ ಲೋಕೇ ಶಂಕರಃ ಷಣ್ಮುಖಂ ಯಥಾ ।
ಚತುಶ್ಚತ್ವಾರಿಂಶಿಕೇಯಂ ಲೀಲಾ ಸಾ ವಿಜಯಪ್ರದಾ ॥ ೪೮ ॥

ಸರ್ವಾಪತ್ಪರಿಹಂತ್ರೀ ಚ ಶ್ರೋತವ್ಯಾ ಶುಭ ಮಿಚ್ಛತಾ ।

---

ಮಾಡಿ, ವಿಜೃಂಭಣೆಯಿಂದ ಅಂತಃಪುರಕ್ಕೆ ಹೋದನು. ಸುಂದರೇಶ್ವರನ ಪಾದ ಕಮಲಗಳಲ್ಲಿ ಬಹಳ ಭಕ್ತಿಯಿಂದ ಇರುವ ರಾಜರಾಜಪಾಂಡ್ಯನು ಐಶ್ವರ್ಯದಿಂದ ಕುಬೇರನಿಗೆ ಸಮನಾಗಿ ಪ್ರಕಾಶಿಸುತ್ತಿದ್ದನು.

೪೭. ರಾಜರಾಜಪಾಂಡ್ಯನಿಗೆ ಗುಣವಂತನಾದ ಅನುಗುಣಪಾಂಡ್ಯನೆಂಬ ಹೆಸರುಳ್ಳ ಮಗನು ಹುಟ್ಟಿದನು. ಇದರಿಂದ ಷಣ್ಮುಖನಿಂದ ಕೂಡಿದ ಶಿವನಂತೆ ರಾಜನು ಪ್ರಕಾಶಿಸುತ್ತಿದ್ದನು.

೪೮. ಎಲ್ಲಾ ವಿಧವಾದ ವಿಪತ್ತುಗಳನ್ನೂ ಪರಿಹಾರಮಾಡುವ, ಮತ್ತು ಜಯವನ್ನುಂಟುಮಾಡುವ ನಲವತ್ತನಾಲ್ಕನೆಯ ಲೀಲೆಯನ್ನು ವಿವರವಾಗಿ ಹೇಳಿರುವೆನು. ಶ್ರೇಯಸ್ಸನ್ನು ಅಪೇಕ್ಷಿಸುವವರು ಈ ಲೀಲೆಯನ್ನು ಅವಶ್ಯವಾಗಿ ಕೇಳಬೇಕು.

**ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಭದ್ರವನಿತಾಜಯಪ್ರದಾನಂ ನಾಮ ಪಂಚಾಶೋಽಧ್ಯಾಯಃ**

---

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ ಭದ್ರವನಿತಾ ಜಯಪ್ರದಾನವೆಂದು ಹೆಸರುಳ್ಳ ಐವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ



## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಏಕಪಂಚಾಶೋऽಧ್ಯಾಯಃ



॥ ಅಗಸ್ತ್ಯ ಉವಾಚ ॥

ಸ್ತನ್ಯಂ ಕ್ರೋಡಶಿಶುಭ್ಯಸ್ತನ್ಮಾತೃರೂಪೀ ಮಹೇಶ್ವರಃ ।
ದತ್ವಾ ತಾನ್ಪಾಲಯಾಮಾಸ ತಾಂ ಲೀಲಾಂ ವರ್ಣಯಾಮಿ ವಃ ॥ ೧ ॥

ಅಸ್ತಿ ವೇಗವತೀತೀರೇ ಗುರುತೀರ್ಥಮಿತಿ ಸ್ಮೃತಂ ।
ಪುಣ್ಯಕ್ಷೇತ್ರಂ ಪುರಾಣಜ್ಞೈರ್ಮುನಿಭಿಃ ಪರಿಸೇವಿತಂ ॥ ೨ ॥

ಪುರಾ ಕೃತಾನಿ ಗುರುಣಾ ದುಷ್ಕರಾಣಿ ತಪಾಂಸಿ ಚ ।
ತತ್ರೈವಾವಿರಭೂತಾಂ ದ್ವೌ ದೇವೌ ಶಂಕರಶಾರ್ಙ್ಗಿಣೌ ॥ ೩ ॥

---

### ಐವತ್ತೊಂದನೆಯ ಅಧ್ಯಾಯವು

೧–೪. ಅಗಸ್ತ್ಯಋಷಿಯು ಹೇಳಿದನು:—ಮಹೇಶ್ವರನು ಹಂದಿಯ ಮರಿಗಳಿಗೆ ಅವುಗಳ ತಾಯಿಯ ರೂಪದಿಂದ ಎದೆಹಾಲನ್ನು ಕೊಟ್ಟು, ಕಾಪಾಡಿದ ಲೀಲೆಯನ್ನು ವರ್ಣಿಸಿ ಹೇಳುವೆನು. ವೇಗವತೀನದಿಯ ತೀರದಲ್ಲಿ ಪೂರ್ವಕಾಲದಲ್ಲಿ ನಡದಿರುವ ಚರಿತ್ರೆಯನ್ನು ತಿಳಿದಿರುವ ಋಷಿಗಳು ಸೇವೆಮಾಡುತ್ತಿರುವ ಗುರುತೀರ್ಥವೆಂದು ಹೆಸರುಳ್ಳ ಒಂದು ಪವಿತ್ರಕರವಾದ ಕ್ಷೇತ್ರವು ಇರುವುದು. ಆ ಕ್ಷೇತ್ರದಲ್ಲಿ ಅನೇಕ ಋಷಿಗಳು ಕಠಿಣವಾದ ತಪಸ್ಸುಗಳನ್ನು ಮಾಡುತ್ತಿದ್ದರು. ಶಿವನೂ, ವಿಷ್ಣುವೂ

ಶಂಕರೋ ಗುರುನಾಥಾಖ್ಯ ಶ್ಶಾರ್ಙ್ಗೀ ಚಿತ್ರರಥೇಶ್ವರಃ ।
ತೌ ದೃಷ್ಟ್ವಾ ಮುಚ್ಯತೇ ಜಂತು ರಘೈರ್ಜನ್ಮಾಂತರಾರ್ಜಿತೈಃ ॥ ೪ ॥

ತಸ್ಮಿನ್ಕ್ಷೇತ್ರೇ ನಿವಸತಿ ಶೂದ್ರಃ ಸುಕಲಸಂಜ್ಞಿತಃ ।
ಕೃಷಿಮೇವ ಪ್ರಕುರ್ವಾಣೋ ನಾನಾಧಾನ್ಯಸಮೃದ್ಧಿಮಾನ್ ॥ ೫ ॥

ತಸ್ಯ ಭಾರ್ಯಾ ಮಹಾಸಾಧ್ವೀ ಪಾತಿವ್ರತ್ಯಪರಾಯಣಾ ।
ಸುಕಲಾ ನಾಮ ಪುಣ್ಯಾಂಗೀ ಪೂರ್ಣೇಂದುಸದೃಶಾನನಾ ॥ ೬ ॥

ಪುತ್ರಾಶ್ಚಿರೇಣ ಕಾಲೇನ ಬಹುನಾ ತಪಸಾ ತಯೋಃ ।
ಬಲೋತ್ಕಟಾ ನಿಕೃಷ್ಟಾಶ್ಚ ಸಂಜಾತಾ ದ್ವಾದಶ ಕ್ರಮಾತ್ ॥ ೭ ॥

ಅಥ ತೇ ಯೌವನಂ ಪ್ರಾಪ್ತಾಃ ಕಾಲೇನ ಪಿತೃಲಾಲಿತಾಃ ।
ನ ಶಿಕ್ಷಿತಾಃ ಕದಾಚಿಚ್ಚ ಪಿತೃಭ್ಯಾಂ ಭಾಗ್ಯಹಾನಿತಃ ॥ ೮ ॥

---

ಕೂಡ ಅಲ್ಲಿ ಬೇರೆ ಬೇರೆಯಾಗಿ ಅವತಾರಗಳನ್ನು ಮಾಡಿರುವರು. ಶಂಕರನಿಗೆ ಗುರುನಾಥಾರ್ಯನೆಂತಲೂ, ವಿಷ್ಣುವಿಗೆ ಚಿತ್ರರಥೇಶ್ವರನೆಂತಲೂ ಹೆಸರು ಬಂದಿರುವುದು. ಅವರ ದರ್ಶನಮಾತ್ರದಿಂದಲೇ ಪ್ರಾಣಿಗಳಿಗೆ ಅನೇಕ ಜನ್ಮಗಳ ಪಾಪಗಳು ನಾಶವಾಗುವವು.

೫-೧೦. ಆ ಕ್ಷೇತ್ರದಲ್ಲಿ ಸುಕಲನೆಂಬ ಹೆಸರುಳ್ಳ ಒಬ್ಬ ಶೂದ್ರನು ಕೃಷಿಯಿಂದ ಜೀವಿಸುತ್ತಾ ಧನಧಾನ್ಯ ಸಮೃದ್ಧಿಯುಳ್ಳವನಾಗಿದ್ದನು. ಸುಕಲಾ ಎಂದು ಹೆಸರುಳ್ಳ ಅವನ ಹೆಂಡತಿಯು ಪತಿವ್ರತೆಯಾಗಿಯೂ, ಸುಂದರಿಯಾಗಿಯೂ, ಸಚ್ಚರಿತ್ರಳಾಗಿಯೂ ಇದ್ದಳು. ಅವರು ತಪಸ್ಸಿನಿಂದ ಕೆಲವುಕಾಲ ಕಳೆದನಂತರ ಹನ್ನೆರಡು ಜನ ಗಂಡುಮಕ್ಕಳು ಆದರು. ಅವರಲ್ಲಿ ಕೆಲವರು ಬಲಿಷ್ಠರಾಗಿಯೂ, ಕೆಲವರು ಬಲಹೀನರಾಗಿಯೂ ಇದ್ದರು. ಕೆಲವುಕಾಲ ಕಳೆದನಂತರ ಅವರಿಗೆ ಯೌವನವು ಬಂದಿತು. ಅವರ ತಾಯಿತಂದೆಗಳು ಅವರಿಗೆ ಸರಿಯಾಗಿ ಬುದ್ಧಿಯನ್ನು ಕಲಿಸಿರಲಿಲ್ಲ. ಅಷ್ಟರಲ್ಲಿಯೇ ಅವರ ದುರದೃಷ್ಟದಿಂದ ಅವರ ತಾಯಿತಂದೆಗಳು ಲೋಕಾಂತರವನ್ನು

ತಸ್ಮಿನ್ನವಸರೇ ತೇಷಾಂ ಪಿತರೌ ಚ ದಿವಂಗತೌ ।
ನಾನಾಶಯೋಃ ನಿರ್ಗುಣಾಶ್ಚ ನಿತರಾಂ ನಿರ್ಭಯಾಶಯಾಃ ॥ ೯ ॥

ಹಲೈ ರ್ನಿರ್ವ್ಯೋನ್ನತಾಂ ಭೂಮಿಂ ಕರ್ಷಂತಃ ಕಷ್ಟಜೀವಿನಃ ।
ತೇಷಾಂ ಪುಣ್ಯರತಿ ರ್ನಾಸ್ತಿ ಪಾಪಭೀತಿರ್ನ ವಿದ್ಯತೇ ॥ ೧೦ ॥

ತ್ರತ್ಕುರ್ವಂತಿ ಚ ತೇ ಸರ್ವೇ ಯದ್ಯತ್ ಸ್ಫುರತಿ ಮಾನಸೇ ।
ವಿಧೇ ರ್ವಶಾತ್ಕದಾಚಿತ್ತೇ ಸಮೀಪಸ್ಥಂ ಮಹದ್ವನಂ ॥ ೧೧ ॥

ಮೃಗಯಾವ್ಯಾಜತಃ ಪ್ರಾಪುಃ ಕಿರಾತೈಃ ಸಹಸಾ ಶ್ವಭಿಃ ।
ಅಟಂತಃ ಪರಿತೋ ಹಂತುಂ ತೇ ಮೃಗಾನ್ಸಂಭ್ರಮಾನ್ವಿತಾಃ ॥ ೧೨ ॥

ಅಪಶ್ಯ ನ್ಗುಲ್ಮಮಧ್ಯಸ್ಥಂ ಕಂಚಿನ್ಮುನಿವರಂ ತದಾ ।
ಧ್ಯಾನಾರೂಢಂ ದಯಾಪೂರ್ಣಚೇತಸಂ ತಪಸಿ ಸ್ಥಿತಂ ॥ ೧೩ ॥

---

ಹೊಂದಿದರು. ಆಗ ಇವರು, ಸರಿಯಾಗಿ ಬುದ್ಧಿ ಹೇಳುವವರು ಇಲ್ಲದೆ, ಗುಣವಂತರಾಗಿಲ್ಲದೆ ಎಲ್ಲರಿಗೂ ಹೆದರುತ್ತಾ, ನೇಗಿಲಿನಿಂದ ಭೂಮಿಯನ್ನು ಉತ್ತು ವ್ಯವಸಾಯ ಮಾಡುವುದರಿಂದ ಜೀವನವನ್ನು ಮಾಡುತ್ತಿದ್ದರು. ಕಷ್ಟದಿಂದ ಜೀವನವನ್ನು ಸಾಗಿಸುತ್ತಿರುವ ಇವರಿಗೆ ಪುಣ್ಯವನ್ನು ಗಳಿಸುವುದರಲ್ಲಿ ಆಯಾಸವಾಗಲಿ, ಪಾಪದಲ್ಲಿ ಭಯವಾಗಲಿ ಇರಲಿಲ್ಲ.

೧೧–೧೨. ಇವರು ತಮ್ಮ ಮನಸ್ಸಿಗೆ ಬಂದಹಾಗೆ ಕೆಲಸವನ್ನು ಮಾಡುತ್ತಿದ್ದರು. ಹೀಗೆ ಇರುವಾಗ ಅವರು ಒಂದುದಿನ ಬೇಟೆಯಾಡುವುದಕ್ಕಾಗಿ, ಕೆಲವುಜನ ಬೇಡರೂ ಕೆಲವು ನಾಯಿಗಳೂ ಇವುಗಳನ್ನು ಜೊತೆಯಲ್ಲಿ ಕರೆದುಕೊಂಡು ಹತ್ತಿರದಲ್ಲಿ ಇರುವ ಒಂದು ಕಾಡಿಗೆ ಬಂದರು. ಅಲ್ಲಿ ಮೃಗಗಳನ್ನು ಕೊಲ್ಲುವುದಕ್ಕಾಗಿ ಅಲ್ಲಲ್ಲಿ ಸುತ್ತುತ್ತಿರುವಾಗ ಅವರು, ಒಂದು ಮುಳ್ಳುಪೊದೆಯಲ್ಲಿ ಕೂತುಕೊಂಡಿದ್ದ ಒಬ್ಬ ಋಷಿಯನ್ನು ನೋಡಿದರು.

೧೩–೧೬. ಆ ಋಷಿಯು ಧ್ಯಾನಮಾಡುತ್ತಿದ್ದನು. ಅವನು ದಯಾವಂತನಾಗಿ ಇದ್ದನು. ರೋಮಾಂಚವುಳ್ಳ ಶರೀರದಿಂದ ಕೂಡಿ, ಆನಂದಾಶ್ರುಗಳನ್ನು ಸುರಿಸು

ಪುಲಕಾಂಚಿತಸರ್ವಾಂಗಂ ಸಾನಂದಜಲಲೋಚನಂ ।
ಜ್ವಲತ್ಪಾವಕಸಂಕಾಶಂ ದುರ್ನಿರೀಕ್ಷ್ಯಂ ದ್ವಿಜತೇಜಸಾ ॥ ೧೪ ॥

ರಾಗದ್ವೇಷಭಯಕ್ರೋಧಮದಮಾತ್ಸರ್ಯವರ್ಜಿತಂ ।
ವರವಲ್ಕಲಸಂವೇಷವಿರಾಜಿತಕಟೀತಟಂ ॥ ೧೫ ॥

ಸ್ಥಾಣುವನ್ನಿಶ್ಚಲತನುಂ ಜಟಾಮಂಡಲಮಂಡಿತಂ ।
ಪರಿವೃತ್ಯ ಚ ತಂ ಸರ್ವೇ ಪರಿಹಾಸಪರಾಯಣಾಃ ॥ ೧೬ ॥

ಹಸ್ತತಾಲಂ ಪ್ರಕುರ್ವಾಣಾ ಹಸಂತೋ ನನೃತು ರ್ಮುಹುಃ ।
ಗರ್ವೇಣ ಬಾಲಭಾವೇನ ಪ್ರದುಷ್ಟಾ ಅರ್ಭಕಾ ಮುನಿಂ ॥ ೧೭ ॥

ತೃಣೈರ್ಲೋಷ್ಟೈಶ್ಚ ಪಾಷಾಣೈ ಸ್ಸಿಕತಾಭಿ ರವಾಕಿರನ್ ।
ಪುನಃ ಪುನಃ ಪೀಡಿತಸ್ತೈಃ ಧ್ಯಾನಸ್ತಿಮಿತಲೋಚನಃ ॥ ೧೮ ॥

---

ತ್ತಿದ್ದನು. ಅವನ ತೇಜಸ್ಸು ಬೆಂಕಿಯಂತೆ ಇತ್ತು. ಬ್ರಹ್ಮತೇಜಸ್ಸಿನಿಂದ ಹೊಳೆಯುತ್ತಿರುವ ಅವನಿಗೆ ಕಾಮಕ್ರೋಧಾದಿಗಳು ಎಲ್ಲವೂ ಹೆದರುತ್ತಿದ್ದವು. ನಾರುಮಡಿಯನ್ನೂ, ಕೃಷ್ಣಾಜಿನವನ್ನೂ ಧರಿಸಿಕೊಂಡು, ಜಟಾಮಂಡಲದಿಂದ ಕೂಡಿರುವ ಋಷಿಯನ್ನು ನೋಡಿದ ಅವರೆಲ್ಲರೂ ಪರಿಹಾಸ್ಯಮಾಡುತ್ತಾ, ಅವನ ಸುತ್ತಲೂ ಚಪ್ಪಾಳೆಯನ್ನು ಹಾಕಿಕೊಂಡು ನಗುತ್ತಾ ಕುಣಿಯುವುದಕ್ಕೆ ಪ್ರಾರಂಭಿಸಿದರು.

೧೭-೨೦. ಅವರು ಅಹಂಕಾರದಿಂದಲೂ, ಹುಡುಗತನದಿಂದಲೂ, ಕೆಟ್ಟಿರುವ ಮನಸ್ಸುಳ್ಳವರಾಗಿ, ಋಷಿಯನ್ನು ಹುಲ್ಲುಕಡ್ಡಿ, ಮತ್ತು ಕಲ್ಲುಗಳಿಂದಲೂ, ಮಣ್ಣಿನಿಂದಲೂ ಹೊಡೆದರು. ಋಷಿಗೆ ಇವರ ಕ್ರೀಡೆಯಿಂದ ತೊಂದರೆಯು ಅನೇಕ ವೇಳೆ ಉಂಟಾಯಿತು. ತನ್ನ ಧ್ಯಾನಕ್ಕೆ ವಿಘ್ನವು ಉಂಟಾದಕಾರಣ, ಕೋಪವುಳ್ಳವನಾಗಿ ಋಷಿಯು ಅವರನ್ನು ನೋಡಿ, " ಭೂಮಿಯನ್ನು ನೇಗಿಲಿನಿಂದ ಕೆರೆಯುತ್ತಿರುವ ನಿಮಗೆ ಭೂಮಿಯನ್ನು ಅಗೆಯುವುದೇ ಉತ್ತಮವು. ಆದ್ದರಿಂದ ಹಂದಿಗಳಾಗಿ ಹುಟ್ಟಿ

ಸಮಾಧಿಭಂಗಾತ್ಕ್ರುದ್ಧಸ್ಸ ಶಶಾಪಾಲೋಕ್ಯ ತಾನ್ಮುನಿಃ ।
ಭೂಕರ್ಷಣೋದ್ಯತಾನಾಂಚ ಯುಕ್ತಂ ಭೂಕರ್ಷಣಂ ಹಿ ವಃ ॥ ೧೯ ॥

ಯೂಯಂ ವರಾಹಯೋನ್ಯಾಂ ಚ ಯುಗಪಚ್ಚ ಜನಿಷ್ಯಥ ।
ಯುಷ್ಮಾಸು ಜಾತಮಾತ್ರೇಷು ಮೃತಿಃ ಪಿತ್ರೋ ರ್ಭವಿಷ್ಯತಿ ॥ ೨೦ ॥

ಆತಪೇನಾತಿಸಂತಪ್ತಾಃ ಕ್ಷುಧಾರ್ತಾಶ್ಚ ಭವಿಷ್ಯಥ ।
ಏವಂ ಶಪ್ತಾಶ್ಚ ಮುನಿನಾ ಭೀತಾಃ ಪಶ್ಚಾತ್ತು ಸೂನವಃ ॥ ೨೧ ॥

ಪ್ರಣಮ್ಯ ಪ್ರಾರ್ಥಯಾಮಾಸು ಶ್ಯಾಂತರೋಷಂ ಕ್ಷಮಾಯುತಂ ।
ಅಸ್ಮಾಭಿಃ ಕೃತಮಜ್ಞಾನಾ ದಪರಾಧಂ ಕ್ಷಮಸ್ವ ಭೋ ॥ ೨೨ ॥

ಅಸ್ಮಾನ ನಾಥಾ ನಧುನಾ ರಕ್ಷ ರಕ್ಷ ದಯಾನಿಧೇ ।
ಇತ್ಯರ್ಭಕೈಃ ಪ್ರಾರ್ಥಿತ ಸ್ಸನ್ನಿತರಾ ಮನುಕಂಪಯಾ ॥ ೨೩ ॥

---

ಜೀವನಮಾಡಿರಿ. ನೀವು ಹುಟ್ಟಿದ ಕೂಡಲೆ ನಿಮಗೆ ಮಾತಾಪಿತೃ ವಿಯೋಗ ವುಂಟಾಗುವುದು. ಆದ್ದರಿಂದ ನೀವು ಹಸಿವು ಬಾಯಾರಿಕೆಯಿಂದ ಸಂಕಟವನ್ನು ಅನುಭವಿಸಿರಿ." ಎಂದು ಶಾಪವನ್ನು ಕೊಟ್ಟನು.

೨೧–೨೬. ಮುನಿಯ ಶಾಪವನ್ನು ಕೇಳಿದಕೂಡಲೆ, ಅವರಿಗೆ ಭಯವು ಉಂಟಾಯಿತು. ಅವರು ಉಪಶಾಂತನಾಗಿ, ಕೋಪವಿಲ್ಲದೆ, ಕ್ಷಮೆಯುಳ್ಳವನಾಗಿರುವ ಋಷಿಯನ್ನು ನಮಸ್ಕರಿಸಿ, "ನಾವುಗಳು ತಿಳಿಯದೆ ಅಪರಾಧವನ್ನು ಮಾಡಿರುವೆವು. ಅನಾಥರಾದ ನಮ್ಮನ್ನು ದಯೆಯಿಂದ ರಕ್ಷಿಸು. ನಮ್ಮ ಅಪರಾಧವನ್ನು ಮನ್ನಿಸು." ಎಂದು ಪ್ರಾರ್ಥಿಸಿದರು. ಆ ಹುಡುಗರ ಪ್ರಾರ್ಥನೆಯನ್ನು ಕೇಳಿದ ಋಷಿಗೆ ಅವರಲ್ಲಿ ಬಹಳ ದಯೆಯು ಉಂಟಾಯಿತು. ಅದರಿಂದ ಅವನು ಪ್ರತಿಶಾಪವನ್ನು ಕೊಟ್ಟನು. "ಸುಂದರೇಶ್ವರನು ನಿಮ್ಮ ತಾಯಿಯ ಆಕಾರವನ್ನು ಧರಿಸಿ, ನಿಮಗೆ ಎದೆಹಾಲನ್ನು ಕೊಡುವನು. ನೀವು ಅವನ ದಯೆಗೆ ಪಾತ್ರರಾಗಿ ನಿಮ್ಮ ಮುಖವು ಹೊರತು ಉಳಿದ ಶರೀರಾಕೃತಿಯಲ್ಲಿ ಮನುಷ್ಯರಂತೆ ಭೂಮಿಯಲ್ಲಿ ವಾಸಮಾಡುತ್ತಿರುವಿರಿ. ಮತ್ತು

ಸಂಯುಕ್ತೈಃ ಸ ಮುನಿ ಸ್ತೇಭ್ಯಃ ಪ್ರತಿ ಶಾಪಂ ದದೌ ಪುನಃ ।
ಸುಂದರೇಶೇನ ಭವತಾಂ ಮಾತೃವೇಷಧರೇಣ ಚ । ॥ ೨೪ ॥

ಯೂಯಂ ಕರುಣಯಾ ಸ್ಪೃಷ್ಟಾಃ ಸ್ತನ್ಯಂ ದಾತುಂ ತದಾ ಭುವಿ ।
ಮುಖಂ ವಿನಾ ಮುಕ್ತಶಾಪಾ ಮಾನುಷ್ಯಂ ಚ ವಪುರ್ಧೃತಾಃ ॥ ೨೫ ॥

ಪ್ರಧಾನಭೂತಾ ಭೂಪಸ್ಯ ಭುಕ್ತ್ವಾ ಭೋಗಾಂಶ್ಚ ಪುಷ್ಕಲಾನ್ ।
ಶುದ್ಧಜ್ಞಾನಮಯಸ್ತನ್ಯಪಾನೇನಾಸ್ತಮನೋಮಲಾಃ ॥ ೨೬ ॥

ಸುಂದರೇಶಪ್ರಸಾದೇನ ಸಾಯುಜ್ಯಂ ಚ ಗಮಿಷ್ಯಥ ।
ಇತ್ಯುಕ್ತ್ವಾ ಪ್ರೇಷಯಿತ್ವಾ ತಾನ್ಮುನಿ ಧ್ಯಾನಪರೋಽಭವತ್ ॥ ೨೭ ॥

ಪ್ರಾಪು ರಲ್ಪೇನ ಕಾಲೇನ ತೇಽಪಿ ಶಾಪಂ ಮದಾರ್ಜಿತಂ ।
ವನೇ ವರಾಹಯೋನ್ಯಾಂ ತೇ ಜಾತಾ ಶೂದ್ರಾರ್ಭಕಾ ಯದಾ ॥ ೨೮ ॥

ಮೃಗಯಾರ್ಥಂ ತದಾ ಪ್ರಾಪ ರಾಜರಾಜೋಽಪಿ ತದ್ವನಂ ।
ಸೋಽಪಿ ತತ್ರ ವರಾಹಾಂಶ್ಚ ಖಡ್ಗಾಂಶ್ಚ ಮಹಿಷಾನಪಿ ॥ ೨೯ ॥

---

ನೀವು ರಾಜನಿಗೆ ಮಂತ್ರಿಗಳಾಗಿದ್ದುಕೊಂಡು ಬಹಳಮಟ್ಟಿಗೆ ಭೋಗಗಳನ್ನು ಅನುಭವಿಸುವಿರಿ. ಶುದ್ಧಜ್ಞಾನಮಯವಾದ ಸ್ತನ್ಯವನ್ನು ಪಾನಮಾಡಿದ ಕಾರಣ, ತಮೋಗುಣದ ಸಂಬಂಧವಿಲ್ಲದೆ, ಪವಿತ್ರರಾಗಿದ್ದುಕೊಂಡು, ಕೊನೆಗೆ ಸುಂದರೇಶ್ವರನಲ್ಲಿ ಸಾಯುಜ್ಯವನ್ನು ಹೊಂದುವಿರಿ." ಎಂದು ಪ್ರತಿಶಾಪವನ್ನು ಕೊಟ್ಟು, ಪುನಃ ಧ್ಯಾನಾಸಕ್ತನಾದನು.

೨೭-೨೯. ಆ ಶೂದ್ರಬಾಲಕರು ತಮ್ಮ ಅಹಂಕಾರದಿಂದ ಸಂಪಾದಿಸಿದ ಶಾಪದ ಫಲವನ್ನು ಕೊಂಚಕಾಲದಲ್ಲಿಯೇ ಹೊಂದಿ, ಹಂದಿಯ ಜನ್ಮವನ್ನು ಹೊಂದಿದರು. ಇವರು ವಾಸವಾಗಿದ್ದ ಕಾಡಿಗೆ ರಾಜರಾಜಪಾಂಡ್ಯನು ಬೇಟೆಯಾಡುವುದಕ್ಕಾಗಿ ಬಂದನು. ಅವನು ಅಲ್ಲಿ ಖಡ್ಗಮೃಗಗಳೂ, ಹಂದಿಗಳೂ, ಕಾಡುಎಮ್ಮೆಗಳೂ ಇವೇ ಮೊದಲಾದ ದುಷ್ಟಮೃಗಗಳನ್ನು ಹರಿತವಾದ ಬಾಣಗಳಿಂದ ಕೊಂದನು.

ನಿಜಘಾನ ಶರೈ ಸ್ತೀಕ್ಷ್ಣೈಃ ಅನ್ಯಾಕ್ ದುಷ್ಟಮೃಗಾನಪಿ ।
ಏವಂ ಸಂಕ್ರೀಡಮಾನಸ್ಯ ಕೋಲಃ ಪ್ರಾದುರಭೂನ್ಮಹಾನ್ ॥ ೩೦ ॥

ಬಹುಸೂಕರಯೂಥೇನ ಸ್ವಪತ್ನ್ಯಾ ಚ ಸಮನ್ವಿತಃ ।
ದೃಷ್ಟ್ವಾ ವಿಸ್ಮಯ ಮಾಪೇದೇ ರಾಜರಾಜಃ ಕಿಟೀಶ್ವರಂ ॥ ೩೧ ॥

ದೃಷ್ಟ್ವಾ ಭೂಪಂ ಸೂಕರೇಶ ಸ್ಸೂಕರೀಂ ಮದಗರ್ವಿತಃ ।
ಮಧುರಾಧೀಶ್ವರಃ ಕಾಂತೇ ಕ್ರೀಡತೇ ಮೃಗಯಾಂ ಪ್ರತಿ ॥ ೩೨ ॥

ಸದೃಷ್ಟ್ವಾ ಮಾಮಕಂ ಯೂಥಂ ಜಿಘಾಂಸು ರಭಿಯಾಸ್ಯತಿ ।
ನ ಜಾನೇ ಪಾತಕಂ ಪೂರ್ವ ಮನ್ಯಜನ್ಮನಿ ಸಂಚಿತಂ ॥ ೩೩ ॥

ಯೇನಾಹಂ ಸೂಕರೀಂ ಯೋನಿ ಮಾಗತೋಹ ಮಘೇನ ಚ ।
ಅಸ್ಯ ಬಾಣೋದಕೈ ಶ್ಶುದ್ಧೈಃ ಕ್ಷಾಲಯಿಷ್ಯಾಮಿ ಪಾತಕಂ ॥ ೩೪ ॥

ದೈವೇನೇತಿ ಮಮಾದ್ಯೈವ ಸ್ವರ್ಗದ್ವಾರ ಮನುತ್ತಮಂ ।
ಉದ್ಘಾಟಿತಕವಾಟಂ ತದ್ಯಾಸ್ಯಾಮಿ ಸಮರಾದ್ದಿವಂ ॥ ೩೫ ॥

---

೩೦–೩೪. ರಾಜನು ಬೇಟೆಯಾಡುತ್ತಿರುವಾಗ, ದೊಡ್ಡ ಗುಂಪಿನಿಂದ ಕೂಡಿದ ಒಂದು ಹಂದಿಯು ಎದುರಾಯಿತು. ಅದರ ಜೊತೆಯಲ್ಲಿ ಒಂದು ಹೆಣ್ಣುಹಂದಿಯೂ ಇತ್ತು. ರಾಜನು ಅದನ್ನು ನೋಡಿ ಆಶ್ಚರ್ಯಪಟ್ಟನು. ಹಂದಿಯು ರಾಜನನ್ನು ನೋಡಿ, ಬಹಳ ಅಹಂಕಾರವುಳ್ಳದ್ದಾಗಿ ತನ್ನ ಜೊತೆಯಲ್ಲಿದ್ದ ಹೆಣ್ಣು ಹಂದಿಯ ಸಂಗಡ ಮಾತನಾಡಿತು. " ಎಲೈ ಪ್ರಿಯಳೆ, ಮಧುರಾನಗರದ ರಾಜನು ಈಗ ಬೇಟೆಯಾಡುತ್ತಿರುವನು. ಅವನು ನನ್ನ ಹಿಂಡನ್ನು ನೋಡಿ ಕೊಲ್ಲುವುದಕ್ಕಾಗಿ ಬಂದಿರುವನು. ನನಗೆ ನೀಚವಾದ ಈ ಜನ್ಮವು ಉಂಟಾಗಲು ಬಹಳ ಪಾತಕಗಳನ್ನು ನಾನು ಮಾಡಿರುವಂತೆ ಕಾಣುತ್ತದೆ. ಈ ರಾಜನಿಗೆ ಎದುರಾಗಿ ಇವನ ಬಾಣದಿಂದ ನಾನು ಶರೀರವನ್ನು ತ್ಯಜಿಸಿ, ನನ್ನ ಪಾಪಗಳನ್ನು ಕಳೆದುಕೊಳ್ಳುವೆನು.

೩೫-೪೦. ದೈವಗತಿಯಿಂದ ನನಗಾಗಿ ಈಗ ಸ್ವರ್ಗದ ಬಾಗಿಲು ತೆಗೆದಿರುವುದು. ಯುದ್ಧದಲ್ಲಿ ಪ್ರಾಣವನ್ನು ಲೆಕ್ಕಿಮಾಡದೆ ಶರೀರವನ್ನು ತ್ಯಜಿಸಿ, ಉತ್ತಮವಾದ ಗತಿ

ನವಪ್ರಸೂತಾ ತ್ವಂ ಪುತ್ರಾಂ ಸ್ತನ್ಯದಾನೇನ ರಕ್ಷಿತುಂ ।
ಸಹಸಾ ಪರ್ವತಪ್ರಾಂತಂ ಗಚ್ಛ ಮೋಹಮಿಮಂ ತ್ಯಜ ॥ ೩೬ ॥

ಇತ್ಯುಕ್ತವಂತಂ ಭರ್ತಾರಂ ಸೂಕರೀ ಪ್ರಾಹ ವಿಸ್ಮಿತಾ ।
ಅಲಂಕೃತಾಪಿ ಯಾ ನಾರೀ ವಸ್ತ್ರೈರ್ಮಾಣಿಕ್ಯಭೂಷಣೈಃ ॥ ೩೭ ॥

ನ ಭಾತಿ ಪತಿಹೀನಾ ಸಾ ತಥಾಹಮಪಿ ಪುತ್ರಕೈಃ ।
ಪ್ರವಿಶಾಮಿ ತ್ವಯಾ ಸಾರ್ಧಂ ಭೂಮಿಂ ವಾ ಸ್ವರ್ಗಮೇವ ವಾ ॥ ೩೮ ॥

ತ್ವಯಾ ವಿನಾ ನ ಶಕ್ನೋಮಿ ಧರ್ತುಂ ಪ್ರಾಣಾನ್ಮಹೇಶ್ವರ ।
ತತೋಽಹ ಮಪಿ ಯಾಸ್ಯಾಮಿ ದ್ರಷ್ಟುಂ ತವ ಪರಾಕ್ರಮಂ ॥ ೩೯ ॥

ಇತ್ಯುಕ್ತ್ವಾ ಪುತ್ರವಾಂಛಾಂ ಚ ತ್ಯಕ್ತ್ವಾ ಭರ್ತೃಪರಾಯಣಾ ।
ಭರ್ತಾರಂ ತಂ ಪುರಸ್ಕೃತ್ಯ ಯೂಥೇಶಂ ಪೃಷ್ಠತಃ ಸ್ಥಿತಾ ॥ ೪೦ ॥

ವ್ಯೂಹಂ ಸಂಕಲ್ಪ್ಯ ಬಹುಧಾ ವಾರಾಹಂ ಬಲಮಾಸ್ಥಿತಂ ।
ರಾಜರಾಜ ಸ್ಸಮಾಲೋಕ್ಯ ವರಾಹಬಲಸಂಭ್ರಮಂ ॥ ೪೧ ॥

---

ಯನ್ನು ಹೊಂದುವೆನು. ಈಗ ತಾನೇ ಮಕ್ಕಳನ್ನು ಹೆತ್ತಿರುವ ನೀನು, ನನ್ನ ಮೇಲಿನ ಪ್ರೀತಿಯನ್ನು ಬಿಟ್ಟು, ಅವುಗಳನ್ನು ಕಾಪಾಡುವುದಕ್ಕಾಗಿ ಬೆಟ್ಟದ ಗುಹೆಯಕಡೆಗೆ ಹೋಗು. ಮಕ್ಕಳನ್ನು ರಕ್ಷಿಸು." ಎಂದು ಗಂಡುಹಂದಿಯು ಹೇಳುತ್ತಿರುವ ಮಾತನ್ನು ಕೇಳಿ,ಹೆಣ್ಣುಹಂದಿಯು "ಹೆಂಗಸಿಗೆ ವಸ್ತ್ರಾಭರಣಗಳೇ ಮೊದಲಾದವುಗಳು ಬಹಳವಾಗಿ ಇದ್ದರೂ, ಗಂಡನಿಲ್ಲದಿದ್ದರೆ ಕಾಂತಿಯಿರುವುದಿಲ್ಲ. ಮಕ್ಕಳನ್ನು ರಕ್ಷಿಸಲು ಗಂಡನಾದ ನಿನ್ನನ್ನು ಬಿಟ್ಟಿರುವುದಿಲ್ಲ. ನಿನ್ನೊಡನೆ ಸ್ವರ್ಗವನ್ನಾಗಲಿ, ನರಕವನ್ನಾಗಲಿ, ಭೂಮಿಯನ್ನೇ ಆಗಲಿ, ಪ್ರವೇಶಿಸುತ್ತೇನೆ. ನಿನ್ನನ್ನು ಬಿಟ್ಟು ನಾನು ಜೀವಿಸಿರುವುದಿಲ್ಲ. ನೀನು ಯುದ್ಧದಲ್ಲಿ ಮಾಡುವ ಪರಾಕ್ರಮವನ್ನು ನೋಡುವುದಕ್ಕೆ ನಿನ್ನ ಸಂಗಡಲೇ ಇರುತ್ತೇನೆ." ಎಂದು ಹೇಳಿ ಯೂಥಪತಿಯಾದ ತನ್ನ ಪತಿಯ ಜೊತೆಯಲ್ಲಿಯೇ ನಿಂತಿತು.

೪೧–೪೪. ರಾಜರಾಜಪಾಂಡ್ಯನು ಆ ಹಂದಿಯ ಹಿಂಡನ್ನು ನೋಡಿದನು. ಅದು ಒಂದು ವ್ಯೂಹದ ಆಕಾರವಾಗಿ ನಿಂತು ಯಾರೂ ಪ್ರವೇಶಮಾಡಲು ಅಸಾಧ್ಯವಾಗಿ

ಅಭಿಪ್ರೇತಸ್ಥೇ ಸುಭಟೈ ಸ್ತುಂಗಂ ತರಗವಮಾಸ್ಥಿತಃ ।
ನಿಶಿತೈರಾಯುಧೈಶ್ಶೂರಾ ದಂಷ್ಟ್ರಾಘಾತೈಶ್ಚ ಸೂಕರಾಃ ॥ ೪೨ ॥

ಅಕುರ್ವ ನ್ದ್ವಂದ್ವಯುದ್ಧಂ ತು ಸ್ಮರಣಾದತಿಭೀತಿದಂ ।
ದಂಷ್ಟ್ರಾಘಾತೈಃ ಶರಾಘಾತೈರ್ಹತಾ ಶ್ಶೂರಾಶ್ಚ ಸೂಕರಾಃ ॥ ೪೩ ॥

ನಿಪತ್ಯ ರಕ್ತದಿಗ್ಧಾಂಗಾ ಭೂಮೌ ಸ್ವರ್ಗಂ ಪ್ರಪೇದಿರೇ ।
ಏಕಾವಶಿಷ್ಟಂ ಯುದ್ಧಾಯ ಗಚ್ಛಂತಂ ಪ್ರಾಹ ಸೂಕರೀ ॥ ೪೪ ॥

ಗಚ್ಛ ಕಾಂತ ಮಯಾ ಸಾರ್ಧಂ ಕೋ ಲಾಭೋ ಮರಣೇನ ತೇ ।
ಚೋದಿತಃ ಪ್ರಿಯಯಾ ಚೈವಂ ಪ್ರಾಹ ಸೂಕರನಾಯಕಃ ॥ ೪೫ ॥

ಉಭಯೋ ಸ್ಸಿಂಹಯೋ ರ್ಮಧ್ಯೇ ಸೂಕರಃ ಪಿಬತೇ ಜಲಂ ।
ದ್ವಯೋ ಸ್ಸೂಕರಯೋ ರ್ಮಧ್ಯೇ ಸಿಂಹೋ ನ ಪಿಬತೇ ಜಲಂ ॥ ೪೬ ॥

---

ಇತ್ತು. ಎತ್ತರವಾದ ಕುದುರೆಯನ್ನು ಹತ್ತಿದವನಾಗಿ ಶೂರರಾದ ಭಟರೊಡನೆ, ಆ ಹಿಂಡಿಗೆ ಎದುರಾದನು. ಶೂರರಾದ ಭಟರು ಹರಿತವಾದ ಆಯುಧಗಳಿಂದ ಹಂದಿಗಳನ್ನು ಹೊಡೆದರು. ಹಂದಿಗಳು ತಮ್ಮ ಕೋರೆಯುಹಲ್ಲುಗಳಿಂದ ಆ ಭಟರ ಶರೀರವನ್ನು ಸೀಳಿದವು. ಇವರಿಬ್ಬರಿಗೂ ದ್ವಂದ್ವಯುದ್ಧವು ಬಹಳ ಭಯಂಕರವಾಗಿ ಸ್ಮರಿಸಿದ ಮಾತ್ರಕ್ಕೆ ಭಯವು ಉಂಟಾಗುವಂತೆ ನಡೆಯುತ್ತಿತ್ತು. ಬಾಣಗಳ ಏಟಿನಿಂದ ಹಂದಿಗಳೂ, ಕೋರೆಯುಹಲ್ಲಿನ ಏಟಿನಿಂದ ಶೂರರಾದ ಭಟರೂ, ಶೀಳಿದ ಶರೀರವುಳ್ಳವರಾಗಿ, ರಕ್ತವನ್ನು ಸುರಿಯುವ ಶರೀರದಿಂದ ಭೂಮಿಯಲ್ಲಿ ಬಿದ್ದರು. ಅನಂತರ ಮೃತರಾಗಿ ಸ್ವರ್ಗವನ್ನು ಸೇರಿದರು. ಅನಂತರದಲ್ಲಿ ಆ ಹಿಂಡಿಗೆ ರಾಜನಾಗಿರುವ ಹಂದಿಯು ಒಂದು ಮಾತ್ರ ಉಳಿಯಿತು. ಅದುಯುದ್ಧಕ್ಕೆ ಸಿದ್ಧವಾಗಿರುವುದನ್ನು ನೋಡಿ, ಹೆಣ್ಣುಹಂದಿಯು ಅದರ ಸಂಗಡ ಮಾತನಾಡಿತು.

೪೫–೫೦. "ಎಲೈ ಪ್ರಿಯನೆ, ನಾನೂ ನಿನ್ನ ಜೊತೆಯಲ್ಲಿಯೇ ಯುದ್ಧ ಮಾಡುವೆನು." ಎಂದು ಹೇಳಿದ ಹೆಂಡತಿಯ ಮಾತನ್ನು ಕೇಳಿ, ಗಂಡುಹಂದಿಯು "ಎರಡು ಸಿಂಹಗಳ ಮಧ್ಯದಲ್ಲಿ ಒಂದು ಹಂದಿಯು ನೀರನ್ನು ಕುಡಿಯುವುದು.

ಏವಂ ಸೂಕರಜಾತ್ಯಾಂ ಹಿ ದೃಶ್ಯತೇ ಚ ಪರಾಕ್ರಮಃ ।
ಯೋ ವೀರ ಸ್ಸಂಯುಗೇ ಪ್ರಾಣಾಂ ಸ್ತ್ಯಜತ್ಯ ಭಿಮುಖೇ ರಿಪೋಃ ॥ ೪೭ ॥

ಸ ಯಾತಿ ಪರಮಂ ಸ್ಥಾನಂ ದೇವದೇವಸ್ಯ ಧೂರ್ಜಟೇಃ ।
ಏವಂ ಧರ್ಮಂ ವಿದಿತ್ವಾ ತು ಕಥಂ ಯಾಸ್ಯೇ ರಣಾಂತರಾತ್ ॥ ೪೮ ॥

ತಸ್ಮಾದನೇನ ರಾಜ್ಞಾಹಂ ಯೋತ್ಸ್ಯೇ ಮ್ಯಭಿಮುಖೇ ಸ್ಥಿತಃ ।
ಇತ್ಯುಕ್ತ್ವಾ ಕೋಲರಾಜೋಽಪಿ ಕುರ್ವನ್ಘುರಘುರಾರವಂ ॥ ೪೯ ॥

ರಾಜಾನಂ ಪ್ರತ್ಯುದಚಲತ್ಸ ಜಂಗಮ ಇವಾಚಲಃ ।
ಪತ್ತಿಂ ವಿದ್ರಾವಯಾಮಾಸ ಪ್ರಸ್ಥಿತೈಃ ಶ್ವಾಸಮಾರುತೈಃ ॥ ೫೦ ॥

ಪೋತ್ರೇಣ ಪೃಥುನಾ ವೇಗಾತ್ಸ್ಯಂದನಾನು ದಚಿಕ್ಷಿಪತ್ ।
ಅತಿತೀಕ್ಷ್ಣೈಃ ಖುರಾಘಾತೈಃ ತುರಗಾನ ಪ್ರಪಾತಯತ್ ॥ ೫೧ ॥

---

ಎರಡು ಹಂದಿಗಳ ಮಧ್ಯದಲ್ಲಿ ಸಿಂಹವು ನೀರನ್ನು ಕುಡಿಯುವುದಕ್ಕೆ ಹೆದರುವುದು ಆದ್ದರಿಂದ ನಮ್ಮ ಜಾತಿಯಲ್ಲಿರುವ ಪರಾಕ್ರಮವು ಬಹಳವಾದದ್ದು. ಶತ್ರುವಿಗೆ ಎದುರಾಗಿ ಯುದ್ಧದಲ್ಲಿ ಪ್ರಾಣವನ್ನು ಬಿಡುವ ವೀರನಿಗೆ ದೇವಪೂಜ್ಯವಾದ ಮಹೇಶ್ವರನ ಸ್ಥಾನವು ದೊರಕುವುದು. ಈ ಧರ್ಮವನ್ನು ತಿಳಿದಿರುವ ನಾನು ಯುದ್ಧಮಾಡುವುದನ್ನು ಬಿಟ್ಟು ಹೇಗೆ ಹೊರಕ್ಕೆ ಹೋಗಲಿ, ಈಗ ತಾನಾಗಿ ಬಂದಿರುವ ರಾಜನಿಗೆ ಎದುರಾಗಿ ಯುದ್ಧವನ್ನು ಮಾಡುತ್ತೇನೆ." ಎಂದು ಹೇಳಿ ಘುರ ಘುರ ಧ್ವನಿಯನ್ನು ಮಾಡುತ್ತಾ ಓಡಾಡುತ್ತಿರುವ ಬೆಟ್ಟದಹಾಗೆ, ರಾಜನಿಗೆ ಎದುರಾಗಿ ನುಗ್ಗಿತು. ಆಗ ಅದರ ಉಸಿರಿನ ವೇಗಕ್ಕೆ ಹೆದರಿ ರಾಜನ ಹತ್ತಿರದಲ್ಲಿದ್ದ ಭಟರು ಓಡಿದರು.

೫೧-೫೭. ಆಗ ಅದು ತನ್ನ ದೊಡ್ಡವಾದ ಮುಖದಿಂದ (ಮುಸುಡಿಯಿಂದ) ರಥವನ್ನು ಹಾರಿಸಿತು. ಬಹಳ ಹರಿತವಾದ ಗೊರಸುಗಳಿಂದ ಕುದುರೆಗಳನ್ನು ಕೆಡವಿತು. ಕೋರೆಯ ಹಲ್ಲಿನ ಏಟಿನಿಂದ ಆನೆಗಳ ಸೊಂಡಲನ್ನು ಸೀಳಿತು. ಆಗ

ದಂಷ್ಟ್ರಾಘಾತೈಶ್ಚ ಕರಿಣಾಂ ಶುಂಡಾದಂಡಾ ನಪಾತಯತ್ ।
ಅಥ ರಾಜಾ ಸಮಾಲೋಕ್ಯ ಸೈನ್ಯಂ ಸೂಕರನಿರ್ಜಿತಂ ॥ ೫೨ ॥

ತುಂಗಂ ತುರಗ ಮಾರುಹ್ಯ ಸಜ್ಯಮಾದಾಯ ಕಾರ್ಮುಕಂ ।
ಸೂಕರಂ ಪರ್ವತಾಕಾರಂ ಶರವರ್ಷೈರ್ವವರ್ಷ ಚ ॥ ೫೩ ॥

ಸ ತು ನಿರ್ಧೂಯ ಬಾಣೌಘಂ ದಂಷ್ಟ್ರಾಘಾತೈಃ ಸಟಾಚ್ಛಟೈಃ ।
ಜಘಾನ ವೇಗಾತ್ತುರಗಂ ದಂಷ್ಟ್ರಯಾ ವಜ್ರಧಾರಯಾ ॥ ೫೪ ॥

ರಾಜಾ ತುರಗ ಮಾಪ್ಲುತ್ಯ ತ್ಯಕ್ತ್ವಾ ನಿಪತಿತಂ ಹಯಂ ।
ಆರೂಢಸ್ಯಂದನೋ ಬಾಣಾನ್ನಿಜಘಾನ ತದಂಗಕೇ ॥ ೫೫ ॥

ಸ ವರಾಹೋಽಪಿ ದಂಷ್ಟ್ರಾಭ್ಯಾಂ ಪ್ರೋತ್ರೇಣ ಪೃಥುನಾ ಖುರೈಃ ।
ಜವಾ ತ್ಸಂಚೂರ್ಣಯಾಮಾಸ ಸಸೂತಂ ಸಹಯಂ ರಥಂ ॥ ೫೬ ॥

---

ರಾಜನು ತನ್ನ ಸೇನೆಯೆಲ್ಲವೂ ಹಂದಿಯ ಪರಾಕ್ರಮಕ್ಕೆ ಸೋತುಹೋಗಿರುವುದನ್ನು ನೋಡಿ, ಎತ್ತರವಾದ ಕುದುರೆಯನ್ನು ಹತ್ತಿ ಬಿಲ್ಲನ್ನು ಸಿದ್ಧಮಾಡಿಕೊಂಡು, ಬೆಟ್ಟದ ಹಾಗೆ ಇರುವ ಆ ಹಂದಿಯಮೇಲೆ ಬಹಳ ಬಾಣಗಳನ್ನು ಬಿಟ್ಟನು. ಅದು ತನ್ನ ಶರೀರದ ರೋಮುಗಳಿಂದಲೂ, ಕೋರೆಯಹಲ್ಲಿನಿಂದಲೂ ರಾಜನ ಬಾಣಗಳನ್ನು ಕೆಡವಿತು. ವಜ್ರದ ಅಲಗಿನಂತೆ ಇರುವ ತನ್ನ ಕೋರೆಯಹಲ್ಲಿನಿಂದ ರಾಜನ ಕುದುರೆಯನ್ನು ಕೊಂದಿತು. ರಾಜನು ನೆಲಕ್ಕೆ ಬಿದ್ದ ಕುದುರೆಯಿಂದ ಹಾರಿ, ಬೇಗನೆ ರಥವನ್ನು ಹತ್ತಿ ಹಂದಿಯಮೇಲೆ ಬಾಣಗಳನ್ನು ಬಿಟ್ಟನು. ಆಗ ಹಂದಿಯು ತನ್ನ ಕೋರೆಯಹಲ್ಲು, ಮುಖ, ಗೊರಸು, ಇವುಗಳಿಂದ ರಥವನ್ನು ಬೇಗ ಮುರಿದು ಹಾಕಿತು. ಆಗ ರಾಜನು ಸಾರಥಿ, ಕುದುರೆ ಇವುಗಳಿಂದ ಕೂಡಿದ ರಥವು ಹೋದದ್ದನ್ನು ನೋಡಿ, ಆ ರಥದಿಂದ ಇಳಿದು, ಹಂದಿಯಮೇಲೆ ಬಹಳ ಕೋಪದಿಂದ, ವಜ್ರಾಯುಧಕ್ಕೆ ಸಮನಾದ ಗದಾಯುಧವನ್ನು ಉಪಯೋಗಿಸಿದನು.

ಅವತೀರ್ಯ ರಥಾದ್ರಾಜಾ ಸೂಕರಂ ರೋಷರೂಷಿತಃ ।
ಗದಯಾ ವಜ್ರಸಮಯಾ ತಾಡಯಾಮಾಸ ಮಸ್ತಕೇ ॥ ೫೭ ॥

ಗದಾಘಾತೇನ ತ್ರೀವೇಣ ಸಹಸಾ ಭಿನ್ನಮಸ್ತಕಃ ।
ಕ್ಷತಜಾಲಿಪ್ತಸರ್ವಾಂಗೋ ನಿಪಪಾತ ಮಹೀತಲೇ ॥ ೫೮ ॥

ಸ ಪಶ್ಯತ್ಯೇವ ನೃಪತೌ ಹಿತ್ವಾ ತಾಂ ಸೌಕರೀಂ ತನುಂ ।
ದಿವ್ಯಾಂಬರೋ ದಿವ್ಯವಪು ರ್ದಿವ್ಯಾಭರಣ ಭೂಷಿತಃ ॥ ೫೯ ॥

ದಿವ್ಯಂ ವಿಮಾನ ಮಾರುಹ್ಯ ಪ್ರಯಯೌ ತ್ರಿದಶಾಲಯಂ ।
ಅಥ ಸಾ ದಿವ್ಯವಪುಷಂ ಭರ್ತಾರಂ ತಂ ವಿಲೋಕ್ಯ ಚ ॥ ೬೦ ॥

ತೇನೈವ ಸಹ ಗಂತುಂ ಚ ನಿಶ್ಚಿತ್ಯ ಮನಸಾ ಸ್ವಯಂ ।
ಯುಯುಧೇ ರಾಜರಾಜೇನ ಸೂಕರೀ ಭೀತಿವರ್ಜಿತಾ ॥ ೬೧ ॥

ನಿಪಾತ್ಯ ಪತ್ತಿಂ ಸಂಚೂರ್ಣ್ಯ ಸ್ಯಂದನಾನ್ ತುರಗಾನ್ಗಜಾನ್ ।
ದಂಷ್ಟ್ರಾಭ್ಯಾಂ ಸಾ ವಿನಿರ್ಭಿದ್ಯ ಸಮರಂ ಸಾದ್ಭುತಂ ವ್ಯಧಾತ್ ॥ ೬೨ ॥

---

೫೭-೬೧. ಗದಾಯುದ್ಧದ ಏಟು ತಲೆಗೆ ಬಿದ್ದಕಾರಣ ಹಂದಿಯು ತಲೆಯು ಒಡೆದುಹೋಗಿ, ಮೈಯೆಲ್ಲವೂ ರಕ್ತ ಸುರಿದು ಅದು ನೆಲಕ್ಕೆ ಬಿದ್ದು ಪ್ರಾಣವನ್ನು ಬಿಟ್ಟಿತು. ರಾಜನು ನೋಡುತ್ತಿದ್ದನು. ಅವನ ಎದುರಿಗೆ ಅದು ತನ್ನ ಹಂದಿಯ ಆಕಾರದ ಶರೀರವನ್ನು ಬಿಟ್ಟಒಡನೆ, ಉತ್ತಮವಾದ ವಸ್ತ್ರಾಭರಣಗಳನ್ನು ಧರಿಸಿ, ಉತ್ತಮವಾದ ದೇವತಾ ಶರೀರವನ್ನು ಹೊಂದಿ, ಶ್ರೇಷ್ಠವಾದ ವಿಮಾನ ದಿಂದ ಸ್ವರ್ಗಕ್ಕೆ ಹೋಯಿತು. ಆಗ ಹೆಣ್ಣುಹಂದಿಯು ತನ್ನ ಗಂಡನ ಉತ್ತಮ ಗತಿಯನ್ನು ನೋಡಿ, ತಾನೂ ಅವನ ಜೊತೆಯನ್ನು ಹೊಂದುವುದಕ್ಕೆ ನಿಶ್ಚಯ ಮಾಡಿಕೊಂಡು ರಾಜರಾಜಪಾಂಡ್ಯನ ಸಂಗಡ ಧೈರ್ಯದಿಂದ ಯುದ್ಧಮಾಡಲು ಸಿದ್ಧ ವಾಯಿತು.

೬೨-೬೬. ಆ ಹಂದಿಯು ಭಟರನ್ನು ಕೆಡವಿ ರಥಗಳನ್ನು ಮುರಿದು, ತನ್ನ ಕೋರೆಯ ಹಲ್ಲುಗಳಿಂದ ಆನೆ, ಕುದುರೆಗಳನ್ನು ಕೊಂದು, ನೋಡುವವರಿಗೆ ಆಶ್ಚರ್ಯ

ತತಸ್ತು ಜರ್ಝರೋ ನಾಮ ಲುಬ್ಧಕಃ ಸೂಕರೀಂ ಶರೈಃ ।
ವಿವ್ಯಾಧ ಸಾ ಸ್ವದಂಷ್ಟ್ರಾಭ್ಯಾಂ ದ್ವಿಧಾ ಕೃತ್ವಾ ನ್ಯಪಾತಯತ್ ॥ ೬೩ ॥

ಪತಮಾನೇನ ತೇನಾಪಿ ಖಡ್ಗೇನ ವಿದಳೀಕೃತಾ ।
ಸ್ರವದ್ರಕ್ತಪ್ರವಾಹೈಶ್ಚ ಸೂಕರೀ ನಿಪಪಾತ ಸಾ ॥ ೬೪ ॥

ಜನಾನಾಂ ಪಶ್ಯತಾಮುಗ್ರೇ ಸಾಪಿ ದಿವ್ಯವಪುರ್ಧರಾ ।
ದಿವ್ಯಂ ವಿಮಾನಮಾರುಹ್ಯ ಭರ್ತೃವತ್ತ್ರಿದಿವಂ ಯಯೌ ॥ ೬೫ ॥

ರಾಜಾಪಿ ವಿಸ್ಮಿತೋ ಭೂತ್ವಾ ಮಹಾಬಲಪರಾಕ್ರಮಃ ।
ಮಹದ್ಭಿರ್ಬಲಸಂಘೈಶ್ಚ ಪ್ರಯಯೌ ಸ್ವಪುರೀಂ ಪ್ರತಿ ॥ ೬೬ ॥

ಯತ್ರೈವ ಪರ್ವತಾಕಾರಾ ಪತಿತಾ ಸೌಕರೀ ತನುಃ ।
ವರಾಹಪರ್ವತ ಇತಿ ತತ್ರಾಸೀತ್ಪರ್ವತೋತ್ತಮಃ ॥ ೬೭ ॥

---

ವಾಗುವಂತೆ ಯುದ್ಧವನ್ನು ಮಾಡಿತು. ಅನಂತರದಲ್ಲಿ ಜರ್ಝರನೆಂದು ಹೆಸರುಳ್ಳ ಬೇಡರವನು ಆ ಹಂದಿಯನ್ನು ಬಾಣಗಳಿಂದ ಬಲವಾಗಿ ಹೊಡೆದನು. ಅದು ತನ್ನ ಕೋರೆಯ ಹಲ್ಲುಗಳಿಂದ ಅವನನ್ನು ಎರಡು ತುಂಡಾಗಿ ಸೀಳಿತು. ಅದರಿಂದ ಅವನು ಮೃತನಾಗಿ ಬಿದ್ದನು. ಅವನು ಬೀಳುವಾಗ ಅವನ ಕತ್ತಿಯ ಅಲಗು ನಾಟಿಕೊಂಡು ಅದರಿಂದ ಹಂದಿಯು ಪ್ರಾಣವನ್ನು ಬಿಟ್ಟಿತು. ಆ ಹಂದಿಯೂ ಎಲ್ಲರೂ ನೋಡುತ್ತಿರುವಾಗಲೇ ಉತ್ತಮವಾದ ಶರೀರವನ್ನು ಧರಿಸಿ, ದಿವ್ಯವಾದ ವಿಮಾನವಲ್ಲಿ ಕೂತುಕೊಂಡು ತನ್ನ ಪತಿಯ ಹಾಗೆ ಸ್ವರ್ಗಕ್ಕೆ ಹೋಯಿತು. ಬಹಳ ಪರಾಕ್ರಮಶಾಲಿಯಾದ ರಾಜರಾಜಪಾಂಡ್ಯನು ಇದನ್ನು ನೋಡಿ ಆಶ್ಚರ್ಯಪಟ್ಟನು. ಅನಂತರದಲ್ಲಿ ತನ್ನ ದೊಡ್ಡ ಸೇನೆಯೊಡನೆ ಮಧುರಾನಗರಕ್ಕೆ ಬಂದನು.

೬೭. ಬೆಟ್ಟದಂತೆ ಇರುವ ಆ ಹಂದಿಯ ಶರೀರವು ಬಿದ್ದಿರುವ ಪ್ರದೇಶವನ್ನು ವರಾಹಪರ್ವತವೆಂಬ ಹೆಸರಿನಿಂದ ಜನರು ಕರೆಯುತ್ತಿದ್ದರು. ಪರಮಪವಿತ್ರವಾದ ಆ ವರಾಹಪರ್ವತದಲ್ಲಿ ಸಿದ್ಧರೂ, ಯೋಗಿಗಳೂ, ಅಷ್ಟಸಿದ್ಧಿಗಳನ್ನು ಪಡೆಯುವುದಕ್ಕಾಗಿ ತಪಸ್ಸನ್ನು ಮಾಡುತ್ತಿರುವರು.

ತತ್ರ ಸಿದ್ಧಾ ಯೋಗಿನಶ್ಚ ಪರ್ವತೇತ್ಯಂತಪಾವನೇ ।
ತಪಶ್ಚರಂತಿ ಸತತ ಮಣಿಮಾದ್ಯಷ್ಟಸಿದ್ಧಯೇ ॥ ೬೮ ॥

॥ ಋಷಯ ಊಚುಃ ॥

ವರಾಹಪರ್ವತಸ್ಯೇಹ ವರಾಹಪ್ರಭವಸ್ಯ ಚ ।
ಮಹತ್ವಂ ಪಾವನತ್ವಂ ಚ ಕಥಮಾಸೀದ್ಧಟೋದ್ಭವ ॥ ೬೯ ॥

॥ ಅಗಸ್ತ್ಯ ಉವಾಚ ॥

ರಂಗವಿದ್ಯಾಧರೋ ನಾಮ ಗಂಧರ್ವಃ ಪೂರ್ವಜನ್ಮನಿ ।
ಪುಲಸ್ತ್ಯಶಾಪಾ ತ್ಕ್ರೋಡೋಭೂ ತ್ಪುನ ಸ್ತತ್ಪ್ರತಿಶಾಪತಃ ॥ ೭೦ ॥

ಸುಂದರೇಶಾಂಶಭೂತೇನ ರಾಜರಾಜೇನ ತಾಡಿತಃ ।
ಭೂಯಸ್ತ್ರಿ ದಿವ ಮಾಪೇದೇ ಪುಣ್ಯಾತಿಶಯಸಂಯುತಃ ॥ ೭೧ ॥

ತಸ್ಯ ಪುಣ್ಯವತೋ ಗಾತ್ರಸಂಭೂತಃ ಪರ್ವತೋತ್ತಮಃ ।
ಅತ್ಯಂತ ಪಾವನ ಶ್ಚಾಸೀತ್ತ ತ್ತುಲ್ಯಂ ನ ತಪಸ್ಸ್ಥಲಂ ॥ ೭೨ ॥

---

೬೮. ಋಷಿಗಳು ಹೇಳಿದರು:—ವರಾಹದಿಂದ ಉಂಟಾದ ವರಾಹಪರ್ವತಕ್ಕೆ ಮಹಿಮೆಯೂ, ಅಷ್ಟುಮಟ್ಟಿನ ದೊಡ್ಡ ಆಕಾರವೂ ಯಾತರಿಂದ ಉಂಟಾಯಿತು ಅದನ್ನು ನಮಗೆ ತಿಳಿಸು.

೬೯-೭೨. ಅಗಸ್ತ್ಯಋಷಿಯು ಹೇಳಿದನು :—ರಂಗವಿದ್ಯಾಧರನೆಂದು ಹೆಸರುಳ್ಳ ಗಂಧರ್ವನು ಹಿಂದಿನ ಜನ್ಮದಲ್ಲಿ ಪುಲಸ್ತ್ಯರುಷಿಯ ಶಾಪದಿಂದ ಹಂದಿಯಾಗಿ, ಪ್ರತಿಶಾಪದಿಂದ ಸುಂದರೇಶ್ವರನ ಅಂಶದಿಂದ ಇರುವ ರಾಜರಾಜಪಾಂಡ್ಯನಿಂದ ಬಾಣದ ಪೆಟ್ಟನ್ನು ಅನುಭವಿಸಿ, ತನ್ನ ಪುಣ್ಯದಿಂದ ಕೂಡಿದವನಾಗಿ ಪುನಃ ಸ್ವರ್ಗಕ್ಕೆ ಹೋದನು. ಪುಣ್ಯವಂತನಾದ ಅವನ ಶರೀರ ಸಂಬಂಧದಿಂದ ಉಂಟಾದ ಶ್ರೇಷ್ಠವಾದ ಪರ್ವತಕ್ಕೆ ಸಮನಾದ ಪವಿತ್ರವಾದ ಪರ್ವತವೂ, ತಪಸ್ಸಿಗೆ ತಕ್ಕ ಪ್ರದೇಶವೂ ಎಲ್ಲಿಯೂ ಇರುವ

ತಸ್ಮಾತ್ತತ್ರ ತಪಸ್ಯಂತಿ ದೇವತಾದಾನವಾದಯಃ ।
ತೇಷಾಮನುಗ್ರಹಾರ್ಥಂ ಚ ಸಿದ್ಧವೇಷಧರೋ ಹರಃ ॥ ೭೩ ॥

ಸುಂದರೇಶೋ ದಯಾಮೂರ್ತಿಸ್ತತ್ರ ಸಾನ್ನಿಧ್ಯಕೃತ್ಸದಾ ।
ಯದಾ ವರಾಹಯೋರ್ನ್ಯಾಂ ತೇ ಸಂಜಾತಾಶ್ಶೂದ್ರಸೂನವಃ ॥ ೭೪ ॥

ತೇಷಾಂ ಮಾತಾ ಸೂಕರೀ ಚ ಜನಕಃ ಸುಂದರೇಶ್ವರಃ ।
ಉಭೌ ಚ ಮುನಿಶಾಪೇನ ಮೃಗಯಾಗತಭೂಭುಜಾ ॥ ೭೫ ॥

ಯುದ್ಧಂ ಕೃತ್ವಾ ವಿಕ್ರಮೇಣ ಪ್ರಾಪತು ಸ್ತೌ ತ್ರಿವಿಷ್ಟಪಂ ।
ವರಾಹವಟವಸ್ಸರ್ವೇ ಸ್ತನ್ಯಪಾನವಿಹೀನತಃ ॥ ೭೬ ॥

ಅರಕ್ಷಕತ್ವಾತ್ತತ್ರೈವ ಪ್ರತಪಂತ್ಯಾತಪಾರ್ದಿತಾಃ ।
ತತ್ಕಾಲೇ ಸರ್ವದೇವೇಶಃ ಕೃಪಾವಾನ್ಸರ್ವರಕ್ಷಕಃ ॥ ೭೭ ॥

---

ದಿಲ್ಲ. ಆದ್ದರಿಂದಲೇ ಆ ಪರ್ವತದಲ್ಲಿ ದೇವತೆಗಳೂ, ದಾನವರೂ ಇವರೇ ಮೊದಲಾದವರು ತಪಸ್ಸನ್ನು ಮಾಡುತ್ತಿರುವರು. ಅವರಿಗೆ ಅನುಗ್ರಹವನ್ನು ಉಂಟುಮಾಡುವುದಕ್ಕಾಗಿ ಸುಂದರೇಶ್ವರನು ಸಿದ್ಧಪುರುಷನ ರೂಪವನ್ನು ಧರಿಸಿ, ಆ ಪರ್ವತದಲ್ಲಿ ವಾಸವಾಗಿರುವನು.

೭೪–೭೬. ಶೂದ್ರಜಾತಿಯ ಆ ಹುಡುಗರು ಆ ಹಂದಿಯ ಜನ್ಮವನ್ನು ಹೊಂದಿದರು. ಅವರ ತಾಯಿ ತಂದೆಗಳು ಬೇಟೆಗಾಗಿ ಬಂದ ರಾಜನಿಂದ ಸ್ವರ್ಗಕ್ಕೆ ಹೋದರು. ಸಣ್ಣ ಸಣ್ಣ ಮರಿಗಳಾದ ಅವರು ಎದೆ ಹಾಲಿಲ್ಲದೆ, ರಕ್ಷಕರು ಯಾರೂ ಇಲ್ಲದೆ, ಬಿಸಿಲಿನಿಂದ ಬಳಲುತ್ತಾ ಕಾಡಿನಲ್ಲಿ ಸಂಕಟಪಡುತ್ತಿದ್ದರು.

೭೭–೮೦. ಆ ಕಾಲದಲ್ಲಿ ದೇವದೇವಾಧಿಪನಾದ, ಸರ್ವಜ್ಞನಾದ, ದಯಾಶಾಲಿಯಾದ, ಎಲ್ಲರನ್ನೂ ಕಾಪಾಡುವ, ಎಲ್ಲರಿಗೂ ಶ್ರೇಯಸ್ಸನ್ನು ಉಂಟುಮಾಡುವ

ಸರ್ವಜ್ಞಃ ಸುಂದರೇಶಶ್ಚ ಸರ್ವಭೂತಹಿತೇ ರತಃ ।
ಪಾರ್ವತ್ಯಾ ಸಹಿತೋ ದೇವ್ಯಾ ವಾಮಾರ್ಧಾಸಕ್ತಗಾತ್ರಯಾ ॥ ೭೮ ॥

ವಿಮಾನಮಧಿರುಹ್ಯೇಶೋ ವೃಷಭಧ್ವಜಭೂಷಿತಂ ।
ಯದೃಚ್ಛಯಾ ಸಂಚರತಿ ಶಂಕರಸ್ತದ್ವನಾಂತರೇ ॥ ೭೯ ॥

ದೃಷ್ಟ್ವಾ ದೇವೀ ಕ್ರೋಡಪೋತಾನ್ಸಂತಪ್ತಾನ್ಭಾನುಭಾನುಭಿಃ ।
ಆಲೋಕಯಾ ಲೋಕಯೇತಿ ದರ್ಶಯಾಮಾಸ ತಾನ್ಪ್ರಭೋಃ ॥ ೮೦ ॥

ವರಾಹಪೋತಾನಾಲೋಕ್ಯ ವರದಾನವಿಶಾರದಃ ।
ತನ್ಮಾತೃವೇಷಧಾರೀ ಸ ತೇಭ್ಯಃ ಸ್ತನ್ಯಂ ಪ್ರದಾಯ ಚ ॥ ೮೧ ॥

ಬಲಂ ಜ್ಞಾನಂ ಚ ವಿಜ್ಞಾನಂ ಸಾಮರ್ಥ್ಯಂ ಮಾನುಷೀಂ ತನುಂ ।
ವಿಕ್ರಮಂ ಚ ಪುನರ್ದತ್ವಾ ಸಾಂಬಶ್ಶಂಭು ಸ್ತಿರೋದಧೇ ॥ ೮೨ ॥

---

ಸುಂದರೇಶ್ವರನು ತನ್ನ ಎಡಭಾಗದಲ್ಲಿರುವ ಪಾರ್ವತೀದೇವಿಯೊಡನೆ ವೃಷಭಧ್ವಜದಿಂದ ಪ್ರಕಾಶಿಸುತ್ತಿರುವ ವಿಮಾನವನ್ನು ಹತ್ತಿಕೊಂಡು ಬಂದನು. ತನ್ನ ಇಚ್ಛಾನುಸಾರವಾಗಿ ಸಂಚರಿಸುತ್ತಿರುವ ದೇವನಾದ ಮಹೇಶ್ವರನಿಗೆ ಪಾರ್ವತಿಯು ಸೂರ್ಯಕಿರಣಗಳಿಂದ ಸಂಕಟಪಡುತ್ತಿರುವ ಆ ಹಂದಿಯ ಮರಿಗಳನ್ನು ಅನುಗ್ರಹಿಸುವುದಕ್ಕಾಗಿ ತೋರಿಸಿದಳು.

೮೧-೮೨. ವರಗಳನ್ನು ಕೊಡುವುದರಲ್ಲಿ ನಿಪುಣನಾದ ಪರಮೇಶ್ವರನು ಅವುಗಳನ್ನು ನೋಡಿ, ಅವುಗಳ ತಾಯಿಯ ಆಕಾರವನ್ನು ಧರಿಸಿಕೊಂಡು ಬಂದು ಅವುಗಳಿಗೆ ಸ್ತನ್ಯವನ್ನು ಕೊಟ್ಟನು. ಆವುಗಳಿಗೆ ದೇಹಶಕ್ತಿ, ಜ್ಞಾನ, ವಿಜ್ಞಾನಗಳು, ಬುದ್ಧಿಶಕ್ತಿ, ಮನುಷ್ಯರಂತೆ ಇರುವ ಆಕಾರ, ಪರಾಕ್ರಮ ಇವುಗಳನ್ನು ಅನುಗ್ರಹಿಸಿ, ಅದೃಶ್ಯನಾದನು. ಪರಮೇಶ್ವರನು ಅನುಗ್ರಹಿಸಿದ ಸ್ತನ್ಯಾಮೃತದ ಪಾನದಿಂದ ಅವರು ಮುಖವು ಮಾತ್ರ ವರಾಹದ ಆಕೃತಿಯೂ, ಇತರ ಭಾಗವೆಲ್ಲವೂ ಮನುಷ್ಯರಂತೆಯೂ, ಇರುವ ದೇಹವನ್ನು ಧರಿಸಿ, ಬಲ, ಜ್ಞಾನ ಇವೇ ಮೊದಲಾದ ಉತ್ತಮ ಗುಣಗಳಿಂದ ದಿನೇ ದಿನೇ ಅಭಿವೃದ್ಧಿಯನ್ನು ಹೊಂದುತ್ತಾ ಬಂದರು.

ತತ್ಸ್ತನ್ಯಾಮೃತಪಾನೇನ ಬಲಜ್ಞಾನಾದಿಸದ್ಗುಣೈಃ ।
ನೃಮುಖಮಾತ್ರವರಾಹಾಢ್ಯಾಃ ಪೃಥುಕಾಃ ವವೃಧುಃ ಕ್ಷಣಾತ್ ॥ ೮೩ ॥

ಹಾಲಾಸ್ಯನಾಥೋ ಭಗವಾನ್ಕಾಲಕೂಟಲಸದ್ಗಲಃ ।
ಏವಂ ವರಪ್ರದಾನೇನ ಕ್ರೋಡಪೋತಾನ ಪಾಲಯತ್ ॥ ೮೪ ॥

ಪಂಚಚತ್ವಾರಿಂಶಿಕೇಯಂ ಲೀಲಾ ಪ್ರೋಕ್ತಾ ಮಹೇಶಿತುಃ ।
ಮಹಾಶಾಪಮಹಾಪಾಪ ಮಹತಾಪಾಪನೋದಿನೀ ॥ ೮೫ ॥

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಸೂಕರಶಿಶುಸ್ತನ್ಯಪಾನಪ್ರದಾನಂ ನಾಮ
ಏಕಪಂಚಾಶೋಽಧ್ಯಾಯಃ

---

೮೩–೮೫. ಕಾಲಕೂಟವಿಷದಿಂದ ಪ್ರಕಾಶಿಸುತ್ತಿರುವ ಕಪ್ಪಾದ ಕುತ್ತಿಗೆಯುಳ್ಳ ಹಾಲಾಸ್ಯೇಶ್ವರನು ವರಾಹಶಿಶುಗಳನ್ನು ಈ ಪ್ರಕಾರದಿಂದ ರಕ್ಷಿಸಿದನು. ದೊಡ್ಡದಾದ ಶಾಪ, ಪಾಪ ಇವುಗಳನ್ನು ನಾಶಮಾಡುವ ಹಾಲಾಸ್ಯೇಶ್ವರನು ನಡಸಿದ ನಲವತ್ತೈದನೆಯ ಲೀಲೆಯನ್ನು ಹೇಳಿರುವೆನು.

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ
ಸೂಕರಶಿಶು ಸ್ತನ್ಯಪಾನಪ್ರದಾನವೆಂದು ಹೆಸರುಳ್ಳ ಐವತ್ತೊಂದನೆಯ
ಅಧ್ಯಾಯವು ಮುಗಿದುದು .



॥ ಶ್ರೀಃ ॥
॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ದ್ವಿಪಂಚಾಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ತಾನ್ಕ್ರೋಡಪೋತಾನ್ಸಚಿವಾನ ಕರೋತ್ಪಾಂಡ್ಯಭೂಪತೇಃ ।
ಯಯಾ ಶಂಭುಃ ಸುಂದರೇಶ ಸ್ತಾಂ ಲೀಲಾಂ ಕಥಯಾಮ್ಯಹಂ ॥ ೧ ॥

ಯದಾ ಜಗೋಪ ಭಗವಾಂ ಸ್ತನ್ಯಪಾನೇನ ತಾಞ್ಛಿಶೂನ್ ।
ತದಾ ತೇ ಯವ್ವನಂ ಪ್ರಾಪ್ತಾ ನರಾಕಾರಮುಖಂ ವಿನಾ ॥ ೨ ॥

ಈಶ್ವರ ಸ್ತನ್ಯಪಾನೇನ ಬಲವಂತೋಽತಿಗರ್ವಿತಾಃ ।
ಸಮಸ್ತಶಾಸ್ತ್ರನಿಪುಣಾಃ ಸದಾಚಾರಪರಾಯಣಾಃ ॥ ೩ ॥

---

### ಐವತ್ತೆರಡನೆಯ ಅಧ್ಯಾಯವು

೧–೫. ಅಗಸ್ತ್ಯರುಷಿಯು ಹೇಳಿದನು :—ಸುಂದರೇಶ್ವರನ ರೂಪದಿಂದ ಇರುವ ಶಿವನು ಹಂದಿಯ ಮರಿಗಳನ್ನು ಪಾಂಡ್ಯರಾಜನ ಮಂತ್ರಿಗಳನ್ನಾಗಿ ಮಾಡಿದ ಲೀಲೆಯನ್ನು ವರ್ಣಿಸುವೆನು. ಷಡ್ಗುಣೈಶ್ವರ್ಯ ಸಂಪನ್ನನಾದ ಪರಮೇಶ್ವರನು ಅವುಗಳಿಗೆ ಸ್ತನ್ಯವನ್ನು ಕೊಟ್ಟು ಕಾಪಾಡಿದನಂತರ ಮನುಷ್ಯರ ಮುಖವಿಲ್ಲದಿರುವ (ಹಂದಿಯ ಮುಖವುಳ್ಳವರಾದ) ಅವರು ಯೌವ್ವನವನ್ನು ಹೊಂದಿದರು. ಈಶ್ವರನ ಎದೆಹಾಲನ್ನು ಕುಡಿದಿರುವ ಕಾರಣ ಹೆಚ್ಚಿನ ಶಕ್ತಿಯುಳ್ಳವರಾಗಿ, ಅಹಂಕಾರವಿಲ್ಲದ

ನರಾ ಸ್ಸಮಸ್ತಾವಯವೈ ರ್ಮುಖಮಾತ್ರೇಣ ಸೂಕರಾಃ ।
ರಾಜನೀತಿಪ್ರವೀಣಾಶ್ಚ ವಾಚಾ ವಾಕ್ಪತಿನಾಸಮಾಃ ॥ ೪ ॥

ತೇ ಸದೈಕತ್ರ ಸಂಭೂಯ ವರ್ತಂತೇ ದ್ವಾದಶಾರ್ಕವತ್ ।
ದಯಯಾ ಕ್ಷಮಯಾ ತೇಷಾಂ ನ ತುಲ್ಯಾ ಭುವನತ್ರಯೇ ॥ ೫ ॥

ಏವಂ ಭೂತಾನ್ಸೂಕರಾಂಶ್ಚ ಸಮಾಲೋಕ್ಯಾತಿವಿಸ್ಮಿತಾ ।
ಸುಂದರೇಶ ಮುವೋಚತ್ವಾ ಸುಮೀನನಯನೇಶ್ವರೀ ॥ ೬ ॥

॥ ದೇವ್ಯುವಾಚ ॥

ದೇವದೇವ ಮಹಾದೇವ ಮಹೇಶ್ವರ ಸದಾಶಿವ ।
ಸುಂದರೇಶ ದಯಾಮೂರ್ತೇ ಮಮ ವಿಜ್ಞಾಪನಂ ಶೃಣು ॥ ೭ ॥

ವನೇ ಹಿಂಸ್ರಾದಿಸಂಹಾರೇ ಸೃಷ್ಟಾ ಚ ಮೃಗಯಾ ತ್ವಯಾ ।
ರಾಜಧರ್ಮೋ ಹಿ ಮೃಗಯಾ ತಸ್ಮಾದ್ರಾಜ್ಞೋ ನ ಕಿಲ್ಬಿಷಂ ॥ ೮ ॥

---

ವರಾಗಿ, ಎಲ್ಲಾ ಶಾಸ್ತ್ರಗಳಲ್ಲಿಯೂ ಬುದ್ಧಿವಂತರೂ, ಆಚಾರವಂತರೂ, ಆದ ಅವರು ರಾಜನೀತಿಯನ್ನು ತಿಳಿದುಕೊಂಡು, ಬೃಹಸ್ಪತಿಗೆ ಸರಿಯಾಗಿರುತ್ತಾ, ದ್ವಾದಶಾದಿತ್ಯರ ಹಾಗೆ ಒಂದೇಕಡೆಯಲ್ಲಿ ವಾಸಮಾಡುತ್ತಿದ್ದರು. ದಯೆಯಿಂದಲೂ, ಸಹನಗುಣ ದಿಂದಲೂ ಮೂರು ಲೋಕದಲ್ಲಿಯೂ ಅವರಿಗೆ ಸಮನಾದವರು ಯಾರೂ ಇರಲಿಲ್ಲ.

೬-೯. ಮೀನಾಕ್ಷೀದೇವಿಯು ಹೀಗೆ ಇರುವ ಅವರನ್ನು ನೋಡಿ, ಆಶ್ಚರ್ಯ ವುಳ್ಳವಳಾಗಿ, ಸುಂದರೇಶ್ವರನ ಸಂಗಡ ಮಾತನಾಡಿದಳು.

ದೇವಿಯು ಹೇಳಿದಳು :—ಎಲೈ ದೇವದೇವನೆ, ಸದಾಶಿವನೆ, ಮಹಾದೇವನೆ, ದಯಾಶಾಲಿಯಾದ ಸುಂದರೇಶ್ವರನೆ, ನನ್ನ ವಿಜ್ಞಾಪನೆಯನ್ನು ಕೇಳು. ನೀನು ಕಾಡಿನಲ್ಲಿ ಬೆಳದಿರುವ ದುಷ್ಟಮೃಗಗಳನ್ನು ಸಂಹಾರಮಾಡುವುದಕ್ಕಾಗಿಯೇ ಬೇಟೆ ಯಾಡುವ ವಿದ್ಯೆಯನ್ನು ನಿರ್ಮಿಸಿರುತ್ತೀಯೆ. ಆದ್ದರಿಂದ ರಾಜನಿಗೆ ಬೇಟೆಯಾ ಡುವುದು ಧರ್ಮವೇ ಹೊರತು ಪಾಪಕರವಲ್ಲ. ನೀನು ದೇವತೆಗಳೆಲ್ಲರಿಗೂ ಅಧಿಪತಿ ಯಾಗಿರುತ್ತೀಯೆ. ಹಂದಿಯು ಎಲ್ಲಾ ಪ್ರಾಣಿಗಳಿಗಿಂತಲೂ ಕೀಳುಜಾತಿಯದಾಗಿ

ನಾಥಸ್ತ್ವಂ ಸರ್ವದೇವಾನಾಂ ಜಂತೂನಾಮಧಮಃ ಕಿಟಿಃ ।
ಕಿಟಿವೇಷಂ ಸಮಾಸ್ಥಾಯ ಕೃಪಯಾ ಕ್ರೀಡಿತಂ ತ್ವಯಾ ॥ ೯ ॥

ತತ್ಕಾರಣಂ ವದೇದಾನೀಂ ವರದಾನವಿಶಾರದ ।
ಇತಿ ವಿಜ್ಞಾಪಿತಃ ಶಂಭುಃ ಸುಮೀನಾಕ್ಷ್ಯಾ ಚ ಸುಂದರಃ ॥ ೧೦ ॥

ಸರ್ವಾತ್ಮಾ ಸರ್ವಗಃ ಸರ್ವಃ ಸುಂದರಪ್ರಭುರಬ್ರವೀತ್ ।
ಬ್ರಹ್ಮಾದಿಕೀಟಪರ್ಯಂತಂ ಜಂಗಮಸ್ಥಾವರಂ ಜಗತ್ ॥ ೧೧ ॥

ನಿಖಿಲಂ ವ್ಯಾಪ್ಯ ತಿಷ್ಠಾಮಿ ಚಿದಾತ್ಮಾಹಮಖಂಡಿತಃ ।
ತತ್ತದಾತ್ಮತಯಾ ತತ್ತಚ್ಛರೀರೇಷ್ವಹಮೇವ ಹಿ ॥ ೧೨ ॥

ಪ್ರವಿಶ್ಯ ತತ್ತತ್ಕೃತ್ಯಾನಿ ಕರೋಮಿ ವಿಪುಲಾನಿ ಚ ।
ಆಕಾಶವದನಂತೋಹಮಖಂಡೋಽಹಮಭೇದವಾನ್ ॥ ೧೩ ॥

---

ಇರುವುದು. ನೀನು ಆ ಹಂದಿಯ ರೂಪವನ್ನು ಧರಿಸಿ, ಲೀಲೆಯನ್ನು ಈಗ ಆಚರಿಸಿ ರುತ್ತೀಯೆ. ವರಗಳನ್ನು ಕೊಡುವುದರಲ್ಲಿ ನಿಪುಣನಾದ ನೀನು ಹೀಗೆ ಮಾಡಲು ಕಾರಣವನ್ನು ಹೇಳು.

೧೦–೧೩. ಸುಂದರೇಶ್ವರನು ಮೀನಾಕ್ಷೀದೇವಿಯ ವಿಜ್ಞಾಪನೆಯನ್ನು ಕೇಳಿ, ಉತ್ತರವನ್ನು ಹೇಳಿದನು. ನಾನು ಬ್ರಹ್ಮ ಮೊದಲಾಗಿ ಕ್ರಿಮಿಯವರಿಗೂ ಸರ್ವಾತ್ಮನಾಗಿ ಸರ್ವದರಲ್ಲಿಯೂ ಪೂರ್ಣವಾಗಿರುವ ಪರಿಪೂರ್ಣವಾದ ಚಿದ್ರೂಪದಿಂದ ಸ್ಥಿರಚರಾತ್ಮಕವಾದ ಪ್ರಪಂಚವೆಲ್ಲವನ್ನೂ ವ್ಯಾಪಿಸಿರುವೆನು. ಆಯಾಯ ಶರೀರಗಳಲ್ಲಿ ಆಯಾಯ ಅಹಂಭಾವ ಸ್ಫೂರ್ತಿಯು ಉಂಟಾಗುವುದರಿಂದ, ಬೇಕಾದ ಹಾಗೆ ಆಯಾಯ ಕಾರ್ಯಗಳನ್ನು ನಾನು ಮಾಡುತ್ತಿರುವೆನು. ತತ್ತ್ವಸ್ಥಿತಿಯಲ್ಲಿ ನನ್ನ ರೂಪವು ಆಕಾಶದಂತೆ ಇತರ ಪದಾರ್ಥದೊಡನೆ ಬೆರೆಯುವುದಿಲ್ಲ. ಈ ನನ್ನ ರೂಪಕ್ಕೆ ನಾಶವೂ, * ಪರಿಚ್ಛಿನ್ನಭಾವವೂ, ಇಲ್ಲದೆ ಇರುವುದರಿಂದ ನಾನು ಏಕರೂಪದಿಂದ ಇರುವೆನು.

---

* ಪರಿಚ್ಛಿನ್ನಭಾವ=ಅಳತೆಗೆ ಸಿಕ್ಕದಿರುವುದು.

ಅಹಂ ತತ್ತದ್ವಪು ರ್ಧೃತ್ವಾ ಪಾಲಯಾಮ್ಯಖಿಲಂ ಜಗತ್ ।
ಯಥಾ ಸರ್ವಜನಾನಾಂ ಚ ಕರಾದ್ಯವಯವಾಃ ಸಮಾಃ ॥ ೧೪ ॥

ತಥಾ ಮಮಾಂಶಿನೋಽಂಶಾಶ್ಚ ಬ್ರಹ್ಮಾದ್ಯಾಃ ಸಕಲಾ ಜನಾಃ
ಪ್ರಾಣಿನಾಂ ಚ ಯಥಾ ಮೈತ್ರಂ ಸ್ವೇಷು ಸ್ವೇಷು ಚ ಕರ್ಮಸು ॥ ೧೫ ॥

ತಥಾ ಮಮಾಪಿ ಜಗತಿ ಮೈತ್ರಮಾಸೀ ನ್ಮದಾತ್ಮನಿ ।
ತ್ವಯಾ ತು ಶ್ರೂಯತಾಂ ತೇಷಾಂ ಶಾಪಜಾತಂ ತಪಸ್ವಿನಃ ॥ ೧೬ ॥

ಮುನಿಃ ಕ್ರುದ್ಧಶ್ಚ ಶಾಂತಶ್ಚ ಶಾಪಂ ತತ್ಪ್ರತಿ ಶಾಪಕಂ ।
ಅಪರಾಧಂ ಕುರ್ವತಾಂ ಚ ಕ್ರಮೇಣೈವಾ ಕರೋತ್ಪುರಾ ॥ ೧೭ ॥

ಜನಿಷ್ಯಥ ಕ್ರೋಡಯೋನ್ಯಾಂ ಯೂಯಂ ಮಯ್ಯಪರಾಧಿನಃ ।
ಪುನಶ್ಚ ಪ್ರತಿಶಾಪೇನ ಸೌಮ್ಯೇಶಃ ಸ್ತನ್ಯದಾನತಃ ॥ ೧೮ ॥

---

೧೪-೧೭. ನಾನು ಆಯಾಯ ಶರೀರಗಳನ್ನು ಧರಿಸಿ, ಪ್ರಪಂಚದ ತೊಂದರೆಯನ್ನು ತಪ್ಪಿಸಿ, ಪ್ರಪಂಚವೆಲ್ಲವನ್ನೂ ರಕ್ಷಿಸುವೆನು. ಪ್ರಪಂಚದಲ್ಲಿರುವ ಪ್ರಾಣಿಗಳಿಗೆಲ್ಲರಿಗೂ ಅವರ ಶರೀರದಲ್ಲಿರುವ ಅವಯವಗಳಲ್ಲಿ ಅಭಿಮಾನವು ಒಂದೇ ಸಮನಾಗಿರುವಂತೆ, ಎಲ್ಲರಿಗೂ ಮೂಲಕಾರಣನಾಗಿರುವ ನನಗೆ ಬ್ರಹ್ಮನೇ ಮೊದಲಾದವರೆಲ್ಲರಲ್ಲಿಯೂ ಪ್ರೀತಿಯು ಒಂದೇ ಸಮನಾಗಿರುವುದು. ಪ್ರಾಣಿಗಳಿಗೆ ಅವರವರ ಶರೀರದಲ್ಲಿರುವ ಅಭಿಮಾನದಂತೆ, ಚಿದ್ರೂಪದಿಂದ ಜಗತ್ತಿನಲ್ಲಿ ವ್ಯಾಪಿಸಿಕೊಂಡಿರುವ ನನ್ನ ಆಕಾರದ ವಿಷಯದಲ್ಲಿ ನನಗೂ ಬಹಳ ಅಭಿಮಾನವಿರುವುದು. ಈ ಪ್ರಾಣಿಗಳಿಗೆ ಬಂದಿರುವ ಪಾಪದ ಕ್ರಮವನ್ನು ಹೇಳುವೆನು ಕೇಳು. ತಪಸ್ಸನ್ನು ಮಾಡುತ್ತಿರುವ ಋಷಿಯು, ಕೋಪವುಳ್ಳವನಾಗಿ ತನಗೆ ಅಪರಾಧವನ್ನು ಮಾಡಿದವರಿಗೆ ಶಾಪವನ್ನು ಮೊದಲು ಕೊಟ್ಟನು. ಅನಂತರ ಉಪಶಾಂತನಾಗಿ ಅವರಿಗೆ ಪ್ರತಿಶಾಪವನ್ನು ಕೊಟ್ಟನು.

೧೮-೨೦. ಅವನು, ಅಪರಾಧಿಗಳಾದ ನೀವು ವರಾಹಜನ್ಮವನ್ನು ಹೊಂದಿ, ಎಂದು ಶಾಪವನ್ನು ಕೊಟ್ಟನಂತರ, ಭುಕ್ತಿ ಮುಕ್ತಿಗಳನ್ನು ಅನುಗ್ರಹಿಸುವ ಪರಮೇಶ್ವರನು ನಿಮಗೆ ಸ್ತನ್ಯವನ್ನು ಕೊಟ್ಟು ಕಾಪಾಡುವನು ಎಂದು ಅನುಗ್ರಹ

ರಕ್ಷಿಷ್ಯತಿ ಶಿವೋ ದೇವೋ ಯುಷ್ಮಾನ್ಭೋಗಾಪವರ್ಗದಃ ।
ಇತ್ಯನುಗ್ರಹವಂತಸ್ತೇ ವರಾಹಾಃ ಸೌಖ್ಯ ಮಾಯಯುಃ ॥ ೧೯ ॥

ಇತಿ ಶಾಪಾನ್ಮೋಚಿತಾಶ್ಚ ಸರ್ವೇ ಸೂಕರಸೂನವಃ ।
ವರಾಹಪರ್ವತಸ್ಯಾಂತ ರ್ಗುಹಾಯಾಂ ನಿವಸಂತಿ ತೇ ॥ ೨೦ ॥

ಪಾಂಡ್ಯಭೂಪಸ್ಯ ಸಚಿವಾ ನ್ಕಾರಯಿತ್ವಾಥ ತಾನಹಂ ।
ತೇಭ್ಯೋ ಮಹಾಭೋಗಭುಗ್ಭ್ಯೋ ದಾಸ್ಯಾಮ್ಯಂತೇ ಪರಾಂ ಗತಿಂ॥ ೨೧ ॥

ಇತಿ ಶ್ರುತ್ವಾ ಸುಮೀನಾಕ್ಷೀ ವಚನಂ ಸುಂದರೇಶಿತುಃ ।
ಪ್ರಭೂತಾನಂದಸದ್ಭಾವಾ ಪುಲಕಾಂಚಿತವಿಗ್ರಹಾ ॥ ೨೨ ॥

ಪುನಃ ಪುನಃ ಪ್ರಶಂಸಂತೀ ಮನಸಾ ತತ್ಕೃಪಾಂ ಪರಾಂ ।
ಸುಖೇನಾಸ್ತೇ ತಸ್ಯ ಪಾರ್ಶ್ವೇ ಸಾನಂದಾಲಿಂಗ್ಯ ತಂ ಶಿವಂ ॥ ೨೩ ॥

---

ವನ್ನು ಮಾಡಿರುವನು. ಇದರಿಂದ ಇವರು ಸುಖವನ್ನು ಹೊಂದಿರುವರು. ಇವರೆಲ್ಲರೂ ವರಾಹಪರ್ವತದ ಗುಹೆಯಲ್ಲಿ ವಾಸಮಾಡುತ್ತಾ, ಶಾಪದಿಂದ ಬಿಡುಗಡೆಯನ್ನು ಹೊಂದಿರುವರು.

೨೧–೨೬. ನಾನು ಅವರನ್ನು ಪಾಂಡ್ಯರಾಜನ ಮಂತ್ರಿಗಳನ್ನಾಗಿ ಮಾಡಿ, ಬಹಳ ಭೋಗಗಳನ್ನು ಅನುಭವಿಸಿದನಂತರ ಅವರಿಗೆ ಉತ್ತಮವಾದ ಗತಿಯನ್ನು ಅನುಗ್ರಹಿಸುವೆನು. ಮೀನಾಕ್ಷೀದೇವಿಯು, ಸುಂದರೇಶ್ವರನು ಹೇಳಿದ ಈ ಮಾತನ್ನು ಕೇಳಿ ಬಹಳ ಸಂತೋಷದಿಂದ ರೋಮಾಂಚವುಳ್ಳ ಶರೀರವುಳ್ಳವಳಾಗಿ ಪರಮೇಶ್ವರನಿಗೆ ಪ್ರಾಣಿಗಳಲ್ಲಿ ಇರುವ ದಯೆಯನ್ನು ಶ್ಲಾಘಿಸುತ್ತಾ, ಅವನ ಎಡ ಭಾಗದಲ್ಲಿ ಅವನನ್ನು ತಬ್ಬಿಕೊಂಡು ಸುಖದಿಂದ ಇದ್ದಳು. ಅನಂತರದಲ್ಲಿ ಮನೋ

ಅಥೇಶ್ವರಃ ಸುಂದರೇಶೋ ಮನೋವಾಗತಿದೂರಗಃ ।
ರಾಜರಾಜನೃಪಂ ಸ್ವಪ್ನೇ ಸಮಾಗತ್ಯೇವಮಬ್ರವೀತ್ ॥ ೨೪ ॥

ವರಾಹೋ ಯೂಥನಾಥಶ್ಚ ತ್ವಯಾ ಯಸ್ಸಂಹೃತಃ ಪುರಾ ।
ಸ ಏವ ಪರ್ವತಾಕಾರ ಸ್ತತ್ರಾಸೀತ್ಸೂಕರೇಶ್ವರಃ ॥ ೨೫ ॥

ತತ್ಪುತ್ರಾಶ್ಚ ಮುನೇಶ್ಶಾಪಾ ನ್ಮೋಚಿತಾಶ್ಚ ಮಯಾ ಪುರಾ ।
ಮದೀಯ ಸ್ತನ್ಯಪಾನೇನ ಜ್ಞಾನವಿಜ್ಞಾನಸಂಯುತಾಃ ॥ ೨೬ ॥

ತತ್ಪರ್ವತಗುಹಾಮಧ್ಯೇ ನಿವಸಂತಿ ಮದಾಜ್ಞಯಾ ।
ಸಹಸಾ ತಾನ್ಸಮಾಹೂಯ ಕೃತ್ವಾ ಮಂತ್ರಿಣ ಆತ್ಮನಃ ॥ ೨೭ ॥

ರಾಜಕಾರ್ಯಾಣಿ ಸರ್ವಾಣಿ ಕುರು ತ್ವೈಃ ಕೃತಿನಾಂ ವರೈಃ ।
ತೇಷಾಂ ಸಾಮರ್ಥ್ಯಸಂಭೂತಾ ನ್ಮಹತೋಽರ್ಥಾ ನ್ಮಹೀಪತೇ ॥ ೨೮ ॥

---

ವಾಗಗಮ್ಯನಾದ ಸುಂದರೇಶ್ವರನು, ರಾಜರಾಜಪಾಂಡ್ಯನ ಸ್ವಪ್ನದಲ್ಲಿ ಬಂದು "ನೀನು ಬೆಟ್ಟದಂತೆ ಇರುವ ಆಕಾರವುಳ್ಳ ವರಾಹಯೂಥಪತಿಯನ್ನು ಸಂಹರಿಸಿದೆ. ಅದರ ಶರೀರವು ವರಾಹಪರ್ವತವೆಂದು ಪ್ರಸಿದ್ಧವಾಯಿತು. ನಾನು ಅದರ ಮಕ್ಕಳಿಗೆ ಬಂದಿದ್ದ ಶಾಪವನ್ನು ನಾಶಮಾಡಿರುವೆನು. ನನ್ನ ಸ್ತನ್ಯಪಾನದಿಂದ ಅವರೆಲ್ಲರೂ ಜ್ಞಾನ ವಿಜ್ಞಾನಗಳುಳ್ಳವರಾಗಿರುವರು. ನನ್ನ ಆಜ್ಞೆಯಂತೆ ಅವರೆಲ್ಲರೂ ವರಾಹ ಪರ್ವತದ ಗುಹೆಯಲ್ಲಿ ವಾಸಮಾಡುತ್ತಿರುವರು. ನೀನು ಅವರನ್ನು ಕರಸಿಕೊಂಡು ನಿನಗೆ ಮಂತ್ರಿಗಳನ್ನಾಗಿ ಮಾಡಿಕೊ.

೨೭-೩೧. ಬುದ್ಧಿವಂತರಾದ ಅವರಿಂದ ರಾಜಕಾರ್ಯಗಳನ್ನೆಲ್ಲವನ್ನೂ ಮಾಡಿಸು. ಎಲೈ ರಾಜನೆ, ಬುದ್ಧಿವಂತಿಕೆಯಿಂದ ಉಂಟಾದ ದ್ರವ್ಯಲಾಭದಿಂದ ಭೂಮಿಯೆಲ್ಲವನ್ನೂ ನಿನ್ನ ಅಧೀನದಲ್ಲಿ ಇರಿಸಿಕೊಂಡು ಬಹಳ ಕಾಲದವರಿಗೂ ಸುಖ ವಾಗಿ ಬಾಳು." ಎಂದು ಹೇಳಿದನು. ಪಾಂಡ್ಯರಾಜನು ಅವನ ಮಾತನ್ನು ಕೇಳಿ,

ಜಿತ್ವಾ ವಸುಂಧರಾಂ ಸರ್ವಾಂ ಚಿರಂ ಜೀವಾಧಿಕಂ ಶ್ರಿಯಾ ।
ಶಂಭುನೈವಂ ಭೋಧಿತಸ್ಸ ಸ್ವಪ್ನೇ ಪಾಂಡ್ಯಮಹೀಶ್ವರಃ　　॥ ೨೯ ॥

ಸಚಿವೈ ಸ್ತಾನ್ಸಮಾಹೂಯ ಸಮಾಲೋಕ್ಯ ಸುವಿಸ್ಮಿತಃ ।
ಆತ್ಮನಃ ಸಚಿವಾಂಶ್ಚಕ್ರೇ ಬುಧ್ಯಾ ಗೀಷ್ಪತಿನಾ ನಿಭಾನ್　　॥ ೩೦ ॥

ಭೂಪತೇಃ ಸರ್ವಕೃತ್ಯಾರ್ಹಾ ದ್ವಾದಶೈತೇ ಸುಮಂತ್ರಿಣಃ ।
ಮಹೀಪಮಂದಿರದ್ವಾರಪಾರ್ಶ್ವಸ್ಥ ಭವನೇಷು ಚ　　॥ ೩೧ ॥

ತಿಷ್ಠಂತ ಶ್ಚಾಪ್ರಮಾದೇನ ಚಕ್ರುಃ ಕೃತ್ಯಾನಿ ಭೂಪತೇಃ ।
ರಾಜರಾಜಮಹೀಪಾಲಂ ರಾಜರಾಜಾಧಿಕಂ ಶ್ರಿಯಾ　　॥ ೩೨ ॥

ಅಕುರ್ವನ್ಮಂತ್ರಸಾಮರ್ಥ್ಯಾ ನ್ಮಂತ್ರಿಣೋ ಮಧುರಾಧಿಪಂ ।
ಸಂಧ್ಯಾದಿಸರ್ವಕಾರ್ಯೇಷು ತಾನ್ಸಮಾದಿಶ್ಯ ಸಂತತಂ　　॥ ೩೩ ॥

---

ತನ್ನ ಮಂತ್ರಿಗಳ ಮೂಲಕವಾಗಿ ಅವರೆಲ್ಲರನ್ನೂ ಕರಸಿಕೊಂಡು ಆಶ್ಚರ್ಯಪಟ್ಟನು. ಬೃಹಸ್ಪತಿಗೆ ಸಮನಾಗಿ ಮಂತ್ರಾಲೋಚನೆ ಮಾಡುವ ಅವರನ್ನು ತನ್ನ ಮಂತ್ರಿಗಳನ್ನಾಗಿ ಮಾಡಿಕೊಂಡನು. ಹನ್ನೆರಡು ಜನಗಳೂ ರಾಜನಿಗೆ ಮಂತ್ರಿಗಳಾಗಿ ರಾಜಕಾರ್ಯಗಳನ್ನು ಎಲ್ಲವನ್ನೂ ಮಾಡುತ್ತಿದ್ದರು. ಅವರು ಅರಮನೆಯ ಬಾಗಿಲಿನ ಹತ್ತಿರ ಇರುವ ಮನೆಯಲ್ಲಿ ವಾಸಮಾಡುತ್ತಿದ್ದರು. ಅವರು ಕೊಂಚವೂ ಆಲಸ್ಯವಿಲ್ಲದವರಾಗಿ ರಾಜಕಾರ್ಯಗಳನ್ನು ಮಾಡುತ್ತಿದ್ದರು.

೩೨–೩೩. ಅವರು ತಮ್ಮ ಮಂತ್ರಾಲೋಚನೆಯ ಬಲದಿಂದ ರಾಜರಾಜ ಪಾಂಡ್ಯನಿಗೆ ಐಶ್ವರ್ಯವು ಪ್ರತಿದಿನವೂ ಹೆಚ್ಚುವಂತೆ ಮಾಡಿ, ಅವನು ಐಶ್ವರ್ಯದಿಂದ ಕುಬೇರನಿಗೆ ಸಮನಾಗಿರುವಂತೆ ಮಾಡಿದರು. ರಾಜನು ಸಂಧಿಯೇ ಮೊದಲಾದ ಕಾರ್ಯಗಳನ್ನು ಅವರು ನಡಸುವಂತೆ ಅಪ್ಪಣೆಮಾಡಿ, ಇಂದ್ರನು ಸ್ವರ್ಗದಲ್ಲಿ ಸುಖವಾಗಿರುವಂತೆ ಮಧುರಾನಗರದಲ್ಲಿ ಸುಖದಿಂದ ಇದ್ದನು.

ಸುರೇಂದ್ರವತ್ಸುಖೇನಾಸ್ತೇ ಮಧುರಾಯಾಂ ಮಹೀಪತಿಃ ।
ಅಥ ಪಾಂಡ್ಯಮಹೀಪಾಲ ಸ್ತೇಷಾಂ ವೈವಾಹಿಕೀಂ ಕ್ರಿಯಾಂ ॥ ೩೪ ॥

ಸಚಿವಾನಾಂ ಕನ್ಯಕಾಭಿ ರಕರೋದಧಿಕಶ್ರಿಯಾಂ ।
ಸಾರ್ಧಂ ಸಚಿವಕನ್ಯಾಭಿ ಸ್ತೇ ಸರ್ವೇ ಸೂಕರಾನನಾಃ ॥ ೩೫ ॥

ಮಂತ್ರಿಣೋಽಪಿ ಮಹತ್ಸೌಖ್ಯಮನುಭೂಯ ಚಿರಂ ಬಹು ।
ಸುಂದರೇಶಸ್ತನ್ಯಪಾನಪ್ರಕ್ಷಾಲಿತಮನೋಮಲಾಃ ॥ ೩೬ ॥

ಸಹಿತಾ ರಾಜರಾಜೇನ ಸಾಯುಜ್ಯಂ ಪ್ರಾಪುರೈಶ್ವರಂ ।
ಏವಂ ಸೂಕರಪೋತೇಭ್ಯೋ ಸಚಿವತ್ವಂ ಪ್ರದಾಯ ಚ ॥ ೩೭ ॥

ಸುಮೀನಾಕ್ಷ್ಯಾ ಮಹಾದೇವ್ಯಾ ಕ್ರೀಡತೇ ಸುಂದರೇಶ್ವರಃ
ರಾಜರಾಜಾತ್ಮಜಃ ಪಶ್ಚಾತ್ಸುಗುಣೋ ನಾಮ ಕೀರ್ತಿಮಾನ್ ॥ ೩೮ ॥

---

೩೪–೩೫. ಕೆಲವುಕಾಲವು ಕಳೆದನಂತರ ರಾಜರಾಜಪಾಂಡ್ಯನು ತನ್ನ ಇತರ ಮಂತ್ರಿಗಳ ಮಕ್ಕಳೊಡನೆ ಅವರಿಗೆ ಮದುವೆಯನ್ನು ಮಾಡಿದನು. ವರಾಹಮುಖವುಳ್ಳವರಾದಾಗ್ಯೂ ಅವರು ಮಂತ್ರಿಗಳ ಹೆಣ್ಣುಮಕ್ಕಳೊಡನೆ ಸುಖದಿಂದ ಇರುತ್ತಾ, ರಾಜನಿಗೆ ಮಂತ್ರಿಗಳಾಗಿ ಬಹಳಕಾಲದವರಿಗೂ ಬಹಳ ಸುಖವನ್ನು ಅನುಭವಿಸಿದರು. ಸುಂದರೇಶ್ವರನ ಸ್ತನ್ಯಪಾನಮಾಡಿದ ಕಾರಣ ಪರಿಶುದ್ಧವಾದ ಮನಸ್ಸುಳ್ಳವರಾಗಿ, ತಮ್ಮ ರಾಜನಾದ ರಾಜರಾಜಪಾಂಡ್ಯನೊಡನೆ ಶಿವನಲ್ಲಿ ಸಾಯುಜ್ಯವನ್ನು ಹೊಂದಿದರು.

೩೭–೩೯. ವರಾಹಶಿಶುಗಳಿಗೆ ಸ್ತನ್ಯವನ್ನು ಕೊಟ್ಟು ಅವರನ್ನು ಮಂತ್ರಿಗಳನ್ನಾಗಿ ಮಾಡಿ, ಸುಂದರೇಶ್ವರನು ಮೀನಾಕ್ಷೀದೇವಿಯೊಡನೆ ವಿಹಾರ ಮಾಡುತ್ತಿರು

ಅಪಾಲಯನ್ಮಹೀಂ ಸರ್ವಾಂ ಪಿತುರಪ್ಯಧಿಕಃ ಶ್ರಿಯಾ ।
ಷಟ್ಚತ್ವಾರಿಂಶಿಕಾ ಲೀಲಾ ಯಾ ಪ್ರೋಕ್ತಾ ಸುಂದರೇಶಿತುಃ ॥ ೩೯ ॥
ಸತ್ಕಲತ್ರಾಣಿ ಸತ್ಪುತ್ರಾನ್ ಶೃಣ್ವತಾಂ ಸಾ ಪ್ರಯಚ್ಛತಿ ।

ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಕ್ರೋಡಪೋತಸಚಿವತ್ವಪ್ರಕಲ್ಪನಂ ನಾಮ ದ್ವಿಪಂಚಾಶೋಽಧ್ಯಾಯಃ

---

ವನು. ರಾಜರಾಜಪಾಂಡ್ಯನಿಗೆ ಸುಗುಣಪಾಂಡ್ಯನೆಂದು ಹೆಸರುಳ್ಳ ಪುತ್ರನು ಹುಟ್ಟಿದನು. ಅವನು ಯಶಸ್ವಿಯಾಗಿ ತಂದೆಗಿಂತಲೂ ಅಧಿಕವಾದ ಕ್ರಮದಿಂದ ರಾಜ್ಯವನ್ನು ಆಳುತ್ತಿದ್ದನು.

ಕೇಳಿದವರಿಗೆ ಗುಣವಂತೆಯಾದ ಪತ್ನಿಯನ್ನೂ ಸತ್ಪುತ್ರರನ್ನೂ ಉಂಟು ಮಾಡುವ ಸುಂದರೇಶ್ವರನು ಆಚರಿಸಿದ ನಲವತ್ತಾರನೆಯ ಲೀಲೆಯನ್ನು ನಿಮಗಾಗಿ ವರ್ಣಿಸಿ ಹೇಳಿರುವೆನು.

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ ಕ್ರೋಡಪೋತಸಚಿವತ್ವಪ್ರಕಲ್ಪನವೆಂದು ಹೆಸರುಳ್ಳ ಐವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ

## ಅಥ ಶ್ರೀ ಸ್ಕಾಂದಣೇಪುರಾ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ತ್ರಿಪಂಚಾಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಖಂಜರೀಟಸ್ಯೋಪದೇಶಂ ಮೃತ್ಯುಂಜಯಮಹಾಮನೋಃ ।
ಯಯಾಕರೋತ್ಸುಂದರೇಶಃ ಸಾ ಲೀಲಾ ವರ್ಣ್ಯತೇ ಮಯಾ ॥ ೧ ॥

ಪುರಾ ಬಲಿಭುಜಃ ಸರ್ವೇ ಖಂಜರೀಟಾನ್ಬಲೋದ್ಧತಾಃ ।
ತುಂಡೈರಂಕುಶಸಂನಿಭೈಸ್ತೀಕ್ಷ್ಣೈಸ್ತಾಡಯೇಯುಃ ಸ್ಮ ಸಂತತಂ ॥ ೨ ॥

ತತ್ತಾಡನೈಶ್ಚ ಸಂತ್ರಸ್ತಾಃ ಖಂಜರೀಟಾ ಯಯುಃ ಪುರಾ ।
ವಸಂತಿ ಕೋಟರೇಷ್ವೇವ ವನೇಷು ವನಚಾರಿಣಃ ॥ ೩ ॥

---

### ಐವತ್ತಮೂರನೆಯ ಅಧ್ಯಾಯವು

೧-೪. ಅಗಸ್ತ್ಯಋಷಿಯು ಹೇಳಿದನು:— ಸುಂದರೇಶ್ವರನು ಖಂಜರೀಟವೆಂಬ ಪಕ್ಷಿಗೆ ಮೃತ್ಯುಂಜಯ ಮಹಾಮಂತ್ರವನ್ನು ಉಪದೇಶಮಾಡಿದ ಲೀಲೆಯನ್ನು ಹೇಳುವೆನು. ಕಾಗೆಗಳೆಲ್ಲವೂ ಬಹಳ ಶಕ್ತಿಯುಳ್ಳವುಗಳಾಗಿ ಅಂಕುಶದಂತೆ ಇರುವ ತಮ್ಮ ತಮ್ಮ ತೀಕ್ಷ್ಣವಾದ ಕೊಕ್ಕುಗಳಿಂದ ಖಂಜರೀಟವೆಂಬ ಹಕ್ಕಿಗಳನ್ನು ಬಲವಾಗಿ ಕುಕ್ಕುತ್ತಿದ್ದವು. ಇದರಿಂದ ಆ ಹಕ್ಕಿಗಳು ಹೆದರಿಕೊಂಡು ಕಾಡಿನಲ್ಲಿರುವ ಮರಗಳ

ಪುರಾ ತೇಷಾಂ ಚ ಯೂಥೇಷು ಪೂರ್ವಜನ್ಮನಿ ಸಂಚಿತೈಃ ।
ಪುಣ್ಯೈರ್ಯುಕ್ತಃ ಪಾಪಲೇಶಾತ್ಪಕ್ಷೀ ಕಶ್ಚ ನ ಜಾಯತೇ ॥ ೪ ॥

ಸ ಖಂಜನಃ ಕದಾಚಿತ್ತು ಕಾಕತುಂಡೈಸ್ತು ತಾಡಿತಃ ।
ಚಿಂತಯಾಮಾಸ ಹೃದಯೇ ಸ್ವಪುಣ್ಯಪರಿಪಾಕತಃ ॥ ೫ ॥

ಸರ್ವೇಷಾಂ ಶತ್ರವಃ ಸಂತಿ ಜನಾನಾಂ ಜಗತೀತಲೇ ।
ಶತ್ರುಭಿಃ ಪೀಡಿತಾಃ ಕೇಚಿತ್ಪೀಡಯಂತ್ಯಥ ತಾನರೀನ್ ॥ ೬ ॥

ಏತಸ್ಯ ಕಾರಣಂ ಕಿಂ ವೇತ್ಯಚಿಂತಯದನಾರತಂ ।
ಚಿರೇಣ ನಿಶ್ಚಯಾಮಾಸ ಶಂಕರೋಽಪಾಸ್ತಿರೇವ ಹಿ ॥ ೭ ॥

ತದುಪಾಸ್ತಿಃ ಕುತ್ರ ಗತ್ವಾ ಕರ್ತವ್ಯೇತಿ ಹೃದಂತರೇ ।
ಧ್ಯಾಯಮಾನಸ್ಯ ತಸ್ಯಾ ರಾದ್ಗಚ್ಛನ್ಕಶ್ಚಿನ್ಮುನೀಶ್ವರಃ ॥ ೮ ॥

---

ಪೊಟರೆಯಲ್ಲಿ ಅವಿತುಕೊಂಡು ಕಾಲವನ್ನು ಕಳೆಯುತ್ತಿದ್ದವು. ಆ ಜಾತಿಯ ಹಕ್ಕಿಗಳ ಪುಣ್ಯದಿಂದ, ಕೊಂಚಪಾಪವುಳ್ಳ, ಹೆಚ್ಚು ಪುಣ್ಯಮಾಡಿದ ಒಂದು ಹಕ್ಕಿಯು ಆ ಜಾತಿಯಲ್ಲಿ ಹುಟ್ಟಿತು.

೫–೭. ಕಾಗೆಗಳು ಆ ಹಕ್ಕಿಯನ್ನು ಕೊಕ್ಕಿನಿಂದ ಬಲವಾಗಿ ಕುಕ್ಕಿದವು. ಆಗ ಆ ಹಕ್ಕಿಯು ತನ್ನ ಪುಣ್ಯದಿಂದ “ ಪ್ರಪಂಚದಲ್ಲಿ ಎಲ್ಲರಿಗೂ ಶತ್ರುಗಳು ಇರುವರು. ಶತ್ರುಗಳಿಂದ ಹಿಂಸೆಯನ್ನು ಅನುಭವಿಸಿದವರು ಶತ್ರುಗಳನ್ನು ನಾಶಮಾಡುವರು. ಈಗ ನನಗೆ ಹೀಗೆ ಆಗಲು ಕಾರಣವೇನು ? ” ಎಂದು ಮನಸ್ಸಿನಲ್ಲಿ ಯೋಚಿಸಿತು. ಹೀಗೆಯೇ ಯೋಚಿಸುತ್ತಾ ಶಿವನನ್ನು ಸೇವಿಸಿದರೆ ಎಲ್ಲವೂ ಸರಿಯಾಗುವುದು, ಎಂದು ನಿಶ್ಚಯಿಸಿತು.

೮–೧೨. ಈಶ್ವರನನ್ನು ಯಾವ ಪ್ರದೇಶದಲ್ಲಿ ಹೇಗೆ ಧ್ಯಾನಮಾಡಬೇಕು. ಎಂದು ಆ ಹಕ್ಕಿಯು ಯೋಚಿಸುತ್ತಿರುವ ಕಾಲಕ್ಕೆ ಸರಿಯಾಗಿ ತೀರ್ಥಯಾತ್ರೆ ಮಾಡುವ ಒಬ್ಬ ಋಷಿಯು ಅದರ ಹತ್ತಿರಕ್ಕೆ ಬಂದು, “ ಆಧಿವ್ಯಾಧಿಗಳಿಂದಲಾಗಲಿ, ಶತ್ರು

ತೀರ್ಥಯಾತ್ರಾಪರಶ್ಚೈವಂ ಪ್ರಾಹ ಗಂಭೀರಯಾ ಗಿರಾ ।
ಆಧಿನಾ ವ್ಯಾಧಿನಾ ಚಾಪಿ ರಿಪುಣಾ ಮೃತ್ಯುನಾಂಹಸಾ ॥ ೯ ॥

ಪುನರನ್ಯೈ ರ್ಬಹುವಿಧೈ ರ್ಬಾಧಕೈ ರ್ಬಾಧಿತಸ್ಯ ಚ ।
ಜಂತೋಃ ಸದ್ಯಃ ಸುಖಾವಾಪ್ತ್ಯೈ ತದ್ಭೀತಿವಿನಿವೃತ್ತಯೇ ॥ ೧೦ ॥

ಶ್ರೀಹಾಲಾಸ್ಯಪತಿಃ ಶಂಭುರೇಕ ಏವ ಜಗತ್ತ್ರಯೇ ।
ಪ್ರಥಿತಶ್ಚ ಪ್ರವೀಣಶ್ಚ ಯಥಾಸೀನ್ನ ತಥಾ ಪರಃ ॥ ೧೧ ॥

ಸಮಸ್ತಶಂಭುಕ್ಷೇತ್ರೇಭ್ಯ ಸ್ತಪಸ್ಸಿದ್ಧಿಪ್ರದಂ ಶ್ರುತಂ ।
ಶ್ರೀ ಹಾಲಾಸ್ಯಂ ಮಹಾಕ್ಷೇತ್ರಮಿತಿ ಪ್ರಾಹುರ್ವಿಚಕ್ಷಣಾಃ ॥ ೧೨ ॥

ಮಹದ್ಭ್ಯಸ್ತೀರ್ಥಸಂಘೇಭ್ಯಃ ಸಹಸಾಘಹರಂ ಪರಂ ।
ಹೇಮಪದ್ಮಾಕರಂ ತೀರ್ಥಂ ತತ್ರಾಸೀದತಿದುರ್ಲಭಂ ॥ ೧೩ ॥

---

ಗಳಿಂದಲಾಗಲಿ, ಮೃತ್ಯುವಿನಿಂದಲಾಗಲಿ, ಇನ್ನೂ ಇತರವಾದ ತೊಂದರೆಗಳಿಂದ ಲಾಗಲಿ ಸಂಕಟವನ್ನು ಅನುಭವಿಸುವವರು, ಆ ತೊಂದರೆಯನ್ನು ಪರಿಹರಿಸಿಕೊಳ್ಳು ವುದಕ್ಕಾಗಿ ಹಾಲಾಸ್ಯೇಶ್ವರನಾದ ಶಿವನನ್ನು ಒಬ್ಬನನ್ನೇ ಸೇವೆಮಾಡುವುದು ಸಾಕಾಗಿ ರುತ್ತದೆ. ಇವನಿಗಿಂತಲೂ ತೊಂದರೆಯನ್ನು ಪರಿಹರಿಸುವವನು ಮೂರು ಲೋಕ ದಲ್ಲಿಯೂ ಬೇರೆ ಯಾವನೂ ಇಲ್ಲವು. ಎಲ್ಲಾ ಶಿವಕ್ಷೇತ್ರಗಳಿಗಿಂತಲೂ, ಹಾಲಾಸ್ಯ ಮಹಾಕ್ಷೇತ್ರದಲ್ಲಿ ತಪಸ್ಸಿನ ಸಿದ್ಧಿಯು ಬೇಗ ಆಗುವುದು ಎಂದು ತಿಳಿದವರು ಹೇಳಿರುವರು

೧೩-೧೮. ಎಲ್ಲಾ ತೀರ್ಥಗಳಿಗಿಂತಲೂ ಹೇಮಪದ್ಮಾಕರತೀರ್ಥವು ಬಹಳ ಪಾಪಗಳನ್ನು ನಾಶಪಡಿಸುವುದು. ಸೂಕ್ಷ್ಮವಾದ ಶಾಸ್ತ್ರಾರ್ಥವನ್ನು ತಿಳಿದವರು ಎಲ್ಲಾ ಶಿವಲಿಂಗಗಳಿಗಿಂತಲೂ ಸುಂದರೇಶ್ವರನು ಉತ್ತಮವೆಂದು ಹೇಳುವರು. ಅವನೇ

ಸರ್ವೇಭ್ಯಃ ಶಿವಲಿಂಗೇಭ್ಯಃ ಸಮಸ್ತವರದಂ ಪರಂ ।
ಸುಂದರೇಶಂ ಪ್ರಶಂಸಂತಿ ಸೂಕ್ಷ್ಮತತ್ತ್ವಾರ್ಥವೇದಿನಃ　　॥ ೧೪ ॥

ಸ ಏವ ಸರ್ವಧರ್ಮದ ಸ್ಸ ಏವ ಸರ್ವಚಾರ್ಥದಃ ।
ಸ ಏವ ಸರ್ವಕಾಮದ ಸ್ಸ ಏವ ಸರ್ವಮುಕ್ತಿದಃ　　॥ ೧೫ ॥

ಸ ಏವ ಸರ್ವಸಿದ್ಧಿದಃ ಸ ಏವ ಸರ್ವಪಾಪಹೃತ್ ।
ಸ ಏವ ಸರ್ವಶತ್ರುಹಾ ಸ ಏವ ಸುಂದರೇಶ್ವರಃ　　॥ ೧೬ ॥

ಭಕ್ತ್ಯಾ ಪರವಶೇನೈವಂ ಮುನಿನಾ ಭಾಷಿತಾನಿ ಚ ।
ಜ್ಞಾತ್ವಾ ವಾಕ್ಯಾನಿ ಸರ್ವಾಣಿ ಭಾರದ್ವಾಜೋಽತಿವಿಸ್ಮಿತಃ　　॥ ೧೭ ॥

ಗತ್ವಾ ಹಮಪಿ ಹಾಲಾಸ್ಯಂ ಸ್ನಾತ್ವಾ ಹೇಮಾಬ್ಜಿನೀಜಲೇ ।
ನತ್ವಾಥ ಸುಂದರೇಶಾನಂ ತಮೇವ ಚ ಹೃದಂತರೇ　　॥ ೧೮ ॥

ಧ್ಯಾತ್ವಾ ಪಾಂಡ್ಯಂ ವಿಜೇಷ್ಯಾಮಿ ವಾಯಸಾನಾತ್ಮಬಾಧಕಾನ್ ।
ಇತಿ ನಿಶ್ಚಿತ್ಯ ಸಹಸಾ ತತ್ಕ್ಷೇತ್ರಂ ಪ್ರಾಪ್ಯ ಖಂಜನಃ　　॥ ೧೯ ॥

---

ಎಲ್ಲಾ ಧರ್ಮಗಳನ್ನೂ, ಅರ್ಥ, ಕಾಮ, ಮುಕ್ತಿಗಳನ್ನು ಕೊಡುವವನು. ಆ ಸುಂದರೇಶ್ವರನೇ ಎಲ್ಲಾ ಸಿದ್ಧಿಯನ್ನೂ ಕೊಡುವವನು. ಪಾಪಗಳನ್ನು ನಾಶಪಡಿಸುವವನು. ಅವನೇ ಶತ್ರುಗಳೆಲ್ಲರನ್ನೂ ನಾಶಮಾಡುವನು." ಎಂದು ಸುಂದರೇಶ್ವರನಲ್ಲಿರುವ ಭಕ್ತಿಯಿಂದ ಪರವಶನಾಗಿ ಹೇಳಿದ ಆ ಋಷಿಯ ಮಾತನ್ನು ಕೇಳಿ, ಆ ಭಾರದ್ವಾಜಪಕ್ಷಿಯು, ಆಶ್ಚರ್ಯವುಳ್ಳದ್ದಾಗಿ " ನಾನೂ ಹಾಲಾಸ್ಯಕ್ಷೇತ್ರಕ್ಕೆ ಹೋಗಿ ಹೇಮಾಬ್ಜಿನೀತೀರ್ಥದಲ್ಲಿ ಸ್ನಾನಮಾಡಿ, ನನಗೆ ತೊಂದರೆ ಮಾಡುವ ಜಾತಿಯವರನ್ನೂ ಗೆಲ್ಲುತ್ತೇನೆ. " ಎಂದು ಮನಸ್ಸಿನಲ್ಲಿ ನಿಶ್ಚಯಮಾಡಿತು.

೧೯–೨೨. ಆ ಭಾರದ್ವಾಜಪಕ್ಷಿಯು, ಹೀಗೆ ನಿಶ್ಚಯಿಸಿ, ಬೇಗನೆ ಆ ಕ್ಷೇತ್ರಕ್ಕೆ ಹೋಗಿ, ಆ ತೀರ್ಥದಲ್ಲಿ ಸ್ನಾನಮಾಡಿ,ಸುಂದರೇಶ್ವರನನ್ನು ದರ್ಶನಮಾಡಿ, ನಮಸ್ಕಾರ ಮಾಡಿ, ಮೆಲ್ಲಮೆಲ್ಲಗೆ ಆ ಶಿವಲಿಂಗದ ಸುತ್ತಲೂ ಸಂಚರಿಸುತ್ತಾ, ಪ್ರದಕ್ಷಿಣೆ ಮಾಡಿತು.

ತಸ್ಮಿಂಸ್ತೀರ್ಥೇ ಚ ಸಂಸ್ನಾಯ ದೃಷ್ಟ್ವಾ ಲಿಂಗಂ ಪ್ರಣಮ್ಯ ಚ ।
ಪರಿತಸ್ಸುಂದರೇಶಾನಂ ಮಂದಂ ಮಂದಂ ಪರಿಭ್ರಮನ್ ॥ ೨೦ ॥

ಪ್ರದಕ್ಷಿಣಾನ್ಯನೇಕಾನಿ ಕೃತ್ವಾ ತತ್ಸನ್ನಿಧೌ ಸ್ಥಿತಃ ।
ತಂ ಪ್ರೇಕ್ಷ್ಯ ಸಾಂಬಮೀಶಾನಂ ಮನಸಾ ಪೂಜಯೇತ್ ಸದಾ ॥ ೨೧ ॥

ಏವಂ ಸ ಖಂಜರೀಟಸ್ತು ಸಂಧ್ಯಾತ್ರಯ ಮಧಾ ತ್ರಪಃ ।
ತಚ್ಚರಿತ್ರಂ ಪವಿತ್ರಂ ಚ ದೃಷ್ಟ್ವೇಶೋ ವಿಸ್ಮಯಾನ್ವಿತಃ ॥ ೨೨ ॥

ಬ್ರಹ್ಮಾದಿಸ್ತಂಬಪರ್ಯಂತಂ ಭೂತಾನಾಮಂತರಾತ್ಮಕಃ ।
ಸರ್ವಜ್ಞಃ ಸುಂದರೇಶಶ್ಚ ಸರ್ವಭೂತಹಿತೇರತಃ ॥ ೨೩ ॥

ಭಕ್ತಿಂ ದೃಷ್ಟ್ವಾ ಭರದ್ವಾಜಪಕ್ಷಿಣ ಸ್ತಸ್ಯ ಚಾತ್ಮನಿ ।
ದೇವ್ಯೈ ಶಪರನೇತ್ರಾಯೈ ತಾಂ ಸಂಭಾಷ್ಯ ಪುನಃ ಪುನಃ ॥ ೨೪ ॥

---

ಹೀಗೆಯೇ ಅದು ಸುಂದರೇಶ್ವರನ ಹತ್ತಿರದಲ್ಲಿಯೇ ವಾಸಮಾಡುತ್ತಾ ಇತ್ತು. ಆ ಭಾರದ್ವಾಜಪಕ್ಷಿಯುಮೂರು ಸಂಧ್ಯಾಕಾಲಗಳಲ್ಲಿಯೂ ಸುಂದರೇಶ್ವರನನ್ನು ಒಂದೇ ಸಮನಾಗಿ ಪೂಜಿಸಿ ಧ್ಯಾನಮಾಡುತ್ತಿತ್ತು. ಹೀಗೆಯೇ ತಪಸ್ಸನ್ನು ಮಾಡುತ್ತಿರುವ ಆ ಹಕ್ಕಿಯ ಪವಿತ್ರವಾದ ನಡತೆಯನ್ನು ನೋಡಿ ಸುಂದರೇಶ್ವರನು ಆಶ್ಚರ್ಯಪಟ್ಟನು.

೨೩-೨೪. ಬ್ರಹ್ಮನೇ ಮೊದಲಾಗಿ ಸ್ತಂಬಪರ್ಯಂತವಾಗಿಯೂ, ಇರುವ ಪ್ರಾಣಿಗಳಲ್ಲಿ ಅಂತರಾತ್ಮನಾದ, ಸರ್ವಜ್ಞನಾದ, ಎಲ್ಲರಿಗೂ ಹಿತವನ್ನುಂಟುಮಾಡುವ ಸುಂದರೇಶ್ವರನು ಭರದ್ವಾಜಪಕ್ಷಿಯ ಭಕ್ತಿಯನ್ನು ನೋಡಿ, ಮನಸ್ಸಿನಲ್ಲಿ ಸಂತೋಷವುಳ್ಳವನಾಗಿ, ತನ್ನ ಜೊತೆಯಲ್ಲಿರುವ ಮೀನಾಕ್ಷಿದೇವಿಗೆ ಅದನ್ನು ಎಲ್ಲವನ್ನೂ ವಿವರಿಸಿ ಹೇಳಿದನು. ಆ ಹಕ್ಕಿಯ ವಿಷಯದಲ್ಲಿ ಬಹಳ ದಯೆಯುಳ್ಳವನಾಗಿದ್ದನು.

ಅತಿಕಾರುಣ್ಯವಿವಶಃ ಕದಂಬವನನಾಯಕಃ ।
ದಿವಸೇಷು ಚ ಗಚ್ಛತ್ಸು ಪುನಃ ಕತಿಪಯೇಷು ಚ　　　　॥ ೨೫ ॥

ಮೃತ್ಯುಂಜಯಂ ಮಹಾಮಂತ್ರಂ ಭರದ್ವಾಜಾಖ್ಯಪಕ್ಷಿಣೇ ।
ಋಷಿಚ್ಛಂದೋ ದೈವತಾಖ್ಯಂ ತಸ್ಮಾ ಉಪದಿದೇಶ ಸಃ　　　　॥ ೨೬ ॥

ತ್ರಿಯಕ್ಷರಮಿಮಂ ಮಂತ್ರಂ ಸರ್ವಕಾಮಪ್ರದಂ ಧ್ರುವಂ ।
ಬ್ರಾಹ್ಮೇ ಮುಹೂರ್ತ ಉತ್ಥಾಯ ತ್ವಂ ಜಪಾತ್ಯಾದರೇಣ ಚ　　　　॥ ೨೭ ॥

ತನ್ಮಂತ್ರಸ್ಯ ಪ್ರಭಾವೇಣ ಸಮಸ್ತಾಭೀಷ್ಟದೇನ ಚ ।
ನ ಭವಿಷ್ಯತಿ ಭೀತಿಸ್ತೇ ಬಲಿಪುಷ್ಟೈರ್ನ ಸಂಶಯಃ　　　　॥ ೨೮ ॥

ಯುಷ್ಮದ್ವಂಶಭವೇಭ್ಯಶ್ಚ ಯುಷ್ಮದ್ವಂಶವಿವೃದ್ಧಯೇ ।
ಕುರು ಮಂತ್ರಸ್ಯೋಪದೇಶಂ ತೇ ಸರ್ವೇ ಸಂತು ನಿರ್ಭಯಾಃ　　　　॥ ೨೯ ॥

ಇತಿ ಚಾಹ ಕೃಪಾವಿಷ್ಟಃ ಸುಂದರೇಶ ಸ್ಸದಾಶಿವಃ ।
ತಸ್ಯ ವಾಕ್ಯಾನಿ ಚಾಕರ್ಣ್ಯ ಭರದ್ವಾಜೋ ವಿಹಂಗಮಃ　　　　॥ ೩೦ ॥

---

೨೫–೨೯. ಸುಂದರೇಶ್ವರನು ಕೆಲವು ದಿನಗಳು ಕಳೆದನಂತರ ಆ ಭಾರದ್ವಾಜ ಪಕ್ಷಿಗೆ ಮೃತ್ಯುಂಜಯ ಮಹಾಮಂತ್ರವನ್ನು ಋಷಿಛಂದೋದೇವತೆಗಳೊಡನೆ ಉಪದೇಶಮಾಡಿದನು. ಅನಂತರದಲ್ಲಿ ಸುಂದರೇಶ್ವರನು ಆ ಹಕ್ಕಿಯ ವಿಷಯದಲ್ಲಿ ದಯೆಯುಳ್ಳವನಾಗಿ "ಈ ಮಂತ್ರವು ಮೂರು ಅಕ್ಷರಗಳುಳ್ಳದ್ದಾಗಿ ಇರುವುದು. ಇದು ಎಲ್ಲಾ ವಿಧವಾದ ಇಷ್ಟಸಿದ್ಧಿಯನ್ನೂ ಬೇಗನೆ ಉಂಟುಮಾಡುವುದು. ಈ ಮಂತ್ರವನ್ನು ಬ್ರಹ್ಮಮುಹೂರ್ತದಲ್ಲಿ ಎದ್ದು ಆದರದಿಂದ ಜಪಮಾಡಬೇಕು. ಎಲ್ಲಾ ಇಷ್ಟಸಿದ್ಧಿಯನ್ನುಂಟುಮಾಡುವ ಈ ಮಂತ್ರದ ಮಹಿಮೆಯಿಂದ ಕಾಗೆಗಳ ಭಯವು ಉಂಟಾಗುವುದಿಲ್ಲ. ನಿಮ್ಮ ವಂಶವು ವೃದ್ಧಿಯಾಗುವುದಕ್ಕಾಗಿ ನಿಮ್ಮ ವಂಶದವರಿಗೆ ಈ ಮಂತ್ರವನ್ನು ಉಪದೇಶಮಾಡು. ಅವರೆಲ್ಲರೂ ಯಾವಭಯವೂ ಇಲ್ಲದೆ ಜೀವಿಸಲಿ." ಎಂದು ಆ ಭಾರದ್ವಾಜಪಕ್ಷಿಗೆ ಹೇಳಿದನು.

೩೦–೩೪. ಆ ಭಾರದ್ವಾಜಪಕ್ಷಿಯು ಅವನ ಮಾತನ್ನು ಕೇಳಿ, ಸಂತೋಷ ದಿಂದ ಶಿವನಿಗೆ ನಮಸ್ಕಾರಮಾಡಿ, ಸುಂದರೇಶ್ವರನು ಹೇಳಿದ ವೇಳೆಗೆ ಸರಿಯಾಗಿ

ಪ್ರೀತಃ ಪ್ರಣಮ್ಯ ತಂ ಶಂಭುಮುಕ್ತ್ವಾಲೇಯಜಪಚ್ಚಿರಂ ।
ಅಚಿರಾದ್ಭಕ್ತಿರುತ್ಪನ್ನಾ ಭರದ್ವಾಜಸ್ಯ ಪಕ್ಷಿಣಃ ॥ ೩೧ ॥

ಪುನಸ್ತು ಬಲಿಕಾಮಾನಾಂ ಖಂಜನಃ ಪರಿತೋ ಭ್ರಮನ್ ।
ತುಂಡೇನಾಂ ಕುಶತಿಕ್ಷ್ಣೇನ ತೇಷಾಂ ಮೂರ್ಧನ್ಯ ತಾಡಯತ್ ॥ ೩೨ ॥

ವಾಯಸಾಂ ಸ್ತಾಡಯಂತಂ ತಂ ನಿರೀಕ್ಷ್ಯ ನಿಖಿಲಾಜನಾಃ ।
ನಾಮ್ನಾ ಬಲೀಯಾನಿತ್ಯೂಚು ರಲ್ಪಸತ್ವಂ ಚ ಖಂಜನಂ ॥ ೩೩ ॥

ತ್ರಿಕಾಲಜ್ಞಾ ಯೋಗಯುಕ್ತಾ ಮಹಾತ್ಮಾನಶ್ಚಿರಂತನಾಃ ।
ಪ್ರಶಂಸನ್ದೇವದೇವಸ್ಯ ಸ್ವಾತಂತ್ರ್ಯಂ ಸಕಲೇಶಿತುಃ ॥ ೩೪ ॥

ಪ್ರಭಾತೇ ಶ್ರೂಯತೇದ್ಯಾಪಿ ಖಂಜನಾನಾಂ ತು ಕೂಜಿತಂ ।
ಮೃತ್ಯುಂಜಯಾಖ್ಯಮಂತ್ರೇಣ ತುಲ್ಯರೂಪಂ ನ ಸಂಶಯಃ ॥ ೩೫ ॥

---

ಮಂತ್ರವನ್ನು ಜಪಮಾಡುತ್ತಿತ್ತು. ಇದರಿಂದ ಭಾರದ್ವಾಜಪಕ್ಷಿಗೆ ಶಕ್ತಿಯು ಬೇಗನೆ ಹೆಚ್ಚಿತು. ಆಗ ಆ ಹಕ್ಕಿಯು ಕಾಗೆಗಳ ಸುತ್ತಲೂ ತಿರುಗುತ್ತಾ ತನ್ನ ಕೊಕ್ಕಿನಿಂದ ಕಾಗೆಗಳನ್ನು ತಲೆಯ ಮೇಲೆ ಕುಕ್ಕುವುದಕ್ಕೆ ಪ್ರಾರಂಭಿಸಿತು. ಕಾಗೆಗಳನ್ನು ತಲೆಯಮೇಲೆ ಕುಕ್ಕುತ್ತಿರುವ ಆ ಹಕ್ಕಿಯನ್ನು ನೋಡಿದ ಜನರೆಲ್ಲರೂ ಕೊಂಚವೂ ಶಕ್ತಿಯಿಲ್ಲದ ಆ ಹಕ್ಕಿಯನ್ನು ಬಹಳ ಶಕ್ತಿಯುಳ್ಳದ್ದೆಂದು ತಿಳಿದರು. ಮೂರು ಕಾಲಗಳಲ್ಲಿಯೂ ಯೋಗಬಲದಿಂದ ಕೂಡಿರುವ ಮಹಿಮೆಯುಳ್ಳವರು ಸರ್ವಕ್ಕೂ ಅಧಿಪತಿಯಾಗಿರುವ ಪರಮೇಶ್ವರನ ಸ್ವಾತಂತ್ರ್ಯವನ್ನು ಶ್ಲಾಘಿಸುತ್ತಿದ್ದರು.

೩೫–೩೯. ಈಗಲೂ ಭಾರದ್ವಾಜಪಕ್ಷಿಯು ಮೃತ್ಯುಂಜಯ ಮಂತ್ರವರ್ಣವನ್ನು ಹೇಳುವುದಕ್ಕನುಸಾರವಾಗಿ ಬೆಳಗಿನ ಜಾವದಲ್ಲಿ ಕೂಗುವುದು. ಮೃತ್ಯುಂಜಯ ಮಂತ್ರವನ್ನು ಭಾರದ್ವಾಜಪಕ್ಷಿಯು ಜಪವನ್ನು ಮಾಡಿ ಸಾಮರ್ಥ್ಯವನ್ನು ಹೊಂದಿರುವುದು, ಭೂಮಿಯಲ್ಲಿ ಆಗ ಪ್ರಸಿದ್ಧವಾಯಿತು. ಭಾರದ್ವಾಜಪಕ್ಷಿಗೆ ಸುಂದರೇಶ್ವರನು

ಖಂಜರೀಟಶ್ಚ ಯೇನಾಥ ಮಂತ್ರಜಾಪೇನ ಭೂತಲೇ ।
ಬಲೀಯಾನಿತಿ ನಾಮ್ನಾ ಭೂತ್ತತ್ಪ್ರಸಿದ್ಧತರಂ ಬುಧಾಃ ॥ ೩೬ ॥

ಸುಂದರೇಶೋಪದಿಷ್ಟಂ ಚ ಭರದ್ವಾಜಾಯ ಪಕ್ಷಿಣೇ ।
ಮೃತ್ಯುಂಜಯಾಖ್ಯ ಮದ್ಯಾಪಿ ಪ್ರಭಾತೇ ಮಂತ್ರಮುತ್ತಮಂ ॥ ೩೭ ॥

ಯ ಉತ್ಥಾಯ ಪ್ರಸನ್ನಾತ್ಮಾ ಜಪೇದೃಷ್ಯಾದಿಸಂಯುತಂ ।
ಮೃತ್ಯುಂ ಜಯತ್ಯಸೌ ಧನ್ಯಃ ಸಮಸ್ತಾ ನಾಮಯಾನಪಿ ॥ ೩೮ ॥

ತನ್ಮಂತ್ರಜಪಮಾತ್ರೇಣ ದೀರ್ಘಮಾಯು ರರೋಗತಾಂ ।
ಲಬ್ಧ್ವಾ ಜನೋ ತುಲ್ಯೈಶ್ವರ್ಯಂ ಸಮರೇ ವಿಜಯೀ ಭವೇತ್ ॥ ೩೯ ॥

ಇತಿ ವಿರಚಿತಲೀಲಾಂ ಸುಂದರೇಶೇನ ಹರ್ಷಾತ್ ।
ಪಠತಿ ಪರಮಭಕ್ತ್ಯಾ ಸಾದರೋ ಯಃ ಶೃಣೋತಿ ॥
ವಿವಿಧಸಕಲಭೋಗಾ ನ್ಭೂತಲೇ ಚಾನುಭೂತ್ವಾ-
ಚರಮವಯಸಿ ಸತ್ಯಂ ದಿವ್ಯಲೋಕಂ ಪ್ರಯಾಯಾತ್ ॥ ೪೦ ॥

---

ಉಪದೇಶಮಾಡಿದ ಮೃತ್ಯುಂಜಯ ಮಂತ್ರವನ್ನು ಪ್ರಾತಃಕಾಲದಲ್ಲಿ ಪ್ರಸನ್ನವಾದ ಮನಸ್ಸಿನಿಂದ ಋಷಿಚ್ಛಂದೋದೇವತಾಪೂರ್ವಕವಾಗಿ ಜಪಮಾಡುವವನಿಗೆ ಮೃತ್ಯುವು ಪರಿಹಾರವಾಗಿ, ಎಲ್ಲಾ ರೋಗಗಳೂ ನಾಶವಾಗುವುವು. ಆ ಮಂತ್ರಜಪದ ಮಹಿಮೆಯಿಂದ ಆಯುಸ್ಸು ವೃದ್ಧಿಯಾಗುವುದು. ಆರೋಗ್ಯವು ಹೆಚ್ಚುವುದು. ಬಹಳ ಐಶ್ವರ್ಯವನ್ನು ಹೊಂದುವ ಜಯವು ಉಂಟಾಗುವುದು.

೪೦–೪೧. ಸುಂದರೇಶ್ವರನು ಸಂತೋಷದಿಂದ ಆಚರಿಸಿದ ಈ ಲೀಲೆಯನ್ನು ಭಕ್ತಿಯಿಂದ ಹೇಳುವವನೂ, ಕೇಳುವವನೂ, ಭೂಮಿಯಲ್ಲಿ ಎಲ್ಲಾ ವಿಧವಾದ ಸುಖಗಳನ್ನೂ ಅನುಭವಿಸಿ, ಆಯಸ್ಸೆಲ್ಲವೂ ಮುಗಿದನಂತರ ಉತ್ತಮವಾದ ಸತ್ಯ

ಸಪ್ತಚತ್ವಾರಿಂಶಿಕೇಯಂ ಲೀಲಾಪ್ರೋಕ್ತಾ ಮಹೇಶಿತುಃ ।
ಸರ್ವಶತ್ರುಪ್ರಶಮಿನೀ ಸರ್ವಸಂಪತ್ಪ್ರದಾಯಿನೀ ॥ ೪೧ ॥

ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಭಾರದ್ವಾಜಪಕ್ಷಿಣೋ ಮೃತ್ಯುಂಜಯೋಪದೇಶನಂ ನಾಮ ತ್ರಿಪಂಚಾಶೋಽಧ್ಯಾಯಃ

---

ಲೋಕವನ್ನು ಹೊಂದುವನು. ಶತ್ರುಗಳೆಲ್ಲರನ್ನೂ ನಾಶಮಾಡಿ, ಬಹಳ ಐಶ್ವರ್ಯ ವನ್ನು ಕೊಡುವ ಮಹೇಶ್ವರನ ನಲವತ್ತೇಳನೆಯ ಲೀಲೆಯನ್ನು ವಿವರಿಸಿರುವೆನು.

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ
ಭರದ್ವಾಜಪಕ್ಷಿಗೆ ಮೃತ್ಯುಂಜಯ ಮಂತ್ರೋಪದೇಶವೆಂದು ಹೆಸರುಳ್ಳ
ಐವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥
॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಚತುಃಪಂಚಾಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಯಯಾ ಮುಕ್ತಿಂ ದದೌ ಶಂಭುಃ ಪಕ್ಷಿಣೇ ಚ ಶರಾರಯೇ ।
ತಾಂ ಲೀಲಾ ಮಥ ವಕ್ಷ್ಯಾಮಿ ವಿಚಿತ್ರಾಂ ವಿಪಿಧೇಷ್ಟದಾಂ ॥ ೧ ॥

ಪುರಾ ಜನಪದೇ ಕಶ್ಚಿಚ್ಛರಾರಿಸ್ತು ಪುರಾತನಃ ।
ಅತ್ಯಗಾಧೇತಿವಿಸ್ತೀರ್ಣೇ ಕಸ್ಮಿಂಶ್ಚಿದಮಲೋದಕೇ ॥ ೨ ॥

ತಟಾಕೇ ಪುರತೋ ಮತ್ಸ್ಯಾನ್ಗೃಹೀತ್ವೋತ್ಪ್ಲುತ್ಯ ವೇಗತಃ ।
ಭಕ್ಷಯಿತ್ವಾ ಚಿರಂ ತತ್ರ ಸುಖೇನೈವ ಸ ತಿಷ್ಠತಿ ॥ ೩ ॥

---

### ಐವತ್ತನಾಲ್ಕನೆಯ ಅಧ್ಯಾಯವು

೧–೪. ಶರಾರಿ (ಟಿಟ್ಟಿಭ) ಎಂಬ ಹಕ್ಕಿಗೆ ಸುಂದರೇಶ್ವರನು ಮುಕ್ತಿಯನ್ನು ಅನುಗ್ರಹಿಸಿದ, ಅನೇಕ ವಿಧವಾದ ಇಷ್ಟಗಳನ್ನು ಉಂಟುಮಾಡುವ ಲೀಲೆಯನ್ನು ವರ್ಣಿಸುವೆನು. ಬಹಳಕಾಲದ ಹಿಂದೆ ಒಂದು ದೇಶದಲ್ಲಿ ಶರಾರಿಯೆಂದು ಹೆಸರುಳ್ಳ ಹಕ್ಕಿಯು, ನಿರ್ಮಲವಾಗಿಯೂ, ಆಳವಾಗಿಯೂ ಇರುವ ಒಂದು ಕೆರೆಯಲ್ಲಿ ಮುಳುಗಿ ಮೀನುಗಳನ್ನು ಹಿಡಿದುಕೊಂಡು ಹಾರಿಹೋಗಿ ಅದನ್ನು ತಿಂದು, ಬಹಳ ಕಾಲದಿಂದಲೂ ಸುಖವಾಗಿ ಇತ್ತು. ಒಂದು ಕಾಲದಲ್ಲಿ ಕ್ಷಾಮವು ಬಂದು ಮಳೆಯು

ಅನಾವೃಷ್ಟ್ಯಾ ಕದಾಚಿತ್ಸತಟಾಕೋ ನಿರ್ಜಲೋ ಭವತ್
ಶರಾರಿಃ ಪರಿಖಿನ್ನ ಸ್ಸನ್ನ ಭ್ರಾಮಾಹಾರ ಕಾಂಕ್ಷಯಾ ॥ ೪ ॥

ತಪೋವನಾನಿ ಸರ್ವಾಣಿ ಸಂಚರ ನ್ಸ್ವಜನೈಃಸಹ ।
ದದರ್ಶ ಸತ್ಯತಪಸ ಸ್ತಪೋವನ ಮಥೋತ್ತಮಂ ॥ ೫ ॥

ತತ್ರಾಸ್ತಿ ಪಾವನಂ ತೀರ್ಥಮಚ್ಛೋದಮಿತಿ ಚಾಖ್ಯಯಾ ।:
ಚತುರಶ್ರಂ ಚತುರ್ದಿಕ್ಷು ಸೋಪಾನೈ ರ್ಮಂಟಪೈ ಯ್ಯುತಂ ॥ ೬ ॥

ಕ್ರೋಶಪ್ರಮಾಣವಿಸ್ತೀರ್ಣಂ ತೀರಸ್ಥೈಃ ಪುಣ್ಯಭೂರುಹೈಃ ।
ಸದಾ ಪುಷ್ಪಫಲೋಪೇತೈಃ ಪರಿತಃ ಪರಿಶೋಭಿತಂ ॥ ೭ ॥

ಅಗಾಧೇತ್ಯಂತವಿಮಲೇ ತಜ್ಜಲೇ ಚಾತಿಶೀತಲೇ ।
ಬಾಲಾಶ್ಚ ಮಧ್ಯಮಾ ವೃಧ್ಧಾಃ ಸಂಭೂಯ ಚ ಪೃಥಕ್ಪೃಥಕ್ ॥ ೮ ॥

---

ಬೀಳದೆ ಇರುವುದರಿಂದ ಆ ಕೆರೆಯಲ್ಲಿ ನೀರು ಒಣಗಿಹೋಯಿತು. ಆದ್ದರಿಂದ ಆ ಹಕ್ಕಿಗೆ ಆಹಾರವಿಲ್ಲದೆ ಇರುವ ಕಾರಣ ದುಃಖದಿಂದ ಆಹಾರವನ್ನು ಅದು ಹುಡುಕಿಕೊಂಡು ಸುತ್ತುತ್ತಿತ್ತು.

೫-೯. ಆ ಹಕ್ಕಿಯು ತನ್ನ ಜೊತೆಯ ಹಕ್ಕಿಗಳೊಡನೆ, ಎಲ್ಲಾ ತಪೋವನಗಳಲ್ಲಿಯೂ ಸುತ್ತುತ್ತಾ ಸತ್ಯತಪಸ್ಸೆಂಬ ಋಷಿಯ ಉತ್ತಮವಾದ ತಪೋವನವನ್ನು ನೋಡಿತು. ಆ ತಪೋವನದಲ್ಲಿ ಅಚ್ಛೋದವೆಂಬ ಹೆಸರುಳ್ಳ ಉತ್ತಮವಾದ ಮತ್ತು ಪವಿತ್ರವಾದ ತೀರ್ಥವಿರುವುದು. ಆ ತೀರ್ಥದ ನಾಲ್ಕು ದಿಕ್ಕಿನಲ್ಲಿಯೂ ಸೋಪಾನವೂ ಮಂಟಪವೂ ಇರುವುವು. ಅದು ಒಂದು ಹರದಾರಿಯಷ್ಟು ವಿಸ್ತೀರ್ಣವಾಗಿರುವುದು. ಅದರ ತೀರದಲ್ಲಿ ಪುಣ್ಯಕರವಾದ ಮರಗಳು ಯಾವಾಗಲೂ ಹೂವು ಮತ್ತು ಹಣ್ಣುಗಳಿಂದ ತುಂಬಿರುವವು. ಬಹಳ ಆಳವಾಗಿರುವ ಮತ್ತು ನಿರ್ಮಲವಾದ, ನೀರಿನಲ್ಲಿರುವ

ಉತ್ಪ್ಲುತ್ಯೋತ್ಪ್ಲುತ್ಯ ವಿವಶಾ ಮತ್ಸ್ಯಾಃ ಕ್ರೀಡುರುದ್ಧತಾಃ ।
ತಾನ್ದೃಷ್ಟ್ವಾ ಸ ಶರಾರಿಶ್ಚ ಜಲಾಂತಿಕ ಮುಪಾಗಮತ್ ॥ ೯ ॥

ತದಾನೀಂ ಸ್ನಾತುಮಾಯಾತಾ ಮುನಯೋ ಮುಕ್ತಮತ್ಸರಾಃ ।
ಆಕಂಠಂ ಸಲಿಲೇ ತಸ್ಥು ಸ್ತೀಕ್ಷ್ಣತಸ್ತೇ ಸುಶೀತಲೇ ॥ ೧೦ ॥

ಮತ್ಸ್ಯಾಸ್ತದಾ ಮಹಾಕಾಯಾ ದೂರೇ ತಸ್ಥುರಬಾಧಕಾಃ ।
ಶಿಶವೋ ನಿಕಟೇ ತಸ್ಥು ರತುದಂತಶ್ಚ ತಾನ್ಮುನೀನ್ ॥ ೧೧ ॥

ನಿರೀಕ್ಷ್ಯ ತಾನ್ವಿಸ್ಮಿತಸ್ಸ ಸಶರಾರಿರಚಿಂತಯತ್ ।
ಏತೇ ಮುನೀನ್ನ ಬಾಧಂತೇ ಸೇವಂತೇ ದಾಸವರ್ಗವತ್ ॥ ೧೨ ॥

ಅಂಭೋಶನಾ ಹಿ ವರ್ತಂತೇ ತಥಾಪಿ ಸ್ಥೂಲವಿಗ್ರಹಾಃ ।
ಅಹಿಂಸಾಧರ್ಮನಿರತಾ ಆಶ್ರಮಸ್ಯ ಪ್ರಭಾವತಃ ॥ ೧೩ ॥

---

ಮೀನುಗಳಲ್ಲಿ, ಸಣ್ಣ ಮರಿಗಳೂ, ದೊಡ್ಡವುಗಳೂ, ಮಧ್ಯಪ್ರಮಾಣದಿಂದ ಇರುವವುಗಳೂ, ಗುಂಪು ಗುಂಪಾಗಿ ತಮ್ಮ ಮನಸ್ಸಿಗೆ ಬಂದಹಾಗೆ ಕುಣಿದಾಡುತ್ತಿದ್ದವು. ಅವುಗಳನ್ನು ನೋಡಿ, ಆ ಹಕ್ಕಿಯು ನೀರಿನ ಹತ್ತಿರಕ್ಕೆ ಬಂದಿತು.

೧೦–೧೪. ಆ ವೇಳೆಗೆ ಸರಿಯಾಗಿ ಜಿತೇಂದ್ರಿಯರಾದ ಋಷಿಗಳು ಸ್ನಾನಕ್ಕಾಗಿ ಅಲ್ಲಿಗೆ ಬಂದರು. ಅವರು ಕುತ್ತಿಗೆಯವರಿಗೂ ಬಹಳ ತಣ್ಣಗಿರುವ ನೀರಿನಲ್ಲಿ ನಿಂತುಕೊಂಡರು. ದೊಡ್ಡ ಮೀನುಗಳು ಅವರಿಗೆ ತೊಂದರೆಯನ್ನು ಮಾಡದೆ ದೂರದಲ್ಲಿದ್ದವು. ಮರಿಗಳು ಮಾತ್ರ ಆ ಋಷಿಗಳ ಹತ್ತಿರಕ್ಕೆ ಬಂದು ಕಚ್ಚುತ್ತಿದ್ದವು. ಇದನ್ನು ನೋಡಿ ಆ ಹಕ್ಕಿಯು " ದೊಡ್ಡ ಮೀನುಗಳು ನೀರನ್ನು ಆಹಾರವಾಗಿ ಉಪಯೋಗಿಸುತ್ತಾ ಇರುವವು. ಇದರಿಂದ ಇವುಗಳ ಶರೀರಕ್ಕೆ ಯಾವ ತೊಂದರೆಯೂ ಇಲ್ಲವು. ಇವುಗಳು ಮಾತ್ರ ಋಷಿಗಳಿಗೆ ದಾಸರಂತೆ ಸೇವೆಮಾಡುತ್ತಿರುವವು. ಋಷಿಗಳ ಆಶ್ರಮದ ಮಹಿಮೆಯಿಂದ ಇವುಗಳು ಅಹಿಂಸಾಧರ್ಮದಲ್ಲಿ ಆಸಕ್ತವಾಗಿರುವವು. ನಾನು ನನ್ನ

ತಸ್ಮಾದೇತಾನಹಂ ಮತ್ಸ್ಯಾನ್ ದುಷ್ಪೂರೋದರಪೂರ್ತಯೇ ।
ನ ಭೋಕ್ಷ್ಯೇ ವ್ರತಮೇತಚ್ಚ ಕರಿಷ್ಯೇ ಕರುಣಾವಶಾತ್ ॥ ೧೪ ॥

ಬುಭುಕ್ಷಾ ಮಹತೀ ಮೇಸ್ತಿ ಕಿಂ ಕರ್ತವ್ಯಂ ಮಯಾದ್ಯ ವೈ ।
ಏವಂ ತಸ್ಮಿಂಶ್ಚಿಂತಯತಿ ಶರಾರೌ ಪುಣ್ಯಪಾಕತಃ ॥ ೧೫ ॥

ತದ್ದಿನಂ ಕ್ಷಣವತ್ಕ್ಷೀಣಂ ತ್ರಿಯಾಮಾಪಿ ತಥಾಗತಾ ।
ಬುಭುಕ್ಷಾ ಚ ಪ್ರಣಷ್ಟಾ ಭೂಚ್ಛರಾರಿ ರ್ಭುಕ್ತವತ್ಸ್ಥಿತಃ ॥ ೧೬ ॥

ಅತ್ಯಂತವಿಸ್ಮಿತೋ ಭೂತ್ವಾ ಪರೇದ್ಯುಃ ಪರಿತೋ ಭ್ರಮನ್ ।
ಸರಃ ಕೋಣೇ ಸಜಾತೀಯಾ ನ ಪಶ್ಯತ್ಸಬಹೂನ್ಖಗಾನ್ ॥ ೧೭ ॥

ಆಗಂತುಕಂ ಸಮಾಲೋಕ್ಯ ತೇ ಸರ್ವೇ ತುಷ್ಟಿಮಾಯಯುಃ ।
ತೈಸ್ಸಾರ್ಧಂ ಮುದಿತೋ ಭೂತ್ವಾ ಚಿರಂ ತತ್ರಾವಸತ್ಸುಖಂ ॥ ೧೮ ॥

---

ಕೆಟ್ಟ ಹೊಟ್ಟೆಯನ್ನು ತುಂಬಿಕೊಳ್ಳುವುದಕ್ಕಾಗಿ ಈ ಮೀನುಗಳನ್ನು ಹಿಡಿದು ತಿನ್ನುವುದಿಲ್ಲ. ಪ್ರಾಣಿಗಳಲ್ಲಿ ದಯೆಯನ್ನು ಇರಿಸಿಕೊಂಡು ಇನ್ನು ಮುಂದೆ ಈ ವ್ರತವನ್ನು ನಡಸಿಕೊಂಡು ಬರುವೆನು. ಆದರೆ ನನಗೆ ಹಸಿವು ಬಹಳವಾಗಿ ಆಗುತ್ತಿದೆ. ಇದರ ಪರಿಹಾರಕ್ಕಾಗಿ ಏನನ್ನು ಮಾಡಲಿ ? ಎಂದು ಯೋಚಿಸಿತು.

೧೫-೧೬. ಆ ಹಕ್ಕಿಯು ತನ್ನ ಪೂರ್ವಜನ್ಮದ ಪುಣ್ಯದಿಂದ ಹೀಗೆಯೇ ಯೋಚಿಸುತ್ತಿರುವಾಗ ಆ ಹಗಲು ಕಳೆದು ರಾತ್ರಿಯಾಯಿತು. ಆ ರಾತ್ರಿಯೂ ಆಹಾರವಿಲ್ಲದೆ, ಇರುವ ಆ ಹಕ್ಕಿಗೆ ಕ್ಷಣದಂತೆ ಆ ರಾತ್ರಿಯೂ ಕಳೆದುಹೋಯಿತು. ಆ ಹಕ್ಕಿಗೆ ಮಾತ್ರ ಹಸಿವು ಅಡಗಿಹೋಗಿ ಮನಸ್ಸಿನಲ್ಲಿ ಆಹಾರವನ್ನು ತಿಂದಹಾಗೆ ತೃಪ್ತಿಯು ಉಂಟಾಯಿತು.

೧೭-೨೦. ಆ ಹಕ್ಕಿಗೆ ಹಸಿವೆಯು ಅಡಗಿಹೋಗಿ ತೃಪ್ತಿಯು ಉಂಟಾಗಿರುವುದರಿಂದ ಆಶ್ಚರ್ಯವಾಯಿತು. ಮಾರನೆಯ ದಿನ ಆ ಹಕ್ಕಿಯು ಆ ತೀರ್ಥದ ಸುತ್ತಲೂ ಸಂಚರಿಸುತ್ತಾ ಇತ್ತು. ಅದು ತನ್ನ ಜಾತಿಯ ಬಹಳ ಹಕ್ಕಿಗಳನ್ನು ಅಲ್ಲಿ

ತತ್ತೀರ್ಥಪಶ್ಚಿಮೇ ಭಾಗೇ ಮಂಟಪೇತ್ಯಂತಪಾವನೇ ।
ಪುರಾಣಾನಿ ಮುನಿಭ್ಯಶ್ಚ ಪ್ರಾಹ ಸತ್ಯತಪಾ ಯದಾ ॥ ೧೯ ॥

ತತ್ಸಮೀಪಂ ತದಾ ಪ್ರಾಪ್ತ ಸ್ಸಶರಾರಿ ರ್ವಿಹಂಗಮಃ ।
ಶ್ರುತ್ವಾ ಪುರಾಣವಾಕ್ಯಾನಿ ವಿವಶೋ ಭೂದ್ವಿಧೇರ್ವಶಾತ್ ॥ ೨೦ ॥

ಕ್ಷೇತ್ರಮಾಹಾತ್ಮ್ಯಮಧ್ಯೇ ತು ಹಾಲಾಸ್ಯಕ್ಷೇತ್ರವೈಭವೇ ।
ಪ್ರಸಕ್ತೇ ಸತಿ ಸಾನಂದಾ ಅಭವನ್ ಮುನಿಪುಂಗವಾಃ ॥ ೨೧ ॥

ಶರಾರಿರಪಿ ಸಾನಂದಶ್ಶ್ರುತ್ವಾ ಹಾಲಾಸ್ಯವೈಭವಂ ।
ಸ್ತಂಭವನ್ನಿಶ್ಚಲಸ್ತಸ್ಥೌ ಸಾವಧಾನೇನ ಚೇತಸಾ ॥ ೨೨ ॥

ಮಧುರಾಪುರವಾಸೀ ತು ಸುಂದರೇಶ ಶ್ಶಿವೋ ಯಥಾ ।
ತಥಾ ದಯಾಪರೋ ನಾಸ್ತಿ ಸ್ಥಾನೇಷ್ವನ್ಯೇಷು ಶಂಕರಃ । ॥ ೨೩ ॥

---

ಸುಖವಾಗಿ ನೋಡಿತು. ಆ ಹಕ್ಕಿಗಳೆಲ್ಲವೂ ಇದನ್ನು ನೋಡಿ ಸಂತೋಷಪಟ್ಟವು. ಇದು ಅವುಗಳ ಜೊತೆಯಲ್ಲಿ ಬಹಳಕಾಲದವರಿಗೂ ಸುಖವಾಗಿ ಇತ್ತು. ಆ ತೀರ್ಥದ ಪಶ್ಚಿಮಭಾಗದ ಅತ್ಯಂತ ಪರಿಶುದ್ಧವಾದ ಮಂಟಪದಲ್ಲಿ ಸತ್ಯತಪಾಋಷಿಯು ಇತರ ಋಷಿಗಳಿಗಾಗಿ ಪುರಾಣವನ್ನು ಹೇಳುತ್ತಿದ್ದನು. ಆಗ ಆ ಹಕ್ಕಿಯು ಅವನ ಹತ್ತಿರಕ್ಕೆ ಹೋಗಿ ಅವನು ಹೇಳುತ್ತಿರುವ ಪುರಾಣವನ್ನು ಕೇಳಿತು. ದೈವಗತಿಯಿಂದ ಆ ಹಕ್ಕಿಗೆ ಪುರಾಣವನ್ನು ಕೇಳುವುದಕ್ಕೆ ಆಸಕ್ತಿಯು ಹೆಚ್ಚಾಯಿತು.

೨೧–೨೫. ಕ್ಷೇತ್ರಗಳ ಮಾಹಾತ್ಮ್ಯವನ್ನು ಪುರಾಣದಲ್ಲಿ ಹೇಳುವ ಪ್ರಕರಣವು ಆಗ ಉಪಕ್ರಮವಾಗಿ ಇತ್ತು. ಅದರಲ್ಲಿಯೂ ಹಾಲಾಸ್ಯಕ್ಷೇತ್ರದ ಮಹಿಮೆಯನ್ನು ಹೇಳುವುದಕ್ಕೆ ಸತ್ಯತಪಾಋಷಿಯು ಪ್ರಾರಂಭಿಸಿದನು. ಅದನ್ನು ಕೇಳುತ್ತಾ ಋಷಿಗಳೆಲ್ಲರೂ ಆನಂದಬಾಷ್ಪವನ್ನು ಸುರಿಸುತ್ತಾ ಇದ್ದರು. ಈ ಹಕ್ಕಿಯೂ ಏಕಾಗ್ರವಾದ ಮನಸ್ಸಿನಿಂದ ಹಾಲಾಸ್ಯಕ್ಷೇತ್ರದ ಮಹಿಮೆಯನ್ನು ಕೇಳುತ್ತಾ ಕಲ್ಲಿನಲ್ಲಿ ಮಾಡಿದ

ಸದ್ಯಸ್ತಪಃಫಲಂ ಪ್ರಾಪ್ತುಂ ಯೇ ವಾಂಛಂತಿ ಜನಾ ಇಹ ।
ತೈ ಸ್ಸರ್ವೈರ್ ರಾಶು ಗಂತವ್ಯಂ ಹಾಲಾಸ್ಯಮಖಿಲಾರ್ಥದಂ ॥ ೨೪ ॥

ಸಮಾಪ್ತೌ ಸಿಧ್ಯತಿ ತಪಃ ಕ್ಷೇತ್ರೇಷ್ವನ್ಯೇಷು ನಿಶ್ಚಿತಂ ।
ಸಿದ್ಧತ್ಯಾರಬ್ಧಮಾತ್ರೇಣ ಹಾಲಾಸ್ಯೇ ತು ತಪಃ ಫಲಂ ॥ ೨೫ ॥

ತಪೋಜಪಾರ್ಚನಾಹೋಮಪ್ರಮುಖಾನಖಿಲಾನ್ಯಪಿ ।
ಸತ್ಕರ್ಮಾಣಿ ಫಲಂತ್ಯಾಶು ಶ್ರೀಹಾಲಾಸ್ಯೇ ಕೃತಾನಿ ಚ ॥ ೨೬ ॥

ದೇವಾನಾಂ ತು ಯಥಾ ಮಧ್ಯೇ ಮಹಾದೇವ ಇತೀಶ್ವರಃ ।
ತಥಾ ಕದಂಬಕಾಂತಾರಂ ಮಹಾಕ್ಷೇತ್ರಂ ವಿದುರ್ಬುಧಾಃ ॥ ೨೭ ॥

ತೀರ್ಥಾನಾಮಾದಿಭೂತಾನಾಂ ಮಧ್ಯೇ ಹೇಮಾಬ್ಜಿನೀಯುತಃ ।
ವಿಶಿಷ್ಟಾ ವಿದ್ಯತೇ ತಸ್ಮಾನ್ಮಹಾತೀರ್ಥ ಮಿತೀರಿತಂ ॥ ೨೮ ॥

---

ಹಕ್ಕಿಯಂತೆ ಇತ್ತು. ಶಿವನು ಮಧುರಾನಗರದಲ್ಲಿ ತನ್ನ ಸಾನ್ನಿಧ್ಯದಿಂದ ವಾಸಮಾಡ ತ್ತಿರುವ ಸುಂದರೇಶ್ವರನ ಹಾಗೆ ಬೇರೆಯ ಕ್ಷೇತ್ರಗಳಲ್ಲಿ ಅಷ್ಟು ದಯಾಶಾಲಿಯಾಗಿ ಇಲ್ಲ. ಈ ಭೂಮಿಯಲ್ಲಿ ತಪಸ್ಸಿನ ಸಿದ್ಧಿಯನ್ನು ಬೇಗ ಹೊಂದಲಿಚ್ಛೆಯುಳ್ಳವರು ಎಲ್ಲರೂ ಇಷ್ಟಸಿದ್ಧಿಯನ್ನು ಕೊಡುವ ಹಾಲಾಸ್ಯಕ್ಷೇತ್ರವನ್ನು ಬೇಗನೆ ಹೊಂದಬೇಕು. ಇತರ ಕ್ಷೇತ್ರಗಳಲ್ಲಿ ತಪಸ್ಸನ್ನು ಮಾಡಿ ಅದು ಮುಗಿದನಂತರ ಸಿದ್ಧಿಯುಂಟಾಗುವುದು. ಈ ಹಾಲಾಸ್ಯಕ್ಷೇತ್ರದಲ್ಲಿ ತಪಸ್ಸನ್ನು ಮಾಡಲು ಪ್ರಾರಂಭಮಾಡಿದ ಕೂಡಲೆ ಸಿದ್ಧಿ ಯುಂಟಾಗುವುದು.

೨೬-೨೯. ಹಾಲಾಸ್ಯಕ್ಷೇತ್ರದಲ್ಲಿ ಆಚರಸಿದ ತಪಸ್ಸು, ಜಪ, ಹೋಮ, ದೇವ ಪೂಜಾ ಇವೆಲ್ಲವೂ ಬೇಗ ಸಿದ್ಧಿಯಾಗುವವು. ದೇವತೆಗಳಲ್ಲಿ ಶಿವನು ಮಹೇಶ್ವರ ನೆಂತಲೂ, ಮಹಾದೇವನೆಂತಲೂ ಪ್ರಸಿದ್ಧಿಯನ್ನು ಹೊಂದಿರುವಂತೆ, ಎಲ್ಲಾ ಕ್ಷೇತ್ರ ಗಳಿಗಿಂತಲೂ ಕದಂಬಕಾಂತಾರವೆಂದು ಹೆಸರುಳ್ಳ ಹಾಲಾಸ್ಯ ಕ್ಷೇತ್ರವು ಉತ್ತಮ

ಲಿಂಗಾನಾ ಮಾದಿಭೂತಾನಾಂ ಸುಂದರೇಶ ಶ್ಚಿರಂತನಂ ।
ಮಹಾಲಿಂಗಮಿತಿಪ್ರಾಹು ರ್ವೇದವಿಜ್ಞಾನ ತತ್ಪರಾಃ ॥ ೨೯ ॥

ಮಹಾಕ್ಷೇತ್ರಂ ಮಹಾತೀರ್ಥಂ ಮಹಾಲಿಂಗ ಮಿದಂ ತ್ರಯಂ ।
ಜಗತಾ ಮುಪಕಾರಾಯ ಸಂಭೂಯೈಕತ್ರ ವರ್ತತೇ ॥ ೩೦ ॥

ತಸ್ಮಾತ್ತತ್ಸದೃಶಂ ನಾಸ್ತಿ ಲಿಂಗಂ ವಾ ಕ್ಷೇತ್ರಮೇವ ವಾ ।
ತೀರ್ಥಂ ವಾ ತ್ರಿಷು ಲೋಕೇಷು ಭೂಯೋ ಭೂಯೋ ವದಾಮ್ಯಹಂ ॥ ೩೧

ಭಾವನಾಮಾತ್ರತ ಸ್ತಸ್ಯ ಸುಂದರೇಶೋ ದಯಾಪರಃ ।
ತಥಾ ದಯಾಪರೋ ನಾಸ್ತಿ ತ್ರೈಲೋಕ್ಯೇಷು ಮಹೇಶ್ವರಃ ॥ ೩೨ ॥

ಯತ್ರಾಸ್ತೇ ಸುಂದರೇಶಾಖ್ಯ ಶ್ಯಂಕರ ಶ್ಚಂದ್ರಶೇಖರಃ ।
ತತ್ರ ಗಂತವ್ಯ ಮಶ್ರಾಂತಂ ಭೋಗಮೋಕ್ಷೇಚ್ಛುಭಿ ರ್ಜನೈಃ ॥ ೩೩ ॥

---

ವಾದದ್ದು. ಪ್ರಪಂಚದಲ್ಲಿ ಇರುವ ಆದಿ ತೀರ್ಥಗಳಲ್ಲಿ ಹೇಮಾಬ್ಜಸೀತೀರ್ಥವು ಬಹಳ ಮಹಿಮೆಯುಳ್ಳದ್ದಾಗಿರುವುದರಿಂದ ಮಹಾತೀರ್ಥವೆಂದು ಪ್ರಸಿದ್ಧಿಯನ್ನು ಹೊಂದಿರುವುದು. ಭೂಮಿಯಲ್ಲಿ ಇರುವ ಪ್ರಸಿದ್ಧವಾದ ಮತ್ತು ಪುರಾತನವಾದ ಶಿವಲಿಂಗಗಳೆಲ್ಲಕ್ಕಿಂತಲೂ ಸುಂದರೇಶ್ವರನೆಂದು ಪ್ರಸಿದ್ಧವಾದ ಪುರಾತನವಾದ ಶಿವಲಿಂಗವು ಮಹಾಲಿಂಗವೆಂದೆನಿಸಿರುವುದು, ಎಂದು ವೇದಾಂತ ಜ್ಞಾನಿಗಳು ಹೇಳುವರು.

೩೦–೩೪. ಮಹಾಕ್ಷೇತ್ರ, ಮಹಾತೀರ್ಥ, ಮಹಾಲಿಂಗವೆಂಬ ಈ ಮೂರೂ ಲೋಕದ ಉಪಕಾರಕ್ಕಾಗಿ ಒಂದೇ ಕಡೆಯಲ್ಲಿ ಸೇರಿ, ಇರುವುದು. ಆದ್ದರಿಂದ ಇದಕ್ಕೆ ಸಮನಾದ ಲಿಂಗವಾಗಲಿ, ತೀರ್ಥವಾಗಲಿ, ಕ್ಷೇತ್ರವಾಗಲಿ ಮೂರು ಲೋಕದಲ್ಲಿ ಎಲ್ಲಿಯೂ ಇಲ್ಲ. ಸತ್ಯವಾಗಿ ಹೇಳುತ್ತೇನೆ. ಸುಂದರೇಶ್ವರನು ಭಾವನಾಮಾತ್ರದಿಂದಲೇ ದಯಾಶಾಲಿಯಾಗಿರುವ ಮಟ್ಟಿಗೆ, ಇತರ ಕ್ಷೇತ್ರಗಳಲ್ಲಿ ಮಹೇಶ್ವರನು ದಯಾಪರನಾಗಿರುವುದಿಲ್ಲ. ಚಂದ್ರಶೇಖರನಾದ, ಶಂಕರನಾದ ಸುಂದರೇಶ್ವರನು ನಿತ್ಯ

ಏವಂ ತು ತಸ್ಯ ತಪಸೋ ವಚಾಂಸಿ ವಿವಿಧಾನಿ ಚ ।
ಶ್ರುತ್ವಾ ಶರಾರಿಶ್ಶಕುನಿ ರತ್ಯಂತಮಪಿ ಪಿಪ್ರಿಯೇ ॥ ೩೪ ॥

ಹಿತ್ವಾ ತತ್ಸರ ಆಸಾದ್ಯ ಮಧುರಾಂ ಸದ್ಯ ಏವ ಸಃ ।
ಸಂಸ್ನಾಯ ಹೇಮಪದ್ಮಿನ್ಯಾಂ ಪಾವನಾಯಾಂ ಮುದಾನ್ವಿತಃ ॥ ೩೫ ॥

ಅಥ ತದ್ಧಾಮ ಸಂಪ್ರಾಪ್ಯ ಸುಂದರಂ ಸುಂದರೇಶಿತುಃ ।
ಪ್ರದಕ್ಷಿಣಾನಿ ಕುರ್ವಾಣಃ ಪ್ರಣಮ್ಯ ಸ ಪುನಃ ಪುನಃ ॥ ೩೬ ॥

ಸಂವೀಕ್ಷ್ಯ ತನ್ಮಹಾಲಿಂಗಂ ತನ್ಮನಾ ನಿಶ್ಚಲಸ್ಸ್ಥಿತಃ ।
ಹೃದಯೇಽಪಿ ಚ ತಂ ಧ್ಯಾತ್ವಾದ್ರವ್ಯೈಃ ಸಂಕಲ್ಪಿತೈರ್ಹೃದಾ ॥ ೩೭ ॥

ಹೃದಾನೇನ ತ್ರಿಕಾಲಂ ಸಃ ಅಂತರ್ಯಾಗ ಮುಪಾಸತೇ ।
ಅನೇಕಕೋಟಿಲಿಂಗಾನಾ ಮಾದಿಭೂತಂ ಚ ನಾಯಕಂ ॥ ೩೮ ॥

---

ದಲ್ಲಿಯೂ ಸಾನ್ನಿಧ್ಯವನ್ನುಂಟುಮಾಡಿರುವ ಕ್ಷೇತ್ರವನ್ನು ಭುಕ್ತಿ ಮುಕ್ತಿಯನ್ನಪೇಕ್ಷಿಸುವ ಜನರೆಲ್ಲರೂ ಯಾವಾಗಲೂ ಹೊಂದತಕ್ಕದ್ದು, ಎಂಬುದಾಗಿ ಸತ್ಯತಪಾ ಎಂಬ ಋಷಿಯು ಹೇಳುತ್ತಿರುವ ಪುರಾಣವಚನಗಳನ್ನು ಕೇಳಿದ ಆ ಹಕ್ಕಿಯು ಬಹಳ ಸಂತೋಷವನ್ನು ಹೊಂದಿತು.

೩೫–೩೭. ಆಗ ಆ ಹಕ್ಕಿಯು ಆ ಕ್ಷಣದಲ್ಲಿಯೇ ಮಧುರಾನಗರಕ್ಕೆ ಬಂದು, ಹೇಮಾಬ್ಜಿನೀತೀರ್ಥಕ್ಕೆ ಬಂದಿತು. ಬಹಳ ಪವಿತ್ರವಾದ ಆ ಕೊಳದಲ್ಲಿ ಸ್ನಾನವನ್ನು ಮಾಡಿ, ಬಹಳ ಸಂತೋಷದಿಂದ ಸುಂದರೇಶ್ವರನು ಇರುವ ಮನೋಹರವಾದ ಪ್ರದೇಶಕ್ಕೆ ಬಂದು, ಸುಂದರೇಶ್ವರ ಮಹಾಲಿಂಗವನ್ನು ನೋಡುತ್ತಾ ಪ್ರದಕ್ಷಿಣೆಯನ್ನು ಮಾಡಿ, ಆ ಶಿವಲಿಂಗದಲ್ಲಿ ಲೀನವಾದ ಮನಸ್ಸಿನಿಂದ ಸುಂದರೇಶ್ವರನನ್ನು ಧ್ಯಾನ ಮಾಡುತ್ತಿತ್ತು. ಆ ಹಕ್ಕಿಯು ಹೀಗೆ ಧ್ಯಾನಮಾಡುತ್ತಾ ಮನಸ್ಸಿನಿಂದಲೇ ಸಂಕಲ್ಪಿತವಾದ ಪದಾರ್ಥಗಳಿಂದ ಅಂತರ್ಯಾಗ ಕ್ರಮದಿಂದ ಸುಂದರೇಶ್ವರನನ್ನು ತ್ರಿಕಾಲದಲ್ಲಿಯೂ ಸೇವೆಮಾಡಲು ಪ್ರಾರಂಭಿಸಿತು.

೩೮–೪೦. ಆ ಪಕ್ಷಿಯು ಅನೇಕ ಕೋಟಿ ಲಿಂಗಗಳಿಗೂ ಆದಿಯಾಗಿ ಹಾಲಾಸ್ಯ ಕ್ಷೇತ್ರದಲ್ಲಿ ಸಚ್ಚಿದಾನಂದರೂಪದಿಂದ ಇರುತ್ತಾ, ಭಕ್ತರ ಪಾಪಗಳನ್ನು

ಶ್ರೀಮದ್ಧಾಲಾಸ್ಯ ನಿಲಯಂ ಸಚ್ಚಿದಾನಂದವಿಗ್ರಹಂ ।
ಮಹಾಲಿಂಗಂ ಮಹಾಸಿದ್ಧಿಕಾರಣಂ ಕಲುಷಾಪಹಂ ॥ ೩೯ ॥

ಪುರುಷಾರ್ಥಪ್ರದಂ ಸದ್ಯಃ ಪುರುಹೂತಪ್ರಪೂಜಿತಂ ।
ಸದ್ಯ ಸ್ಸಮಸ್ತಪಾಪಘ್ನಂ ಸಮಸ್ತಾಪತ್ಪ್ರಣಾಶನಂ ॥ ೪೦ ॥

ಸರ್ವಸಂಪತ್ಪ್ರದಂ ಸದ್ಯಃ ಸಂಸಾರೋತ್ತಾರಣ ಕ್ಷಮಂ ।
ಕಾರಣಂ ಸರ್ವತತ್ತ್ವಾನಾಂ ಕಾರುಣ್ಯಾಮೃತಸಾಗರಂ ॥ ೪೧ ॥

ಸಮಸ್ತಲೋಕಾಭಯದಂ ಕಾಲಕೂಟಹರಂ ಹರಂ ।
ಏವಂ ಸಮಾರಾಧಯತಃ ಶರಾರೇ ರ್ವಿಹಗಸ್ಯ ಚ ॥ ೪೨ ॥

ದಿನಾನಿ ಪಂಚ ಯಾತಾನಿ ತ್ರಿಗುಣಾನ್ಯ ಭವನ್ಕ್ರಮಾತ್ ।
ಷೋಡಶೇ ದಿವಸೇ ಪ್ರಾಪ್ತೇ ಸ್ನಾನಾಯ ಪ್ರಾತರುದ್ಯತಃ ॥ ೪೩ ॥

---

ನಾಶಮಾಡಿ, ಮಹಾಸಿದ್ಧಿಯನ್ನು ಅನುಗ್ರಹಿಸುತ್ತಿರುವ ಮತ್ತು ನಾಲ್ಕು ವಿಧವಾದ ಪುರುಷಾರ್ಥಗಳನ್ನೂ ಆ ಕ್ಷಣದಲ್ಲಿ ಭಕ್ತರಿಗೆ ಕೊಡುತ್ತಿರುವ, ಇಂದ್ರನಿಂದಲೂ ಪೂಜೆಯನ್ನು ಹೊಂದುತ್ತಿರುವ, ಎಲ್ಲಾ ವಿಧವಾದ ಆಪತ್ತುಗಳನ್ನೂ, ಪಾಪಗಳನ್ನೂ ಆ ಕ್ಷಣದಲ್ಲಿ ಪರಿಹರಿಸುವ, ಸುಂದರೇಶ್ವರನನ್ನು ಸೇವಿಸುತ್ತಿತ್ತು.

೪೧–೪೪. ಸಂಸಾರದಿಂದ ಬಿಡುಗಡೆಯನ್ನು ಮಾಡಿ, ಎಲ್ಲಾ ವಿಧವಾದ ಐಶ್ವರ್ಯವನ್ನೂ ಕೊಡುತ್ತಿರುವ, ಮತ್ತು ಎಲ್ಲಾ ತತ್ತ್ವಗಳಿಗೂ ಕಾರಣವಾಗಿ, ಬಹಳ ದಯೆಯಿಂದ ಕೂಡಿರುವ, ಲೋಕಗಳೆಲ್ಲಕ್ಕೂ ಅಭಯವನ್ನು ಕೊಟ್ಟು, ಕಾಲಕೂಟವಿಷದ ಬಾಧೆಯನ್ನು ಪರಿಹರಿಸುವ, ಸುಂದರೇಶ್ವರ ಮಹಾಲಿಂಗವನ್ನು ಸೇವಿಸುತ್ತಾ ಆ ಹಕ್ಕಿಯು ಹದಿನೈದು ದಿನಗಳನ್ನು ಕಳೆಯಿತು. ಹದಿನಾರನೆಯದಿನ ಆ ಹಕ್ಕಿಯು ಹೇಮಾಬ್ಜಿನೀತೀರ್ಥದಲ್ಲಿ ಸ್ನಾನಮಾಡಲು ಹೋದಾಗ ಅದರ ಮುಂದೆ ಅನೇಕ ವಿಧವಾದ ಮೀನುಗಳು ಇರುವುದನ್ನು ನೋಡಿ ಆಶ್ಚರ್ಯಪಟ್ಟಿತು. ಆಗ

ಹೇಮಾಬ್ಜಿನೀತಟಂ ಪ್ರಾಪ್ಯ ತತ್ರಾತಿಷ್ಠತ್ಕ್ಷಣಂ ಖಗಃ ।
ವಿವಿಧಾನ್ಸ್ಫುರತೋ ಮತ್ಸ್ಯಾನ್ವೀಕ್ಷ್ಯ ವಿಸ್ಮಿತಮಾನಸಃ ॥ ೪೪ ॥

ಸ ಶರಾರಿಃ ಕ್ಷುಧಾರ್ತಸ್ತಾನ್ಹಂತುಂ ಬುದ್ಧ್ಯಾ ತ್ವಚಿಂತಯತ್ ।
ಅಥ ಕ್ಷಣೇನ ನಷ್ಟಾ ಭೂತ್ತಸ್ಯ ಹಿಂಸಾರತಾ ಮತಿಃ ॥ ೪೫ ॥

ಸಂಜಾತಾ ಸನ್ಮತಿಃ ಸದ್ಯಃ ಪಕ್ಷಿಣಃ ಪ್ರಯತಾತ್ಮನಃ ।
ವಿಕಾರಹೇತೌ ವಿಷಯೇ ದೃಷ್ಟೇ ಪ್ಯವಿಕೃತಾಶ್ಚ ಯೇ ॥ ೪೬ ॥

ತ ಏವ ಹಿ ಮಹಾತ್ಮಾನ ಶ್ಚಾತ್ಯಂತಂ ಕಾತರೋऽಸ್ಮ್ಯಹಂ ।
ಮತ್ಸ್ಯಾನಾಂ ದರ್ಶನೇ ಜಾತೇ ಧಿಙ್ಮಾಮ್ಮೂಢಧಿಯಂ ಧ್ರುವಂ ॥ ೪೭ ॥

ಏವಂ ಚಿತ್ತೇ ಚಿಂತಿತಸ್ಯ ಸ್ವಭಕ್ತಸ್ಯ ಖಗಸ್ಯ ಚ ।
ಸಚ್ಚರಿತ್ರಪವಿತ್ರಸ್ಯ ಸ ಚಿಂತಾಮಪಿ ದುರ್ಲಭಾಂ ॥ ೪೮ ॥

---

ಅದು ಆ ಮೀನುಗಳನ್ನು ಹಿಡಿದು ತಿನ್ನುವುದಕ್ಕೆ ಅಪೇಕ್ಷಿಸಿತು. ಆದರೆ ಆ ಕ್ಷಣದಲ್ಲಿಯೇ ಮೀನುಗಳನ್ನು ಹಿಂಸೆಮಾಡುವ ಬುದ್ಧಿಯು ನಷ್ಟವಾಗಿ ಉತ್ತಮವಾದ ಬುದ್ಧಿಯು ಉಂಟಾಯಿತು.

೪೫-೪೭. ಸ್ಥಿರವಾದ ಮನಸ್ಸುಳ್ಳವನಿಗೆ ಮನೋವಿಕಾರವನ್ನು ಉಂಟು ಮಾಡುವ ವಸ್ತುಗಳು ಎದುರಿಗೆ ಇದ್ದಾಗ್ಯೂ ಮನಸ್ಸು ಚಂಚಲವಾಗದೆ ಇದ್ದರೆ, ಅವರನ್ನು ಮಹಿಮೆಯುಳ್ಳವರೆಂದು ತಿಳಿಯತಕ್ಕದ್ದು. ನಾನು ಮಾತ್ರ ದೀನವಾದ ಮನಸ್ಸುಳ್ಳವನಾಗಿ ಇರುತ್ತೇನೆ. ಮೀನುಗಳನ್ನು ನೋಡಿದ ಕೂಡಲೆ ನನ್ನ ಮನಸ್ಸು ವಿಕಾರವುಳ್ಳದ್ದಾಯಿತು. ಆದ್ದರಿಂದ ನನಗೆ ಧಿಕ್ಕಾವಿರಲಿ. ಎಂದು ಯೋಚಿಸುತ್ತಾ ಇರುವ ಆ ಹಕ್ಕಿಯ ಪರಿಶುದ್ಧವಾದ ನಡತೆಯನ್ನು ಸುಂದರೇಶ್ವರನು ನೋಡಿದನು.

೪೮-೫೧. ಸುಂದರೇಶ್ವರನು ಆ ಹಕ್ಕಿಗೆ ಇರುವ ಬಹಳ ಪವಿತ್ರವಾದ ಅಭಿಪ್ರಾಯವನ್ನು ತಿಳಿದು, ಮೀನಾಕ್ಷೀದೇವಿ ಸಹಿತನಾಗಿ ಬಹಳ ಸಂತೋಷದಿಂದ

ಜ್ಞಾತ್ವಾ ಸುಂದರನಾಥಶ್ಚ ದೇವ್ಯಾ ಶಫರನೇತ್ರಯಾ ।
ಸಹಿತ ಶ್ಚಾತಿಸಂತುಷ್ಟ ಸ್ತದನುಗ್ರಹತತ್ಪರಃ ॥ ೪೯ ॥

ಹೇಮಾಬ್ಜಿನೀಂ ಚ ನಿರ್ಮತ್ಸ್ಯಾಂ ಮನ್ಯೈಶ್ಚ ಜಲಜಂತುಭಿಃ ।
ಶೂನ್ಯಾಂ ಚ ವಿದಧೇ ಪೂರ್ವಂ ಸ್ಫುರನ್ಮತ್ಸ್ಯಾದಿಕಂ ಬಲಾತ್ ॥ ೫೦ ॥

ಪಶ್ಚಾಚ್ಚ ಪ್ರದದೌ ಮುಕ್ತಿಂ ಶಂಭು ಸ್ತಸ್ಮೈ ಶರಾರಯೇ ।
ಸಾರೂಪ್ಯರೂಪಿಣಂ ಶುದ್ಧಾ ಮನಂತಾನಂದದಾಯಿನೀಂ ॥ ೫೧ ॥

ಹಿಂಸಾಧರ್ಮೇ ಪ್ಯಹಿಂಸಾಯಾಂ ನಿರತತ್ವಾ ಚ್ಛಿವಾಶ್ರಯಾತ್ ।
ಶಿವಲೋಕಂ ಖಗಃ ಪ್ರಾಪ್ಯ ಗಣಾನಾ ಮಗ್ರಣೀ ರಭೂತ್ ॥ ೫೨ ॥

ಅಷ್ಟಚತ್ವಾರಿಂಶಿಕೇಯಂ ಲೀಲಾ ನೀಪಾಟವೀಪತೇಃ ।
ಶ್ರೋತೃಭ್ಯಶ್ಚ ಸಕೃತ್ಸಂಭ್ಯಃ ಸರ್ವಾರ್ಥಾನ್ಸಂಪ್ರಯಚ್ಛತಿ ॥ ೫೩ ॥

---

ಅನುಗ್ರಹ ಮಾಡಲು ಆಸಕ್ತಿಯುಳ್ಳವನಾದನು. ಅವನು ಮೊದಲು ಜಲಚರ ಪ್ರಾಣಿಗಳಿಂದ ತುಂಬಿದ್ದ ಆ ತೀರ್ಥದಲ್ಲಿ ಆ ಹಕ್ಕಿಗಾಗಿ ಯಾವ ಪ್ರಾಣಿಯೂ ಇಲ್ಲದಂತೆ ಮಾಡಿ, ಅನಂತರ ಅದಕ್ಕೆ ಮುಕ್ತಿಯನ್ನು ಅನುಗ್ರಹಿಸಿದನು. ಸುಂದರೇಶ್ವರನ ಸೇವೆಯಿಂದ ಬಹಳ ಆನಂದವುಳ್ಳ ಪರಿಶುದ್ಧವಾದ ಸಾರೂಪ್ಯವೆಂಬ ಮುಕ್ತಿಯು ಆ ಹಕ್ಕಿಗೆ ದೊರೆಯಿತು.

೫೨–೫೩. ಶರಾರಿಪಕ್ಷಿಯು ಹಿಂಸಾರೂಪವಾದ ಧರ್ಮದಲ್ಲಿ ಆಸಕ್ತಿಯುಳ್ಳದ್ದಾಗಿ ಇದ್ದು, ಶಿವನನ್ನು ಸೇವೆಮಾಡಲುಪಕ್ರಮಿಸಿ ಅಹಿಂಸಾಧರ್ಮವನ್ನು ಅವಲಂಬಿಸಿತು. ಇದರಿಂದ ಅದು ಶಿವನ ಲೋಕವನ್ನು ಹೊಂದಿ ಗಣಗಳಿಗೆ ಮುಖ್ಯಸ್ಥನಾಗಿರುವ ಪದವಿಯನ್ನು ಹೊಂದಿತು.

ನೀಪಾಟವೀ ಪ್ರಭುವಾದ ಸುಂದರೇಶ್ವರನು ಆಚರಿಸಿದ ನಲವತ್ತೆಂಟನೆಯ ಈ ಲೀಲೆಯು ಒಂದು ಸಾರಿ ಕೇಳಿದವರಿಗೂ, ಎಲ್ಲಾ ವಿಧವಾದ ಪುರುಷಾರ್ಥಗಳನ್ನೂ ಉಂಟುಮಾಡುವುದು.

**ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಕೋಯಷ್ಟೇರ್ಮುಕ್ತಿಪ್ರದಾನಂ ನಾಮ
ಚತುಃಪಂಚಾಶೋಽಧ್ಯಾಯಃ**

---

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ
ಕೋಯಷ್ಟೇರ್ಮುಕ್ತಿ ಪ್ರದಾನವೆಂದು ಹೆಸರುಳ್ಳ ಐವತ್ತನಾಲ್ಕನೆಯ
ಅಧ್ಯಾಯವು ಮುಗಿದುದು.

